ಶಿವತತ್ವ ಗ್ರಂಥಮಾಲಾ ದ್ವಿತೀಯ ಪುಷ್ಪ



ಸಚಿತ್ರ

# ಹಿಂದು ಹಬ್ಬಗಳು



ಲೇಖಕರು ಹಾಗೂ ಪ್ರಕಾಶಕರು :

ಚಿಕ್ಕಮಣ್ಣೂರ ಬೃಹನ್ಮಠಾಧ್ಯಕ್ಷ

**ಪಂಡಿತ ಶ್ರೀ ಗುರುದೇವ ಶಿವಾಚಾರ್ಯ ಸ್ವಾಮಿಗಳು**

ಆಯುರ್ವೇದ ವಿಶಾರದ, ವೈದ್ಯವಾಚಸ್ಪತಿ, ಆಯುರ್ವೇದಾಚಾರ್ಯ,

ನವಿಲುಗುಂದ.

೧೯೬೬

ಶಿವತತ್ವ ಗ್ರಂಥಮಾಲಾ ದ್ವಿತೀಯ ಪುಷ್ಪ



ಸಚಿತ್ರ

# ಹಿಂದು ಹಬ್ಬಗಳು

ಲೇಖಕರು ಹಾಗೂ ಪ್ರಕಾಶಕರು:

ಚಿಕ್ಕಮಣ್ಣೂರ ಬೃಹನ್ಮಠಾಧ್ಯಕ್ಷ
ಪಂಡಿತ ಶ್ರೀ ಗುರುದೇವ ಶಿವಾಚಾರ್ಯ ಸ್ವಾಮಿಗಳು
ಆಯುರ್ವೇದ ವಿಶಾರದ, ವೈದ್ಯವಾಚಸ್ಪತಿ, ಆಯುರ್ವೇದಾಚಾರ್ಯ
ನವಿಲುಗುಂದ

ಪ್ರಥಮ ಮುದ್ರಣ ೧೦೦೦ ಪ್ರತಿಗಳು

೧೯೬೬ * ಕ್ರಯ ೪-೦೦

## ಪ್ರಸ್ತಾವನೆ . . . .

ಬಹಳ ದಿವಸಗಳ ಹಿಂದೆ ನಮ್ಮೀಹಿಂದುಸ್ತಾನಕ್ಕೆ ಭರತನೆಂಬ ರಾಜನು ಒಡೆಯನಾದನು ಆದುದರಿಂದ ಈ ದೇಶಕ್ಕೆ ಭರತಖಂಡವೆಂಬ ಹೆಸರುಬಂದಿದೆ. ಆ ರಾಜನು ಶೂರನೂ, ಉದಾರಿಯೂ, ಸತ್ಯಸಂಧನೂ, ಸದ್ಧರ್ಮನಿರತನೂ ಆಗಿದ್ದನು. ಅವನು ನುಡಿದು ನಡೆದು ತೋರಿಸಿದ ಸರಣಿಯನ್ನೇ ಭಾರತೀಯರು ಅಲ್ಲಿಂದ ಇಲ್ಲಿಯವರೆಗೆ ಅನುಸರಿಸುತ್ತ ಬಂದಿರುವರು. ಈ ದೇಶವಾಸಿಗಳ ಸೌಜನ್ಯಕ್ಕೆ ನೆರೆಹೊರೆಯ ರಾಷ್ಟ್ರದವರು ಮುಗ್ಧರಾಗಿ ಈಗಲೂ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿರುವರು. ಭಾರತೀಯರು ಪಾಪಭೀರುಗಳಾಗಿ ಪುಣ್ಯಕೃತಿಗಳನ್ನೆಸಗುತ್ತ ಪರಮಾತ್ಮನ ಕೃಪೆಯನ್ನು ಹೊಂದುವ ಧ್ಯೇಯ ವುಳ್ಳವರಾಗಿರುವರು. ಯಾವ ಹಿಂದಿನವರು ಹಿಮಾಲಯದಿಂದ ವಿಂಧ್ಯಾದ್ರಿಯ ವರೆಗೆ ತಪೋಭೂಮಿಯನ್ನಾಗಿ ಮಾಡಿಕೊಂಡಿದ್ದರೋ ಅದೇ ಇಂದಿನವರೆಗೂ "ಆರ್ಯಾವರ್ತಃ ಪುಣ್ಯಭೂಮಿರ್ಮಧ್ಯಂವಿಂಧ್ಯಹಿಮಾಗಯೋಃ" ಎಂದು ಹೆಸರಾಗಿದೆ. ಹಾಗೂ ಕೇದಾರ, ಹರಿದ್ವಾರ, ಬದರಿಕಾಶ್ರಮ, ಕಾಶಿ, ಬುದ್ಧಗಯಾ, ತ್ರ್ಯಂಬಕೇಶ್ವರ, ಮಹಾಬಲೇಶ್ವರ, ಶ್ರೀಶೈಲ, ಶಿವಕಾಂಚಿ, ವಿಷ್ಣುಕಾಂಚಿ, ರಂಭಾಪುರಿ, ಉಜ್ಜಯಿನಿ ಮೊದಲಾದ ಪುಣ್ಯಕ್ಷೇತ್ರಗಳೂ, ಸಿಂಧು, ಸರಸ್ವತಿ, ಗಂಗಾ, ಯಮುನಾ, ಗೋದಾವರಿ, ಕೃಷ್ಣಾ, ತುಂಗಭದ್ರಾ, ಕಾವೇರಿ ಮೊದಲಾದ ಪುಣ್ಯತೀರ್ಥಗಳೂ ಇಲ್ಲಿ ವಿಪುಲವಾಗಿವೆಯಾದ್ದರಿಂದ ಭಾರತದ ಮೂಲೆಮೂಲೆಗಳಿಂದಲೂ ಲಕ್ಷಾಂತರ ಜನರು ತೀರ್ಥಕ್ಷೇತ್ರಗಳ ಸಂದರ್ಶನಕ್ಕಾಗಿ ಅತ್ತಿತ್ತ ಸದಾ ಸಂಚರಿಸುತ್ತಿರುವರು. ಇನ್ನೂ ಒಂದು ವೈಶಿಷ್ಟ್ಯವೇನಂದರೆ—ಜಗದ್ಗುರು ಏಕೋರಾಮಾರಾಧ್ಯ, ಜ. ವಿಶ್ವಾರಾಧ್ಯ, ಜ. ರೇವಣಾರಾಧ್ಯ, ಜ. ಪಂಡಿತಾರಾಧ್ಯ, ಜ. ಮರುಲಾರಾಧ್ಯ ಮೊದಲಾದ ವೀರಶೈವ ಮಠಸ್ಥಾಪಕರು. ಜ. ಶಂಕರಾಚಾರ್ಯ, ಮಧ್ವಾಚಾರ್ಯ ಮೊದಲಾದ ಮಹಾಚಾರ್ಯರು ಹಾಗೂ ವಶಿಷ್ಠ, ವ್ಯಾಸ, ವಿಶ್ವಾಮಿತ್ರ, ದಧೀಚಿ, ದೂರ್ವಾಸ, ಪರಾಶರ, ಪ್ರಭೃತಿ ಮಹರ್ಷಿಗಳು ಮತ್ತು ನಲ, ಹರಿಶ್ಚಂದ್ರ, ಜನಕ, ದಶರಥರ, ಧರ್ಮ ಮುಂತಾದ ರಾಜರ್ಷಿಗಳ ಪಾದ

ವಿನ್ಯಾಸದಿಂದ ಈ ದೇಶಕ್ಕೆ ಪುಣ್ಯಭೂಮಿಯೆಂಬ ಹೆಸರು ಬಂದಿರಲುಬೇಕು. ಇಂಥ ವೈಶಿಷ್ಟ್ಯ ವಿದೇಶಗಳಿಗೆ ಲಭಿಸಲಾರದು.

ಇಂಥ ಪುಣ್ಯಮಯವಾದ ಭಾರತದಲ್ಲಿ 'ಸಿಂಧು' ಮತ್ತು 'ಗಂಗಾ' ನದಿಗಳ ಬೈಲಪ್ರದೇಶವು ಮಹತ್ವವುಳ್ಳದ್ದೂ ಫಲಪ್ರದವೂ ಆಗಿದೆ. ಇಲ್ಲಿಯ ಸಕಲವಿಧ ಸಂಪತ್ತು ಎಂದಿನಿಂದಲೂ ಪರಕೀಯರ ಕಣ್ಣುಗಳನ್ನು ಕುಕ್ಕುತ್ತಲೇ ಬಂದಿದೆ. ಹಿಂದೊಮ್ಮೆ ಹೊರನಾಡಿನಿಂದ ಆರ್ಯರು ಆಗಮಿಸಿ ಪಂಜಾಬದ ಮಹಾ ನದಿಗಳ ನಂಡೆಗುಂಟ ಕೆಲವುಕಾಲ ಬೇರೂರಿ ನಿಂತರು. ಆಗ ಈ ನದಿಗಳೆಲ್ಲ ಒಟ್ಟುಗೂಡಿ, ಅಪಾರ ಸಮುದ್ರದಂತೆ ಕಾಣಿಸಿಕೊಳ್ಳುವುದನ್ನು ನೋಡಿ ಅವರು ಇವುಗಳಿಗೆ "ಸಿಂಧು" ಎಂದು ಹೆಸರಿಟ್ಟರು. ಮುಂದೆ ಬಂದಂಥ ಇರಾಣೀ ಅರಸರು ಈ ಸಿಂಧು ಇರುವ ಸ್ಥಾನಕ್ಕೆ ಹಿಂದುಸ್ತಾನವೆಂದು ಕರೆದರು. ಇರಾಣೀ ಭಾಷೆಯಲ್ಲಿ "ಸ"ಕಾರಕ್ಕೆ 'ಹ'ಕಾರವನ್ನಾಗಿ ಉಚ್ಚರಿಸುವುದುಂಟು. ಆದ್ದರಿಂದ 'ಸಿಂದುಸ್ತಾನ'ವು ಹಿಂದುಸ್ತಾನವಾಯಿತು. ಈ ಸಿಂಧು ನದಿಗೆ 'ಇಂದು' ನದಿ ಎಂತಲೂ ಅನ್ನುವುದುಂಟು. ಮುಂದೆ ಬಂದ ಗ್ರೀಕರು 'ಇಂಡೋಸ್' ಎಂತಲೂ, ಇಂಗ್ಲೀಷರು 'ಇಂಡಿಯಾ' ಎಂತಲೂ ಹೆಸರಿಟ್ಟರು ಎಂಬುದಾಗಿ ಅರ್ವಾಚೀನ ಇತಿಹಾಸಕಾರರ ಅಭಿಪ್ರಾಯವಿದೆ. ಇದು ಸರಿಎನಿಸುವುದಿಲ್ಲ. ಯಾಕಂದರೆ ಪರಕೀಯರು ಇಲ್ಲಿಗೆ ಬರುವ ಪೂರ್ವದಲ್ಲಿಯೇ ಈ ದೇಶವು ಧಾರ್ಮಿಕ ದೃಷ್ಟಿಯಿಂದ 'ಹಿಂದೂ ದೇಶ' ಅಥವಾ ಹಿಂದುದೇಶವೆಂಬ ವೈಶಿಷ್ಟ್ಯವುಳ್ಳ ಹೆಸರನ್ನು ಪಡೆದಿತ್ತೆಂದು ಹಲವಾರು ಪ್ರಾಚೀನ ಪುಸ್ತಕಗಳ ಹೇಳಿಕೆ ಇದೆ. ಅದನ್ನು ಕೆಳಗೆ ವಿಶದಪಡಿಸಿದ್ದೇವೆ.

## "ಹಿಂದೂ, ಅಥವಾ ಹಿಂದು" ಪದವಾಚ್ಯರು

"ಹಿಂದು" ಶಬ್ದವು ಅರ್ವಾಚೀನವೆಂತಲೂ, ಇದೊಂದು ಅಪಮಾನ ಕಾರಕ ಶಬ್ದವೆಂತಲೂ ಹಲವರು ಸಂಶಯಪಡುವುದುಂಟು. ಇದು ಸರಿಯೆನಿಸಲಾರದು. ಹಿಂದು ಶಬ್ದವು ಬಹಳ ಹಿಂದಿನ ಕಾಲದ ಶಬ್ದವಾಗಿದೆಯಲ್ಲದೇ ಅತ್ಯಂತ ಗೌರವವಾಚ್ಯವಾಗಿರುವುದು ಎಂಬ ಅಂಶವು ಈ ಮುಂದಿನ ವಿವರಣೆಯಿಂದ ವಿದಿತವಾಗುವುದು.

" ಹಿಮಾಲಯಂ ಸಮಾರಾಭ್ಯ ಯಾವತ್ ಸಿಂಧು ಸರೋವರಂ ।
ತಂದೇವ ನಿರ್ಮಿತಂ ದೇಶಂ ಹಿಂದುಸ್ತಾನಂ ಪ್ರಚಕ್ಷತೇ ॥

ವೇದ ನಿರುಕ್ತಿಯ ಅನುಸಾರವಾಗಿ ' ಸ ' ಕಾರವು ' ಹ ' ಕಾರವಾಗಿ ಉಚ್ಚರಿಸಲ್ಪಡುವುದು. ಸರಿತ್, ಸರಸ್ವತೀ, ಸಿಂಧು ಇವುಗಳು ವೇದದಲ್ಲಿ ಅನುಕ್ರಮವಾಗಿ ಹರಿತ್, ಹರಸ್ವತೀ, ಹಿಂದು ಎಂಬುದಾಗಿ ಉಚ್ಚರಿಸಲ್ಪಡುತ್ತವೆ. ' ಕೇಸರೀ ' ಇದು ಕೆಹರೀ ಎಂದು ಉಚ್ಚರಿಸಲ್ಪಡುತ್ತದೆ. " ಶ್ರೀ " ಇದಕ್ಕೆ ಆಂಗ್ಲರು ' ಸರ ' ಎಂತಲೂ ಜರ್ಮನ್‌ರು ' ಹರ ' ಎಂತಲೂ ಉಚ್ಚರಿಸುತ್ತಾರೆ.

ಹಿಮಾಲಯದಿಂದ ಸಿಂಧು ನದಿಯ ವರೆಗೆ ಇರುವ ಭೂಮಿಯು ದೇವ ನಿರ್ಮಿತ ಭೂಮಿಯಾಗಿದೆ. ಈ ವಿಸ್ತೃತವಾದ ಸ್ಥಳಕ್ಕೆ ಹಿಂದುಸ್ಥಾನವೆಂದು ವೇದಕಾಲದಲ್ಲಿಯೇ ಹೆಸರು ಬಂದಿದೆ.

ಮತ್ತು "ಓಂಕಾರ ಮೂಲ ಮಂತ್ರಾಢ್ಯಃ ಪುನರ್ಜನ್ಮ ದೃಢಾಶಯಃ ।
ಗೋಭಕ್ತೋಭಾರತ ಗುರುರ್ಹಿಂದು ರ್ಹಿಂಸನದೂಷಣಃ॥

( ಹಿಂದೂ ಸಂಸ್ಕೃತಿ ಪು. ೭೪ )

ಅಂದರೆ :– ಯಾವನು ಎಲ್ಲ ಮಂತ್ರಗಳಿಗೆ ಓಂಕಾರವೇ ಮೂಲವೆಂಬ ಭಾವನೆಯುಳ್ಳವನಾಗಿರುವನೋ, ಪುನರ್ಜನ್ಮದಲ್ಲಿ ದೃಢವಾದ ನಂಬಿಗೆಯುಳ್ಳವನಾಗಿರುವನೋ, ಗೋಭಕ್ತನಾಗಿರುವನೋ, ಹಿಂಸಾಕರ್ಮವನ್ನು ದೂಷಿಸತಕ್ಕವನಾಗಿರುವನೋ, ಅವನೇ 'ಹಿಂದು' ಎಂದು ಹೇಳಿಸಿಕೊಳ್ಳುವನು.

"ಶ್ರುತಿ ಸ್ಮೃತ್ಯಾದಿ ಶಾಸ್ತ್ರೇಷು ಪ್ರಾಮಾಣ್ಯಬುದ್ಧಿಮವಲಂಬ್ಯಶ್ರುತ್ಯಾದಿ ಪ್ರೋಕ್ತೇಧರ್ಮೇ ವಿಶ್ವಾಸಂ ನಿಷ್ಠಾಂಚಯಃ ಕರೋತಿ ಸ ಏವ ವಾಸ್ತವ ಹಿಂದು ಪದವಾಚ್ಯಃ" ಅಂದರೆ ಶ್ರುತಿ ಸ್ಮೃತ್ಯಾದಿ ಶಾಸ್ತ್ರಗಳಲ್ಲಿ ಪ್ರಾಮಾಣ್ಯ ಬುದ್ಧಿಯನ್ನು, ಅವುಗಳಲ್ಲಿ ಹೇಳಿದ ಧರ್ಮಗಳಲ್ಲಿ ವಿಶ್ವಾಸವನ್ನು, ಯಾವನು ಇಡುವನೋ ಅವನೇ ವಾಸ್ತವಿಕವಾಗಿ ' ಹಿಂದು ' ಎಂದು ಹೇಳಿಸಿಕೊಳ್ಳಲ್ಪಡುವನು.

"ಹಿಂದೂ ಧರ್ಮ ಪ್ರಲೋಪ್ತಾರೋ ಜಾಯಂತೇ ಚಕ್ರವರ್ತಿನಃ।
ಹೀನಂಚ ದೂಷಯತ್ಯೇವ ಹಿಂದುರಿತ್ಯುಚ್ಯತೇ ಪ್ರಿಯೇ" ||

( ಮೇರುತಂತ್ರ )

ಎಷ್ಟೋ ಚಕ್ರವರ್ತಿಗಳು ಹಿಂದೂ ಧರ್ಮವನ್ನು ಲೋಪಮಾಡಲು ಹುಟ್ಟುತ್ತಿರುವರು. ಎಲೋ ಪ್ರಿಯಳೇ! ಹೀನವೃತ್ತಿ, ಹೀನಾಚಾರ ಇವುಗಳು ನಿಂದ್ಯವೆಂದು ತಿಳಿದು ಯಾವನು ಅವುಗಳನ್ನು ನಿಷೇಧಿಸುವನೋ, ಅವನೇ ಹಿಂದುವು.

"ಹೀನಂ ದೂಷಯತಿ ಇತಿ ಹಿಂದುಃ" "ಪೃಷೋದರಾದಿತ್ವಾತ್ ಸಾಧು ಜಾತಿ ವಿಶೇಷಃ"—ಎಂದು ಪಾಣಿನಿಯ ಸೂತ್ರನುಸಾರವಾಗಿ ಹಿಂದು ಶಬ್ದವು "ಸಾಧು ಜಾತಿ ವಿಶೇಷವೆಂದು ಸಿದ್ಧವಾಗುವುದು.

( ಶಬ್ದಕಲ್ಪ ದ್ರುಮಕೋಷ )

ಅದ್ಭುತಕೋಷದಲ್ಲಿಯಾದರೂ ಹಿಂದೂ ಶಬ್ದದ ವ್ಯಾಖ್ಯಾ ಕೆಳಗಿನಂತೆ ಮಾಡಲ್ಪಟ್ಟಿದೆ. "ಹಿಂದುರ್ಹಿಂದೂಶ್ಚ ಃಪ್ರಸಿದ್ಧೌ ದುಷ್ಟಾನಾಂಚ ವಿಘಣೇ ರೂಪಶಾಲಿನಿ ; ದೈತ್ಯಾರೌ"। ಹಿಂದು ಮತ್ತು ಹಿಂದೂ ಈ ಎರಡು ಶಬ್ದಗಳು ದುಷ್ಟನಿಗ್ರಹ ಅರ್ಥದಲ್ಲಿವೆ. ಮತ್ತು ಸುಂದರ ರೂಪ, ಸುಶೋಭಿತ, ದೈತ್ಯರ ಶತ್ರು ಎಂದು ಹೇಳಲಾಗಿದೆ.

"ಹಿನಸ್ತಿತಪಸಾ ಪಾಪಾನ್ ದೈಹಿಕಾನ್ ದುಷ್ಟಮಾನಸಾನ್ ||
ಹೇತಿಭಿಃ ಶತ್ರುವರ್ಗಂಚ ಸಹಿಂದು ರಭಿಧೀಯತೇ" ||

( ಪಾರಿಜಾತಕ ನಾಟಕ)

ಯಾವನು ತನ್ನ ತಪಸ್ಸಿನ ಪ್ರಭಾವದಿಂದ ದೈಹಿಕ ಪಾಪಗಳನ್ನು, ಮನೋವಿಕಾರಕ್ಕೆ ಕಾರಣವಾದ ಅರಿಷಡ್ವರ್ಗವನ್ನು ನಾಶಮಾಡುವನೋ; ಮತ್ತು ಶಸ್ತ್ರಗಳಿಂದ ಶತ್ರುಸಮುದಾಯವನ್ನು ಸಂಹಾರ ಮಾಡುವನೋ ಅವನು 'ಹಿಂದು' ಎಂದು ಹೇಳಿಸಿಕೊಳ್ಳುವನು. ಹೀಗೆ ಹಿಂದು ಶಬ್ದವು ವಿಶಿಷ್ಟಾರ್ಥ ದ್ಯೋತಕವಾಗಿದೆಯಲ್ಲದೆ ಆರ್ಷಪರಂಪರೆಯಿಂದ ಬಂದಿದೆಯಾದ್ದರಿಂದ ಈ

ಶಬ್ದ ಬಹಳ ಹಳೆಯಕಾಲದ್ದೆಂದು ಹೇಳಲವಕಾಶವಿದೆ. ಹಿಂದು ಶಬ್ದವು ಒಂದು ಜಾತಿ ವಿಶೇಷಕ ನಾಮವಾಗಿದೆಯೆಂದು ಹಿಂದೆ ಹೇಳಿದೆಯಷ್ಟೇ ಈ ಜಾತಿಯ ಜನರಲ್ಲಿ ಧಾರ್ಮಿಕ ದೃಷ್ಟಿಯಿಂದ ಹಲವಾರು ಪಂಥಗಳಿದ್ದಾಗ್ಯೂ ಎಲ್ಲರೂ ಆಸ್ತಿಕ್ಯಕ್ಕೆ ಅಂಟಿಕೊಂಡವರಾಗಿದ್ದಾರೆ. ಆದುದರಿಂದ ಎಲ್ಲ ಹಿಂದುಗಳು ಒಂದೇ ತತ್ವಾವಲಂಬಿಗಳೆಂದು ಹೇಳಬೇಕಾಗಿದೆ. ಇವರಿಗೆ ಧರ್ಮವೇ ಧನವಾಗಿತ್ತು. ಗೋವುಗಳನ್ನು ದೇವರೆಂದು ತಿಳಿದಿದ್ದರು. ತ್ರೇತಾಯುಗದಲ್ಲಿ ವ್ಯಾಪಾರ, ಉದ್ಯೋಗಗಳಲ್ಲಿ ಗೋವುಗಳನ್ನು ಹಣದಂತೆ ವಿನಿಯೋಗಿಸುತ್ತಿದ್ದರು. ಧರ್ಮಕ್ಕಾಗಿ ಮಕ್ಕಳು–ಮರಿಗಳನ್ನು, ತಮ್ಮ ಪ್ರಾಣವನ್ನು ಸಹ ಕೊಡಲು ಸಿದ್ಧರಾಗುತ್ತಿದ್ದರೆಂದು ಯುಗ ಯುಗಾಂತರಗಳ ಉದಂತವಿದೆ. ಧರ್ಮದಿಂದ ನಡೆಯುವವನಿಗೆ ಇಹ ಪರಸುಖವನ್ನು ದೇವರು ಅನುಗ್ರಹಿಸುವನೆಂಬುದನ್ನು ಹಿಂದಿನವರು ದೃಢವಾಗಿ ನಂಬಿದ್ದರು. ಆದುದರಿಂದ ಅವನನ್ನು ಹಲವು ನಾಮಗಳಿಂದ, ಹಲವು ರೂಪಗಳಿಂದ ಭಜಿಸಿ ಪೂಜಿಸಿದರಲ್ಲದೇ ಅವನ ಒಲಿಮೆಗಾಗಿ ಅನೇಕ ವ್ರತ, ಜಪ ನಿಯಮಗಳನ್ನು ಆಚರಿಸಿದರು. ಅಂಥ ಸತ್ಕರ್ಮಗಳನ್ನು ಆಚರಿಸುವ ಒಂದು ಸುಸಮಯಕ್ಕೆ ಹಿಂದಿನವರು ಪರ್ವಕಾಲವೆಂದರು; ಆ ಪರ್ವವೇ 'ಪಬ್ಬ'–ಹಬ್ಬವೆಂದು ಹೆಸರಾಯಿತು. ಹಬ್ಬವೆಂದರೆ ಸರ್ವರಿಗೂ ಉಬ್ಬು. ಉಬ್ಬಿನ ಭರದಲ್ಲಿ ಹಬ್ಬವನ್ನಾಚರಿಸಿ ಹರುಷಪಡುವರು. ಹಬ್ಬವು ಹರುಷದ ಸಂಜ್ಞೆಯಾಗಿದೆ. ಲೋಕಹಿತದ ಮಹತ್ವ ಕಾರ್ಯದ ದಿನವೇ ಹಬ್ಬದ ದಿನ. ಅಥವಾ ದೇವರು ಮಹತ್ವ ಕಾರ್ಯಮಾಡಿದ ದಿನವೇ ಹಬ್ಬದ ದಿನ. ಇಲ್ಲವೇ ಸಜ್ಜನರ ಸ್ಮಾರಕ ದಿನವೇ ಹಬ್ಬದ ದಿನ.

ಹಬ್ಬಗಳನ್ನು ಭಕ್ತಿ ಗೌರವಾದರಗಳಿಂದ ಆಚರಿಸುವುದು. ಈಗಲೂ ವಾಡಿಕೆಯಲ್ಲಿದೆ. ಆದರೆ ನೂರಕ್ಕೆ ತೊಂಭತ್ತೈದು ಜನರು ಹಬ್ಬಗಳ ಮೂಲ ತತ್ವಗಳನ್ನು ಅರಿತಿರುವುದಿಲ್ಲ. ಮನೆಯ ಮಕ್ಕಳು "ಹಬ್ಬವೇನೆಂ"ದು ಕೇಳಿದರೆ ಅಜ್ಜಿಯರು:– 'ಹಿಂದಿನ ಹಿರಿಯರಂತೆ ನಾವೂ ಆಚರಿಸುತ್ತೇವೆಂ"ದು ಉತ್ತರಿಸುವರು. ಅರಿಯದೇ ಆಚರಿಸಿದರೆ ಫಲಪ್ರಾಪ್ತಿಯಾಗಲಾರದೆಂಬ ವಿಚಾರವೂ ಸಹ ಅನೇಕರಿಗುಂಟು. ಹಬ್ಬಗಳ ನಿಜಸ್ವರೂಪವನ್ನು ಅರಿಯಬೇಕೆಂದರೆ ಅದಕ್ಕೆ ತಕ್ಕ ಗ್ರಂಥಗಳ ಕೊರತೆಯು ಕಾರಣವಾಗಿದೆ. ಈ

ನ್ಯೂನತೆಯನ್ನು ನಿವಾರಿಸುವ ಉದ್ದೇಶದಿಂದ ನಾವು ಸನ್ ೧೯೩೮ ರಲ್ಲಿ 'ಹಿಂದು ಧರ್ಮದ ಹಬ್ಬಗಳು' ಎಂಬ ಲೇಖನ ಮಾಲೆಯನ್ನು ಬರೆಯಲು ಪ್ರಾರಂಭಿಸಿ, ಕೆಲವು ಹಬ್ಬಗಳ ಸ್ವರೂಪವನ್ನು ಮೈಸೂರಲ್ಲಿ ಹೊರಡುವ ಪಂಚಾಚಾರ್ಯ, ಪ್ರಭಾ ಮೊದಲಾದ ಪತ್ರಿಕೆಗಳಲ್ಲಿ ಆಗ ಪ್ರಕಟಿಸಿದೆವು. ಸನ್ ೧೯೩೯ ರಲ್ಲಿ ಬಿಜಾಪುರ ವೈಭವ ಕಾರ್ಯಾಲಯದಲ್ಲಿ ಶ್ರೀಯುತ ಮೊಕಾಶಿ ಗೋವಿಂದ ಮಹಾಶಯರ ಭೆಟ್ಟಿಯು ಅಕಸ್ಮಾತ್ ಲಭಿಸಿತು. ಅವರು ನಮ್ಮ ಗ್ರಂಥಲೇಖನ ಕಾರ್ಯಕ್ಕೆ ಉದಾರ ಮನಸ್ಸಿನಿಂದ ಸದಭಿಪ್ರಾಯವನ್ನು ವ್ಯಕ್ತಪಡಿಸಿ ಪ್ರೋತ್ಸಾಹಿಸಿದರು. ಆದರೆ ನಾವು ಕೆಲವೇ ದಿವಸಗಳಲ್ಲಿ ಆಯುರ್ವೇದ ಅಭ್ಯಾಸಕ್ಕೆ ಹೋಗಬೇಕಾಯಿತಾದುದರಿಂದ ಗ್ರಂಥ ಲೇಖನ ಕಾರ್ಯವು ಅರ್ಧಕ್ಕೆ ಉಳಿಯಿತು; ಈ ವಿಷವು ಪುನಃ ಪುನಃ ನೆನಪಿಗೆ ಬರುತ್ತಿತ್ತು. 'ಭವಿತವ್ಯಂ ಭವತ್ಯೇವ' ಎಂಬಂತೆ ದೇವರ ಪ್ರೇರಣೆಯು ಮತ್ತೊಮ್ಮೆ ನಮ್ಮನ್ನು ಈ ಕಾರ್ಯಕ್ಕೆ ಮುಂದೆ ಮಾಡಿತು. ಕೆಲವು ಕೀರ್ತನಕಾರರು, ಪುರಾಣ, ಪ್ರವಚನಕಾರರು ಕೆಲವು ಧರ್ಮಾಭಿಮಾನಿಗಳು ಆಗ್ರಹಪೂರ್ವಕವಾಗಿ ಈ ಕಾರ್ಯದತ್ತ ನಮ್ಮನ್ನು ಹೊರಳಿಸಿದರು.

ಸನ್ ೧೯೭೩ ರಲ್ಲಿ ನಾವು 'ಪಂಚಾಚಾರ್ಯ ಚರಿತ್ರೆಯ ವಿಮರ್ಶವೆಂ'ಬ ಗ್ರಂಥವನ್ನು ಪ್ರಕಟಿಸುವಾಗ್ಗೆ ಅಣ್ಣೀಗೇರಿ ಮುಕ್ಕಾಮಿನಲ್ಲಿ ಶ್ರೀಮದ್ರಂಭಾಪುರಿ ವೀರ ಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ಜಗದ್ಗುರುಪ್ರಸನ್ನ ರೇಣುಕ ವೀರ ಗಂಗಾಧರ ಶಿವಾಚಾರ್ಯ ಮಹಾಶಿವಯೋಗಿಗಳು ಒಂದುಸಾವಿರ ರೂಪಾಯಿಗಳನ್ನು (ವಿಮರ್ಶಗ್ರಂಥ) ಮುದ್ರಣಕ್ಕಾಗಿ ಆಶೀರ್ವದಿಸಿ,—"ಇದೇ ಪ್ರಕಾರವಾಗಿ ಗ್ರಂಥಗಳ ಮೂಲಕ ಧರ್ಮಪ್ರಚಾರ ಮಾಡುತ್ತಿರಬೇಕೆಂ"ದು ಕೃಪಾದೃಷ್ಟಿಯಿಂದ ಆಶೀರ್ವದಿಸಿದರು. ತಪೋನಿಧಿಗಳ ಆಶೀರ್ವಾದ ಪ್ರಭಾವದಿಂದಲೇ ಗ್ರಂಥ ಲೇಖನವು ತೀವ್ರಗತಿಯಲ್ಲಿ ನಡೆದು ಪರಿಸಮಾಪ್ತಿಯಾಯಿತು. "ಮಿಡಿಪಣ್ಣಾಗದೆ ದೇವರೊಲ್ಮೆಯುದಿರಲ್" ಎನ್ನುವಂತೆ ಶ್ರೀ ಮಹಾಗುರುಗಳ ಕೃಪೆಯಿಂದ ಗ್ರಂಥವು ನಿರ್ವಿಘ್ನವಾಗಿ ಪರಿಸಮಾಪ್ತಿಯಾಯಿತು. ಮುಂದೆ ಅದನ್ನು ಮುದ್ರಣ ಮಾಡಿಸುವ ಕೆಲಸವು ಕೂಡ ಸುಲಭವಾಯಿತು. ಉದಾರ ಮನಸ್ಸಿನ ಮಹಾಶಯರು ಮುಂದೆಬಂದು ಮುಕ್ತಹಸ್ತದಿಂದ ಧನಸಹಾಯ

ಮಾಡಿದರು. ಅವರ ವಿಶಾಲ ಭಾವನೆಯು ಪುಸ್ತಕ ಪ್ರಚಾರಕ್ಕೆ ಪ್ರೋತ್ಸಾಹ ವಾಯಿತು. ಇದೆಲ್ಲಕ್ಕೂ ಶ್ರೀ ಗುರುಪುಂಗವರ ಕೃಪೆಯೇ ಕಾರಣವಾಗಿದೆ ಯಾದ್ದರಿಂದ ಈ ಚಿಕ್ಕ ಪುಸ್ತಕವನ್ನು ಮಹಾಗುರುಗಳ ದಿವ್ಯಪಾದಾರವಿಂದ ಗಳಲ್ಲಿ ಇಂದು ಕಾಣಿಕೆಯನ್ನಾಗಿ ಅರ್ಪಿಸಲು ಅತ್ಯಂತ ಸಂತೋಷವೆನಿಸುತ್ತದೆ.

ಕೊನೆಯದಾಗಿ ಶ್ರೀಯುತ ಎಸ್. ಎಫ್. ಕಟ್ಟಿಮನಿ ಇವರು ತಮ್ಮ "ಮನೋಹರ" ಪಾವರ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಈ ಸದ್ಗ್ರಂಥವನ್ನು ನಿರ್ದಿಷ್ಟ ಕಾಲದಲ್ಲಿ ಮುದ್ರಿಸಿಕೊಟ್ಟದ್ದಕ್ಕೆ ಆನಂದಿಸುತ್ತೇವೆ.

ಗ್ರಂಥಕರ್ತರು :

ಚಿಕ್ಕಮಣ್ಣೂರ ಬೃಹನ್ಮಠಾಧ್ಯಕ್ಷ

**ಪಂಡಿತ ಶ್ರೀಗುರುದೇವ ಶಿವಾಚಾರ್ಯಸ್ವಾಮಿಗಳು**

ಆಯುರ್ವೇದ ವಿಶಾರದ; ವೈದ್ಯವಾಚಸ್ಪತಿ;

ಆಯುರ್ವೇದಾಚಾರ್ಯ.

ನವಿಲುಗುಂದ,

ತಾ. ೨೩-೨-೧೯೬೬.



॥ ಶ್ರೀ ಜಗದ್ಗುರು ರೇಣುಕಾಚಾರ್ಯಃ ಪ್ರಸೀದತು ॥

# ಸಮರ್ಪಣ

ಶ್ರೀ ಮದ್ವೀರಶೈವ ಮಹಾಮತಸ್ಥಾಪನಾಚಾರ್ಯವರ್ಯ
ಶ್ರೀ ಜಗದ್ಗುರು ರೇಣುಕ ಭಗವತ್ಪಾದ ಮಹಾಚಾರ್ಯ
ಪರಂಪರಾಗತ, ಭದ್ರಾತೀರ ಭಾಸಮಾನ ಸಾಕ್ಷಾತ್ ಭೂಕೈಲಾಸ
ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ,
ವೀರವೈರಾಗ್ಯ ಚಕ್ರವರ್ತಿ, ನಿರ್ಮಲಕೀರ್ತಿ, ಸದಾಸಂಸ್ಮರಣೀಯ
ದಿವ್ಯಮಂಗಲಮೂರ್ತಿ, ಸದ್ಧರ್ಮಜ್ಯೋತಿ,
ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಗಂಗಾಧರ
ಮಹಾರಾಜ ದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದ
ಮಹಾಸ್ವಾಮಿಗಳವರ ದಿವ್ಯಸನ್ನಿಧಿಗೆ, ಈ ಗ್ರಂಥವನ್ನು
ಗುರುಭಕ್ತಿಪೂರ್ವಕವಾಗಿ ಸಮರ್ಪಿಸಿದೆ.

ನವಿಲುಗುಂದ,

ತಾ. ೨೩-೨-೧೯೬೬.

ಕೃತಿಕರ್ತೃ,

ಗುರುದೇವ ಶಿವಾಚಾರ್ಯಃ



ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ,
ವಿಶ್ವಕಲ್ಯಾಣಯೋಗೀಶ್ವರ, ಶ್ರೀಮುಕ್ತಿಮಂದಿರ ಮಹರ್ಷಿ,
ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನರೇಣುಕ
ವೀರಗಂಗಾಧರ ಮಹಾರಾಜದೇಶಿಕೇಂದ್ರ ಶಿವಾಚಾರ್ಯ
ಭಗವತ್ಪಾದ ಮಹಾಸ್ವಾಮಿಗಳವರು.



ಗ್ರಂಥಕರ್ತರು :

ಚಿಕ್ಕಮಣ್ಣೂರ ಬೃಹನ್ಮತಾಧ್ಯಕ್ಷ,

**ಪಂ. ಶ್ರೀ ಗುರುದೇವ ಶಿವಾಚಾರ್ಯಸ್ವಾಮಿಗಳು**

ವೈದ್ಯವಾಚಸ್ಪತಿ, ಆಯುರ್ವೇದ ವಿಶಾರದ, ಆಯುರ್ವೇದಾಚಾರ್ಯ.

# ..ಪರಿವಿಡಿ..

॥ भवो भवतु भव्याय ॥

# ಸಚಿತ್ರ ಹಿಂದು ಹಬ್ಬಗಳು

## ಮಂಗಲಾಚರಣ

ಬ್ರಹ್ಮ ವಿಷ್ಣು ಮಹೇಶಾಖ್ಯಂ ಯಸ್ಯಾಂಶಾ ಲೋಕಸಾಧಕಾಃ ।
ತಮಾದಿದೇವಂ ಚಿದ್ರೂಪಂ ವಿಶುದ್ಧಂ ಪರಮಂ ಭಜೇ ॥

ಯಸ್ಯಾಂ ಪೂರ್ವೇ ಪೂರ್ವಜನಾ ವಿಚಕ್ರಿರೇ
ಯಸ್ಯಾಂ ದೇವಾ ಅಸುರಾನಭ್ಯವರ್ತಯನ್ ।
ಗವಾಮಶ್ವಾನಾಂ ವಯಸಶ್ಚ ವಿಷ್ಠಾ ಭಗಂವರ್ಚಃ ಪೃಥಿವೀ ನೋ ದಧಾತು ॥

ಯಸ್ಯಾಂ ವೃಕ್ಷಾವಾನಸ್ಪತ್ಯಾ ಧೃವಾಸ್ತಿಷ್ಠಂತಿ ವಿಶ್ವಹಾ ।
ಪೃಥಿವೀಂ ವಿಶ್ವಧಾಯಸಂ ಧೃತಾ ಮಚ್ಛಾವದಾಮಸಿ ॥

( ಅಥರ್ವ )

ಯಾವ ಸ್ಥಾನದಲ್ಲಿ ಪೂರ್ವಕಾಲದಲ್ಲಿ ಮನುಮುನಿಗಳು ಚತುರ್ವಿಧ ಪುರುಷಾರ್ಥ ಸಾಧನೆಗಾಗಿ ಸಂಚರಿಸಿರುವರೋ ! ದೇವಾನುದೇವತಿಗಳು ಧರ್ಮ ರಕ್ಷಣೆಗಾಗಿ ಕ್ರೂರ ರಾಕ್ಷಸರೊಡನೆ ಹೋರಾಡಿ ಅವರನ್ನು ಸಂಹರಿಸಿರುವರೋ ! ಎಲ್ಲಿ ಗೋಮಹಿಷಾದಿ ಪಶುಗಳಿಗೂ, ಸಿಂಹಶಾರ್ದೂಲಾದಿ ಮೃಗಗಳಿಗೂ, ಶುಕ, ಪಿಕ ಮೊದಲಾದ ಹಕ್ಕಿ ಪಕ್ಕಿಗಳಿಗೂ ಆಶ್ರಯವಿರುವುಧೋ ಅಂಥ ಭೂದೇವಿಯು ನಮಗೆ ಐಶ್ವರ್ಯವನ್ನು, ತೇಜಸ್ಸನ್ನು ಕೊಟ್ಟು ಕಾಪಾಡಲಿ.

ಶಿಲಾಶೈಲಗಳಿಗು, ಸರಿತ್‌ಸರೋವರ ಸಮುದ್ರಾದಿ ಜಲವಾಹಕಗಳಿಗು, ಜಾಜ್ವಲ್ಯಮಾನ ಜ್ವಾಲಾಮುಖಿ, ತೇಜೋಮಯ ವಜ್ರವೈಡೂರ್ಯಮಣಿ ಗಣಕ್ಕು, ಸುವರ್ಣ, ರಜತ, ಕಾಂಸ್ಯ, ಕಬ್ಬಿಣಾದಿ ಖನಿಜದ್ರವ್ಯಕ್ಕು ತರ ತರದ ತರುಗುಲ್ಮಗಳಿಗೂ, ಋದ್ಧಿ ಸಿದ್ಧಿ ಮೊದಲಾದ ಮಹೌಷಧಿವರ್ಗಕ್ಕು

ಜನ್ಮ ಕೊಟ್ಟು, ದ್ವಿಪಾದ ಚತುಷ್ಪಾದಾದಿ ಜೀವಿಗಳಿಗೆ ನಿತ್ಯ ಅನ್ನೋದಕ ವನ್ನಿತ್ತು ಕಾಯುವ ವಿಶ್ವಂಭರಾ (ಭೂ)ದೇವಿಯ ಗುಣಗೌರವದ ಗಾನವನ್ನು ನಾವು ಮಾಡುತ್ತೇವೆ.

ಇಂಥ ಧರಾದೇವಿಯ ಜನ್ಮ ಎಂದು ಆಯಿತೆನ್ನುವದು ಯಾವ ವಿಜ್ಞಾನಿಗೂ ಹೇಳಲವಕಾಶವಿಲ್ಲ. ಖ್ರಿಸ್ತಿ–ಮಹಮ್ಮದೀಯ ಮತಾನುಯಾಯಿಗಳು ಈ ಜಗತ್ತು ಜನಿಸಿ ಆರು ಏಳು ಸಾವಿರ ವರುಷವಾಯಿತೆಂದು ಹೇಳುವುದುಂಟು ಇದು ಹಿಂದು ಸಂಸ್ಕೃತಿಯನ್ನು ಹಾಳುಮಾಡಲು ಹೂಡಿದ ಆಟವೆಂದು ಹೇಳದೆ ಗತ್ಯಂತರವಿಲ್ಲ. ಹಿಂದೂ ಜ್ಯೋತಿಷ್ಯ ಶಾಸ್ತ್ರದ ಸಿದ್ಧಾಂತದಂತೆ ಚತುರ್ಯುಗಗಳ ಕಾಲಗಣನೆ ನೋಡಿದರೆ ಅತ್ಯಾಶ್ಚರ್ಯವಾಗದಿರಲಾರದು. ಈ ಕಾಲವು ಅಳತೆಗೆ ಅಸಾಧ್ಯವಾಗಿದೆ ಎಂದು ಶಾಸ್ತ್ರವೇತ್ತರ ಅಭಿಮತವಿದೆ.

## ಕಾಲದ ಆದ್ಯನಂತತ್ವ

ಕಾಲಕ್ಕೂ, ಭಗವಂತನಿಗೂ ಅವಿನಭಾವ ಸಂಬಂಧ ವಿರುವುದರಿಂದ ಜ್ಯೋತಿಷ ಶಾಸ್ತ್ರವು ಆ ಕಾಲಕ್ಕೆ ಭಗವಾನ್ ಎಂದು ಸಂಬೋಧಿಸಿದೆ. ಕಾಲವು ಸೃಷ್ಟಿ, ಸ್ಥಿತಿ, ಪ್ರಲಯಕಾರಕವೆಂದು ಹಿಂದಿನ ಮಹರ್ಷಿಗಳು ಹೇಳಿರುವರು. ಇದರ ಶಕ್ತಿಯು ಕೂಡ ತ್ರಿಗುಣಾತ್ಮಿಕಾ (ಸತ್ವರಜಸ್ತಯೋಮಯೀ) ಪ್ರಕೃತಿಯೆಂದು ಹೇಳಿದ್ದಾರೆ. ಭಗವಾನ್‌ಕಾಲವು ಎರಡು ಪ್ರಕಾರವಾಗಿದೆ. ಮೊದಲನೆಯದು ನಿರ್ಗುಣ—ನಿರಾಕಾರ ಅನಾದಿ—ಅನಂತ ೨ನೇಯದು ಸಗುಣ—ಸಾಕಾರ ಸಾದಿ–ಸಾಂತ ೨ನೆಯ ಕಾಲವಾದರೂ ಎರಡು ಪ್ರಕಾರವಾಗಿದೆ. (೧) ಸೂಕ್ಷ್ಮ ಅಂದರೆ ವ್ಯವಹಾರದಲ್ಲಿ ಉಪಯೋಗಿಸಲು ಬಾರದಿದ್ದುದು. (೨) ಸ್ಥೂಲ ಅಂದರೆ ವ್ಯವಹಾರದಲ್ಲಿ ಉಪಯೋಗಿಸಲು ಬರುವುದು. ಅರ್ಥಾತ್ ಮನುಷ್ಯ ವ್ಯವಹಾರದಲ್ಲಿ ಸೂಕ್ಷ್ಮಾತಿಸೂಕ್ಷ್ಮ ಕೆಲಸಕ್ಕೆ ಉಪಯೋಗಿಸಲು ಯೋಗ್ಯವಾದುದಕ್ಕೆ ಸ್ಥೂಲ ಕಾಲ ವೆನ್ನುವರು.

"ಸೂಚ್ಯಾಭಿನ್ನೇ ಪದ್ಮಪತ್ರೇ ತ್ರುಟಿರಿತ್ಯಭಿಧೀಯತೇ ॥
ತತ್‌ಷಷ್ಟ್ಯಾಚ ಭವೇದ್ರೇಣೂ ರೇಣು ಷಷ್ಟ್ಯಾ ಲವಃ ಸ್ಮೃತಃ ।
ತತ್‌ಷಷ್ಟ್ಯಾ ಲೀಕ್ಷಕಂ ಪ್ರೋಕ್ತಂ ತತ್‌ಷಷ್ಟ್ಯಾ ಪ್ರಾಣ ಉಚ್ಯತೇ ॥

ಷಡ್ಭಿಃ ಪ್ರಾಣೈರ್ವಿನಾಡೀಸ್ಯಾತ್ ತತ್ ಷಷ್ಟ್ಯಾನಾಡಿಕಾಸ್ಮೃತಾ।
ನಾಡೀ ಷಷ್ಟ್ಯಾತು ನಾಕ್ಷತ್ರ ಮಹೋರಾತ್ರಂ ಪ್ರಕೀರ್ತಿತಂ॥

ಅಂದರೆ ಸೂಕ್ಷ್ಮವಾದ ಸೂಜಿಯಿಂದ ಕಮಲ ಎಲೆಗೆ ಹೊಡೆದು ತೂತು ತೆಗೆಯಲು ಯಾವ ಸಮಯ ಹತ್ತುವುದೋ, ಆ ಸಮಯಕ್ಕೆ ೧ ತ್ರುಟಿ ಕಾಲ ವೆನ್ನುವರು.

ಇಂಥ ೬೦, ತ್ರುಟಿ = ೧, ರೇಣು
೬೦, ರೇಣು = ೧, ಲವ
೬೦, ಲವ = ೧, ಲೀಕ್ಷಕ
೬೦, ಲೀಕ್ಷಕ = ೧, ಪ್ರಾಣ
೬೦, ಪ್ರಾಣ = ೧, ಪಲ
೬೦, ಪಲ = ೧, ಘಡೀ (ಘಟಿಕಾ)
೬೦, ಘಟಿಕಾ= ೧,, ಅಹೋರಾತ್ರ ( ಹಗಲುಇರುಳು, )

ಇವುಗಳಲ್ಲಿ ತ್ರುಟಿಯಿಂದ ಲೀಕ್ಷ ಪರ್ಯಂತ ಸೂಕ್ಷ್ಮ ಕಾಲವಿರುವುದು. ಆದ್ದರಿಂದ ಇದನ್ನು ವವ್ಯಹಾರದಲ್ಲಿ ತೆಗೆದುಕೊಳ್ಳಲು ದುಸ್ಸಾಧ್ಯವಿದೆ.

ಪ್ರಾಣದಿಂದ ಮುಂದಿನ ಕಾಲವು ಸ್ಥೂಲ ಕಾಲವೆಂದು ವಿವರಿಸಲ್ಪಟ್ಟಿದೆ. ಯಾಕಂದರೆ–ಇದು ತಿಳಿಯಲು ಸುಲಭವಾಗಿಯೂ, ವ್ಯವಹಾರದಲ್ಲಿ ಉಪ ಯೋಗಿಸಲು ಯೋಗ್ಯವಾಗಿಯೂ ಇದೆ.

## ಹಗಲು – ರಾತ್ರಿ

೧೦ ಸಾರೆ ಓಂ, ಎಂಬ ಅಕ್ಷರ ನುಡಿಯಲು ಯಾವ ಸಮಯ ಹತ್ತು ವುದೋ, ಆ ಸಮಯಕ್ಕೆ 'ಪ್ರಾಣ' ಅನ್ನುವರು.

೧ ಸಾರೆ 'ಓಂ' ಕಾರ ನುಡಿಯಲು ಎಷ್ಟು ಸಮಯ ಹಿಡಿಯುವುದೋ ಆ ಸಮಯಕ್ಕೆ 'ವಿಪಲ'ವೆನ್ನುವರು.

೬೦, ವಿಪಲ = ೧, ಪಲ
೬೦, ಪಲ = ೧, ಘಡೀ (ಘಟಿಕಾ)

೨॥ ಘಡೀ = ೧ ಹೋರಾ. (ತಾಸು)

೬೦ ಘಡಿ ಅಥವಾ ೨೪ ಹೋರಾ = ೧ ಅಹೋ ರಾತ್ರಿ.

ಆದ್ದರಿಂದ ೧ ವಿಪಲವು ಸೂಕ್ಷ್ಮವಾದುದರಿಂದ ಯಾವ ವ್ಯವಹಾರ ದಲ್ಲಿಯೂ ಅದರ ಉಪಯೋಗ ವಿರುವದಿಲ್ಲ. ವ್ಯವಹಾರಕ್ಕೆ ಕಾರಣವಾದ ಪಂಚಾಂಗದಲ್ಲಿ 'ಪಲ' ಮತ್ತು 'ಘಟಿಕಾ' ಇವುಗಳನ್ನೇ ಉಪಯೋಗಿಸುತ್ತಾರೆ. ಯಾಕಂದರೆ-೧ ಪಲದಲ್ಲಿ ೬೦ 'ಓಂ' ಕಾರ ಅಥವಾ ಯಾವುದಾದರೊಂದು ಗುರು ಅಕ್ಷರ ನುಡಿಯುವಷ್ಟು ಕಾಲ ವಿರುವುದು. ಈ ಕಾರಣದಿಂದ ೧ 'ಪಲ' ದಲ್ಲಿ ಯಾವುದಾದರೊಂದು ಸಣ್ಣ ಸಂಕಲ್ಪವಾಗಲು ಶಕ್ಯವಿದೆ. ಆದರೆ 'ವಿಪಲ' ದಲ್ಲಿ ಸಾಧ್ಯವಾಗಲಾರದು.

## ಶುಭ–ಅಶುಭ–ಮಿಶ್ರಗುಣವುಳ್ಳ ಕಾಲ

ಕಾಲವು ನಿರಾಕಾರವಾದರೂ 'ಸಾಕಾರ' ಮತ್ತು 'ಸಗುಣ' ವಿರುವು ದೆಂದು ಹಿಂದೆ ಹೇಳಿದೆಯಷ್ಟೇ! ಮಹಾ ಪ್ರಲಯದನಂತರ ಕಾಲವು ನಿರಾಕಾರ ವಾಗುವುದು. ಯಾವಾಗ್ಗೆ ಚರಾಚರ ವಿಶ್ವಸೃಷ್ಟಿ ಯಾಗುವದೋ ಆಗ ಆಕಾಶ ಸ್ಥಜ್ಯೋತಿಷ ಪಿಂಡದ (ಸೂರ್ಯ–ತಾರಾಆದಿ) ರಶ್ಮಿಗಳ ವಶಕಾಲದಲ್ಲಿ ಸಾಕಾರತ್ವವೂ, ಸಗುಣತ್ವವೂ ಭಾಸಿತವಾಗುವದು ಯದಿತಾರಾ, ಮತ್ತು ಗ್ರಹ ಇವುಗಳು ಒಂದೇ ಸ್ಥಾನದಲ್ಲಿ ಸ್ಥಿರವಾಗಿ ಇದ್ದರೆ ಕಾಲವೂ ಕೂಡಾ ಒಂದೇ ಪ್ರಕಾರವಾಗಿ ಭಾಸಿತವಾಗುವುದು; ಆದರೆ ನಕ್ಷತ್ರ, ಮತ್ತು ಗ್ರಹಗಳ ಪ್ರತಿಕ್ಷಣ ಭ್ರಮಣವಾಗುವ ಕಾರಣ ಕಾಲದಲ್ಲಿ ಯಾರಾದರು ಪ್ರತಿಕ್ಷಣದಲ್ಲಿ ವಿಲಕ್ಷಣತಾ (ಭಿನ್ನ ಭಿನ್ನ ಗುಣ ಮತ್ತು ಸ್ವರೂಪ) ಪ್ರತಿ ಭಾಸಿತವಾಗುವುದು. ಆಕಾಶದಲ್ಲಿದ್ದ ಈ ನಕ್ಷತ್ರಗಳೂ, ಮತ್ತು ಗ್ರಹಗಳೂ ಎರಡು ಪ್ರಕಾರವಾಗಿ ರುತ್ತವೆ. ಕೆಲವು ವಿಷರಶ್ಮಿಯುಳ್ಳವುಗಳು, ಮತ್ತೆ ಕೆಲವು ಅಮೃತ ರಶ್ಮಿಯುಳ್ಳ ವುಗಳು ಆಗಿವೆ. ಇವುಗಳ ಉಭಯವಿಧ ರಶ್ಮಿಗಳ ಸಂಯೋಗದಿಂದ ಕಾಲದಲ್ಲಿ ಶುಭತ್ವ, ಅಶುಭತ್ವ ಹಾಗೂ ಸಮತ್ವ (ಮಿಶ್ರಗುಣತ್ವ) ಆಗುತ್ತಲಿರುತ್ತದೆ.

ಗ್ರಹಗಳಲ್ಲಿ ಮಂಗಲ ಮತ್ತು ಶನಿ, ಅಶುಭ (ವಿಷ) ರಶ್ಮೀ ಅವೆ. ಬೃಹಸ್ಪತಿ ಮತ್ತು ಶುಕ್ರ, ಶುಭ (ಸುಧಾ) ರಶ್ಮಿ ಅವೆ. ಚಂದ್ರನು ತನ್ನ ಶುಕ್ಲ (ಕಿರಣ)ದ ವೃದ್ಧಿಯಲ್ಲಿ ಶುಭನಾಗುವನು. ಕಿರಣಗಳ ಕ್ಷೀಣತೆಯಲ್ಲಿ ಅಶುಭ

ನಾಗುವನು. ಬುಧನು ಶುಭನೂ ಅಲ್ಲ, ಅಶುಭನೂ ಅಲ್ಲ. ಇವನು ಯಾವ ಗ್ರಹದೊಡನೆ ಕೂಡುವನೋ! ಆ ಗ್ರಹದ ಗುಣವೃದ್ಧಿ ಮಾಡುವನು ಹೇಗೆಂದರೆ— ನೀರು ಸಕ್ಕರೆಯೊಡನೆ ಕೂಡಿಕೊಂಡು ಮಾಧುರ್ಯಕ್ಕೆ ಪುಷ್ಟಿ ಯನ್ನುಂಟು ಮಾಡುವುದು. (ಕಟು) ಕಾರದೊಡನೆ ಕೂಡಿಕೊಂಡು ಅದರ ಬಲವನ್ನು ಹೆಚ್ಚಿಸುವದು. ಸೂರ್ಯನು ಸರ್ವಗುಣ ಸಂಪನ್ನನೂ, ಸರ್ವ ಶಕ್ತಿಯವನೂ ಆದಕಾರಣ ಚಂಡರಶ್ಮಿ, ಉಗ್ರರಶ್ಮಿಯೆಂದು ಹೇಳಿಸಿಕೊಳ್ಳಲ್ಪ ಡುವನು. ಈ ಸೂರ್ಯನು ನಕ್ಷತ್ರಗಳ ಸಂಯೋಗವಶಾತ್ ಒಮ್ಮೊಮ್ಮೆ ಕ್ರೂರರಶ್ಮಿಯೂ, ಸೌಮ್ಯರಶ್ಮಿಯೂ ಆಗುತ್ತಿರುತ್ತಾನೆ.

ಯಾವಾಗ್ಗೆ ಶುಕ್ರ ಮತ್ತು ಬೃಹಸ್ಪತಿ ಕಿರಣಗಳ ಅಧಿಕತಾ ಹಾಗೂ ಚಂದ್ರನ ಕಿರಣದ ವೃದ್ಧಿಯಾಗುವುದೋ ಅದರೊಡನೆ ಶನಿ, ಮತ್ತು ಮಂಗಲ ಕಿರಣಗಳ ಅಲ್ಪತಾ ಆಗುವುದೋ ಆಗ ಸಮಯವು ಅತ್ಯಂತ ಶುದ್ಧ (ಶುಭ ಅಥವಾ ಉತ್ತಮ) ಇರುತ್ತದೆ. ಆಗ ಪೃಥ್ವಿಯಲ್ಲಿ ಸುವೃಷ್ಟಿ, ಸುಭಿಕ್ಷ ಮತ್ತು ಸರ್ವ ಜೀವಿಗಳಲ್ಲಿ ಪ್ರಸನ್ನತೆ, ಆರೋಗ್ಯತೆ ಮೊದಲಾದ ಶುಭಫಲ ವುಂಟಾಗುತ್ತದೆ. ಯಾವ ಸಮಯದಲ್ಲಿ ಶನಿ, ಮಂಗಲ ಕಿರಣಗಳ ಅಧಿಕತಾ ಮತ್ತು ಶುಕ್ರ, ಗುರು, ಚಂದ್ರಕಿರಣಗಳ ಅಲ್ಪತೆ ಆಗುವುದೋ ಆ ಸಮಯ ದಲ್ಲಿ ಪೃಥ್ವಿಯ ಮೇಲೆ ಅನಾವೃಷ್ಟಿ, ದುರ್ಭಿಕ್ಷ, ಜನರಲ್ಲಿ ಉದ್ವೇಗ, ರೋಗ ವೃದ್ಧಿ, ವೈಮನಸ್ಯ ಇತ್ಯಾದಿ ಅಶುಭ ಫಲಗಳಾಗುವವು.

ಯಾವುದಾದರೊಂದು ಸತ್ಕಾರ್ಯವನ್ನು ಶುದ್ಧ ಸಮಯದಲ್ಲಿ ಮಾಡಿದರೆ ಸಫಲತೆಯಾಗುವುದು. ಅಶುದ್ಧ ಸಮಯದಲ್ಲಿ ಮಾಡಿದರೆ ಹಾನಿಯುಂಟಾ ಗುವುದು. ಆದ್ದರಿಂದ ಪುರಾತನ ಕಾಲದಲ್ಲಿ ಮಹರ್ಷಿಗಳು ಜನಕಲ್ಯಾಣ ಕಾರಕ ಭಾವನೆಯಿಂದ ಬಹಳ ಪರಿಶ್ರಮದಿಂದ ಶುದ್ಧಾಶುದ್ಧ ಕಾಲಗಳ ಲಕ್ಷಣ ಗಳನ್ನು ಕಂಡುಹಿಡಿದು ಉಲ್ಲೇಖಿಸಿರುವರು. ಅದೆಲ್ಲವೂ ಗ್ರಹನಕ್ಷತ್ರಗಳ ಸಂಬಂಧದಿಂದ ಉಂಟಾಗುತ್ತಿರುವ ಕಾರಣ ಕಾಲತಂತ್ರವೆಂದು ಅನ್ನುತ್ತಾರೆ.

ಹೀಗೆ ಸೂರ್ಯಾದಿ ಸಪ್ತಗ್ರಹಗಳ ರಶ್ಮಿವಶಾತ್ ಏಳು ಪ್ರಕಾರದ ಕಾಲ ಗಳಾಗುತ್ತವೆ. ಆದರೆ ಅವುಗಳಲ್ಲಿ ಪ್ರಧಾನತಯಾ ವ್ಯವಹಾರಾರ್ಥವಾಗಿ ಐದು ಪ್ರಕಾರದ ಕಾಲಭೇದಗಳು ಹೇಳಲ್ಪಟ್ಟಿವೆ.

## ಪಂಚಾಂಗ

"ಸೌರಂ ಸೂರ್ಯಾಂಶ ಭೋಗೇನ ತಿಥ್ಯಾಚಾಂದ್ರದಿನಂಸ್ಮೃತಂ।
ನಾಕ್ಷತ್ರಂ ಭಭ್ರಮಾದಿಂಡೋಃಸಾವನಂ ತೂದಯಾದ್ರವೇಃ॥
ಬಾರ್ಹಸ್ಪತ್ಯಂ ಭಭೋಗೇನ ಮಧ್ಯಗತ್ಯಾ ಬೃಹಸ್ಪತೇಃ।"

೧) ಸೌರ, ೨) ಚಾಂದ್ರ, ೩) ಸಾವನ ೪) ನಾಕ್ಷತ್ರ, ೫) ಬಾರ್ಹಸ್ಪತ್ಯ, ಇವುಗಳು ಭಗವಾನ್ ಕಾಲದ ಮುಖ್ಯ ಐದು ಅಂಗಗಳಾಗಿರುತ್ತವೆ. ಈ ಪಂಚಾಂಗಗಳ ಜ್ಞಾನವು ಯಾವದ್ವಾರಾ ಉಂಟಾಗುವುದೋ ! ಆ ಪದ್ಧತಿಗೆ ಜನರು "ಪಂಚಾಂಗ" ಎಂದು ಅನ್ನುವುದುಂಟು.

**ವಿವರಣೆ :—** ೧) ಪ್ರತ್ಯೇಕ ನಕ್ಷತ್ರಗಳೊಡನೆ ಸೂರ್ಯರಶ್ಮಿಯಿಂದ ಯಾವ ಕಾಲದಲ್ಲಿ ವಿಲಕ್ಷಣತೆಯುಂಟಾಗುವದೋ ಆದಕ್ಕೆ 'ಸೌರ' ಕಾಲವೆನ್ನುವರು. ೨) ಚಂದ್ರ ಶುಕ್ಲ (ತೇಜ) ದ ವೃದ್ಧಿ, ಅಥವಾ ಹಾನಿಯಿಂದ ಯಾವ ಕಾಲದಲ್ಲಿ ವಿಲಕ್ಷಣತೆಯುಂಟಾಗುವದೋ ಆದಕ್ಕೆ 'ಚಾಂದ್ರ' ಕಾಲವೆನ್ನುವರು. ೩) ಸೂರ್ಯನ ಉದಯದಿಂದ, ಅಸ್ತವಶದಿಂದ ಯಾವ ಕಾಲದಲ್ಲಿ ವಿಲಕ್ಷಣತೆಯುಂಟಾಗುವದೋ ಆದಕ್ಕೆ 'ಸಾವನ' ಕಾಲವೆನ್ನುವರು. ೪) ಪ್ರತ್ಯೇಕ ನಕ್ಷತ್ರಗಳೊಡನೆ ಚಂದ್ರರಶ್ಮಿ ಯೋಗವಾಗುವದರಿಂದ ಯಾವ ಕಾಲದಲ್ಲಿ ವಿಲಕ್ಷಣತೆಯುಂಟಾಗುವದೋ ಆ ಕಾಲಕ್ಕೆ 'ನಾಕ್ಷತ್ರ' ಕಾಲವೆನ್ನುವರು. ೫) ಪ್ರತಿ ನಕ್ಷತ್ರಗಳೊಡನೆ ಗುರುರಶ್ಮಿಯಿಂದ ಯಾವ ಕಾಲದಲ್ಲಿ ವಿಲಕ್ಷತೆಯುಂಟಾಗುವದೋ ಆ ಕಾಲಕ್ಕೆ 'ಬಾರ್ಹಸ್ಪತ್ಯ' ಕಾಲವೆನ್ನುವರು.

ಈ ಪಂಚಾಂಗಗಳೂ ಶುದ್ಧವಾಗುವುದರಿಂದ ಮಂಗಲ ಮತ್ತು ಶನಿ ರಶ್ಮಿಗಳ ಪ್ರಭಾವವು ತಿರಸ್ಕೃತವಾಗುತ್ತದೆ. ಆ ಕಾರಣದಿಂದ "ಶುದ್ಧ" ಅಥವಾ "ಶುಭ" ಸಮಯವೆಂದು ಹೇಳುತ್ತಾರೆ. ಮಂಗಲ, ಶನಿ ಹಾಗೂ ಬುಧ ಇವರುಗಳ ಕಾಲಶುದ್ಧಿಯನ್ನು ನೋಡುವ ಆವಶ್ಯಕತೆಯೇ ಇರುವುದಿಲ್ಲ.

### — ಕಾಲ ಮಾನ —

| ಭಾರತೀಯ | | ಯುರೋಪೀಯ |
|---|---|---|
| ೨॥ ವಿಪಲ | = | ೧ ಸೆಕೆಂದ |

| | | |
|---|---|---|
| ೨॥ ಪಲ | = | ೧ ಮಿನಿಟು |
| ೨॥ ಘಡೀ (ಘಟಿಕಾ) | = | ೧ ಘಂಟಾ |
| ೬೦ ಘಡೀ (ಘಟಿಕಾ) | = | ೨೪ ಘಂಟಾ=೧ ಅಹೋರಾತ್ರ |
| ೩೦ ಅಹೋರಾತ್ರ | = | ೧ ಮಾಸ |
| ೧೨ ಮಾಸ | = | ೧ ವರುಷ |

ವರುಷದ ೪ ಭೇದಗಳಿರುತ್ತವೆ. ಯಥಾ – ೧೨ ರಾಶಿ (೩೬೦ ಅಂಶ) ಸೂರ್ಯನ ಭೇದದಿಂದ ೧ ಸೌರ ವರ್ಷ, ೩೬೦ ತಿಥಿಗಳಿಗೆ ೧ ಚಾಂದ್ರ ವರ್ಷ, ೩೬೦ ಸಾವನ ದಿನಗಳಿಗೆ ೧ ಸಾವನ ವರ್ಷ, ಮತ್ತು ಮಧ್ಯಮ ಬೃಹಸ್ಪತಿಯ ಒಂದು ರಾಶಿಭೋಗ–ಸಮಯ ೧ ಬಾರ್ಹಸ್ಪತ್ಯ ವರ್ಷ.

## — ಸಾವನ (ಅಹೋರಾತ್ರ) ದಿಂದ ವರ್ಷಮಾನ —

| | | | |
|---|---|---|---|
| ೩೫೪ | ಅಹೋರಾತ್ರ | = | ೧ ಚಾಂದ್ರವರ್ಷ |
| ೩೬೦ | ,, | = | ೧ ಸಾವನ ವರ್ಷ |
| ೩೬೧ | ,, | = | ಬಾರ್ಹಸ್ಪತ್ಯವರ್ಷ |
| ೩೬೫ | ,, | = | ೧ ಸೌರವರ್ಷ |
| ೪೩೨೦೦೦ | ಸೌರವರ್ಷ | = | ಕಲಿಯುಗ |
| ೮೬೪೦೦೦ | ಸೌರವರ್ಷ | = | ದ್ವಾಪರಯುಗ |
| ೧೨೯೬೦೦೦ | ಸೌರವರ್ಷ | = | ತ್ರೇತಾಯುಗ |
| ೧೭೨೮೦೦೦ | ಸೌರವರ್ಷ | = | ಕೃತಯುಗ (ಸತ್ಯಯುಗ) |
| ೪೩೨೦೦೦೦ | ನಾಲ್ಕುಯುಗಗಳ ಒಟ್ಟುಸಂಖ್ಯೆ | = | ೧ ಮಹಾಯುಗ |
| ೭೧ | ಮಹಾಯುಗ | = | ೧ ಮನು |
| ೧೪ | ಮನು | = | ೯೯೪ ಮಹಾಯುಗ |
| ೬ | ಮಹಾಯುಗ | = | ಬ್ರಹ್ಮನಿಗೆ ೧ ಸಂಧ್ಯಾಕಾಲ ವಾಗುತ್ತದೆ |

ಹೀಗೆಯೇ ೧ ಸಾವಿರ ಮಹಾಯುಗಗಳ ಬ್ರಹ್ಮನ ಹಗಲು ಮತ್ತು ೧ ಸಾವಿರ ಮಹಾಯುಗಗಳ ರಾತ್ರಿ, ಇವುಗಳು ಬ್ರಹ್ಮನಿಗೆ ಅಹೋರಾತ್ರ

(ಕಲ್ಪ) ವಾಗುತ್ತದೆ. ಈ ಅಹೋರಾತ್ರಿಯುಳ್ಳ ೩೬೦ ದಿವಸ ಗತಿಸಿದರೆ ಬ್ರಹ್ಮನಿಗೆ ೧ ವರ್ಷವಾಗುತ್ತದೆ. ಇಂಥ ನೂರು ವರ್ಷ ಆಯುಷ್ಯ ಬ್ರಹ್ಮನಿಗೆ ಅದೆ.

ಈ ಪ್ರಕಾರವಾಗಿ ಒಬ್ಬ ಬ್ರಹ್ಮ ಹೋದಮೇಲೆ ಮತ್ತೊಬ್ಬ ಬ್ರಹ್ಮ (ಸೃಷ್ಟಿಕರ್ತಾ) ಹುಟ್ಟುವನು. ಈ ಹಿಂದೆ ಎಷ್ಟು ಬ್ರಹ್ಮರು ಆಗಿ ಹೋಗಿರುವ ರೆಂಬ ವಿಷಯವು ಯಾರಿಂದಲೂ ಹೇಳಲಿಕ್ಕಾಗದು. ಈಗಿರುವ ಬ್ರಹ್ಮನಿಗೆ ೫೦ ವರುಷಗಳು ಕಳೆದಿರುತ್ತವೆ. ಈಗ ನಡೆಯುವದು ಇದು ೫೧ನೆಯ ಪ್ರಥಮದಿನ (ಕಲ್ಪ)ವಿರುತ್ತದೆ. ಈ ಕಲ್ಪದಲ್ಲಿ ೬ ಮನು ಕಳೆದುಹೋಗಿವೆ. ೭ ನೆಯ ಮನು ವಿಗೆ ೨೭ ಮಹಾಯುಗಗಳು ಕಳೆದುಹೋಗಿವೆ. ೨೮ನೆಯ ಮಹಾ ಯುಗದಲ್ಲಿ ಯಾದರೂ ಸತ್ಯಯುಗ, ತ್ರೇತಾಯುಗ, ದ್ವಾಪರಯುಗ ಇವುಗಳು ಕಳೆದು ಈಗಿರುವ ಕಲಿಯುಗದಲ್ಲಿ ೫೦೬೮ ವರ್ಷಗಳು ಗತಿಸಿಹೋಗಿವೆ.

## ಉತ್ತರಾಯಣ—ದಕ್ಷಿಣಾಯನ

"ಆದಿತ್ಯಃ ಷಣ್ಮಾಸೋ ದಕ್ಷಿಣೇನೈತಿಷಡುತ್ತರೇಣ"!

೧ ಸೌರವರ್ಷದಲ್ಲಿ ೨ ಅಯನಗಳಾಗುತ್ತವೆ. ಮಕರದಿಂದ ಮಿಥುನದ ವರೆಗೆ ೬ ರಾಶಿಗಳಲ್ಲಿ ಸೂರ್ಯನ ಪ್ರವೇಶವಿರುವದರಿಂದ ಸೌಮ್ಯಯಾನವು ಈ ಸಮಯದಲ್ಲಿ ದೇವತೆಗಳ ಹಗಲು, ರಾಕ್ಷಸರಿಗೆ ರಾತ್ರಿ ರೂಪವಾಗುತ್ತದೆ. ಅದೇ ಪ್ರಕಾರವಾಗಿ ಕರ್ಕರಾಶಿಯಿಂದ ಧನು ರಾಶಿಯವರೆಗೆ ೬ ರಾಶಿಗಳಲ್ಲಿ ಸೂರ್ಯನ ಪ್ರವೇಶವಿರುವುದರಿಂದ ಯಾಮ್ಯಯಾನವು. ಈ ಸಮಯದಲ್ಲಿ ರಾಕ್ಷಸರ ಹಗಲು ಮತ್ತು ದೇವತೆಗಳಿಗೆ ರಾತ್ರಿ ರೂಪವಾಗುತ್ತದೆ.

## ಷಡೃತುಗಳು

ಮಕರಾದಿ ಎರಡು ಎರಡು ರಾಶಿಗಳಲ್ಲಿ ಸೂರ್ಯನ ಪ್ರವೇಶವಿರುವುದ ರಿಂದ ಶಿಶಿರ ಮೊದಲಾದ ಆರು ಋತುಗಳಾತ್ತವೆ.

ಯಥಾ.

| | | | |
|---|---|---|---|
| ಮಕರ<br>ಕುಂಭ | ಶಿಶಿರಋತು | ಕರ್ಕ<br>ಸಿಂಹ | ವರ್ಷಾಋತು |

| | | | |
|---|---|---|---|
| ಮೀನ<br>ಮೇಷ | ವಸಂತಋತು | ಕನ್ಯಾ<br>ತುಲ | ಶರದೃತು |
| ವೃಷಭ<br>ಮಿಥುನ | ಗ್ರೀಷ್ಮಋತು | ವೃಶ್ಚಿಕ<br>ಧನು | ಹೇಮಂತಋತು |

ತೈತ್ತರೀಯ ಸಂಹಿತೆಯಲ್ಲಿ "ವಸಂತ, ಗ್ರೀಷ್ಮ, ಶರತ್, ವರ್ಷಾ, ಹೇಮಂತ, ಶಿಶಿರ" ! ಈ ಪ್ರಕಾರವಾಗಿ ೬ ಋತುಗಳ ಹೆಸರುಗಳು ಉಲ್ಲೇಖಿಸಲ್ಪಟ್ಟವೆ. ಕೆಲವುಕಡೆಯಲ್ಲಿ ಹೇಮಂತ ಮತ್ತು ಶಿಶಿರ ಇವು ಎರಡು ಒಂದುಗೂಡಿಸಿ ಐದು ಋತುಗಳೆಂದು ಹೇಳಲಾಗಿದೆ. "ತಸ್ಯತೇ ವಸಂತಃ ಶಿರಃ" ! ಅಂದರೆ ಎಲ್ಲ ಋತುಗಳಿಗೂ ವಸಂತಋತುವು ಶೀರ್ಷದಂತಿರುವುದರಿಂದ ವ್ಯವಹಾರದಲ್ಲಿ ಅದನ್ನೆ ಮೊದಲು ಹಿಡಿದು ಎರಡು, ಎರಡು ತಿಂಗಳಿಗೊಂದು ಋತುವನ್ನು ತೋರಿಸುವುದುಂಟು.

ಯಥಾ

| | | | |
|---|---|---|---|
| ಚೈತ್ರ<br>ವೈಶಾಖ | ವಸಂತ | ಆಶ್ವಿನ<br>ಕಾರ್ತಿಕ | ಶರತ್ |
| ಜೇಷ್ಠ<br>ಆಷಾಢ | ಗ್ರೀಷ್ಮ | ಮಾರ್ಗಶಿರ<br>ಪುಷ್ಯ | ಹೇಮಂತ |
| ಶ್ರಾವಣ<br>ಭಾದ್ರಪದ | ವರ್ಷಾ | ಮಾಘ<br>ಫಾಲ್ಗುಣ | ಶಿಶಿರ |

### ೧೨ ಮಾಸಗಳು

ಚಂದ್ರನ ಸಾಂವತ್ಸರಿಕ ಗತಿಯಲ್ಲಿ ಯಾವ ೨೭ ನಕ್ಷತ್ರಗಳು ಉದಯುವಾಗುತ್ತಿರುವವೋ ಅವುಗಳ ಪೈಕಿ ಕೆಲವು ನಕ್ಷತ್ರಗಳ ಉದಯುವು ಪ್ರತ್ಯೇಕ ತಿಂಗಳ ಪೂರ್ಣಿಮೆಯ ದಿವಸ ಆಗುತ್ತಿರುವದು. ಆಗ ನಕ್ಷತ್ರದ ಮೇಲೆ ಚಾಂದ್ರ ಮಾಸದ ಹೆಸರು ಕೊಡಲ್ಪಡುವದು. ಉ-"ಚಿತ್ರಾ ನಕ್ಷತ್ರ ಯುಕ್ತಾ ಪಾರ್ಣಿಮೀ ಚೈತ್ರೀ" ಅಂದರೆ ಚಿತ್ರಾ ನಕ್ಷತ್ರವಿದ್ದ ಹುಣ್ಣಿವೆಯು ಯಾವ

ತಿಂಗಳಲ್ಲಿ ಬರುವದೋ ಅದು ಚೈತ್ರವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಹೀಗೆಯೇ ವಿಶಾಖಾ, ಜ್ಯೇಷ್ಠಾ ಆಷಾಢಾ, ಶ್ರವಣಾ, ಆಶ್ವಿನೀ, ಕೃತ್ತಿಕಾ, ಮೃಗಶೀರ್ಷ, ಪುಷ್ಯ–ಮಘಾ,ಫಲ್ಗುನೀ ಇವು ಅನುಕ್ರಮವಾಗಿ. ೧) ಚೈತ್ರ, ೨) ವೈಶಾಖ, ೩) ಜೇಷ್ಠ, ೪) ಆಷಾಢ, ೫) ಶ್ರಾವಣ, ೬) ಭಾದ್ರಪದ, ೭) ಆಶ್ವಿನ, ೮) ಕಾರ್ತಿಕ, ೯) ಮಾರ್ಗಶೀರ್ಷ, ೧೦) ಪುಷ್ಯ, ೧೧) ಮಾಘ, ೧೨) ಫಾಲ್ಗುಣ ಈ ಪ್ರಕಾರ ೧೨ ತಿಂಗಳು ವ್ಯವಹಾರದಲ್ಲಿರುತ್ತವೆ.

## ಪ್ರಾಚೀನ ಕಾಲದಲ್ಲಿ ೧೨ ತಿಂಗಳುಗಳ ಹೆಸರು

೧) ಮಧು, ೨) ಮಾಧವ, ೩) ಶುಕ್ರ, ೪) ಶುಚಿ, ೫) ನಭಸ್, ೬) ನಭಸ್ಯ, ೭) ಇಷ, ೮) ಊರ್ಜ, ೯) ಸಹಸ್, ೧೦) ಸಹಸ್ಯ, ೧೧) ತಪಸ್, ೧೨) ತಪಸ್ಯ.

## ಅಧಿಕಮಾಸ

ಸೌರಮಾನ ಪ್ರಮಾಣಕ್ಕಿಂತ ಚಾಂದ್ರಮಾಸದ ಗಣಿತದಿಂದ ಯಾವ ೧ ಮಾಸ ಹೆಚ್ಚುಬರುವದೋ, ಅದಕ್ಕೆ ಅಧಿಕಮಾಸವೆನ್ನುವರು. ಇದಕ್ಕೆ "ಸಂಸರ್ಪ" ಎಂತಲೂ ಅನ್ನುವದುಂಟು. ಈ ಅಧಿಕ ಮಾಸವು ಪುಣ್ಯ ಕಾಲವೆಂದು ತಿಳಿದು ಉತ್ತರ ಭಾರತದಲ್ಲಿ ಕ್ಷೇತ್ರಯಾತ್ರೆ, ದಾನಧರ್ಮಾದಿ ಪುಣ್ಯ ಕಾರ್ಯಗಳನ್ನು ಆಚರಿಸುವರು.

## ವಾರ

"ಆದಿತ್ಯಃ ಸೋಮೋ ಭೌಮಶ್ಚ ತಥಾ ಬುಧ ಬೃಹಸ್ಪತೀ ।
ಭಾರ್ಗವಃ ಶನೈಶ್ಚರ ಶ್ಚೈವ ಏತೇ ಸಪ್ತದಿನಾಧಿಪಾಃ ॥

ಒಂದು ಸೂರ್ಯೋದಯದಿಂದ ಮತ್ತೊಂದು ಸೂರ್ಯೋದಯದವರೆಗೆ (೧ ಅಹೋರಾತ್ರಿ) ಸಾವನ ದಿನ ಅಥವಾ ಭೂದಿನವೆಂದು ವಿವರಿಸಲ್ಪಟ್ಟದೆ. ಇದಕ್ಕೆ ವಾರವೆಂದು ಹೆಸರು. 'ವಾರಂ ವಾರಂ' ಮೇಲೆ ಮೇಲೆ ಬರುವುದು. ಸೂರ್ಯಾದಿ ಸಪ್ತಗ್ರಹಗಳು ಕ್ರಮವಾಗಿ ವಾರಕ್ಕೆ ಒಡೆಯರಾಗಿರುತ್ತಾರೆ. ಆದ್ದರಿಂದ ರವಿವಾರ, ಸೋಮವಾರ, ಮಂಗಲವಾರ, ಬುಧವಾರ, ಬೃಹಸ್ಪತಿವಾರ, ಶುಕ್ರವಾರ, ಶನಿವಾರ, ಎಂದು ವ್ಯವಹರಿಸಲ್ಪಡುತ್ತದೆ.

"ಸೂರ್ಯಃ ಸೋಮೋ ಮಹೀಪುತ್ರಃ ಸೋಮ ಪ್ರತ್ರೋ್ರೇಬೃಹಸ್ಪತಿಃ ।
ಶುಕ್ರಃ ಶನ್ಯೈಶ್ಚರೋ ರಾಹುಃ ಕೇತುಶ್ಚೇತೇ ಗ್ರಹಾಃ ಸ್ಮೃತಾಃ ॥

ಈ ಪ್ರಕಾರವಾಗಿ ಯಾವ ನವಗ್ರಹಗಳ ಹೆಸರು ಹೇಳಲ್ಪಟ್ಟಿರುವವೋ ಅವುಗಳಲ್ಲಿ ಮೊದಲಿನ ಏಳು ಗ್ರಹಗಳನ್ನು ವಾರಕ್ಕೆ ಸಂಬಂಧಿಸಲಾಗಿದೆ, ಯಾಜ್ಞವಕ್ಕ್ಯಸ್ಮೃತಿ ಕಾಲದಲ್ಲಿ ರವಿವಾರ ವಗೈರೆ ಸಪ್ತಗ್ರಹಗಳ ವಾರದ ಹೆಸರುಗಳು ಪ್ರಚಾರದಲ್ಲಿ ಬಂದಿರುವದಾಗಿ ಕೆಲವು ಐತಿಹಾಸಿಕ ಗ್ರಂಥಗಳಿಂದ ತಿಳಿದು ಬರುವದು.

ಇತ್ತಿತ್ತಲಾಗಿ ಭಿನ್ನ ಭಿನ್ನ ದೇಶಗಳ ವಾರಗಳ ಹೆಸರುಗಳನ್ನು ಅನುಲಕ್ಷಿಸಿ ಹಿಂದೂ ಜನರು ತಮ್ಮ ದೇಶದಲ್ಲಿ ಆದೇ ಪದ್ಧತಿಯ ಹೆಸರುಗಳನ್ನು ಅನುಸರಿಸಿರುವರೆಂದು ಜ್ಯೋತಿಷ ಶಾಸ್ತ್ರಜ್ಞರ ಅಭಿಪ್ರಾಯವಿದೆ.

### ೬೦ ಸಂವತ್ಸರಗಳು

| | | |
|---|---|---|
| ೧ ಪ್ರಭವ | ೨೧ ಸರ್ವಜಿತ್ | ೪೧ ಪ್ಲವಂಗ |
| ೨ ವಿಭವ | ೨೨ ಸರ್ವಧಾರಿ | ೪೨ ಕೀಲಕ |
| ೩ ಶುಕ್ಲ | ೨೩ ವಿರೋಧಿ | ೪೩ ಸೌಮ್ಯ |
| ೪ ಪ್ರಮೋದ | ೨೪ ವಿಕೃತ | ೪೪ ಸಾಧಾರಣ |
| ೫ ಪ್ರಜಾಪತಿ | ೨೫ ಖರ | ೪೫ ವಿರೋಧಕೃತ್ |
| ೬ ಆಂಗಿರಾ | ೨೬ ನಂದನ | ೪೬ ಪರಿಧಾವಿ |
| ೭ ಶ್ರೀಮುಖ | ೨೭ ವಿಜಯ | ೪೭ ಪ್ರಮಾಥಿ |
| ೮ ಭಾವ | ೨೮ ಜಯ | ೪೮ ಆನಂದ |
| ೯ ಯುವಾ | ೨೯ ಮನ್ಮಥ | ೪೯ ರಾಕ್ಷಸ |
| ೧೦ ಧಾತಾ | ೩೦ ದುರ್ಮುಖಿ | ೫೦ ನಲ |
| ೧೧ ಈಶ್ವರ | ೩೧ ಹೇವಲಂಬ | ೫೧ ಪಿಂಗಲ |
| ೧೨ ಬಹುಧಾನ್ಯ | ೩೨ ವಿಲಂಬ | ೫೨ ಕಾಲಯುಕ್ತ |
| ೧೩ ಪ್ರಮಾಥಿ | ೩೩ ವಿಕಾರಿ | ೫೩ ಸಿದ್ಧಾರ್ಥ |
| ೧೪ ವಿಕ್ರಮ | ೩೪ ಶರ್ವರಿ | ೫೪ ರೌದ್ರ |
| ೧೫ ವೃಷ | ೩೫ ಪ್ಲವ | ೫೫ ದುರ್ಮತಿ |

| | | |
|---|---|---|
| ೧೬ ಚಿತ್ರಭಾನು | ೩೬ ಶುಭಕೃತ್ | ೫೬ ದುಂದುಭಿ |
| ೧೭ ಸುಭಾನು | ೩೭ ಶೋಭನ | ೫೭ ರುಧಿರೋದ್ಗಾರಿ |
| ೧೮ ತಾರಣ | ೩೮ ಕ್ರೋಧಿ | ೫೮ ರಕ್ತಾಕ್ಷ |
| ೧೯ ಪಾರ್ಥಿವ | ೩೯ ವಿಶ್ವಾವಸು | ೫೯ ಕ್ರೋಧನ |
| ೨೦ ವ್ಯಯ | ೪೦ ಪರಾಭವ | ೬೦ ಕ್ಷಯ |
| ಬ್ರಹ್ಮನ ೨೦ ಸಂವತ್ಸರ. | ವಿಷ್ಣುವಿನ ೨೦ ಸಂವತ್ಸರ. | ರುದ್ರನ ೨೦ ಸಂವತ್ಸರ. |

## ತಿಥಿಗಳು

ಇತ್ತಿತ್ತಲಾಗಿ ಅನೇಕ ಜನರು ತಿಥಿ, ನಕ್ಷತ್ರ, ಯೋಗ, ಕರಣ, ಮತ್ತು ವಾರ ಇವುಗಳಿಗೆ ಪಂಚಾಂಗವೆನ್ನುವರು. ಇವುಗಳು ಮೇಲೆ ಹೇಳಿದ ಕಾಲದಲ್ಲಿ ಅಂತರ್ಗತ ವಾಗಿರುವುದರಿಂದ ಸರ್ವಮಾನ್ಯವಾಗಿವೆ. ಇವುಗಳ ಸ್ವರೂಪವು ಕೆಳಗೆ ವಿವರಿಸಲಾಗಿದೆ.

ತಿಥಿ ಅರ್ಕಾತ್ ವಿನಿಸ್ಸೃತಃ ಪ್ರಾಚೀಂ ಯದ್ಯಾತ್ಯಹರಹಃ ಶಶೀ ।
ತಚ್ಚಾಂದ್ರ ಮಾನಮಂಶೈಶ್ಚಜ್ಞೇಯಾದ್ವಾದಶಭಿಸ್ತಿಥಿಃ ॥

ಅಂದರೆ ಆಕಾಶದಲ್ಲಿ ಏಕಸ್ಥಾನ (ಕದಂಬ ಸೂತ್ರ)ದಲ್ಲಿ ಸೂರ್ಯ ಚಂದ್ರರು ಕೂಡಿರುವ ಸಮಯಕ್ಕೆ ದರ್ಶ (ಅಮವಾಸ್ಯಾ) ಅನ್ನುವರು. 'ದರ್ಶಃ ಸೂರ್ಯೇಂದು ಸಂಗಮಃ' ಅನಂತರ ಅಧಿಕ ಗತಿಯಕಾರಣವಾಗಿ ಸೂರ್ಯ ನಿಂದ ಚಂದ್ರಮನು ಪೂರ್ವದಕಡೆಗೆ ಮುಂದೆ ೧೨, ೧೨ ಅಂಶ ಚಲಿಸುತ್ತಾನೆ. ಆಗ ಪ್ರತಿಪದಾದಿ ಒಂದೊಂದು ತಿಥಿಗಳಾಗುತ್ತವೆ, ಹೀಗೆಯೇ ೩೦ ತಿಥಿಗಳಲ್ಲಿ ಪುನಃ ಸೂರ್ಯೇಂದು ಸುಗಮ (ದರ್ಶಾಂತ)ವಾಗುತ್ತದೆ.

ಒಂದು ಚಾಂದ್ರಮಾಸದಲ್ಲಿ 'ಶುಕ್ಲ' ಮತ್ತು ಕೃಷ್ಣ, ಹೀಗೆ ೨ ಪಕ್ಷ ಗಳಿರುತ್ತವೆ. ಪ್ರತಿಯೊಂದು ಪಕ್ಷದಲ್ಲಿ ೧೫ ತಿಥಿಗಳಿರುತ್ತವೆ. ೧) ಪ್ರತಿಪತ್; ೨) ದ್ವಿತೀಯಾ, ೩) ತೃತೀಯಾ, ೪) ಚತುರ್ಥೀ, ೫) ಪಂಚಮೀ, ೬) ಷಷ್ಠೀ, ೭) ಸಪ್ತಮೀ, ೮) ಅಷ್ಟಮೀ, ೯) ನವಮೀ, ೧೦) ದಶಮೀ, ೧೧) ಏಕಾದಶೀ, ೧೨) ದ್ವಾದಶೀ, ೧೩) ತ್ರಯೋದಶೀ, ೧೪) ಚತುರ್ದಶೀ, ೧೫) ಪಂಚದಶೀ, ಶುಕ್ಲಪಕ್ಷದ ೧೫ಕ್ಕೆ ಪೌರ್ಣಿಮಾ, ಮತ್ತು ಕೃಷ್ಣಪಕ್ಷದ ೧೫ಕ್ಕೆ ಅಮಾವಾಸ್ಯಾ (ದರ್ಶ) ಎಂದು ಅನ್ನುವದುಂಟು.

ಈ ತಿಥಿಗಳಲ್ಲಿ ೪, ೬, ೮, ೯, ೧೨, ೧೪ ಮತ್ತು ಅಮಾವಾಸ್ಯಾ, ಇವುಗಳು 'ಅಸತ್' ತಿಥಿಗಳಾಗಿರುವವು. ಉಳಿದವುಗಳೆಲ್ಲ 'ಸತ್' ತಿಥಿಗಳು. ಈ ೧೫ ತಿಥಿಗಳಿಗೆ ಗುಣಾನುಸಾರವಾಗಿ ನಂದಾ'ಮೊದಲಾದ ಐದು ಹೆಸರುಗಳು ಬರುತ್ತವೆ.

ಯಥಾ

ನಂದಾ – ೧, ೬, ೧೧ – ಈ ತಿಥಿಗಳಿಗೆ ನಂದಾ ಎಂಬ ಹೆಸರು ಇವುಗಳಲ್ಲಿ ಚಿತ್ರವಾಸ್ತು—(ಗೃಹಾರಂಭಾದಿ) ತಂತ್ರ, ಮಂತ್ರ, ಕೃಷಿ, ವಿವಾಹ ಮೊದಲಾದ ಕಾರ್ಯಗಳು ಸಿದ್ಧವಾಗುತ್ತವೆ.

ಭದ್ರಾ – ೨, ೭, ೧೨, ಈ ತಿಥಿಗಳಿಗೆ ಭದ್ರಾ ಎಂಬ ಹೆಸರು – ಇವುಗಳಲ್ಲಿ ವಿವಾಹ, ಯಾತ್ರಾ, ವಸ್ತ್ರ, ಆಭೂಷಣ, ರಥ, ಕುದುರೆ ಮೊದಲಾದ ಸವಾರಿಯಿಂದ ಯಾತ್ರಾ, ಯಜ್ಞ, ಶಾಂತಿ, ಪೌಷ್ಟಿಕಕರ್ಮ ಆದಿಗಳು ಸಿದ್ಧವಾಗುತ್ತವೆ.

ಜಯಾ – ೩, ೮, ೧೩, ಈ ತಿಥಿಗಳಿಗೆ ಜಯಾ ಎಂಬ ಹೆಸರು – ಇವುಗಳಲ್ಲಿ ವಿವಾಹ, ಯುದ್ಧಯಾತ್ರಾ, ಗೃಹ, ಕೃಷಿ, ವಿಜಯೋಪಯೋಗಿ ಮೊದಲಾದವುಗಳು ಸಿದ್ಧವಾಗುತ್ತವೆ.

ರಿಕ್ತಾ – ೪, ೯, ೧೪, ಇವುಗಳಿಗೆ ರಿಕ್ತಾ ಎಂಬ ಹೆಸರು. ಈ ತಿಥಿಗಳಲ್ಲಿ ಮಾಡಿದ ಕೆಲಸಗಳಲ್ಲಿ ಸಫಲತೆಯಾಗಲಾರದು. ಅಂದರೆ ವಿಷ, ಅಗ್ನಿ, ಶಾಸ್ತ್ರ, ಮಾರಣ ಇತ್ಯಾದಿ ಕ್ರೂರ ಕರ್ಮಗಳ ಪ್ರಯೋಗವು ಸಿದ್ಧಿಸುತ್ತದೆ.

ಪೂರ್ಣಾ – ೫, ೧೦, ೧೫, ಇವುಗಳಿಗೆ ಪೂರ್ಣಾ ಎಂಬ ಹೆಸರು. ಇವುಗಳಲ್ಲಿ ಎಲ್ಲ ಕಾರ್ಯ ಸಿದ್ಧವಾಗುತ್ತದೆ. ಕೇವಲ ೧೫ ರಲ್ಲಿ ಉಪನಯನ ಕಾರ್ಯವು ನಿಷೇಧಿಸಲ್ಪಟ್ಟಿದೆ.

ನಕ್ಷತ್ರಗಳು

ರೇವತೀ ತಾರಾದಿಂದ ಸಮಸ್ತ ರಾಶಿ ಮಂಡಲದ ತುಲ್ಯ ೨೭ ವಿಭಾಗ ಅಶ್ವಿನೀ ಮೊದಲಾದ ಹೆಸರಿನಿಂದ ೨೭ ನಕ್ಷತ್ರಗಳಾಗುತ್ತವೆ.

೧ ಅಶ್ವಿನೀ, ೨ ಭರಣಿ, ೩ ಕೃತ್ತಿಕಾ, ೪ ರೋಹಿಣೀ, ೫ ಮೃಗಶಿರಾ, ೬ ಆರ್ದ್ರಾ, ೭ ಪುನರ್ವಸು, ೮ ಪುಷ್ಯಾ, ೯ ಆಶ್ಲೇಷ, ೧೦ ಮಘಾ, ೧೧ ಪೂರ್ವಫಾಲ್ಗುಣಿ, ೧೨ ಉತ್ತರ ಫಾಲ್ಗುಣಿ, ೧೩ ಹಸ್ತಾ, ೧೪ ಚಿತ್ರಾ, ೧೫. ಸ್ವಾತೀ, ೧೬. ವಿಶಾಖಾ, ೧೭. ಅನುರಾಧಾ, ೧೮. ಜ್ಯೇಷ್ಠಾ, ೧೯. ಮೂಲ, ೨೦. ಪೂರ್ವಾಷಾಢಾ, ೨೧. ಉತ್ತರಾಷಾಢಾ, ೨೨. ಶ್ರವಣ, ೨೩. ಧನಿಷ್ಠಾ, ೨೪. ಶತತಾರಾ, ೨೫. ಪೂರ್ವಭಾದ್ರ, ೨೬. ಉತ್ತರಭಾದ್ರ, ೨೭. ರೇವತಿ. ವಿಶೇಷ – ಉತ್ತರಾಷಾಢಾದ ೪ ನೆಯ ಚರಣ ಮತ್ತು ಶ್ರವಣದ ಆರಂಭದ ೪ ಘಡೀ (೧೫ ನೆಯ ಭಾಗ) ಅಭಿಜಿತ್ ಎಂಬ ಹೆಸರಿನಿಂದ ೨೮ ನೆಯ ನಕ್ಷತ್ರವು ಮಾನಿಸಲ್ಪಡುವದು. ಇದರ ಉಪಯೋಗವು ಕೆಲವು ಕಡೆಯಲ್ಲಿ ಮಾತ್ರ ಇರುತ್ತದೆ. ತಾರಾ ಚಂದ್ರಾದಿ ವಿಚಾರದಿಂದ ಇಲ್ಲ.

ಮೇಲೆ ಹೇಳಿದ ನಕ್ಷತ್ರಗಳಲ್ಲಿ ಗುಣಾನುಸಾರ ೭ ಭೇದಗಳಿರುತ್ತವೆ.

೧) ಧೃವ-ರೋಹಿಣೀ, ಉತ್ತರಾಫಾಲ್ಗುಣ, ಉತ್ತರಾಷಾಢಾ, ಉತ್ತರಭಾದ್ರ ಈ ನಾಲ್ಕು ನಕ್ಷತ್ರಗಳಿಗೆ ಧೃವ ಎಂಬ ಹೆಸರು. ಇವುಗಳಲ್ಲಿ ಸ್ಥಾಯೀ ( ಗೃಹಾರಂಭ ), ವಿವಾಹ, ಉಪನಯನ, ಕೃಷಿ, ಶಾಂತಿ, ತೋಟ ( ಗಿಡ ಹಚ್ಚುವುದು, ) ಇತ್ಯಾದಿ ಕಾರ್ಯ ಸಿದ್ಧವಾಗುವದು.

೨) ಪುನರ್ವಸು, ಸ್ವಾತಿ, ಶ್ರವಣ, ಧನಿಷ್ಠಾ, ಶತತಾರಾ ಇವುಗಳಲ್ಲಿ ಯಾತ್ರಾ, ಸವಾರೀಮೇಲೆ ಏರುವದು, ನೃತ್ಯ-ಗೀತ ಮತ್ತು ಸ್ವಲ್ಪ ದಿವಸಗಳಲ್ಲಿ ಲಭಿಸಲು ಯೋಗ್ಯವಾದ ಕಾರ್ಯ ಸಿದ್ಧವಾಗುವದು.

೩) ಉಗ್ರ–ಭರಣೀ, ಮಘಾ, ಪೂರ್ವಫಾಲ್ಗುನೀ, ಪೂರ್ವಾಷಾಢಾ, ಪೂರ್ವಭಾದ್ರ, ಇವುಗಳಲ್ಲಿ ವಿಷ–ಅಗ್ನಿಶಸ್ತ್ರ, ಘಾತಕಾರ್ಯ, ಮರಣಾದಿ ಕ್ರೂರಕರ್ಮದ ಸಿದ್ಧಿಯಾಗುತ್ತದೆ.

೪) ಮಿಶ್ರ–ಕೃತ್ತಿಕಾ, ವಿಶಾಖಾ, ಇವುಗಳಲ್ಲಿ ಅಗ್ನಿ ಸಂಬಂಧಿ ಸರ್ವ ಕಾರ್ಯ ಮತ್ತು ಮಿಶ್ರ ಕಾರ್ಯ ಸಿದ್ಧಿಯಾಗುವುದು.

೫) ಕ್ಷಿಪ್ರ–ಅಶ್ವಿನೀ, ಪುಷ್ಯ, ಹಸ್ತ, ಅಭಿಜಿತ್, ಇವುಗಳಲ್ಲಿ ಯತ್ರಾ, ಮಂಗಲಕಾರ್ಯ, ವಸ್ತ್ರ, ಭೂಷಣ, ವಾಣಿಜ್ಯ, ರತಿ, ಶಿಲ್ಪ (ಕೈಗಾರಿಕೆ,) ಕಲಾ, ಇತ್ಯಾದಿ ಕಾರ್ಯ ಸಿದ್ಧಿಸುವುದು.

೬) ಮೃದು–ಮೃಗಶಿರಾ, ಚಿತ್ರಾ, ಅನುರಾಧಾ, ರೇವತೀ, ಇವುಗಳಲ್ಲಿ ಸಮಸ್ತ ಶುಭಕಾರ್ಯ, ಯಂತ್ರ, ಗೀತ, ನೃತ್ಯ, ವಸ್ತ್ರ, ವಿಭೂಷಣ, ಕೃಷಿ ನೌಕರೀ ಮೊದಲಾದ ಕಾರ್ಯವು ಸಿದ್ಧಿಯಾಗುವುದು.

೭) ತೀಕ್ಷ್ಣ–ಆದ್ರಾ, ಆಶ್ಲೇಷಾ, ಜ್ಯೇಷ್ಠಾ, ಮೂಲ–ಇವುಗಳ ಹೆಸರು ದಾರುಣ ಎಂದು ಅದೆ-ಇವುಗಳಲ್ಲಿ ಮರಣ, ಮೋಹನಭೂತ-ಬೇತಾಳ ಸಿದ್ಧಿ, ಮತ್ತು ಘಾತ ಆದಿ ಕ್ರೂರಕರ್ಮ ಸಿದ್ಧಿಯಾಗುವದು.

## ಪಂಚಕ

ಈ ನಕ್ಷತ್ರಗಳಲ್ಲಿ ಧನಿಷ್ಠಾದಿಂಪ ರೇವತಿ ಪರ್ಯಂತವಾಗಿ ಐದು ನಕ್ಷತ್ರ ಪಂಚಕ, ಎಂದು ಅನ್ನುವರು. ಇವುಗಳಲ್ಲಿ ತೃಣ–ಕಾಷ್ಠದ್ವಾರ ಗೃಹ ನಿರ್ಮಾಣ, ಅಥವಾ ಗೃಹನಿರ್ಮಾಣಕ್ಕಾಗಿ ಕಾಷ್ಠ–ತೃಣ ಸಂಗ್ರಹ, ಹೊರಸು ಹೆಣೆಯುವುದು. ದಕ್ಷಿಣದಿಕ್ಕಿಗೆ ಯಾತ್ರಾ ಇತ್ಯಾದಿ ಕರ್ಮಗಳಿಗೆ ನಿಷೇಧವದೆ.

## ಯೋಗ

ಭೂಕೇಂದ್ರಿಯ ದೃಷ್ಟಿಯಿಂದ ಸೂರ್ಯ–ಚಂದ್ರರ ಗತಿಯ ಯೋಗವು ಯಾವಾಗ್ಗೆ ಬಂದು ನಕ್ಷತ್ರ ಭೋಗ (೮೦೦ ಕಲಾ)ತುಲ್ಯವಾಗುವದೋ ಆಗ ಯೋಗವಾಗುತ್ತಿದೆ ಇವುಗಳು ವಿಷ್ಕಂಭಾರಿ ಹೆಸರಿನಿಂದ ೨೭ ಯೋಗಗಳಿರುತ್ತವೆ ೧) ವಿಷ್ಕಂಭ, ೨) ಪ್ರೀತಿ, ೩) ಆಯುಷ್ಮಾನ್, ೪) ಸೌಭಾಗ್ಯ, ೫) ಶೋಭನ, ೬) ಅತಿಗಂಡ ೭) ಸುಕರ್ಮ, ೮) ಧೃತಿ, ೯) ಶೂಲ, ೧೦) ಗಂಡ, ೧೧) ವೃದ್ಧಿ, ೧೨) ಧೃವ, ೧೩) ವ್ಯಾಘಾತ, ೧೪) ಹರ್ಷಣ, ೧೫) ವಜ್ರ, ೧೬) ಸಿದ್ಧಿ, ೧೭) ವ್ಯತೀಪಾತ, ೧೮) ವರೀಯಾನ್, ೧೯) ಪರಿಘ, ೨೦) ಶಿವ, ೨೧) ಸಿದ್ಧಿ, ೨೨) ಸಾಧ್ಯ, ೨೩) ಶುಭ, ೨೪) ಶುಕ್ಲ, ೨೫) ಬ್ರಹ್ಮ ೨೬) ಐಂದ್ರ, ೨೭) ವೈಧೃತಿ.

ಇವುಗಳಲ್ಲಿ ವಿಷ್ಕಂಭ, ಅತಿಗಂಡ, ಶೂಲ, ಗಂಡ, ವ್ಯಾಘಾತ, ವಜ್ರ, ವ್ಯತೀಪಾತ, ಪರೀಘ, ವೈಧೃತಿ ಈ ೯ ಯೋಗಗಳು ಅಶುಭ ಆವೆ. ಉಳಿದವುಗಳು ಶುಭಯೋಗ ಆವೆ.

## ಕರಣ

ಪ್ರತ್ಯೇಕ ತಿಥಿಗಳಲ್ಲಿ ಎರಡು ಎರಡು ಕರಣಗಳಿರುತ್ತವೆ. ಅರ್ಥಾತ್ ತಿಥಿಯ ಅರ್ಧಕ್ಕೆ ೧ ಕರಣ ಹೇಳುತ್ತಾರೆ ಇವು ಬವ ಆದಿ ಹೆಸರಿನಿಂದ ೧೧ ಇರುತ್ತವೆ. ಇವುಗಳಲ್ಲಿ ೭ ಚರ ಮತ್ತು ೪ ಸ್ಥಿರ ಕರಣಗಳಿರುತ್ತವೆ.

೧) ಬವ, ೨) ಬಾಲವ, ೩) ಕೌಲವ, ೪) ತೈತಿಲ, ೫) ಗರ, ೬) ವಣಿಜ, ೭) ಭದ್ರಾ, ೮) ಶಕುನೀ, ೯) ಚತುಷ್ಪದ, ೧೦) ನಾಗ, ೧೧) ಕಿಂಸ್ತುಘ್ನ ಇವುಗಳಲ್ಲಿ ೧ ರಿಂದ ೭ ರ ವರೆಗೆ ಚರಕರಣ ಮತ್ತು ೮ ರಿಂದ ೧೧ರ ವರೆಗೆ ಸ್ಥಿರಕರಣ ಅವೆ. ಇವುಗಳಲ್ಲಿ ಭದ್ರಾದಲ್ಲಿ ಎಲ್ಲ ಶುಭಕಾರ್ಯ ಮಾಡಲು ನಿಷೇಧಿಸಲಾಗಿದೆ.

## ಸನ್ ಅಥವಾ ಶಕ

ಕ್ರಿಸ್ತ ಮೊದಲಾದ ನಾಮ ಪದಗಳ ಮುಂದೆ 'ಸನ್' ಎಂಬುವ ಶಬ್ದ ವನ್ನು ಉಪಯೋಗಿಸುತ್ತಿರುವದು ಕಂಡುಬರುತ್ತದೆ. ಸನ್ ಅಂದರೆ ವರುಷ ವೆಂದು ಅರ್ಥವಾಗುವದು. ಆದರೂ ಈ ಶಬ್ದದ ವಿಶಿಷ್ಟ ಅರ್ಥವು 'ಸಂತ ಅಂಕದ' ೯೫ ನೆಯ ಪುಟದಲ್ಲಿ ಸ್ಫುಟವಾಗಿ ವರ್ಣಿಸಲ್ಪಟ್ಟಿದೆ. "ಅಸ್ತೀತಿ ಸನ್" ಯಾವುದು ಸಂತ, ಸತ್ ಇದೆಯೋ ಅದು ಸನ್ ಎಂದು ಹೇಳಲಾಗಿದೆ. ಇದ ರಿಂದ ಪಶು, ಪಕ್ಷಿ, ತರು, ಗುಲ್ಮ, ಸಿಂಹಶಾರ್ದೂಲಾದಿಗಳಿಗೂ ಸಹ 'ಸನ್' ಎಂದು ಹೇಳಿದಂತಾಯಿತು. ಆದರೆ ಈ ಪ್ರಾಣಿಗಳು ಆಹಾರ, ನಿದ್ರಾ ಮೊದ ಲಾದ ಕ್ರಿಯೆಗಳಲ್ಲಿ ಮಾನವನಿಗೆ ಸಮಾನವಾಗಿದ್ದರೂ ಇವುಗಳು ವಿಶಿಷ್ಟ ಜ್ಞಾನದತ್ತ ಗಮನ ಕೊಡಲಾರವಾದ್ದರಿಂದ ಆ ಪ್ರಾಣಿಗಳಿಗೆ 'ಸನ್' ಶಬ್ದ ವನ್ನು ಉಪಯೋಗಿಸುವದಿಲ್ಲ. ಈ ಶಬ್ದವು ಅಸಾಮಾನ್ಯನಾದ ಮಾನವನಿಗೆ ಮಾತ್ರ ಉಪಯೋಗಿಸಲ್ಪಟ್ಟದೆಯಲ್ಲದೇ ಸಾಧಾರಣ ಮಾನವನಿಗೂ ಕೂಡಾ ಈ ಶಬ್ದವನ್ನು ಎಲ್ಲಿಯೂ ಉಪಯೋಗಿಸಿಲ್ಲ.

"ಸಜಾತೋ ಯೇನಜಾತೇನ ಯಾತಿ ವಂಶಃ ಸಮುನ್ನತಿಂ"||

ಯಾವನ ಜನ್ಮದಿಂದ ವಂಶವು ಹೆಚ್ಚಿನ ಉನ್ನತಿಯನ್ನು ಪಡೆಯುವದೋ ಅವನ ಜನ್ಮವೇ ನಿಜವಾದ ಜನ್ಮವು. ಅಂಥವನಿಗೆ ಸತ್-ಸನ್ 'ಸಂತ'

ಎಂದು ಕರೆಯಲಾಗಿದೆ. ಉ – "ಕ್ರಿಸ್ತೀ ಸನ್" ಇಲ್ಲಿರುವ ಸನ್ ಶಬ್ದವು ಕ್ರಿಸ್ತ ಸಂಬಂಧವಾದ ಯೋಗ್ಯಕಾಲ ಅಥವಾ ಸಂತ ಕಾಲವನ್ನು ವ್ಯಕ್ತ ಮಾಡುವುದಾಗಿದೆ.

ಶಕ – ಕಾಲ ಗಣನೆಯನ್ನು ಸುಲಭವಾಗಿ ತಿಳಿಯಲೋಸುಗ ಪ್ರಾಚೀನ ಕಾಲದಲ್ಲಿ 'ಶಕ' ಎಂಬುದನ್ನು ಪ್ರಾರಂಭಿಸಿದರು. ಇದಾದರೂ ಹಿಂದಿನ 'ಸನ್' ಶಬ್ದಾರ್ಥವನ್ನೇ ಸೂಚಿಸುವದಾಗಿದೆ. "ರಾಜಾ ಕಾಲಸ್ಯ ಕಾರಣಂ"ಎಂಬಂತೆ ಯಾವನಾದರೊಬ್ಬ ಶೂರ ರಾಜನು ದೇಶದ ಒಡೆತನಕ್ಕೆ ಕಾರಣನಾದರೆ ಅವನ ಹೆಸರಿನ ಶಕ (ಕಾಲ) ವನ್ನು ಅವನ ಸ್ಮರಣಾರ್ಥವಾಗಿ ಪ್ರಾರಂಭಿಸುವುದುಂಟು; ಈ ಪದ್ಧತಿಯನ್ನು ಮೊಟ್ಟಮೊದಲು ಚೀನೀ, ಖ್ರಿಸ್ತೀ, ಮಹಮ್ಮದೀ, ಪಾರಸೀ ಮೊದಲಾದವರು ಧರ್ಮ ಪ್ರವರ್ತಕರ ಹೆಸರಿನಿಂದ ಕಾಲದ ಅಳತೆಯನ್ನು ಸುರುವುಮಾಡಿದರು. ಇದಕ್ಕೆ ಭಾರತೀಯರು 'ಶಕನೃಪಕಾಲ' 'ನರೇಂದ್ರಕಾಲ' ಎಂದು ಅನ್ನುವುದುಂಟು. ವಂಗ ದೇಶೀಯರು 'ಶಕನರಪತೇಃ ಅತೀತಾಬ್ದಃ' ಎಂಬ ಶಬ್ದವನ್ನು ತಮ್ಮ ಪಂಚಾಂಗದಲ್ಲಿ ಪ್ರಾಚೀನ ಕಾಲದಿಂದಲೂ ಬರೆದುಕೊಳ್ಳುತ್ತಾ ಬಂದಿರುವರೆಂದು ಐತಿಹ್ಯವಿದೆ. ಸದ್ಯಃ ಭಾರತದ ಬೇರೆ ಬೇರೆ ಶಕನೃಪಕಾಲ ನಡೆಯುತ್ತಿರುವುದು ಸುಪ್ರಸಿದ್ಧವಿದೆ. ಸಪ್ತರ್ಷಿಕಾಲ, ವಿಕ್ರಮಕಾಲ, ಶಾಲಿವಾಹನಕಾಲ, ಹಿಜರೀಸನ್, ಬಂಗಾಲೀಸನ್, ಅಮಲೀಸನ್, ಫಸಲೀಸನ್, ಮಗೀಸನ್, ಪರಶುರಾಮಕಾಲ, ನೀವಾರಕಾಲ, ಲಕ್ಷ್ಮಣಸೇನಕಾಲ, ಕ್ರಿಸ್ತೀಸನ್ ಇತ್ಯಾದಿ ಶಕಗಳು ನಡೆಯುತ್ತವೆ. ಇವುಗಳಲ್ಲಿ ಮುಖ್ಯವಾದ ಕೆಲವು ಶಕಗಳನ್ನು ಇಲ್ಲಿ ವಿವರಿಸಿದ್ದೇವೆ.

## ವಿಕ್ರಮಶಕ (ಸಂವತ್ಸರ)

ವಿಕ್ರಮನಿಂದ ಉನ್ನತಿ ಹೊಂದಿದ ಮಾಲವ ಕುಲದವರು ಕ್ರಿ. ಶ. ಪೂರ್ವ ೫೭ ರಲ್ಲಿ ವಿಕ್ರಮ ಶಕವನ್ನು ಪ್ರಾರಂಭಿಸಿದರು. ವಿಕ್ರಮನ ವಿಷಯವು ಐತಿಹಾಸಿಕರಿಗೆ ಒಂದು ದೊಡ್ಡ ಸಮಸ್ಯೆಯಾಗಿದೆ. ಪ್ರಥಮ ಚಂದ್ರಗುಪ್ತನೇ 'ವಿಕ್ರಮನೆ'ಂಬ ಉಪನಾಮ ಪಡೆದಿರುವನೆಂದು ಗೋರಖಪುರದಲ್ಲಿ ಹೊರಡುವ 'ಹಿಂದೂ ಸಂಸ್ಕೃತಿ' ವಿಶೇಷಾಂಕದ ೮೭೯ ನೆಯ ಪುಟದಲ್ಲಿ ವಿವರಿಸಿದ್ದಾಗಿದೆ. ಗೋರಕ್ಷನಾಥನಿಗೆ ಪರಮಶಿಷ್ಯನಾದ ಭರ್ತೃಹರಿಯು ವೈರಾಗ್ಯ

ಶೀಲನಾಗಿ ಸಿಂಹಾಸನ ತ್ಯಾಗಮಾಡಿದ ನಂತರ ಅವನ ಖಾಸ ತಮ್ಮನಾದ ವಿಕ್ರಮನು ಉಜ್ಜಯಿನಿ (ಅವಂತಿ)ಯ ಸಿಂಹಾಸನವನ್ನು ಸ್ವೀಕರಿಸಿದನು. ಆಗ ಭಾರತವನ್ನು ಆಕ್ರಮಿಸಿದ್ದ ಸಿಥಿಯನ್ (ಶಕ) ಜನಾಂಗವನ್ನು ವಿಕ್ರಮನು ಪರಾಕ್ರಮದಿಂದ ಯುದ್ಧದಲ್ಲಿ ಸೋಲಿಸಿದ್ದಲ್ಲದೇ ಅವರನ್ನು ಭಾರತ ಗಡಿದಾಟಿ ಓಡಿಸಿದನು. ಆಗ ಅವನಿಗೆ 'ಶಕಾರಿ' ಎಂಬ ಹೆಸರು ಬಂತು. ಮುಂದೆ ಕೆಲವು ಕಾಲಗಳ ಮೇಲೆ ಭಾರತದಲ್ಲಿ ವಿಕ್ರಮಶಕವು ಪ್ರಾರಂಭವಾಯಿತು.

ವಿಕ್ರಮನು ನ್ಯಾಯನಿಷ್ಠುರನಾಗಿದ್ದನು. ಅವನು ಭೂಮಿಯಲ್ಲಿ ಒಂದು ಸಿಂಹಾಸನವನ್ನು ಹುಗಿದಿದ್ದನು. ಯಾವಾಗಲೂ ಅದರ ಮೇಲೆ ಕುಳಿತು ನ್ಯಾಯ ತೀರಿಸುತ್ತಿದ್ದನು. ಆ ಸಿಂಹಾಸನದಲ್ಲಿ ಒಂದು ಅದ್ಭುತ ಶಕ್ತಿ ಇತ್ತು. ಅದರ ಮೇಲೆ ಒಬ್ಬ ದನಕಾಯುವ ಮಂದ ಮನುಷ್ಯನನ್ನು ಕುಳ್ಳಿರಿಸಿದರೂ ಅವನು ಉತ್ತಮ ನ್ಯಾಯಾಧೀಶನಾಗುತ್ತಿದ್ದನು. ಭೋಜರಾಜನು ಆ ಸಿಂಹಾಸನವನ್ನು ಭೂಮಿಯಿಂದ ಅಗಿಸಿ ಕಡೆಗೆ ತೆಗೆಯಿಸಿದನು.

ಆ ಸಿಂಹಾಸನದ ಕಾಲುಗಳಲ್ಲಿ ಮಣಿಖಚಿತವಾದ ಮೂವತ್ತೆರಡು ಮುತ್ತಿನ ಗೊಂಬೆಗಳು ಕೆತ್ತಲ್ಪಟ್ಟಿದ್ದವು. ಆ ಗೊಂಬೆಗಳು ಭೋಜರಾಜನಿಗೆ ಸಿಂಹಾಸನದ ಮೇಲೆ ಕೂಡ್ರಲು ಮನುಷ್ಯನೋಪಾದಿಯಲ್ಲಿ ಪ್ರತಿಬಂಧಿಸಿದವು. ಅಷ್ಟರಲ್ಲಿಯೇ ಆ ಸಿಂಹಾಸನವು ಊರ್ಧ್ವಲೋಕಕ್ಕೆ ಹೊರಟುಹೋಯಿತು. ವಿಕ್ರಮನು ಅನಾಯಾಸವಾಗಿ ಬೇತಾಲಸಿದ್ಧಿಯನ್ನು ಪಡೆದುಕೊಂಡಿದ್ದನು. ಅವನು ತನ್ನ ಪ್ರಜೆಗಳನ್ನು ಔರಸಪುತ್ರರಂತೆ ಸಲಹುವನಲ್ಲದೆ, ಜನರ ಸಂಕಷ್ಟ ಎಂಥದಿದ್ದರೂ ಅದನ್ನು ಪರಿಹರಿಸುತ್ತಿದ್ದನು. ದೇಶದ ಹಿತಕ್ಕಾಗಿ ಪ್ರಾಣವನ್ನು ಕೂಡಾ ಪಣಕ್ಕೆ ಹಚ್ಚಲು ಸಿದ್ಧನಾಗಿದ್ದನು. ಅವನ ಬಗೆಗೆ ಎಷ್ಟೋ ಸುಂದರ ಕಥೆಗಳನ್ನು ಕವಿಗಳು ರಚಿಸಿದ್ದಾರೆ. ಡಾ। ಪೀಟರ್ಸನ್, ಡಾ। ವ್ಯಾಲೂಟ, ಪ್ರೋ। ಫ್ಲೀಟ ಇವರು ಮಂದಸೋರದ ಶಿಲಾಲೇಖದ ಆಧಾರದ ಮೇಲೆ ವಿಕ್ರಮನ ಕಾಲನಿರ್ಣಯ ಕೈಕೊಂಡಿದ್ದಾರೆ. ರಾಮಕೂಟದ ಮಹಲು, ಕ್ರಿ. ಪೂರ್ವ ೫೦ ರಲ್ಲಿ ವಿಕ್ರಮ ರಾಜನಿಂದ ನಿರ್ಮಿಸಲ್ಪಟ್ಟಿದೆಯೆಂದು ತಿಳಿದುಬರುವದು.

## ಶಾಲಿವಾಹನ ಅಥವಾ ಸಾತವಾಹನ

ಶಾಲಿವಾಹನನು 'ಗಜನೀ' ಪುತ್ರನೆಂದು ಟಾಡ್‌ಸಾಹೇಬರ ಅಭಿಪ್ರಾಯ ವಿದೆ. 'ಗಜ' ಎಂಬವನು 'ಗಜನೀ' ಪಟ್ಟಣವನ್ನು ಕಟ್ಟಿಸಿದ್ದರಿಂದ ಅವನಿಗೆ 'ಗಜನೀ' ಎಂಬ ಹೆಸರು ಉಂಟಾಯಿತು. ಅವನು ಯುದ್ಧದಲ್ಲಿ ಶತ್ರುಗಳಿಂದ ಹತನಾದ ಬಳಿಕ ಶಾಲಿವಾಹನನು ಅಲ್ಲಿಂದ ಭಾರತಕ್ಕೆ ಓಡಿಬಂದನು. ಅವನು ಮೊದಲು ಪಂಜಾಬದ ಮೇಲೆ ತನ್ನ ಅಧಿಕಾರ ಕೂಡ್ರಿಸಿ ಮೆಲ್ಲ ಮೆಲ್ಲನೆ ದಕ್ಷಿಣ ಭಾರತದ ಕಡೆಗೆ ಹೊರಳಿ, ಗೋದಾವರೀ ತಟದಲ್ಲಿರುವ ಪೈಠಣ (ಪ್ರತಿಷ್ಠಾನ ಪುರ) ವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು.

ಎಲ್ಲರೂ ನೆನಪಿನಲ್ಲಿಡುವ ಮುಖ್ಯ ವಿಷಯವೇನಂದರೆ:– ಅಲ್ಲಿಯವರೆಗೆ ವಿಶ್ವದಲ್ಲಿ 'ಈಸಾಯೀ, ಮುಸಲ್ಮಾನ ಧರ್ಮಗಳು ಉತ್ಪನ್ನವಾಗಿರಲಿಲ್ಲ. ಕೇವಲ ಒಂದೇ ಒಂದು ಹಿಂದೂ ಧರ್ಮವಿತ್ತು. ಹಿಂದೂ ಧರ್ಮದಿಂದ ಬಹಿಷ್ಕೃತ ರಾಗಿ ಪರದೇಶಕ್ಕೆ ಹೋಗಿ 'ಶಕ' 'ಹೂಣ', ಇತ್ಯಾದಿ ಹೆಸರಿನಿಂದ ಇರುತ್ತಿದ್ದರು. ಆದರೆ ಅವರು ಹಿಂದೂ ಜಾತಿಯವರಾಗಿಯೇ ಇರುತ್ತಿದ್ದರು. ಆ ಜನರು ಭಾರತಕ್ಕೆ ಮರಳಿ ಬಂದು ವಿಶೇಷ ಪ್ರಾಯಶ್ಚಿತ್ತವನ್ನು ಹೊಂದಿ ಪುನಃ ಇಲ್ಲಿ ಹಿಂದೂ ಧರ್ಮದಲ್ಲಿಯೇ ಸಮಾವೇಶ ಹೊಂದುತ್ತಿದ್ದರು. ಶಾಲಿವಾಹ ನನು ಅಂಥವರಲ್ಲಿಯೇ ಒಬ್ಬನಾಗಿರುವನು. ಅಷ್ಟೇ ಅಲ್ಲ ಪರದೇಶದಿಂದ ಅನೇಕ ಜನರನ್ನು ಕರೆಯಿಸಿಕೊಂಡು ಆಯಾಯ ವರ್ಣದವರನ್ನು ಆಯಾಯ ವರ್ಣಗಳಲ್ಲಿ ಸೇರಿಸುವ ವ್ಯವಸ್ಥೆ ಮಾಡಿದನು ಎಂದು ಗೋರಖಪುರದಲ್ಲಿ ಹೊರಡುವ 'ಹಿಂದೂ ಸಂಸ್ಕೃತಿ ವಿಶೇಷಾಂಕ'ದಿಂದ ಸ್ಪಷ್ಟವಾಗುವದು.

ಶಾಲಿವಾಹನನ ಬಗೆಗೆ ಹಲವಾರು ಭಿನ್ನಾಭಿಪ್ರಾಯಗಳು ಬೆಳೆಯುತ್ತಲೇ ಬಂದಿವೆ. ಅವನ ನಿಜಸ್ಥಿತಿಯನ್ನು ಯಾರೂ ತೋರಿಸಿಲ್ಲ. ಅವನ ಬಗ್ಗೆ ಇದ್ದ ಬೇರೆ ಬೇರೆ ಭಿನ್ನಾಭಿಪ್ರಾಯಗಳನ್ನು ಕೆಳಗೆ ವಿವರಿಸಿದ್ದೇವೆ.

ಶಾಲಿವಾಹನನು ಕುಂಬಾರನ ಪುತ್ರನು. ಇವನು ಮಣ್ಣಿನ ಗೊಂಬೆಗಳಿಗೆ ಜೀವಕಳೆ ತುಂಬಿದನು. ಅವುಗಳ ಸೈನ್ಯ ತಯಾರಿಸಿಕೊಂಡು 'ಶಕ' ರೊಡನೆ ಹೋರಾಡಿ ಅವರನ್ನು ಸೋಲಿಸಿದನು. ವಿಜಯ ಪ್ರೀತ್ಯರ್ಥವಾಗಿ ಶಾಲಿ

ವಾಹನ ನೃಪಶಕವು ಪ್ರಾರಂಭವಾಯಿತೆಂಬ ಅಭಿಪ್ರಾಯವು ಕೆಲವು ಧರ್ಮ ಗ್ರಂಥಗಳ ಆಧಾರದಿಂದಲೂ, ಪ್ರಾಚೀನ ಜ್ಯೋತಿಷ ಗ್ರಂಥಗಳ ಆಧಾರ ದಿಂದಲೂ ಗೊತ್ತಾಗುವದು. ಕ್ರಿ. ಶ. ೭೮ ರಿಂದ ಈ ಶಕವು ದಕ್ಷಿಣ ಭಾರತ ದಲ್ಲಿ ವಿಶೇಷ ರೂಢಿಯಲ್ಲಿರುವದು.

ಕ್ರಿ. ಶ. ೧ ನೆಯ ಶತಕದ ನಂತರ ಕನಿಷ್ಕ ರಾಜನು ಶಾಲಿವಾಹನನ ಹೆಸರಿನಿಂದ ಶಕವನ್ನು ಪ್ರಾರಂಭಿಸಿದನು. ಇದು ಬೌದ್ಧಧರ್ಮದ ರಾಜರ ಕಾಲವಿರುತ್ತದೆ. ಆ ರಾಜನು ಕಾಶ್ಮೀರ ಮತ್ತು ಪಶ್ಚಿಮ ಹಿಂದುಸ್ತಾನವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡ ನಂತರ ಆ ಶತಕವು ಪ್ರಚಾರದಲ್ಲಿ ಬಂತು. ತಿಬೇಟ, ಬ್ರಹ್ಮದೇಶ, ಜಾವಾ, ಸಿಂಹಲದ್ವೀಪ ವಗೈರೆ ಸ್ಥಾನಗಳಲ್ಲಿ ಆ ಶಕವು ಚಾಲು ಇತ್ತು. ಆ ದೇಶಗಳಲ್ಲಿ ಪ್ರಾಚೀನ ಕಾಲದ ಲೇಖಗಳಲ್ಲಿ ವಿಕ್ರಮ ಶಕದ ಉಲ್ಲೇಖವಿದ್ದಿಲ್ಲ. ಸುಮಾರು ೫೦೦-೬೦೦, ವರ್ಷಗಳ ನಂತರ ಶಾಲಿ ವಾಹನ ಶಕವು ಹಿಂದುಸ್ಥಾನದಲ್ಲಿ ಚಾಲು ಆಯಿತು. ಬುದ್ಧರಾಜನ ಶಕ ವನ್ನು ನಡೆಸುತ್ತಿದ್ದಿಲ್ಲ. ಪ್ರಾಚೀನ ಲೇಖಗಳಲ್ಲಿ ಶಕ ನೃಪಕಾಲ, ನರೇಂದ್ರ ಕಾಲ ಎಂದು ಬರೆಯಲ್ಪಟ್ಟದೆ. "ಆ ಶಕಕ್ಕೆ" "ಶಕನರಪತೇಃ ಅತೀತಾಬ್ಧಃ" ಎಂದು ಕೆಲವು ಪಂಚಾಂಗಗಳಲ್ಲಿ ಹೇಳಲಾಗಿದೆ. ಈ ಆಧಾರದಿಂದ "ಅದು ಶಕ ರಾಜ ಕಾಲವಿರುತ್ತದೆ" ಎಂದು ಇತಿಹಾಸ ಸಂಶೋಧಕರ ಅಭಿಪ್ರಾಯವಿದೆ.

ಕೆಲವು ಅರ್ವಾಚೀನ ಕಾಲ ವಿವೇಚಕರ ಮತದಂತೆ— 'ಶಾಲಿವಾಹನ ಶಕೆ'ಯು 'ಶಾಲಿವಾಹನ' ಎಂಬ ಅರಸನಿಂದ ಸ್ಥಾಪಿಸಲ್ಪಟ್ಟಿಲ್ಲ. ಹತ್ತನೆಯ ಶತಕದ ಮೊದಲಿನ ಲೇಖಕರು ಶಾಲಿವಾಹನ ಶಕೆಯ ಉಲ್ಲೇಖ ಮಾಡಿಲ್ಲ. "ಶಕನೃಪಕಾಲ" ಮೊದಲಾದ ಹೆಸರುಗಳನ್ನು ವಿವರಿಸಿದ್ದಾರೆ. ಆ ನಂತರದ (೧೦ ನೆಯ ಶತಕದ ನಂತರದ) ಲೇಖನಗಳಲ್ಲಿ ಮಾತ್ರ ಶಕೆಯ ಉಲ್ಲೇಖವಿದೆ. "ಶಕನೃಪಕಾಲ" ಇದೇ ಶಾಲಿವಾಹನನ ಹೆಸರಿನಿಂದ ಕರೆಯಲ್ಪಟ್ಟದೆ"ಎಂದು ಸಿದ್ಧಮಾಡಿದ್ದಾರೆ. ಇನ್ನು ಕೆಲವರು ಈ ಕೆಳಗೆ ವಿವರಿಸಿದಂತೆ ಪ್ರತಿಪಾದಿ ಸಿದ್ದಾರೆ-"ಶಾಲಿವಾಹನ ಅಥವಾ ಸಾತವಾಹನ ಈ ಹೆಸರಿನ ವ್ಯಕ್ತಿ ಇದ್ದಿಲ್ಲ. ಇದು ಆಂಧ್ರ ಭೃತ್ಯ ಮನೆತನದ ಹೆಸರು ಇರುತ್ತದೆ" ಕೆಲವರು 'ಶಾಲಿವಾಹನ' ಹೆಸರಿನ ವ್ಯಕ್ತಿ ಇದ್ದಿತು ಎಂದು ಪ್ರತಿಪಾದಿಸಿರುವರು. ಅವರ ಸಂಬಂಧ

ದಿಂದ ಆಂಧ್ರ ಭೃತ್ಯುವಿನ ಸಮಕಾಲೀನನಾದ ಗುಣಾಢ್ಯ ಕವಿಯು ಇದರ ಸ್ಪಷ್ಟ ಉಲ್ಲೇಖ ಮಾಡಿರುವನು. ಈ ಶಾಲಿವಾಹನನು ತನ್ನ ಹೆಸರಿನ ಶಕೆಯನ್ನು ಸುರುವು ಮಾಡಿದನೋ, ಅಥವಾ ಇಲ್ಲವೋ ಇದರ ಬಗ್ಗೆ ಈ ವರೆಗೂ ಸ್ಪಷ್ಟ ಉತ್ತರ ದೊರೆತಿಲ್ಲ"ವೆಂದು ಆರ್ಯಾಂಚಿ, ಸಣಾಂಚಿ, ಪ್ರಾಚೀನ, ವ ಅರ್ವಾಚೀನ ಇತಿಹಾಸ ಎಂಬ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ.

ಮೇಲಿನ ಅಭಿಪ್ರಾಯದಿಂದ 'ಶಕನೃಪಕಾಲವು' ಶಾಲಿವಾಹನನ ಹೆಸರಿನಿಂದ ಕರೆಯಲಾಗಿದೆಯೆಂದು ವ್ಯಕ್ತವಾಗುವದು. 'ಶಕನೃಪಕಾಲವೆಂದರೆ 'ಶಕ'ರೇ ಆ ಕಾಲಕ್ಕೆ ರಾಜರಾಗಿರಬಹುದೇ? ಅಥವಾ 'ಶಕ'ರೊಡನೆ ಹೋರಾಡಿದ ಯಾವುದಾದರೊಂದು ವ್ಯಕ್ತಿಯು ವಿಜಯ ಪಡೆದ್ದಿತೇ? ಹಾಗಿದ್ದರೆ ಅಂಥ ಮಹಾಪುರುಷನ ಹೆಸರು ಪ್ರಕಟವಾಗದಿರಲು ಕಾರಣವೇನು? ಒಂದು ವೇಳೆ ಶಕರೇ ಆ ಕಾಲಕ್ಕೆ ರಾಜರಾಗಿದ್ದು ಶಕನೃಪಕಾಲವೆಂದು ಹೆಸರು ಪ್ರಸಿದ್ಧಿಗೆ ಬಂದುದಾದರೆ, ಭಾರತದಲ್ಲಿ ಇಲ್ಲಿಯವರೆಗೆ ಆ 'ಶಕನೃಪಕಾಲ' ಬಾಳಿ ಬರುತ್ತಿರಲಿಲ್ಲ. ಯಾಕಂದರೆ ಪ್ರಾಚೀನ ಭಾರತೀಯರು 'ಶಕ' ಹೂಣರೊಡನೆ ಹೋರಾಡಿ ಅವರನ್ನು ಭಾರತದ ಹೊರಗೆ ಅಟ್ಟಿರುವುದು ಇತಿಹಾಸ ಪ್ರಸಿದ್ಧವಿದೆ. ವಿಕ್ರಮನು ' ಶಕ'ರೊ (ಶಿಥಿಯನ್ ಜನಾಂಗದೊ)ಡನೆ ಹೋರಾಡಿ 'ಶಕಾರಿ'ಯೆಂದು ಹೆಸರುವಾಸಿಯಾಗಿದ್ದಾನೆ. ಅಂದಿನಿಂದ ವಿಕ್ರಮ ಶಕಕ್ಕೆ 'ಶಕನೃಪಕಾಲ'ವೆಂಬ ಹೆಸರು ಯಾಕೆ ಬರಲಿಲ್ಲ? 'ಶಕನೃಪ' ಇದಕ್ಕೆ ಶಾಲಿವಾಹನ ಎಂದು ಹೆಳುವುದು ಸಮಂಜಸವಾಗುವುದಿಲ್ಲ. ಯಾಕಂದರೆ ಎರಡೂ ಶಬ್ದಗಳಲ್ಲಿ ಸಾಮ್ಯವು ಕಂಡುಬರುವುದಿಲ್ಲ. ಹೀಗೆಯೇ ಆಂಧ್ರ, ಆಂಧ್ರಭೃತ್ಯ ಇವರುಗಳಿಗೆ ಶಾಲಿವಾನರೆಂದು ಹೇಳುವುದೂ ಸಮಂಜಸವಲ್ಲ * ಮತ್ತು ಆಂಧ್ರ ಶಕೆ – ಆಂಧ್ರ ಭೃತ್ಯ ಶಕವೆಂದು ಎಲ್ಲಿಯೂ ಹೇಳಿಲ್ಲ. ೧೮೮೫ ವರುಷಗಳಿಂದಲೂ ಶಾಲಿವಾಹನ ಶಕವೆಂದೇ ಸಕಲ ವ್ಯವಹಾರಗಳಲ್ಲಿಯೂ, ಶಿಲಾ ಲೇಖಗಳಲ್ಲಿಯೂ, ತಾಮ್ರಪಟಗಳಲ್ಲಿಯೂ ಉಲ್ಲೇಖಿಸುತ್ತ ಬಂದಿರುವುದರಿಂದ 'ಶಾಲಿವಾಹನ ಶಕ'ವೆಂಬುದೇ ವಿಹಿತವೆಂದು ಸಿದ್ಧವಾಗುವುದು. ಈ ಶಾಲಿವಾಹನನಿಗೆ ಸಾತವಾಹನ, ಸಾತಕರ್ಣಿ, ಶಾತಕರ್ಣಿ, ಎಂದು ಹಲವು ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆಯಲ್ಲದೇ ಇವನು ವೀರ ಶೈವನೆಂಬುವದು ಸ್ಫುಟವಾಗಿ ತೋರುತ್ತದೆ.

## ವೀರಶೈವ ಶಾಲಿವಾಹನ

ದೇವಕರ್ಣಿಯು ಅಪುತ್ರನಾಗಿ ಭಾರ್ಯಾವಿಯೋಗಹೊಂದಿದನು. ಅವನು ಚಿಂತಾಕ್ರಾಂತನಾಗಿರಲು ಕನಸಿನಲ್ಲಿ ಅವನಿಗೆ ಈಶ್ವರನು ಪ್ರತ್ಯಕ್ಷ ಆಗಿ "ಎಲೈ ರಾಜನೇ ! ನೀನು ಬೇಟೆಗಾಗಿ ಅರಣ್ಯಕ್ಕೆ ಹೋದಾಗ ಅಲ್ಲಿ ಸಿಂಹದ ಮೇಲೆ ಸವಾರಿ ಮಾಡುತ್ತಿರುವ ಬಾಲಕನೋರ್ವನು ನಿನಗೆ ಕಾಣಿಸಿಕೊಳ್ಳು ವನು. ಅವನನ್ನು ನೀನು ತೆಗೆದುಕೊಂಡು ಸಲಹು. ಅವನೇ ನಿನಗೆ ಮಗ ನಾಗುವನು" ಎಂದು ಹೇಳಿ ಅಂತರ್ಧಾನನಾದನು. ಆ ಪ್ರಕಾರವಾಗಿ ದೇವ ಕರ್ಣಿಯು ಬೇಟೆಗಾಗಿ ಅರಣ್ಯಕ್ಕೆ ಹೋಗಲು ಬಾಲಕನು ಪ್ರಾಪ್ತನಾದನು.

ಆ ಬಾಲಕನನ್ನು ಹೊತ್ತ ಸಿಂಹವು ಶಾಪವಿಮೋಚನ ಹೊಂದಿ ನಿಜ ರೂಪವನ್ನು ತಾಳಿ ತನ್ನ ಹೆಸರು 'ಸಾತ' ಎಂದು ತಿಳಿಸಿತು. ಸಾತನ ಮೇಲೆ ಸವಾರಿ ಮಾಡುತ್ತಿರುವ ಆ ಬಾಲಕನ ಹೆಸರು 'ಸಾತವಾಹನ' ಎಂದು ತಿಳಿ ಸಿತು. ದೇವಕರ್ಣಿಯು ಬಾಲಕನನ್ನು ತನ್ನ ರಾಜಧಾನಿಗೆ ತೆಗೆದುಕೊಂಡು ಬಂದನು. ಬಾಲಕನು ದೊಡ್ಡವನಾದ ಬಳಿಕ ತನ್ನ ರಾಜ್ಯವನ್ನು ಅವನಿಗೆ ಕೊಟ್ಟು ರಾಜನನ್ನಾಗಿ ಮಾಡಿದನು. ಸಾತವಾಹನನಿಗೆ ಪ್ರಾಕೃತ ಭಾಷೆಯಲ್ಲಿ 'ಶಾಲಿವಾಹನ'ಎಂದು ಅನ್ನುವದುಂಟು. ಆ ಶಾಲಿವಾನನು ದೇವಕರ್ಣಿಗೆ ಸಂಬಂಧಪಟ್ಟವನಾದುದರಿಂದ 'ಸಾತಕರ್ಣಿ, ಶಾತಕರ್ಣಿ'ಎಂಬ ಹೆಸರುಗಳು ಬಂದಿರುತ್ತವೆ. ದೇವಕರ್ಣಿ–ಸಾತಕರ್ಣಿ ಈ ಶಬ್ದಗಳನ್ನು ನೋಡಿದರೆ ಇವರು ಇಷ್ಟಲಿಂಗವನ್ನು ಸತತವಾಗಿ ಕರ್ಣದಲ್ಲಿ ಧರಿಸಿದ್ದರೆಂದು ತಿಳಿಯಬೇಕಾಗು ತ್ತದೆ. 'ಹರಕರ್ಣಿ'ಎಂಬ ಮಹಾಮುನಿಯು ಕರ್ಣದಲ್ಲಿ ಲಿಂಗವನ್ನುಧರಿಸಿ ದ್ದರಿಂದ ಅವನಿಗೆ ಹರಕರ್ಣಿಯೆಂಬ ನಾಮವುಂಟಾಗಿದೆ. ("ಕರ್ಣೇಚ ಹರ ಕರ್ಣೇನ ಮುನಿನಾ ಪರಮರ್ಷಿಣಾ" ಪದ್ಮ ಪುರಾಣ ಪಾತಾಲಖಂಡ ಶ್ಲೋ. ೧೧೩) ಲಿಂಗಧಾರಣವು ಬೇರೆ ಬೇರೆ ಫಲಪ್ರಾಪ್ತಿಗಾಗಿ ದೇಹದಲ್ಲಿ ಭಿನ್ನ ಭಿನ್ನ ಸ್ಥಾನಗಳಲ್ಲಿ ಹೇಳಲ್ಪಟ್ಟದೆ.

"ಮೋಕ್ಷಾರ್ಥೀ ಶಿಖಾದೇಶೇ ಧರ್ಮಾರ್ಥೀಚ ಬಾಹುಮಧ್ಯೇ"....
ಸರ್ವಾರ್ಥೀಚ ಕಂಠೇ ಬಧ್ನೀಯಾತ್ ।
ಮೂರ್ಧ್ನಿವಾ ಕಂಠದೇಶೇವಾ ಕರ್ಣೇವಕ್ಷಸ್ಥಲೇಽಪಿವಾ ।

ಕುಕ್ಷೌಹಸ್ತಸ್ಥಲೇವಾಽಪಿ ಧಾರಯೇಲ್ಲಿಂಗಮೈಶ್ವರಂ ||
ನಾಭೇರಧಸ್ತಾಲ್ಲಿಂಗಸ್ಯ ಧಾರಣಂ ಪಾಪಕಾರಣಂ |

( ಸಿದ್ಧಾಂತ ಶಿಖಾಮಣಿ ಪು. ೬ )

ಇಲ್ಲಿ ವಿವರಿಸಿದಂತೆ ಬೇರೆ ಬೇರೆ ಫಲಾಪೇಕ್ಷೆಯು ಭಿನ್ನ ಭಿನ್ನ ಸ್ಥಾನಗಳಲ್ಲಿ ಲಿಂಗವನ್ನು ಧರಿಸಿಕೊಳ್ಳುವುದು ಈಗಲಾದರೂ ವೀರಶೈವರಲ್ಲಿ ರೂಢಿಯಾಗಿದೆ. ವ್ಯಾಸ ಮಹರ್ಷಿಯ ಗುರುಗಳಾದ ಘಂಟಾಕರ್ಣ ಶಿವಾಚಾರ್ಯರು ಶಿವಭಕ್ತಿನಿಷ್ಠೆಯುಳ್ಳವರಾಗಿದ್ದರು. ಪರದೈವತೆಯ ನಾಮ ಶ್ರವಣ ತಮಗಾಗಬಾರದೆಂದು ಕಿವಿಗಳಲ್ಲಿ ಸದಾ ಘಂಟೆ ಕಟ್ಟಿಕೊಂಡದ್ದರಿಂದ ಅವರಿಗೆ "ಘಂಟಾಕರ್ಣ" ಎಂಬ ಹೆಸರು ಬಂದಿದೆ.* ಇತ್ಯಾದ್ಯನೇಕ ಪ್ರಬಲ ಪ್ರಮಾಣಗಳಿಂದ 'ಸಾತಕರ್ಣಿ', 'ದೇವಕರ್ಣಿ' ಇವರು ವೀರಶೈವರೆಂದೇ ಸಿದ್ಧವಾಗುವುದು. ಈ ಶಾಲಿವಾಹನನು, ಒಂದು ಕಾಲದಲ್ಲಿ ಶಕ ಸಮ್ರಾಟನಾದುದರಿಂದ ಈಗಲಾದರೂ ಎಲ್ಲ ವ್ಯವಹಾರಗಳಲ್ಲಿ ಶ್ರೀಮನ್ನೃಪಶಾಲಿವಾಹನ ಶಕವೆಂದು, ಹೇಳುವುದುಂಟು.

## — ಹಿಜರೀಸನ್ —

ಕ್ರಿ.ಶ. ೬ರ ಪೂರ್ವದಲ್ಲಿ ಅರಬಸ್ತಾನದ ನಾಲ್ಕು ಕಡೆಗೂ ಅಜ್ಞಾನಾಂಧಕಾರವು ಕವಿದಿತ್ತು. ಕರಾಲ ಕೃತಿಯುಳ್ಳ ಮಾನವರು ತಂಡೋಪತಂಡವಾಗಿ ಸೇರಿ, ಕೊಲೆ, ಸುಲಿಗೆ, ಸುರಾಪಾನ, ವ್ಯಭಿಚಾರಾದಿ ಹೀನ ಕೃತಿಗಳನ್ನೆಸಗುತ್ತ ತಾಂಡವನೃತ್ಯವನ್ನಾಡುತ್ತಿದ್ದರು. ಇಂಥ ಕೃತಿಗಳಿಗೆ ಬಲ ದೊರೆಯಲೆಂದು ತಮ್ಮ ತಮ್ಮ ಮನ ಬಂದಂತೆ ದೇವರನ್ನು ಕಲ್ಪಿಸಿಕೊಂಡು ಅವುಗಳ ಮೂರ್ತಿಗಳನ್ನು ನಿರ್ಮಿಸಿ ಪೂಜಿಸುತ್ತಿದ್ದರು. ಅಲ್ಲಿ ಆಗ ಅರಸರಾರೂ ಇದ್ದಿಲ್ಲ.

* ಕಾಶೀ ಕ್ಷೇತ್ರಕ್ಕೆ ಸಮೀಪವಿರುವ ವ್ಯಾಸಕಾಶಿಯಲ್ಲಿ ವ್ಯಾಸೇಶ್ವರ ಗುಡಿಯಲ್ಲಿ ಇವರ ಮೂರ್ತಿಯನ್ನು ಈಗಲಾದರೂ ನೋಡಬಹುದು. ಅಲ್ಲಿಯ ಜನರು ಆ ಮೂರ್ತಿಗೆ "ವ್ಯಾಸಜೀಕಾ ಗುರು" ಎಂದು ಅನ್ನುವದುಂಟು. ಆ ಘಂಟಾಕರ್ಣ ಶಿವಾಚಾರ್ಯರ ಒಂದು ಮಠವು ನೇಪಾಳದಲ್ಲಿದೆ. ಅಲ್ಲಿ ಪ್ರತಿವರುಷ ಶ್ರಾವಣ ಬಹುಳ ೧ಳ ಯಲ್ಲಿ ಜಾತ್ರೆಯು ಜರಗುವುದು. ಈ ಮಹಾತ್ಮರು ವೀರಶೈವ ಮತಸ್ಥಾಪಕರಾದ ಜಗದ್ಗುರು ಪಂಚಾಚಾರ್ಯರಲ್ಲಿ ಓರ್ವರಾಗಿದ್ದಾರೆ.

ಪುಂಡಪೋಕರೇ ರಾಜರಾಗಿ ಮೆರೆಯುತ್ತಿದ್ದರು. ಹೆಣ್ಣು ಹುಟ್ಟಿದರೆ ಸಜೀವವಾಗಿ ಭೂಮಿಯಲ್ಲಿ ಹೂಳುತ್ತಿದ್ದರು. ಆ ದೇಶದಲ್ಲಿ ಆಗ ಯಹೂದಿ (Jew) ಮತ್ತು ಕ್ರೈಸ್ತ ಧರ್ಮಾನುಯಾಯಿಗಳೂ ಇದ್ದರು. ಅವರು ತಮ್ಮ ಪವಿತ್ರ ಗ್ರಂಥಗಳ ಅಧ್ಯಯನ ತಮ್ಮ ಜನಾಂಗದಲ್ಲಿಯೇ ಇರತಕ್ಕದ್ದೆಂದು ತಿಳಿಯುತ್ತಿದ್ದರು. ಕ್ರೈಸ್ತ ಪಾದ್ರಿಗಳು ಏಕೇಶ್ವರೀ ಪಂಥದ ಬದಲು ರೂಹುಲ್, ಕುದುಸ್, ಗಳವಾದ ವಿವಾದದಲ್ಲಿ ನಿರತರಾಗಿದ್ದರು. ಇದೇ ಸಮಯದಲ್ಲಿ "ಹಜರತ್ ಇಬ್ರಾಹಿಮ" (ಅಲೈಹಿಸ್ಸಲಾಮ)ನ ಪ್ರಾರ್ಥನೆಯ ಮೇರೆಗೆ "ಬೀಬಿ ಅಮೀನಾ" ಇವಳ ಉದರದಲ್ಲಿ "ಹಜರತ್ ಮಹಮ್ಮದ ಪೈಗಂಬರನು" ೮ ರಬೀಉಲ್ ಅವ್ವಲ್ ಅಂದರೆ ಸೋಮವಾರ ೨೯, ಆಗಸ್ಟ ೫೭೦ನೆಯ ಇಶ್ವಿ ದಿವಸ ಮಕ್ಕಾ ಪಟ್ಟಣದಲ್ಲಿ ಹುಟ್ಟಿದನು.

ಇವನು ಚಿಕ್ಕ ವಯಸ್ಸಿನಲ್ಲಿರುವಾಗಲೇ ತಂದೆ-ತಾಯಿಗಳನ್ನು ಕಳೆದುಕೊಂಡನು. ಈ ಅನಾಥ ಬಾಲಕನ ಅಜ್ಜನಾದ "ಅಬ್ದುಲ್‌ಮುಲ್ ಅಬನು ಇವನನ್ನು ಸಲುಹಿದನು. ಆ ಮೇಲೆ ಅವನ ಕಕ್ಕನಾದ "ಅಬುತಾಲೀಬನು" ಹ. ಮಹಮ್ಮದನನ್ನು ಜೋಪಾನ ಮಾಡಿದನು. ಮಹಮ್ಮದನು ೧೦ನೆಯ ವಯಸ್ಸಿನಲ್ಲಿರುವಾಗ ತನ್ನ ಕಕ್ಕನ ಕುರಿಗಳನ್ನು ಕಾಯಲಿಕ್ಕೆ ಅಡವಿಗೆ ಹೋಗಿ ಏಕಾಂತದಲ್ಲಿ ಚಿಂತಾಕ್ರಾಂತನಾಗಿ ಕೂಡ್ರುತ್ತಿದ್ದನು. ಇವನು ಚಿಕ್ಕ ವಯಸ್ಸಿನಲ್ಲಿಯೇ ವ್ಯಾಪಾರಿಗಳೊಡನೆ 'ಸಿರಿಯಾ' ಮೊದಲಾದ ಪ್ರಾಂತಗಳಲ್ಲಿ ಸಂಚರಿಸುತ್ತಿದ್ದನು. ಇದರಿಂದ ಇವನಿಗೆ ಕ್ರಿಶ್ಚಿಯನ್, ಯಹೂದಿ ಧರ್ಮಗಳ ಪರಿಚಯವಾಯಿತು. ಆ ಕಾಲದಲ್ಲಿ ಸಿರಿಯ ಪ್ರಾಂತವು ಕ್ರೈಸ್ತ ರೋಮನ್ ಸಮ್ರಾಟದ ಆಳಿಕೆಯಲ್ಲಿತ್ತು. ಅಲ್ಲಿ ಕ್ರೈಸ್ತ ಧರ್ಮವೇ ಪ್ರಚಾರದಲ್ಲಿತ್ತು. ಹ. ಮಹಮ್ಮದನು ಕ್ರೈಸ್ತ ಧರ್ಮೋಪದೇಶಕನಾದ 'ನಸೂರ' ಮತ್ತು 'ಬುಹೈರಾ' ಇವರೊಡನೆ ಧರ್ಮದ ಬಗ್ಗೆ ಚರ್ಚಿಸಿದ್ದುಂಟು. ಆ ಪ್ರಶ್ನೆಗಳು ಆಶ್ಚರ್ಯಕರಗಳಾಗಿರುತ್ತವೆ. ಬಾಲಕನಾದ ಹ. ಮಹಮ್ಮದನ ತರ್ಕಬದ್ಧವಾದ ಜಿಜ್ಞಾಸೆಯನ್ನೂ, ವಿಚಾರ ಸರಣಿಯನ್ನೂ ನೋಡಿ 'ಬುಹೈರಾ' ಇವನು ಚಕಿತನಾದನು. ಅಲ್ಲದೇ "ಈ ಬಾಲಕನು ಮುಂದೆ ಕೆಲವು ದಿವಸಗಳಲ್ಲಿಯೇ ಓರ್ವ ಮಹಾತ್ಮನಾಗುವನೆಂದು" ಭವಿಷ್ಯ ನುಡಿದನು.

ಈ ರೀತಿಯಾಗಿ ಇವನು ವ್ಯಾಪಾರದಲ್ಲಿಯೂ ಧಾರ್ಮಿಕ ಅನುಭವ ಪಡೆಯುವುದರಲ್ಲಿಯೂ ೨೫ ವಯಸ್ಸನ್ನು ಕಳೆಯುತ್ತಿರಲು ಪ್ರಾಮಾಣಿಕ ವ್ಯಕ್ತಿಯೆಂದು ಉತ್ತಮ ಹೆಸರು ವಾಸಿಯಾದನು. ಇವನ ಕಾರ್ಯದಕ್ಷತೆಯನ್ನೂ, ಸರಲ ಸ್ವಭಾವವನ್ನೂ, ಪ್ರಾಮಾಣಿಕತೆಯನ್ನೂ ಕಂಡ ಬೇರೆ ಬೇರೆ ವ್ಯಾಪಾರಸ್ಥರು ತಮ್ಮ ವ್ಯಾಪಾರವನ್ನು ಇವನಿಂದಲೇ ಸಾಗಿಸುತ್ತಿದ್ದರು.

ಹೀಗಿರುವಾಗ ಮಕ್ಕಾದಲ್ಲಿ ಸುಪ್ರಸಿದ್ಧ ಮನೆತನದ 'ಖದೀಜಾ' ಎಂಬೋರ್ವ ಶ್ರೀಮಂತ ವಿಧವೆಗೆ ವ್ಯಾಪಾರಕ್ಕಾಗಿ 'ಅಬುತಾಲೀಬನು ಹ. ಮುಹಮ್ಮದನ ಪರಿಚಯ ಮಾಡಿಕೊಟ್ಟನು. ಅಂದಿನಿಂದ ಹ. ಮುಹಮ್ಮದನು 'ಖದೀಜಾಳ' ಏಜಂಟನಾಗಿ ದಮಸ್ಕಸ್, ಮತ್ತು ಬೇರೆ ಬೇರೆ ಸ್ಥಳಗಳಿಗೆ ಹೋಗಿ ವ್ಯಾಪಾರ ಸಾಗಿಸ ಹತ್ತಿದನು. ಹ. ಮುಹಮ್ಮದನು ಪ್ರಾಮಾಣಿಕ ವ್ಯಾಪಾರಿಯಾದುದರಿಂದ 'ಖದೀಜಾ' ಇವಳಿಗೆ ಹೆಚ್ಚು ಹೆಚ್ಚಾಗಿ ಲಾಭ ದೊರೆತುದರಿಂದ ಅವಳು ಮತ್ತಷ್ಟು ಧನವತಿಯಾದಳು. ಆಗ 'ಖದೀಜಾಳು' ಹ. ಮುಹಮ್ಮದನೊಡನೆ ವಿವಾಹವಾಗುವ ಇಚ್ಛೆಯನ್ನು ವ್ಯಕ್ತಮಾಡಿದಳು. ವಿವಾಹ ಸಮಯದಲ್ಲಿ ಖದೀಜಾಳು ೪೦ ವರ್ಷ ವಯಸ್ಕಳಾಗಿದ್ದಳು. ಮುಹಮ್ಮದನು ೨೫ ವಯಸ್ಸಿನಲ್ಲಿದ್ದನು. ಆದರೂ ಇವರಿಬ್ಬರ ವಿವಾಹವು ಅತ್ಯಂತ ಶ್ರೇಯಸ್ಕರ ವಾಯಿತಲ್ಲದೇ ಕಡೆತನಕ ಪರಸ್ಪರರಲ್ಲಿ ಅಗಾಧ ಪ್ರೇಮವು ಉಳಿಯಿತೆಂದು ಇತಿಹಾಸಕಾರರ ಅಭಿಪ್ರಾಯವುಂಟು.

ಹ. ಮುಹಮ್ಮದನು ತಾನು ೪೦ ನೆಯ ವಯಸ್ಸಿನಲ್ಲಿರುವಾಗ ಪೈಗಂಬರ (ಸಂದೇಶ ವಾಹಕ)ನಾದನು. ಅವನು ಮಕ್ಕಾದಲ್ಲಿ ಸರ್ವರಿಗೂ ಅಲ್ಲಾಹನ ಸಂದೇಶವನ್ನು ಬೀರಲು ಪ್ರಾರಂಭಿಸಿದನು. ಹಲವಾರು ಮೂರ್ತಿಗಳ ಹಾಗೂ ಹೆಣ್ಣು, ಗಂಡು ದೇವತೆಗಳ ಪೂಜೆಯನ್ನು ತೊರೆದು ಒಬ್ಬ ನಿರಾಕಾರ ದೇವರ ಉಪಾಸನೆ ಮಾಡುವುದು, ಮನುಷ್ಯ ಮನುಷ್ಯರಲ್ಲಿ ಉಚ್ಚ ನೀಚಗಳೆಂಬ ಭೇದವನ್ನಳಿದು ಎಲ್ಲರೂ ಪರಸ್ಪರರಲ್ಲಿ ಅಣ್ಣ ತಮ್ಮಂದಿರೆಂದು ಭಾವಿಸುವುದು, ಪರರ ಮನ ನೋಯಿಸುವ ಕೀಳ ಕೃತಿಗಳನ್ನಳಿದು ಉತ್ತಮ ಕೆಲಸದಲ್ಲಿ ತೊಡಗುವದು, ಸದ್ವರ್ತನೆಯಿಂದಿರುವದು, ಇತ್ಯಾದಿ ಪೈಗಂಬರನ ಉಪದೇಶಗಳಾದವು.

ಇವನ ಮನೆಯ ಜನರೇ ಮೊದಲು ಇವನಿಗೆ ಅನುಯಾಯಿಗಳಾದರು. ಮುಂದೆ ಹೆಚ್ಚು ಹೆಚ್ಚಾಗಿ ಜನರನ್ನು ತನ್ನ ಪಂಥಕ್ಕೆ ಎಳೆದುಕೊಳ್ಳಲು ಪ್ರಯತ್ನಿಸಿದನು. ಆದರೆ ಅನೇಕ ಜನರು ಇವನ ವಿರುದ್ಧವಾಗಿ ಇವನನ್ನು ಪಿಡೀಸಹತ್ತಿದ್ದರಿಂದ ಕ್ರಿ.ಶ. ೬೨೨ ರಲ್ಲಿ ಮಕ್ಕಾ ಪಟ್ಟಣವನ್ನು ಬಿಟ್ಟು ಮದಿನಾ ಪಟ್ಟಣಕ್ಕೆ ಓಡಿ ಹೋದನು. ಅಲ್ಲಿ ಇವನ ಉಪದೇಶವನ್ನು ಆದರದಿಂದ ಕೇಳಲಾರಂಭಿಸಿದರು. ಅವರು ಇವನನ್ನು ದೇವದೂತನೆಂದು ನಂಬಿದರು.

ಹಜರತ ಮಹಮ್ಮದ ಪೈಗಂಬರನ ನೂತನ ಸಿದ್ಧಾಂತಕ್ಕೆ ಇಸ್ಲಾಂ (ಶಾಂತಿ) ಎಂದು ಹೆಸರಿಟ್ಟರು. ದಿನಗಳೆದಂತೆ ಇವನ ಅನುಯಾಯಿಗಳ ಸಂಖ್ಯೆಯು ಬೆಳೆಯುತ್ತ ಹೋಯಿತು. ಅವನು ಅರಬಿ, ಯಹೂದಿ, ಕ್ರಿಶ್ಚಿಯನ್, ಮೊದಲಾದ ಧರ್ಮಗಳ ಪಂಡಿತರನ್ನು ವಾದದಲ್ಲಿ ಗೆದ್ದು, ಆಯಾ ಪಂಥದವರನ್ನು ತನ್ನ ಧರ್ಮಕ್ಕೆ ಸೇರಿಸಿಕೊಂಡನು. ಕ್ರಿ.ಶ. ೬೩೦ ರಲ್ಲಿ ಮಕ್ಕಾ ಪಟ್ಟಣಕ್ಕೆ ಒಳ್ಳೇ ವೈಭವದಿಂದ ಹಿಂತಿರುಗಿದನು. ಕೆಲವು ದಿವಸಗಳಲ್ಲಿಯೇ ಇಡೀ ಅರಬಸ್ತಾನವು ಇವಾನ ಕೈವಶವಾಯಿತು. ಕ್ರಿ.ಶ. ೬೩೨ರಲ್ಲಿ ನಾಲ್ವತ್ತು ಸಾವಿರ ತನ್ನ ಅನುಯಾಯಿಗಳೊಂದಿಗೆ ಇವನು ಮಕ್ಕಾ ಯಾತ್ರಿಗೆ ಬಂದನು. ಮರು ವರುಷವೇ ಮರಣ ಹೊಂದಿದನು.

ಇವನ ಧರ್ಮವು ನಿಜವಾಗಿಯೂ ಯಹೂದಿ (Jew) ಮತದ ಹೊಸ ರೂಪವಾಗಿತ್ತು. ಶಾಂತತೆಯಿಂದ ಧರ್ಮಬೋಧೆ ಮಾಡಿದರೆ ಜನರು ಕೇಳುವದಿಲ್ಲವಾದ್ದರಿಂದ ಬಲಾತ್ಕಾರವನ್ನು ಮಾಡಬೇಕೆಂದು ಇವನ ಅಭಿಪ್ರಾಯವಿತ್ತು. ಯಾವನಾದರೊಬ್ಬನು,ನಿಮ್ಮ ಹಲ್ಲುಗಳನ್ನು ಮುರಿದಿದ್ದರೆ ನೀವಾದರೂ ಅವನ ಹಲ್ಲುಗಳನ್ನು ಮುರಿಯಿರಿ. ಅಥವಾ ಕಣ್ಣನ್ನುಕಿತ್ತಿದ್ದರೆ ನೀವೂ ಅವನದೊಂದು ಕಣ್ಣನ್ನು ಕಳೆಯಿರಿ" ಎಂದು ಆಜ್ಞೆ ಇರುವದು. "ನೀವು ಒಂದು ವೇಳೆ ವೈರಿಯನ್ನು ಕ್ಷಮಿಸಿ ಬಿಡುವದು ಉತ್ತಮ. ಇಲ್ಲವಾದರೆ ಅವನು ನಿಮಗೆ ಒಂದು ಪೆಟ್ಟು ಹೊಡೆದಿದ್ದರೆ ನೀವೂ ಅವನಂತೆಯೇ ಒಂದು ಪೆಟ್ಟು ಹೊಡೆಯಿರಿ"ಎಂಬುದಾಗಿ ಆಜ್ಞೆ ಇರುವದು. ಈ ಪ್ರಕಾರವಾದ ಇಸ್ಲಾಮದ ಆಜ್ಞೆಯಿಂದ ಉದಾರತನ, ನ್ಯಾಯ, ಇವೆರಡೂ ವ್ಯಕ್ತವಾಗುತ್ತವೆ. ಹಿಂದಿನಿಂದ ಬಂದ ಖಲೀಪರು, ಇದೇ ತತ್ವವನ್ನು ಮುಖ್ಯವಾಗಿಟ್ಟುಕೊಂಡು ಏಶಿಯಾ,

ಯುರೋಪ, ಆಫ್ರಿಕಾ ಮೊದಲಾದ ಖಂಡಗಳಲ್ಲಿ ಶಾಸ್ತ್ರಸಹಾಯದಿಂದ ಧರ್ಮ ಪ್ರಸಾರ ಮಾಡಿದರು. ಕ್ರಿ. ಶ. ೬೨೨ ರಲ್ಲಿ ಹ| ಮ| ಪೈಗಂಬರರು ಮಕ್ಕಾ ಪಟ್ಟಣವನ್ನು ಬಿಟ್ಟು ಮದಿನಾ ಪಟ್ಟಣಕ್ಕೆ ಓಡಿ ಹೋದಂದಿನಿಂದ ಮುಸಲ್ಮಾನರಲ್ಲಿ 'ಹಿಜರೀ' (ಓಡಿಹೋದದ್ದು) ಸನ್ ಆರಂಭವಾಗಿರುತ್ತದೆ. ಇದರ ಪ್ರಾರಂಭವು ಕ್ರಿ. ಶ. ೬೨೨ ಜುಲೈ ತಿಂಗಳಲ್ಲಿ ೧೫ ನೇ ತಾರೀಖು (ಶಕ, ೫೪೪ ಶ್ರಾವಣ ಶುದ್ಧ ೨ ಗುರುವಾರ ರಾತ್ರಿ ಅಥವಾ ಮುಸಲ್ಮಾನೀ ಶುಕ್ರವಾರ ರಾತ್ರಿ) ಆಗಿರುತ್ತದೆ. ಹನ್ನೆರಡು ಚಾಂದ್ರಮಾಸಗಳು ಕೂಡಿ ೩೫೪-೩೫೫ ದಿವಸಗಳಿಗೆ 'ಹಿಜರೀ ವರುಷವಾಗುತ್ತದೆ. ಸೂರ್ಯಾಸ್ತದಿಂದ ವಾರ ಪ್ರಾರಂಭವಾಗುತ್ತದೆ. ಈ ಸನ್ ಮುಸಲ್ಮಾನೀ ರಾಷ್ಟ್ರಗಳಲ್ಲಿಯೂ, ಹಿಂದುಸ್ತಾನದಲ್ಲಿ ವಾಸಿಸುವ ಮುಸಲ್ಮಾನ ಜನರಲ್ಲಿಯೂ ಚಾಲೂ ಇರುತ್ತದೆ.



ಈಸ್ವೀಸನ್ – ಏಶಿಯಾದ ಪಶ್ಚಿಮ ಭಾಗದಲ್ಲಿ "ಫಿಲಿಸ್ತೀನ"ಎಂಬ ಹೆಸರಿನ ದೇಶವಿದೆ. ಅಲ್ಲಿ ಜೇರುಸೈಲೇಮ ಪಟ್ಟಣದಿಂದ ೮೦ ಮೈಲು ಅಂತರದಲ್ಲಿರುವ 'ನಜಾರೆಥ' ( Nagareth ) ಎಂಬ ನಗರದಲ್ಲಿ 'ಜೋಶೆಫ' (Joseph) ಎಂಬ ಹೆಸರಿನ ಬಡಿಗನಿದ್ದನು. ಇವನು 'ಕುಮಾರಿ ಮರಿಯ'

(Vergin Mary), ಎಂಬ ಹೆಸರಿನ ಸಾಧ್ವಿಯೊಡನೆ ವಿವಾಹಿತನಾದನು. ಮರಿಯಮ ವಿವಾಹಿತಳಾಗುವ ಪೂರ್ವದಲ್ಲಿಯೇ ಗರ್ಭವತಿಯಾಗಿದ್ದಳು. ಈ ವಿಷಯವನ್ನು ಜೋಶೆಫನು ತಿಳಿದವನಾಗಿ ತಾನು ಈ ಸ್ಥಿತಿಯಲ್ಲಿ ಏನು ಮಾಡ ಬೇಕೆಂಬುವ ನಿರ್ಣಯವನ್ನು ಹೊಂದದವನಾಗಿ ಚಿಂತಿಸತೊಡಗಿದನು. ಇಷ್ಟ ರಲ್ಲಿಯೇ ಅವನಿಗೆ ಸ್ವಪ್ನದಲ್ಲಿ ಓರ್ವ ದೇವದೂತನು ದರ್ಶನ ಕೊಟ್ಟು, ನುಡಿದು ದೇನಂದರೆ— "ನೀನು ಚಿಂತಿಸಬೇಡ ಮರಿಯಮಳೊಡನೆ ವಿವಾಹಿತನಾಗಲು ಯಾವ ಸಂಶಯವನ್ನೂ ಹೊಂದಬೇಡ, ಅವಳ ಗರ್ಭದಲ್ಲಿ ಪರಮಾತ್ಮನ ಪುತ್ರ ನಿದ್ದಾನೆ" ಈ ಪ್ರಕಾರವಾದ ನುಡಿಯನ್ನು ಕೇಳಿ ಜೋಜೆಫನು ಇದು ದೇವರ ಅಪ್ಪಣೆಯೆಂದು ಭಾವಿಸಿ ಮರಿಮಳೊಡನೆ ವಿವಾಹಿತನಾದನು. ಕೆಲವು ದಿವಸ ಗಳ ಮೇಲೆ ನಜಾರೆಥ ನಗರದಿಂದ ತಮ್ಮ ಪೂರ್ವಜರ ಸ್ಥಾನವಾದ 'ಬೇಥಲಿ ಹೇಮ' ಪಟ್ಟಣಕ್ಕೆ ಆ ದಂಪತಿಗಳೀರ್ವರು ಬಂದರು. ಮುಂದೆ ಕೆಲವೇ ದಿವಸಗಳ ಮೇಲೆ ಮರಿಯಮಳ ಗರ್ಭದಿಂದ 'ಈ ಸಾಮಸೀಹ'ನ ಜನನ ವಾಯಿತು. ಇವನ ಜನ್ಮವು ವಿಕ್ರಮ ಸಂವತ್ ೫೮ ರಲ್ಲಿ ಆಗಿದೆ. ಈಸ್ವೀ ಸನ್‌ದ ಪ್ರಾರಂಭವು ಇವನ ಜನ್ಮದಿಂದಲೇ ಆಗಿರುತ್ತದೆ. ಇವನ ಜನನ ಕಾಲಕ್ಕೆ ಬೇಥಲೆಹೆಮ ಪಟ್ಟಣದಲ್ಲಿ 'ಹೆರೊಡ' (Herod) ಎಂಬ ಹೆಸರಿನ ಅರಸು ರಾಜ್ಯವಾಳುತ್ತಿದ್ದನು. ಇವನು ಅತ್ಯಾಚಾರಿಯೂ, ನಿರ್ದಯನೂ ಆಗಿದ್ದನಲ್ಲದೇ ಬಾಲಕರನ್ನು ಕೊಲ್ಲಿಸುತ್ತಿದ್ದನು. ಜೋಜೆಫ ಮತ್ತು ಮರಿಯಮ ಇವರು ದೇವರಿಂದ ಪ್ರೇರಿತರಾಗಿ ಆ ದುಷ್ಟ ರಾಜನ ಕಣ್ಣಿಗೆ ಬೀಳದೇ ಬಾಲಕ ಈಸಾನನ್ನು ತೆಗೆದುಕೊಂಡು, ಅಲ್ಲಿಂದ ಮಿಶ್ರ ದೇಶಕ್ಕೆ ಓಡಿಹೋದರು. ಸ್ವಲ್ಪ ದಿವಸಗಳಲ್ಲಿಯೇ ಆ ಹೆರೊಡ ರಾಜನು ಸತ್ತನು. ಆಗ ದಂಪತಿಗಳು, ಪುತ್ರನೊಡನೆ ತಮ್ಮ ದೇಶಕ್ಕೆ ಹಿಂತಿರುಗಿ ಬಂದು, ನಜಾರೆಥ ನಗರದಲ್ಲಿರಹತ್ತಿದರು. ಅಲ್ಲಿಯೇ ಈಸಾನ ಬಾಲ್ಯಾವಸ್ಥೆ ಕಳೆದು ಹೋಯಿತು. ಇವನು ಸದೃಢ ಶರೀರವುಳ್ಳವನೂ, ಸುಂದರನೂ, ಬುದ್ಧಿ ಶಾಲಿಯೂ ಆಗಿರುವನು. ಇವನ ವಾಣಿಯಲ್ಲಿ ಒಂದು ಅಲೌಕಿಕ ಪ್ರತಿಭಾ ಶಕ್ತಿ ಗೋಚರವಾಗುತ್ತಿತ್ತು. ಹನ್ನೆರಡು ವರುಷದವನಿರುವಾಗ ತಂದೆ-ತಾಯಿ ಗಳು ಇವನನ್ನು ಜೇರುಸೈಲೇಮಕ್ಕೆ ಕರೆದುಕೊಂಡು ಹೋದರು. ಅಲ್ಲಿಂದ ಅವರು ಹಿಂತಿರುಗಿ ತಮ್ಮ ಊರಿಗೆ ಬರುತ್ತಿರುವಾಗ ಮಧ್ಯಮಾರ್ಗದಲ್ಲಿ

ಆ ಬಾಲಕನು ಏಕಕಾಲದಲ್ಲಿಯೇ ಮಾಯವಾದನು. ಆಗ ತಂದೆ-ತಾಯಿಗಳು ಅವನನ್ನು ಹುಡುಕಲು ಪುನಃ ಜೇರುಸ್ಸೆಲೇಮಕ್ಕೆ ಹೋದರು. ಅವರು ಅಲ್ಲಿ ಹುಡುಕುತ್ತಿರುವಾಗ ಆ ಬಾಲಕನು ಒಂದು ಮಂದಿರದಲ್ಲಿ ತತ್ವವೇತ್ತರಾದ ಪ್ರಸಿದ್ಧ ಪಂಡಿತರೊಡನೆ ಶಾಸ್ತ್ರವಾದದಲ್ಲಿ ತೊಡಗಿದ್ದನು. ಇದನ್ನು ನೋಡಿ ಎಲ್ಲರೂ ಚಕಿತರಾದರು. ಆಗ ಆ ದಂಪತಿಗಳು ಬಾಲಕನನ್ನು ಕರೆದುಕೊಂಡು ತಿರುಗಿ ನಜಾರೆಥ್ ನಗರಕ್ಕೆ ಬಂದರು. ಇವನ ಬಾಲ್ಯಾವಸ್ಥೆಯ ಹೆಚ್ಚಿನ ವೃತ್ತಾಂತವು ಇತಿಹಾಸದಲ್ಲಿ ಸಿಕ್ಕುವುದಿಲ್ಲ.

ಮಹಾತ್ಮಾ ಈಸಾ, ಇವರು ವಯಸ್ಸಿಗೆ ಬಂದಬಳಿಕ ತಂದೆಯ ಕಾಯಕವಾದ ಬಡಿಗತನವನ್ನೇ ಮಾಡುತ್ತ ಎಲ್ಲರಿಗೂ ಶಾರೀರಿಕ ಪರಿಶ್ರಮವನ್ನು ವ್ಯಕ್ತಪಡಿಸಿದರು. ಇವರಿಗೆ ಈಶ್ವರನಲ್ಲಿ ಅಚಲವಾದ ವಿಶ್ವಾಸವಿತ್ತು. ಎಲ್ಲವೂ ಅವನ ಅಪ್ಪಣೆಯಂತೆ ನಡೆಯುತ್ತದೆಂದು ಭಾವಿಸಿದ್ದರು. ಪ್ರಕೃತಿಯ ಪ್ರತ್ಯೇಕ ಆಟಗಳಲ್ಲಿ, ಜೀವನದ ಪ್ರತ್ಯೇಕ ಕಾರ್ಯಗಳಲ್ಲಿ, ಏಕಾಂತದ ಪ್ರತ್ಯೇಕ ವಿಚಾರಗಳಲ್ಲಿ ಭಗವಂತನ ವಾಣಿಯು ಇವರಿಗೆ ಸ್ಪಷ್ಟವಾಗಿ ಕೇಳಿಬರುತ್ತಿತ್ತು. ಇವರು ತಮ್ಮ ಅಂತಸ್ಥಲದಲ್ಲಿ, ಸೂರ್ಯರಶ್ಮಿಗಳಲ್ಲಿ, ನಕ್ಷತ್ರ ಪ್ರಕಾಶಗಳಲ್ಲಿ, ಸರ್ವತ್ರ ಪರಮಾತ್ಮನ ಪ್ರಕಾಶವನ್ನು ನೋಡುತ್ತಿದ್ದರು. ಇವರು ತಮ್ಮ ಬಡಿಗತನದ ಉದ್ಯೋಗವನ್ನು ತೀರಿಸಿಕೊಂಡು ಸಮಯ ಸಿಕ್ಕಾಗ ಏಕಾಂತದಲ್ಲಿ ಕುಳಿತು ಪರಮಾತ್ಮನ ಧ್ಯಾನವನ್ನೂ, ಪ್ರಾರ್ಥನೆಯನ್ನೂ ಭಕ್ತಿಯಿಂದ ಮಾಡುತ್ತಿದ್ದರು. ಇವರು ಜನಸಮೂಹದಲ್ಲಿಯೇ ಇರಲಿ, ಏಕಾಂತದಲ್ಲಿಯೇ ಇರಲಿ, ಎಲ್ಲ ಕಾಲಗಳಲ್ಲಿಯೂ ಭಗವಂತನ ಚಿಂತನೆಯನ್ನೇ ಮಾಡುತ್ತಿದ್ದರು.

ಆ ಸಮಯಕ್ಕೆ "ಜಾನ ದಿ ಬೈಪ್ಟಿಸ್ಟ (John the Baptist) ಎಂಬ ಹೆಸರಿನ ಓರ್ವ ಸಾಧು, ಅರಣ್ಯದಲ್ಲಿರುತ್ತಿದ್ದನು. ಇವನು ಜನರ ಪಾಪ ವಿಮೋಚನೆಗಾಗಿ ಪಾಯಶ್ಚಿತ್ ರೂಪದಲ್ಲಿ ಅವರಿಂದ ಒಂದು ಸಂಸ್ಕಾರವನ್ನು ಮಾಡಿಸುತ್ತಿದ್ದನು. ಅದು ಏನಂದರೆ— ಅವನು ಒಂದು ದಿವಸ ಜನರನ್ನು ಕುರಿತು— "ನಾನು ಜನರ ಪಾಯಶ್ಚಿತ್ತಕ್ಕಾಗಿ ಜಲಾಭಿಷೇಕವನ್ನು ಮಾಡಿಸುತ್ತೇನೆ. ಆದರೆ ಇನ್ನು ಮುಂದೆ ಕೆಲವು ದಿವಸಗಳಲ್ಲಿಯೇ ಓರ್ವ ಮಹಾತ್ಮನು ಉದಯಿಸುವವನಿದ್ದಾನೆ. ಅವನು ಅಗ್ನಿಯ ದ್ವಾರ ಅಥವಾ ಪರಮಾತ್ಮನು

ತನಗೆ ಕೊಟ್ಟ ಶಕ್ತಿಯಿಂದ ಜನರನ್ನು ಶುದ್ಧಗೊಳಿಸುವವನಾಗುವನು" ಎಂದು ನುಡಿದನು. ಇವನ ಹೇಳಿಕೆಯಂತೆ ಕೆಲವು ದಿವಸಗಳಲ್ಲಿಯೇ ಮಹಾತ್ಮಾ 'ಈಸಾ' ಇವರು 'ಜಾನ'ನಲ್ಲಿಗೆ ಸಂಸ್ಕಾರ ಹೊಂದಲು ಬಂದರು. ಆಗ 'ಜಾನ' ಈಸಾನನ್ನು ಕುರಿತು– ನನ್ನ ಸಂಸ್ಕಾರ ನಿನ್ನಿಂದಲೇ ಆಗಬೇಕೆಂದು ಅಪೇಕ್ಷಿಸುತ್ತೇನೆ ಎಂದನು. ಆದರೆ ನಿನ್ನ ಸಂಸ್ಕಾರವನ್ನು ನಾನು ಮಾಡಲು ಯೋಗ್ಯನಿರುವುದಿಲ್ಲವು ಎಂದು ನುಡಿದನು. ಇದನ್ನು ಕೇಳಿ ಈಸಾ ಅವರು, 'ನಿನ್ನಿಂದಲೇ ನಾನು ಸಂಸ್ಕಾರ ಹೊಂದಲು ಬಯಸುತ್ತೇನೆ'ಂದು ಹೇಳಿದರು. ಆಗ 'ಜಾನ' ಯಾವುದನ್ನೂ ಮಾತಾಡದೇ 'ಈಸಾ' ಅವರಿಗೆ ಜಲಾಭಿಷೇಕ ವನ್ನು ಮಾಡಿಸಿದನು. ಯಾವಾಗ್ಗೆ ಈಸಾ ಅಭಿಷಿಕ್ತರಾಗಿ ಜಲದಿಂದ ಹೊರಗೆ ಬಂದರೋ, ಆ ಸಮಯಕ್ಕೆ ಅವರಿಗೆ ಅಂತರಂಗದಲ್ಲಿ ಭಗವಂತನಶಕ್ತಿಯೇ ಇಳಿದು ಪ್ರತಿಷ್ಠಿತವಾಯಿತೋ ಏನೊ ಎಂಬುವ ಹಾಗೆ ಅನುಭವವಾಯಿತು.

ಇತಿಹಾಸಕಾರರು ಈಸಾರ ಮರಣ ಕಾಲವನ್ನು ೩೦ ವರುಷದ ಮೇಲೆ ೩೩ ವರುಷದ ಒಳಗೆ ನಿರ್ಣಯಿಸಿರುವುದುಂಟು. ಈಸಾ ಅವರು ಧರ್ಮ ಪ್ರಚಾರ ಕಾರ್ಯವನ್ನು ಮಾಡಿದರು. ಕಡೆಗೆ ಅವರನ್ನು ಆ ನಗರವಾಸಿಗಳು ವಿರೋಧಿಸಹತ್ತಿದರು. ಆ ಕಾರಣದಿಂದ ಅವರು ನಜಾರೆಥ ನಗರವನ್ನು ಬಿಟ್ಟು ಕೆಪರನೌನ (Capernoun) ಎಂಬ ಹೆಸರಿನ ಸ್ಥಾನದಲ್ಲಿರಹತ್ತಿದರು. ಅವರಿಗೆ ಹನ್ನೆರಡು ಜನ ಪ್ರಧಾನ ಶಿಷ್ಯರಿದ್ದರು. ಅವರ ಹೆಸರು ಕೆಳಗಿನಂತಿವೆ.

೧) ಸಾಯಮನ ಉಪನಾಮ ಪೀಟರ (Simon alias peter)
೨) ಅವನ ತಮ್ಮನಾದ ಎಂಡ್ರಜ (Andrews)
೩) ಟಾಮಸ (Thomas)
೪) ಮೆಥ್ಯೂ (Matthew)
೫) ಜೇಮ್ಸ (James)
೬) ಅವನ ತಮ್ಮನಾದ ಜಾನ (John)
೭) ಫಿಲಿಪ (Philip)
೮) ಬಾರ್ಥಾಲೋಮ್ಯೂ (Bartholomew)
೯) ಜೇಮ್ಸ (James)

೧೦) ಥೆಡಿಯಸ (Thadeus)
೧೧) ಸಾಯಿಮಡ (Simod)
೧೨) ಜೂಡಸ ಆಇ ಕೆರಿಯಟ (Judas is cariot)

ಈಸಾ, ಇವರ ಪ್ರಧಾನ ಉಪದೇಶ 'The Sermon on the Mount' (ಗುಡ್ಡದ ಮೇಲೆ ಉಪದೇಶ)ದ ಹೆಸರಿನಿಂದ ಪ್ರಸಿದ್ಧವಿದೆ. ಅದರ ಸಾರಾಂಶವು ಕೆಳಗಿನಂತಿದೆ.

೧) ಯಾವನ ಹೃದಯದಲ್ಲಿ ದೈನ್ಯಭಾವವು ಉತ್ಪನ್ನವಾಗಿದೆಯೋ, ಅವನೇ ಧನ್ಯನು. ಯಾಕಂದರೆ ಪರಮಾತ್ಮನ ಸಾಮ್ರಾಜ್ಯವು ಅವನಿಗೆ ಸಿಗುತ್ತದೆ.

೨) ಯಾವನು ಆರ್ತಭಾವದಿಂದ ಅಳುವನೋ ಅವನೇ ಧನ್ಯನು. ಯಾಕಂದರೆ ಅವನಿಗೆ ಭಗವಂತನ ಕಡೆಯಿಂದ ಆಶ್ವಾಸವು ಪ್ರಾಪ್ತಿಯಾಗುವದು.

೩) ವಿನಯ ಸಂಪನ್ನನಾದ ಪುರುಷನೇ ಧನ್ಯನು, ಯಾಕಂದರೆ ಅವನು ಪೃಥ್ವಿಯ ವಿಜಯವನ್ನು ಸಂಪಾದಿಸುವನು.

೪) ಯಾರಿಗೆ ಧರ್ಮಾಚರಣೆಯಲ್ಲಿ ತೀವ್ರ ಅಭಿಲಾಷೆಯಿರುವುದೋ ಅವರೇ ಧನ್ಯರು, ಯಾಕಂದರೆ ಅವರಿಗೆ ಪೂರ್ಣತೆಯ ಪ್ರಾಪ್ತಿಯಾಗುವದು.

೫) ದಯಾಲು ಪುರುಷರೇ ಧನ್ಯರು, ಯಾಕಂದರೆ ಅವರೇ ಪರಮಾತ್ಮನ ಕೃಪೆಯನ್ನು ಪಡೆಯುವರು.

೬) ಯಾರ ಅಂತಃಕರಣವು ಪರಿಶುದ್ಧವಿರುವುದೋ ಅವರೇ ಧನ್ಯರು, ಯಾಕಂದರೆ ಈಶ್ವರ ಸಾಕ್ಷಾತ್ಕಾರವು ಅಂಥವರಿಗೇನೇ ಆಗುವದು.

೭) ಶಾಂತಿ ಪ್ರಚಾರ ಮಾಡುವವರೇ ಧನ್ಯರು, ಯಾಕಂದರೆ ಅಂಥವರೇ ಪರಮಾತ್ಮನ ಪುತ್ರರೆಂದು ಹೇಳಿಸಿಕೊಳ್ಳಲ್ಪಡುವರು.

೮) ಧರ್ಮದಲ್ಲಿ ದೃಢವಾದ ನಂಬಿಗೆ ಇದ್ದವರಿಗೆ ಕಷ್ಟವು ಒದಗುವದು. ಅವರೇ ಧನ್ಯರು, ಯಾಕಂದರೆ ಪರಮಾತ್ಮನ ಸಾಮ್ರಾಜ್ಯವು ಅಂಥವರಿಗೇ ಸಿಗುವದು ಇತ್ಯಾದಿ ಇತ್ಯಾದಿ.

'ಈಸಾ, ಇವರು ತಮ್ಮ ಜೀವನದಲ್ಲಿ ಅನಂತಾನಂತ ಚಮತ್ಕಾರಗಳನ್ನು ತೋರಿಸಿದರು. ಆದರೆ ಅವೆಲ್ಲವೂ ಸಹಜ ಘಟನೆಯೆಂದು ಹೇಳುತ್ತಿದ್ದರು. ಅವರು ನಿರಹಂಕಾರ ನಿರಾಡಂಬರ ಸ್ವಭಾವವುಳ್ಳವರಾಗಿದ್ದರು. ಅವರು ಎಷ್ಟೋ ಕುರುಡರನ್ನೂ, ಕುಂಟರನ್ನೂ, ಕಿವುಡರನ್ನೂ, ಕುಷ್ಠರೋಗಿಗಳನ್ನೂ, ಕಷ್ಟಮುಕ್ತರನ್ನಾಗಿ ಮಾಡಿದರು. ಸತ್ತವರನ್ನೂ ಬದುಕಿಸಿದರು. ಬಿರುಗಾಳಿಯನ್ನು ನಿಲ್ಲಿಸಿದರು. ಸ್ವಲ್ಪ ಆಹಾರದಿಂದಲೇ ಸಾವಿರಾರು ಜನರಿಗೆ ಮನದಣಿಯುವಂತೆ ಭೋಜನ ಮಾಡಿಸಿದರು. ಇದೇ ಪ್ರಕಾರವಾಗಿ ಅಸಂಖ್ಯ ಆಶ್ಚರ್ಯಕಾರಕ ಪವಾಡಗಳನ್ನು ಮಾಡಿತೋರಿಸಿದರು.

ಈಸಾ ಅವರಿಗೆ ಭಗವಂತನ ಸತ್ತಾದ ಬಗ್ಗೆ ಭೌತಿಕ ಅಥವಾ ದಾರ್ಶನಿಕ ಪ್ರಮಾಣದ ಆವಶ್ಯಕತೆ ಇರಲಿಲ್ಲ. ಅವರು ಭಗವಂತನ ಸತ್ತಾದ ಅನುಭವವನ್ನು ತಮ್ಮೊಳಗೆ ತಾವೇ ಮಾಡಿಕೊಳ್ಳುತ್ತಿದ್ದರು. ಅವರು ಸದಾ ತಮ್ಮನ್ನು ಭಗವಂತನ ಸಮೀಪವರ್ತಿಯನ್ನಾಗಿ ನೋಡುತ್ತಿದ್ದರು. ಮತ್ತು ಭಗವಂತನ ಸಂಬಂಧಿಯಾಗಿ ತಾವು ಹೇಳುವದೆಲ್ಲವನ್ನೂ ತಮ್ಮ ಅನುಭವದಿಂದಲೇ ಹೇಳುತ್ತಿದ್ದರು. ಯಾವ ಪ್ರಕಾರವಾಗಿ ಶಿಶುವು ತಾಯಿಯ ತೊಡೆಯಮೇಲೆ ವಿಶ್ವಸ್ತವಾಗಿ ಮಲಗಿರುವುದೋ ಹಾಗೆಯೇ ಅವರು ಪರಮಾತ್ಮನ ತೊಡೆಯ ಮೇಲೆ ಇರುವುದಾಗಿ ಭಾವಿಸುತ್ತಿದ್ದರು. ಅವರು ತಾವೇ ಪರಮಾತ್ಮನ ಅವತಾರಿಯೆಂದು ಎಂದೂ ಹೇಳಲಿಲ್ಲ. ಆದರೆ ತಮ್ಮನ್ನು ಪರಮಾತ್ಮನ ಪುತ್ರನನ್ನಾಗಿ ತಿಳಿದಿದ್ದರು. ಪರಮಾತ್ಮನನ್ನು ತಂದೆಯ ರೂಪದಲ್ಲಿ ನೋಡುವುದೇ ಅವರ ಮುಖ್ಯ ಸಿದ್ಧಾಂತವಾಗಿತ್ತು.

'ಈಸಾ' ಅವರು ವಿನಯ, ಕ್ಷಮಾ, ದಯಾ, ತ್ಯಾಗ ಆದಿಗುಣಗಳ ಪ್ರಚಾರವನ್ನೇ ಹೆಚ್ಚಾಗಿ ಮಾಡಿದರು. ಅವರ ತತ್ವವು ಸರ್ವರಿಗೂ ಗ್ರಾಹ್ಯವಾಗಿದೆ. ಯಾವನಾದರೊಬ್ಬನು ನಿನ್ನ ಬಲಗಡೆ ಕಪಾಳಕ್ಕೆ ಹೊಡೆದರೆ, ಅವನಿಗೆ ನಿನ್ನ ಎಡಗಡೆಯ ಕಪಾಳವನ್ನು ಹೊಡೆಯಲಿಕ್ಕೆ ಕೊಡು. ಶತ್ರುಗಳೊಡನೆ ಪ್ರೇಮದಿಂದಿರು. ನಿನ್ನನ್ನು ತಿರಸ್ಕರಿಸುವವರಿಗೆ ಉಪಕಾರವನ್ನೇ ಮಾಡು. ಮತ್ತು ನಿನ್ನನ್ನು ವಂಚಿಸಿದವರಿಗೆ ಕಲ್ಯಾಣವಾಗಲೆಂದು ಪರಮಾತ್ಮನಲ್ಲಿ ಪ್ರಾರ್ಥನೆ ಮಾಡು. ಅನ್ಯರ ಅಪರಾಧವನ್ನು ಮನ್ನಿಸು. ಅಂದರೆ

ದೇವರು ನಿನ್ನ ಅಪರಾಧವನ್ನು ಕ್ಷಮಿಸುವನು. ಅನ್ಯರಿಂದ ಬೇಡುವುದಕ್ಕಿಂತಲೂ ತಾನು ಕೊಡುವುದು ಮೇಲು. ತಾನೇ ಮೇಲು ಎಂದು ತಿಳಿಯುವುದರಿಂದ ಅಧೋಗತಿಯಾಗುವುದು. ತಾನು ಕೀಳನೆಂದು ತಿಳಿದರೆ, ತನಗೆ ಉನ್ನತಿಯಾಗುತ್ತದೆ. ಯಾರಿಗೂ ಬಿರುನುಡಿಯಾಡಬೇಡ. ಕೆಡಕು ಮಾಡಿದವನಿಗೆ ಸೇಡು ತೀರಿಸಿಕೊಳ್ಳಬೇಡ. ಬಡ್ಡಿಯ ವ್ಯವಹಾರದಿಂದ ಧನಗಳಿಸುವುದು ನಿಂದನೀಯವಿದೆ. ನಿನ್ನನ್ನು ಪ್ರೀತಿಸುವವರನ್ನೇ ನೀನು ಪ್ರೀತಿಸುವುದರಲ್ಲಿ ಯಾವ ದೊಡ್ಡಸ್ತಿಕೆಯದೆ ? ಕೆಡಕು ವಿಚಾರ ಮಾಡಬೇಡ. ಹೊರಗಿನ ಸ್ವಚ್ಛತೆಗಿಂತಲೂ ಒಳಗಿನ ಸ್ವಚ್ಛತೆ ಹೆಚ್ಚು ಬೆಲೆಯುಳ್ಳದು. ಬಾಹ್ಯಾಡಂಬರಕ್ಕಾಗಿ ದೇವರನ್ನು ಭಜಿಸದಿರು. ದೇವರ ಪ್ರಾರ್ಥನೆಯನ್ನು ಖರೇ ಮನಸ್ಸಿನಿಂದ ಗುಪ್ತವಾಗಿ ಮಾಡು. ದಾನವನ್ನಾದರೂ ಗುಪ್ತವಾಗಿ ಮಾಡು. ದೊಡ್ಡವರಿಗೆ ನೋಡಿ ಬಹಳ ದಾನಮಾಡುವುದಕ್ಕಿಂತಲೂ ಬಡವರಿಗೆ ಬಹಳದಾನ ಮಾಡು ಈ ಪ್ರಕಾರವಾಗಿ 'ಈಸಾ' ಅವರು ಹೇಳುತ್ತಿದ್ದರು.

ಇವರ ಉಪದೇಶವು ಯಹೂದಿ ಜನರಿಗೆ ಸೇರಿಕೆ ಬರಲಿಲ್ಲ. ಅವರು ಈಸಾ, ಅವರಿಗೆ ಎಷ್ಟೋ ದುಷ್ಕೃತಿಗಳನ್ನೆಸಗಿದರು. ಕಡೆಗೆ ಫಿಲಸ್ತೀನದ ಗವರ್ನರನಿಗೆ ದೂರು ಹೇಳಿ ಈಸಾರನ್ನು ಶೂಲಿಗೇರಿಸಿದರು. ಶಿಲುಬೆಗೇರಿಸುವ ಸಮಯಕ್ಕೆ ಅವರು – "ಪ್ರಭೋ ! ಈ ಜನರನ್ನು ಕ್ಷಮಿಸು. ಯಾಕಂದರೆ ನಾನು ಏನು ಮಾಡುತ್ತಿರುವೆನೆಂಬುವದನ್ನು ಇವರು ತಿಳಿದಿಲ್ಲ- ಮತ್ತು ಎಲೋ ತಂದೆಯೇ ! ಈ ಆತ್ಮಾ, ನಿನಗೆ ಅರ್ಪಿತವಾಗಲಿ"ಎಂದು ಕೊನೆಯ ಪ್ರಾರ್ಥನೆಯನ್ನು ದೇವರಿಗೆ ಸಲ್ಲಿಸಿ ಪ್ರಾಣವನ್ನು ಬಿಟ್ಟರು.

ಮಹಾತ್ಮಾ 'ಈಸಾ' ಅವರ ಚರಿತ್ರವು ಆದರ್ಶವಾಗಿದೆ. ಅವರ ಮುಖಕಾಂತಿಯು ಮರಣ ಕಾಲದಲ್ಲಿಯೂ ಸಹ ಕುಂದಲಿಲ್ಲ. ಸದಾ ಹಸನ್ಮುಖಿಗಳಾಗಿಯೇ ಇರುತ್ತಿದ್ದರು. ತಮ್ಮ ವಾಣಿಯಿಂದ ಯಾರನ್ನೂ ನಿಂದಿಸಲಿಲ್ಲ. ಅವರು ಅನ್ಯರ ದುಃಖವನ್ನು ಸಹಿಸುತ್ತಿದ್ದಿಲ್ಲ. ಪರರಿಗೆ ಹಿತಬಯಸುವುದೇ ಅವರಿಗೆ ಏಕಮಾತ್ರ ವ್ರತವಾಗಿತ್ತು. ಅವರ ಜೀವನವು ತ್ಯಾಗಮಯವಾಗಿತ್ತು. ಬಡವರಿಗೆ ಅವರು ಬಂಧುವಾಗಿದ್ದರು. ಅವರು ಪರಮಾತ್ಮನ ಮುಂದೆ ಜಗತ್ತನ್ನು ತುಚ್ಛವಾಗಿ ತಿಳಿದಿದ್ದರು. "ದೇವರು ಆಕಾಶವನ್ನು

ದಾಟಿ ಎಷ್ಟೋ ಮೈಲು ದೂರದಲ್ಲಿಲ್ಲ. ಅವನು ಅತಿಸಮೀಪವಾಗಿರುವ ನಮ್ಮ ಹೃದಯದಲ್ಲಿಯೇ ಇರುವನೆ"ಂದು ಹೇಳುತ್ತಿದ್ದರು. ಈ ತತ್ವಕ್ಕೆ ಈಸಾ ಅವರ ಮರಣೋತ್ತರವೇ ಹೆಚ್ಚು ಮಹತ್ವವುಂಟಾಯಿತು. ಅವರನ್ನು ದೇವ ರೆಂದು ಜನರು ತಿಳಿಯಲಾರಂಭಿಸಿದರು. ಅವರ ಜನ್ಮ ದಿವಸದಿಂದ ಇಸ್ವಿ ಸನ್, ಪ್ರಾರಂಭಿಸಿದರು. ಅದು ೧೯೬೫ ಕ್ರಿ. ಶ. ವೆಂದು ಈಗಲೂ ಜಗತ್ತಿನ ಮೂಲೆ ಮೂಲೆಯಲ್ಲಿಯೂ ಸುಪ್ರಸಿದ್ಧವಾಗಿದೆ.

ಈ ಹಿಂದೆ ನಾವು ಹೇಳಿದ ಶಕ ಪುರುಷರ ಕಾಲವು ಮುಂದೆ ಹೇಳುತ್ತಿ ರುವ ಹಬ್ಬಗಳ ಇತಿಹಾಸಕ್ಕೆ ಸಂಬಂಧಪಟ್ಟಿರುವುದಾಗಿದೆಯಾದ್ದರಿಂದ ಪ್ರಾಸಂಗಿಕವಾಗಿ ಕೆಲವೇ ಶಕಪುರುಷರ ಚರಿತ್ರವನ್ನು ಸಂಗ್ರಹಿಸಿ ಇಲ್ಲಿ ಉಲ್ಲೇ ಖಿಸಿದ್ದಾಯಿತು. ಹೀಗೆಯೇ ಚತುರ್ಯುಗಗಳ ಸ್ವರೂಪ ವಿವರಣೆಯ ಅವ ಶ್ಯಕತೆ' ಹಬ್ಬಗಳ ಇತಿಹಾಸಕ್ಕೆ ಸಂಬಂಧಪಟ್ಟಿರುವುದಾಗಿದೆಯಾದ್ದರಿಂದ ಆ ವಿಷಯವನ್ನು ಕೆಳಗೆ ವಿವರಿಸಲಾಗಿದೆ.

## ಚತುರ್ಯುಗಗಳು

ಸೃಷ್ಟಿಯ ಆದಿಕಾಲದ ವಿವರಣೆಯ ಬಗೆಗೆ ಪಾಶ್ಚಾತ್ಯರಲ್ಲಿ ಹಾಗೂ ಭಾರತೀಯರಲ್ಲಿ ಬಹಳ ಭಿನ್ನಾಭಿಪ್ರಾಯವಿದೆ. ಪಾಶ್ಚಾತ್ಯ ವೈಜ್ಞಾನಿಕರು, ಆ ಕಾಲದಲ್ಲಿ ಜನರು ಅಸಭ್ಯರೂ, ಮೂರ್ಖರೂ, ಕ್ರೂರರೂ ಇದ್ದರೆಂದು ಹೇಳು ವದಲ್ಲದೇ ಆಗಿನ ಜನರು ಕೇವಲ ಸ್ವಾರ್ಥಿಗಳಾಗಿದ್ದು ಬರಬರುತ್ತಾ ವಿದ್ಯಾ ಬುದ್ಧಿಯನ್ನು ಸಂಪಾದಿಸಿ ನಾಗರಿಕರಾದರೆಂದು ಹೇಳುವುದುಂಟು. ಮತ್ತು ಅವರ ಶರೀರವು ವಿಕೃತವೂ, ದುರ್ಬಲವೂ ಇತ್ತು. ಕಾಲ ಕಳೆದಂತೆ ಅವರ ಶರೀ ರವು ಪರಿವರ್ತನೆ ಹೊಂದಿತು. ಈಗ ಸರ್ವ ದೃಷ್ಟಿಯಿಂದಲೂ ಮಾನವನು ಅಭಿವೃದ್ಧಿ ಪಥದಲ್ಲಿರುವನೆಂದು ಅವರ ಅಭಿಪ್ರಾಯವಿದೆ. ಇವರ ಹೇಳಿಕೆಗೆ ಭಾರತೀಯರು ಪೂರ್ಣ ವಿರುದ್ಧಾಭಿಪ್ರಾಯವುಳ್ಳವರಾಗಿರುವರು. ಪ್ರಥಮ ಯುಗದಲ್ಲಿ ಮಾನವನು ಶಾರೀರಿಕ ದೃಷ್ಟಿಯಿಂದ ಬಹಳ ಸಶಕ್ತನಾಗಿದ್ದನು. ಕಾಲ ಗತಿಸಿದಂತೆ ಅವನ ಜೀವನವು ಕೃತ್ರಿಮವಾಗಿ ಶರೀರವು ಹ್ರಾಸವಾಗ ತೊಡಗಿದೆಯೆಂದು ಹೇಳುವರು. ಪ್ರಾಚೀನ ಕಾಲವನ್ನು ಅಲ್ಲಗಳೆಯುವುದರಲ್ಲಿ ಪಾಶ್ಚಾತ್ಯರ ಸ್ವಾರ್ಥವಿರಲೇಬೇಕಲ್ಲದೇ ಸೂಕ್ಷ್ಮವಾಗಿ ವಿಚಾರಿಸಿ ನೋಡಿದರೆ

ನವೀನ ವಿಜ್ಞಾನಿಗಳ ಸಂಶೋಧನೆಯು ಭಾರತೀಯರಿಗೆ ಬಹಳ ಹಳೆಯದೆಂದು ಅನಿಸುತ್ತದೆ. ಈ ವಿಷಯದಲ್ಲಿ ಉದಾಹರಣೆಗಾಗಿ ಸಾಕಷ್ಟು ಆಧಾರಗಳು ಸಿಕ್ಕು ತ್ತವೆ. ವಿಮಾನವು ಹೊಸ ಸಂಶೋಧನೆಯೆಂದು ಈಗಿನವರು ನಂಬಿದರೂ ಅದು ರಾಮಾಯಣದಲ್ಲಿ ಪುಷ್ಪಕ ವಿಮಾನವೆಂಬ ಅಭಿಧಾನದಿಂದ ಮನೋಹರವಾಗಿ ಎಂದೋ ವರ್ಣಿಸಲ್ಪಟ್ಟಿದೆ. ಹೀಗೆಯೇ ಆ್ಯಟಂಬಾಂಬ ಎಂಬುದಕ್ಕೆ ಆಗ್ನೇ ಯಾಸ್ತ್ರವೆಂತಲೂ ಹೈಡ್ರೋಜನ್ ಬಾಂಬ ಎಂಬುದಕ್ಕೆ ವರುಣಾಸ್ತ್ರವೆಂತಲೂ ವಿವರಣೆ ಸಿಕ್ಕುತ್ತದೆ. ಇದೇ ಪ್ರಕಾರವಾಗಿ ಶರೀರ ಸಂಗೋಪನೆ ಮಾಡುವ ವೈದ್ಯ ಶಾಸ್ತ್ರದಲ್ಲಿಯೂ ಕೂಡ ಭಾರತೀಯರ ಕೈ ಮೇಲು ಇತ್ತು. ಬೌದ್ಧ ಕಾಲದೀಚಿನ ಕಾಲಕ್ಕೆ ಐತಿಹಾಸಿಕ ಕಾಲವೆನ್ನುವರು. ಆ ಐತಿಹಾಸಿಕ ವಿಷಯವನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಿದರೆ ಅದು ಪೂರ್ವ ಪರಂಪರೆ ಯನ್ನೇ ಅನುಸರಿಸುತ್ತ ಬಂದಿರುವುದೆಂದು ಗೊತ್ತಾಗುತ್ತದೆ. ಹಲವರು ಬೌದ್ಧ ಕಾಲದಲ್ಲಿಯೇ ಸರ್ವವೂ ಸುಧಾರಣೆಯ ಸ್ಥಿತಿಗೆ ಬಂದಿತೆಂದು ಹೇಳಿದರೂ ಆ ಸುಧಾರಣೆಯು ಪೂರ್ವ ಪರಂಪರಾಗತ ಸಾಹಿತ್ಯದ ಸಹಾಯದಿಂದ ಸಿದ್ಧ ವಾಯಿತೆಂದು ತಿಳಿದು ಬರುತ್ತದೆ. ಭಾರತವು ಯುಗಯುಗಾಂತರದಿಂದಲೂ ಸಕಲ ವಿದ್ಯೆಗಳಲ್ಲಿಯೂ ನೈಪುಣ್ಯವನ್ನು ಪಡೆಯುತ್ತ ಬಂದುದಾಗಿದೆ.

"ಏತದ್ದೇಶ ಪ್ರಸೂತಸ್ಯಸಕಾಶಾದಗ್ರಜನ್ಮನಃ ।
ಸ್ವಂಸ್ವಂಚರಿತ್ರಂ ಶಿಕ್ಷೇರನ್ ಪೃಥಿವ್ಯಾಂ ಸರ್ವಮಾನವಾಃ ॥

(ಮನುಸ್ಮೃತಿ)

ಈ ಶ್ಲೋಕದಿಂದ ಪಾಶ್ಚಾತ್ಯರೂ ಕೂಡಾ ಭಾರತಕ್ಕೆ ಬಂದು ವಿದ್ಯಾ ಬುದ್ಧಿಯನ್ನು ಸಂಪಾದಿಸಿಕೊಂಡು ತಮ್ಮ ತಮ್ಮ ದೇಶಗಳಿಗೆ ಮರಳಿ ಹೋಗು ತ್ತಿದ್ದರೆಂದು ತಿಳಿದುಬರುತ್ತದೆ. ತಕ್ಷಶಿಲೆಯ ವಿಶ್ವವಿದ್ಯಾಲಯದಲ್ಲಿ ವೇದ ವೇದಾಂಗಗಳ ವಿದ್ಯೆಯು ಕಲಿಸಲ್ಪಡುತ್ತಿತ್ತು. ಅಲ್ಲಿ ಸೈನ್ಸ (ರಸಾಯನ ಶಾಸ್ತ್ರ) ಆರ್ಟ್ಸ (ಕಲಾಕುಸಲತೆ) ಮುಂತಾದ ವಿದ್ಯೆಯು ಮುಂದುವರೆದಿತ್ತು. ಆಗ ಅಲ್ಲಿ ಅತ್ರಿಮಹರ್ಷಿಯು ಅಧ್ಯಾಪಕನಾಗಿದ್ದರು. ಮಗಧ ರಾಜನಾದ ಬಿಂಬಿಸಾರನಲ್ಲಿ ರಾಜವೈದ್ಯನಾದ ಜೀವಕನು ಮೇಲಿನ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕ ನಾಗಿದ್ದನು. ಈ ಜೀವಕನೇ ಒಂದು ಸಾರೆ ಭಗವಾನ್ ಬುದ್ಧನಿಗೆ (ಕ್ರಿ.ಶ.

ಪೂರ್ವ ೫೬೦) ಚಿಕಿತ್ಸೆ ಮಾಡಿರುವನು (ಪ್ರಾಚೀನ ಶಲ್ಯತಂತ್ರ) ಅದೇ ಕಾಲದಲ್ಲಿ ಒಂದು ಸಾರೆ ಚೀನದ ರಾಜಕುಮಾರನಿಗೆ ಭಯಂಕರವಾದ ನೇತ್ರ ರೋಗವಾಯಿತು. ಆ ದೇಶದಲ್ಲಿ ಡಾಕ್ಟರರಿಂದ ಅವನಿಗೆ ರೋಗವಾಸಿಯಾಗಲಿಲ್ಲ. ಆಗ ಆ ರಾಜಕುಮಾರನು ಭಾರತಕ್ಕೆ ತಕ್ಷಶಿಲೆಗೆ ಬಂದು ಅಲ್ಲಿಯ ವೈದ್ದರಿಂದ ತನ್ನ ನೇತ್ರ ರೋಗವನ್ನು ವಾಸಿಪಡಿಸಿಕೊಂಡನು (ಅಶ್ವ ಘೋಷಸೂತ್ರಾಲಂಕಾರ) (ಕ್ರಿ. ಪೂ. ೬೦)ರಲ್ಲಿ ಭೋಜರಾಜನಿಗೆ ಆಗಿನ ಭಾರತೀಯ ವೈದ್ಯರು ಶಸ್ತ್ರಕ್ರಿಯೆ ಮಾಡಿರುವುದು ಕೆಳಗಿನ ವಿಷಯದಿಂದ ಗೋಚರವಾಗುತ್ತದೆ.

"ತತಸ್ತಾವಪಿ ರಾಜಾನಂ ಮೋಹಚೂರ್ಣೇನ ಮೋಹಯಿತ್ವಾ ಶಿರಃ ಕಪಾಲಮಾದಾಯ ತತ್ ಕರೋಟಿಕಾಪುಟಿ ಸ್ಥಿತಂ ಶಫರಕುಲಂಗೃಹೀತ್ವಾ ಕಸ್ಮಿಂಚಿದ್ಭಾಜನೇ ನಿಕ್ಷಿಪ್ಯ ಸಂಧಾನಕರಣಮುದ್ರಯಾ ಕಪಾಲಂ ಯಥಾವದಾರತ್ಯ ಸಂಜೀವನ್ಯಾಚ ತಂಸಂಜೀವಯಿತ್ವಾ ತಸ್ಮೈತದ್ದರ್ಶಯತಾಂ" (ಪ್ರಾಚೀನಶಲ್ಯತಂತ್ರ.)

ರಾಜನು ಒಂದಾನೊಂದು ದಿವಸ ನೀರಿನಿಂದ ನಸ್ಯ ಕರ್ಮ ಮಾಡುತ್ತಿರುವಾಗ ಅರ್ಥಾತ್ ಮೂಗಿನಿಂದ ನೀರನ್ನು ಮೇಲಕ್ಕೆಳೆಯುವಾಗ್ಗೆ ಮೀನದ ಆಕೃತಿಯುಳ್ಳ ಸೂಕ್ಷ್ಮವಾದ ಎರಡು ಕ್ರಿಮಿಗಳು ನಾಸಾಮಾರ್ಗವಾಗಿ ಮಸ್ತಿಷ್ಕದಲ್ಲಿ ಪ್ರವೇಶ ಮಾಡಿದವು. ಅದರಿಂದ ರಾಜನಿಗೆ ಸಹಿಸಲಾರದಷ್ಟು ವ್ಯಥೆಯಾಗಹತ್ತಿತು. ಆಗ ರಾಜವೈದ್ಯರು ಸಮ್ಮೋಹನ ಚೂರ್ಣದಿಂದ (ಕ್ಲೋರೋಫಾರ್ಮ) ರಾಜನಿಗೆ ಮೂರ್ಛೆ ಬರುವಂತೆ ಮಾಡಿ ಶಿರಸ್ಸಿನ ಕಪಾಲವನ್ನು ಛೇರಿಸಿ ಒಳಗಿದ್ದ ಎರಡು ಕ್ರಿಮಿಗಳನ್ನು ತೆಗೆದು ಒಂದು ಪಾತ್ರೆಯಲ್ಲಿಟ್ಟರು. ಹಾಗೂ ಶಿರಸ್ಸಿನ ಕಪಾಲವನ್ನು ಪುನಃ ಜೋಡಿಸಿ ರಾಜನಿಗೆ ಪ್ರಜ್ಞೆ ಬರುವಂತೆ ಮಾಡಿ ಅವನಿಗೆ ಆ ಕ್ರಿಮಿಗಳನ್ನು ತೋರಿಸಿದರು. ಹೀಗೆಯೇ ಭಾರತವು ಮೊದಲಿನಿಂದಲೂ ಸಕಲ ವಿದ್ಯೆಗಳಲ್ಲಿ ಮುಂದುವರಿದ ರಾಷ್ಟ್ರವೆಂದು ಹರಪ್ಪಾ ಮೋಹನ್‌ಜೋದಾರ ಮೊದಲಾದ ಐತಿಹಾಸಿಕ ವಿಷಯಗಳಿಂದ ಸ್ಫುಟವಾಗಿ ತೋರುವುದು. ಇಂಗ್ಲೀಷರು ಸುಮಾರು ಕ್ರಿ. ಶ. ೧೫ನೆಯ ಶತಮಾನದ ಕೊನೆಗೆ ಭಾರತದಲ್ಲಿ ಕಾಲಿಟ್ಟು ಹದಿನಾರು ಹದಿನೇಳನೆಯ ಶತಮಾನಗಳಲ್ಲಿ ಇಲ್ಲಿ ಹೆಚ್ಚು ಪ್ರಸಾರ ಹೊಂದಿದರು. ತಮ್ಮ ಆಳಿಕೆಯ ಅವಧಿಯಲ್ಲಿ ಹಿಂದೂ

ಸಂಸ್ಕೃತಿಯನ್ನು ಪೂರ್ಣ ಮರೆಯಿಸಿದರು ಹಾಗೂ ಸೃಷ್ಟಿಯು ಆರು ಏಳು ಸಾವಿರ ವರುಷಗಳಿಂದೀಚಿನದೆಂತಲೂ, ಮಾನವನು ವಿಶೇಷತಃ ತನ್ನ ಕಾಲ ದಲ್ಲಿಯೇ ಮಾನವ ಸ್ವರೂಪಕ್ಕೆ ಬಂದನೆಂತಲೂ ಇತಿಹಾಸದಲ್ಲಿ ಪ್ರಸಿದ್ಧಿ ಸಿದರು. ಇಂಗ್ಲೀಷರ ನೆರಳಿನಲ್ಲಿ ವಾಸ ಮಾಡಿದ ಹಲವು ಭಾರತೀಯ ಇತಿಹಾಸಕಾರರು ಅವರ ಮನವೊಲಿಸಲು ಅವರಂತೆ ತಲೆ ಅಲ್ಲಾಡಿಸಿರುವರು. ಆದರೆ ಪ್ರಾಚೀನ ಭಾರತೀಯರು ವೇದ, ಆಗಮ, ಉಪನಿಷತ್, ಪುರಾಣ ಇತ್ಯಾದಿ ಪುರಾತನ ಗ್ರಂಥಗಳ ಆಧಾರದಿಂದಲೂ, ಪರಾಶರ ಸಿದ್ಧಾಂತ, ಸೂರ್ಯ ಸಿದ್ಧಾಂತ, ವಸಿಷ್ಠ ಸಿದ್ಧಾಂತ, ರೋಮಕ ಸಿದ್ಧಾಂತ ಮೊದಲಾದ ಜ್ಯೋತಿಷ ಗ್ರಂಥಗಳ ಆಧಾರದಿಂದಲೂ ಸೃಷ್ಟಿಗೆ ಪ್ರಾಚೀನತೆಯನ್ನು ಸಿದ್ಧ ಪಡಿಸಿರುವರು. ಮತ್ತು ಕೃತ, ತ್ರೇತಾ, ದ್ವಾಪರ, ಕಲಿ ಈ ನಾಲ್ಕು ಯುಗ ಗಳನ್ನು ಸೃಷ್ಟಿ ಕಾಲದ ಭೇದಗಳನ್ನಾಗಿ ವಿಶದಪಡಿಸಿದ್ದಾರೆ.

## ಸತ್ಯ (ಕೃತ) ಯುಗ

ಶಾಸ್ತ್ರಕಾರರು ಮೊದಲನೆಯ ಯುಗಕ್ಕೆ ಸತ್ಯಯುಗವೆನ್ನುವರು. ಈ ಯುಗವು ಸತ್ವಗುಣಪ್ರಧಾನವಾದುದರಿಂದ ಮಾನವನು ಶಮ, ದಮ, ತ್ಯಾಗ, ತಪ, ಏಕಾಗ್ರತೆ, ಸತ್ಯ, ಅಹಿಂಸೆ ಇತ್ಯಾದಿ ಸತ್ವಗುಣ ಭೂಯಿಷ್ಠನಾಗಿದ್ದನು. ಆ ಕಾರಣದಿಂದ ಅವನ ಶರೀರವು ಆ ಕಾಲದಲ್ಲಿ ಪರಿಪುಷ್ಟವಾಗಿತ್ತು. ಆದ್ದರಿಂದ ಆಗಿನ ಜನರಿಗೆ ಶೀತೋಷ್ಣಗಳ ಬಾಧೆಯು ತಿಲಮಾತ್ರವೂ ಇದ್ದಿಲ್ಲ. ಅವರಿಗೆ ಮನೆಗಳ ಅವಶ್ಯಕತೆಯೂ ಇರಲಿಲ್ಲ. ಗಿಡಗಳ ನೆರಳಿನಲ್ಲಿಯೂ, ಗಿರಿಗುಹೆ ಗಳಲ್ಲಿಯೂ ವಾಸಿಸುತ್ತಿದ್ದರು. ಅವರು ಪಶುಗಳಂತೆ ಅಜ್ಞರೇನಲ್ಲ. ಪರಮಜ್ಞಾನಿ ಗಳಾಗಿದ್ದರು. ಸದಾ ಈಶ್ವರ ಧ್ಯಾನದಲ್ಲಿ ಕಾಲ ಕಳೆಯುವವರಾಗಿದ್ದರು. ಸತ್ಯಯುಗದ ಜನರ ಮನಸ್ಸಿನಲ್ಲಿ ಎಳ್ಳಿನಿತು ಸಂಶಯ, ಭಯ ಇವುಗಳಿಗೆ ಆಸ್ಪದವಿರಲಿಲ್ಲ. ಆತಏವ ಅವರಿಗೆ ಸಂಕಲ್ಪ ಮಾತ್ರಕ್ಕೆ ಸರ್ವವೂ ಲಭಿಸು ತ್ತಿತ್ತು. ಆಗಿನ ಕಾಲದಲ್ಲಿ ಶಹರ, ಹಳ್ಳಿಗಳಿದ್ದಿಲ್ಲ. ವೈರಿಗಳ, ಕಳ್ಳಕಾಕರ ಸುಳಿವೇ ಇದ್ದಿಲ್ಲ. ಈತಿ ಬಾಧೆಯು ಮಾತಂತೂ ದೂರು ಉಳಿಯಿತು. ಅವರಿಗೆ ಸಮಾಜ ಕಟ್ಟುವ ಆಶೆಯಾದರೂ ಇದ್ದಿಲ್ಲ. ಆಗ ಸದಾ ಸುಭಿಕ್ಷೆ ಇರುವ ಮೂಲಕ ಆಹಾರಾದಿ ಸಂಗ್ರಹದ ಚಿಂತೆಯೂ ಇದ್ದಿಲ್ಲ. ಇಷ್ಟೆಲ್ಲ ಸೌಕರ್ಯ

ವಿರುವುದರಿಂದ ಆಗಿನ ಜನರು ಸದಾ ನಿಸ್ಪೃಹರಾಗಿರುತ್ತಿದ್ದರು. ವರ್ಣಾಶ್ರಮಗಳು ಮೊದಲಿನಿಂದ ಗ್ರಂಥದಲ್ಲಿ ಉಕ್ತವಾಗಿವೆಯಾದರೂ ಸತ್ಯಯುಗದಲ್ಲಿ ಮಾತ್ರ ಒಂದೇ ಆಶ್ರಮವಿತ್ತೆಂದು ಹೇಳುವದುಂಟು. ತಪಸ್ಸಿನಲ್ಲಿ ಅವರಿಗೆ ಸ್ವಾಭಾವಿಕವಾಗಿ ಅಭಿರುಚಿಯಿತ್ತು. ರಕ್ಷಾ, ವಾಣಿಜ್ಯಗಳ ಆವಶ್ಯಕತೆಯೂ ಅವರಿಗಿದ್ದಿಲ್ಲ. ಅವರು ಶಾಂತರೂ, ವೈರಹೀನರೂ, ಸರ್ವಸುಹೃದರೂ, ಸಮದರ್ಶಿಗಳೂ ಆಗಿದ್ದರು. ಅವರಿಗೆ ಕರ್ಮಾಚರಣೆಯಲ್ಲಿ ಆಸಕ್ತಿಯೂ ಇದ್ದಿಲ್ಲ. ಜ್ಞಾನಕಾಂಡವೇ ವ್ಯವಹಾರದಲ್ಲಿತ್ತು. ಯಜ್ಞಯಾಗಾದಿಗಳ ಪ್ರಯೋಜನವೂ ಅವರಿಗಿರಲಿಲ್ಲ. ಈಶ್ವರಧ್ಯಾನ, ತಪಸ್ಸು ಇವುಗಳೇ ಸಾಧನವಾಗಿದ್ದವು.

## ತ್ರೇತಾಯುಗ

ಸತ್ಯಯುಗದ ಅಂತ್ಯದಲ್ಲಿಯೇ ಜನರು ಯಜ್ಞವನ್ನು ಪ್ರಾರಂಭಿಸಿದರು. ದಾನ ಮತ್ತು ಯಜ್ಞಗಳಿಂದ ಮನುಷ್ಯನಿಗೆ ಸ್ವರ್ಗ ಪ್ರಾಪ್ತಿಯಾಗುವದೆಂಬ ಭಾವನೆಯುಂಟಾಗಹತ್ತಿತು. ಮಾನವನು ತನ್ನ ಸಂಕಲ್ಪಸಿದ್ಧಿಗಾಗಿ ಯಜ್ಞ ಮಾಡಬೇಕೆಂಬ ತಿಳುವಳಿಕೆಗೆ ಬರಹತ್ತಿದನು. ಯಜ್ಞದಿಂದ ದೇವನು ಪ್ರಸನ್ನನಾಗಿ ಯಜಮಾನನ ಮನೋಬಯಕೆಯನ್ನು ಈಡೇರಿಸುವನೆಂದು ಹೇಳಹತ್ತಿದರು. ಯಜ್ಞಕ್ಕಾಗಿಯೇ ಸರ್ವಸಂಗ್ರಹ ಮಾಡಬೇಕಾಯಿತು. ಸಂಗ್ರಹವು ತಮ್ಮ ಭೋಗಕ್ಕಾಗಿ ಇರುತ್ತಿದ್ದಿಲ್ಲ. ಅದು ಪವಿತ್ರವಾಗಿರುತ್ತಿತ್ತು. ಜನರು ಸದಾ ಪರಿಶುದ್ಧ ಮನಸ್ಸಿನಿಂದಿರುತ್ತಿದ್ದರು. ಯಜ್ಞ ಮಾಡುವ ಋಷಿ ಗಣವು, ಸತ್ಯಯುಗದ ಜನರಂತೆಯೇ ವಾಸನಾಹೀನರಾಗಿಯೂ, ನಿಸ್ಪೃಹರಾಗಿಯೂ, ನಿರ್ಲೋಭಿಗಳಾಗಿಯೂ ಇರುತ್ತಿದ್ದರು. ಆದ್ದರಿಂದ ತಪಸ್ಸು ಶೀಘ್ರ ಸಫಲವಾಗುತ್ತಿತ್ತು. ಬರಬರುತ್ತ ಜನಸಂಖ್ಯೆಯು ಹೆಚ್ಚಾಗತೊಡಗಿತು. ಯಜ್ಞದಿಂದ ಸಕಲ ಸುಖವು ಸಿಗುವುದೆಂಬ ಭಾವನೆಯು ಸರ್ವರಲ್ಲಿಯೂ ಬೇರೂರಿ ಎಲ್ಲರೂ ಯಜ್ಞ ಮಾಡಲಾರಂಭಿಸಿದರು. ಆಗ ಯಾರು ಹೆಚ್ಚು ಹೆಚ್ಚಾಗಿ ಯಜ್ಞ ಮಾಡಿರುವರೋ ಅವರು ಈಗಿನ ದೊಡ್ಡ ಧನಿಕರಂತೆ ಹೆಚ್ಚು ಗೌರವಶಾಲಿಗಳಾಗಿಯೂ, ಜನರ ಆದರಾತಿಥ್ಯಕ್ಕೆ ಆಸ್ಪದರಾಗಿಯೂ ಇರುತ್ತಿದ್ದರು. ತ್ರೇತಾಯುಗದ ಜನರು ಸತ್ಯಯುಗದ ಜನರಂತೆ ಇರದೇ ತಕ್ಕಮಟ್ಟಿಗೆ ವ್ಯವಹಾರಾದಿಗಳಿಗೆ ಅಂಟಿಕೊಂಡವರಾದರು. ದಿನಗಳು ಉರುಳಿದಂತೆ ಪ್ರಕೃತಿ

ಯಲ್ಲಿ ಬದಲಾವಣೆಯಾಗಿ ಶೀತೋಷ್ಣಗಳ ಅಸಹನೆಯಾಗತೊಡಗಿತು. ತಪಸ್ಸು ಆಚರಿಸುವದು ಕೆಲಮಟ್ಟಿಗೆ ಕಡಿಮೆಯಾಯಿತು. ಅರಣ್ಯವಾಸವು ಜನರಿಗೆ ಸೇರದಾಯಿತು. ಈ ಪೃಥ್ವಿಗೆ ಆಗ ಮೊಟ್ಟಮೊದಲು ರಾಜನಾದ ಪೃಥುರಾಜನು ಜನರ ವಾಸಕ್ಕಾಗಿ ಅಲ್ಲಲ್ಲಿ ನಗರ ಗ್ರಾಮಗಳನ್ನು ರಚಿಸಿ ಕೊಟ್ಟನು. ಜನರು ಭೂಮಿಯ ತಗ್ಗು ದಿನ್ನೆಗಳನ್ನು ಸಮಮಾಡಿ ಕೃಷಿಕರ್ಮ ವನ್ನು ಪ್ರಾರಂಭಿಸಿದರು. ಭೂಮಿಯಲ್ಲಿ ಬಂದ ಉತ್ಪನ್ನದಲ್ಲಿ ಆರನೇ ಭಾಗವನ್ನು ರಾಜನಿಗೆ ಸಲ್ಲಿಸುವ ಕರಾರು ಮಾಡಿದರು. ಜನರಿಂದ ಬಂದ ತೆರಿಗೆಯನ್ನು ರಾಜನು ತನ್ನ ಸೈನ್ಯ ವೆಚ್ಚಕ್ಕಾಗಿ ಉಪಯೋಗಿಸುತ್ತಿದ್ದನು. ವರ್ಣಾಶ್ರಮ ಧರ್ಮಗಳ ಉತ್ಪತ್ತಿಗಾಗಿ ವ್ಯವಹಾರ ಉದ್ಯೋಗಗಳು ಅಲ್ಲಲ್ಲಿ ತಲೆದೋರತೊಡಗಿದವು. ಆದರೂ ಮಾನವನಲ್ಲಿ ಶಾರೀರಿಕ ಭೋಗೇಚ್ಛಾ ಇದ್ದಿಲ್ಲ. ಜನರು ಕಾಮ-ಕ್ರೋಧಾದಿಗಳಿಗೆ ಒಳಗಾಗದೇ ವೇದಗಳಲ್ಲಿ ನಂಬಿಗೆ ಯುಳ್ಳವರಾಗಿ ಆಧ್ಯಾತ್ಮಿಕ ಚಿಂತನೆಯಲ್ಲಿಯೇ ಹೆಚ್ಚಾಗಿ ಕಾಲ ಕಳೆ ಯುತ್ತಿದ್ದರು.

## ದ್ವಾಪರಯುಗ

ತ್ರೇತಾಯುಗವು ಮುಗಿಯುತ್ತ ಬಂದಾಗ್ಗೆ ಮಾನವನು ಎಲ್ಲ ರೀತಿ ಯಿಂದಲೂ ದುರ್ಬಲನಾಗಹತ್ತಿದ್ದನು. ಅದೇ ಸಮಯದಲ್ಲಿಯೇ ದಶರಥ ಮಹಾರಾಜನು (ರಾಮನ ತಂದೆ) ಪುತ್ರೇಷ್ಟಿ ಯಜ್ಞವನ್ನು ಮಾಡಿಸಿದನು. ಯಜ್ಞಕ್ಕಾಗಿ 'ಶೃಂಗೀ' ಎಂಬ ಋಷಿಯನ್ನು ಕರೆಯಿಸಬೇಕಾಯಿತು. ಯಜ್ಞದ ಅಂತ್ಯದಲ್ಲಿ ಅಗ್ನಿದೇವನು ಪ್ರತ್ಯಕ್ಷ ಆಗಿ ಹವಿಸ್ಸನ್ನು ಕೊಟ್ಟನು. ಅಷ್ಟರೊಳ ಗಾಗಿಯೇ ಯಜ್ಞಕ್ಕಾಗಿ ದೇವತೆಗಳ ಆಗಮನವು ಕಡಿಮೆಯಾಗಿತ್ತು. ದ್ವಾಪರ ಯುಗವು ಪ್ರಾರಂಭವಾದಾಗ ತ್ರೇತಾಯುಗದ ಸ್ವರೂಪವು ಪೂರ್ಣ ಬದ ಲಾಗಿತ್ತು. ದ್ವಾಪರವೆಂದರೆ- ಸಂದೇಹವೆಂದು ಅರ್ಥವಾಗುತ್ತದೆ. ಹೆಸರಿಗೆ ತಕ್ಕಂತೆ ಆಗ ಜನರ ಮನಸ್ಸಿನಲ್ಲಿ ಅವಿಶ್ವಾಸದ ಅಂಕುರಾರ್ಪಣವಾಗಿ ತಮೋ ಗುಣದ ಗಾಳಿಯು ಸೋಂಕತೊಡಗಿತು. ಇದೇ ಯುಗದಲ್ಲಿಯೇ ಧರ್ಮ, ಭೀಮಾದಿ ಪಾಂಡವರು ರಾಜ್ಯಭ್ರಷ್ಟರಾಗಿ ಕೊನೆಗೊಮ್ಮೆ ರಾಜ್ಯಾರೋಹಣ ಮಾಡಿ ಕೀರ್ತಿಶಾಲಿಗಳಾದರು. ಈ ಯುಗದಲ್ಲಿ ಮಾನವನು ವಿಷಯವಾಸನೆಗೆ

ಸಮೀಪಿಸಿದನು. ಆದರಿಂದ ಶಾರೀರಿಕ ಸಂಪತ್ತು ಉಳಿಯಲಿಲ್ಲ. ಕಷ್ಟಸಹಿಷ್ಣುತೆ ಕಡಿಮೆಯಾಗಿ ತ್ಯಾಗಬುದ್ಧಿಯೂ ಕಡಿಮೆಯಾಯಿತು. ಜನರು ಭೋಗೇಚ್ಛುಗಳಾದರು. ಅದೇ ಗುರಿಯನ್ನಿಟ್ಟುಕೊಂಡು ಅದಕ್ಕೆ ಉಪಯೋಗಿಸಲು ಯೋಗ್ಯವಾದ ವಸ್ತುಸಂಗ್ರಹ ಮಾಡತೊಡಗಿದರು. ಆದರೂ ಪಾಪಭೀರುಗಳೂ, ವೇದದಲ್ಲಿ ಶ್ರದ್ಧೆಯುಳ್ಳವರೂ, ಶಿವಧ್ಯಾನತತ್ಪರರೂ ಆಗಿದ್ದರು. ಅನ್ಯರಿಗೆ ಯಾವ ತೊಂದರೆಯನ್ನೂ ಕೊಡದೇ ಸಂಗ್ರಹ ಮಾಡಿಕೊಳ್ಳುತ್ತಿದ್ದರು. ಆದ್ದರಿಂದ ಅದು ಪವಿತ್ರವಾಗಿತ್ತು. ಅನ್ಯರ ಸ್ವತ್ತನ್ನು ಕಣ್ಣೆತ್ತಿ ನೋಡುತ್ತಿದ್ದಿಲ್ಲ. ಪರನಾರೀ ಸಹೋದರರೂ, ಪಾಪಭೀರುಗಳೂ ಆಗಿದ್ದರು. ಆಗಿನ ಜನರು ಯಾವಾಗಲೂ ನ್ಯಾಯಪೂರ್ಣವಾದುದನ್ನೆ ಸಂಪಾದಿಸುವ ತತ್ವಕ್ಕೆ ಹೊಂದಿಕೊಂಡು ಹೋಗುತ್ತಿದ್ದರು. ದ್ವಾಪರದ ಮಧ್ಯಯುಗದಲ್ಲಿಯ ಮಾನವರು ಭೋಗೇಚ್ಛಾತುರರಾಗಿ ಕಠಿಣ ನಿಯಮವುಳ್ಳ ಯಜ್ಞದಲ್ಲಿ ಸಂಶಯಗ್ರಸ್ತ ಮನಸುಳ್ಳವರಾದರು. ಶರೀರವಾದರೂ ಕಷ್ಟನಷ್ಟಗಳನ್ನು ಸಹಿಸುವಷ್ಟು ಸಶಕ್ತವಾಗಿ ಉಳಿಯಲಿಲ್ಲ. ಆದರೂ ಹಿಂದಿನವರು ಹಾಕಿಕೊಟ್ಟ ಹಿಂದೂ ಸಂಸ್ಕೃತಿಯು ಬಲವಂತವಾದುದರಿಂದ ಸತ್ಯ, ಧರ್ಮ, ಇವುಗಳನ್ನು ಬಿಡಲಿಲ್ಲ. ಈಶ್ವರನಲ್ಲಿಯೂ, ವೇದದಲ್ಲಿಯೂ, ಆಸ್ಥೆಯುಳ್ಳವರಾಗಿ, ತಾವು ಗಳಿಸುವುದೆಲ್ಲವೂ ದೇವರಿಗಾಗಿ ಎಂದು ಭಾವಿಸುತ್ತಿದ್ದರು. ನಿತ್ಯ ದೇವರ ಪೂಜೆಯನ್ನು ಭಕ್ತಿಯಿಂದ ನೆರವೇರಿಸಿ ಅವನಿಗೆ ನೈವೇದ್ಯ ಮಾಡಿ ಅವನ ಪ್ರಸಾದವೆಂದು ಸ್ವೀಕರಿಸುತ್ತಿದ್ದರು. ಅಷ್ಟರಲ್ಲಿ ಜನರಿಗೆ ಇಹಲೋಕ, ಪರಲೋಕಗಳೆಂಬ ಭಾವನೆಯುಂಟಾಗಿತ್ತು. ದ್ವಾಪರಯುಗದ ಅಂತ್ಯದ ವರೆಗೂ ಜನರ ಮನಸ್ಸಿನಲ್ಲಿ ಕಪಟ, ಡಂಭ, ದುರಾಚಾರ, ದುಷ್ಕರ್ಮಗಳ ಸುಳಿದಾಟವಿದ್ದಿಲ್ಲ. ಆದ್ದರಿಂದಲೇ ಅವರಿಗೆ ವಿಶುದ್ಧವಾದ ಶ್ರದ್ಧೆಯಿಂದ ಭಾವಪೂರ್ಣತೆಯಾಗುತ್ತಿತ್ತು.

ಆಗಿನ ಜನರು ವೇದಗಳಲ್ಲಿಯೂ, ತಂತ್ರಗಳಲ್ಲಿಯೂ, ಉಕ್ತವಾದ ಪರಮತತ್ವದ ಪ್ರಾಪ್ತಿಗಾಗಿ ವಿಧಾನೋಕ್ತವಾಗಿ ಬ್ರಹ್ಮಾಂಡ ನಾಯಕನಾದ ಶಿವನನ್ನು ಆರಾಧಿಸುತ್ತ, ಸದ್ಭಾವನೆಯುಳ್ಳವರಾಗಿ ಸದಾ ಅವನ ಚಿಂತನೆಯಲ್ಲಿರುತ್ತಿದ್ದರು. ದ್ವಾಪರಯುಗದಲ್ಲಿ ರೇಣುಕಾದಿ ಪಂಚಾಚಾರ್ಯರು

ಲಿಂಗದಿಂದ ಉದ್ಭವಿಸಿ ವೀರಶೈವ ಮತವನ್ನು ಸ್ಥಾಪಿಸಿದರು. ಧರ್ಮ, ಭೀಮಾದಿ ಪಂಚಪಾಂಡವರು ಧರ್ಮಸ್ಥಾಪನೆಗಾಗಿ ತಮ್ಮ ವೈರಿಗಳಾದ ಕೌರವ ರೊಡನೆ ಹೋರಾಡಿ ಕೀರ್ತಿಶಾಲಿಗಳಾದರು.

## ಕಲಿಯುಗ

ದ್ವಾಪರಯುಗವು ಕೊನೆಗೊಳ್ಳುವಷ್ಟರಲ್ಲಿಯೇ ಸತ್ವಗುಣವು ಸಂಪೂರ್ಣ ಹ್ರಾಸವಾಯಿತು. ರಜೋಗುಣವು ತಮೋಗುಣದೊಡನೆ ಕೂಡಿಕೊಂಡು ಕಲಿಯುಗಕ್ಕನುಗುಣವಾಗಿ ಕಾರ್ಯವನ್ನು ಮಾಡಲಾರಂಭಿಸಿತು. ದ್ವಾಪರದ ಅಂತ್ಯದಲ್ಲಿ ವಂಚನೆ, ಅಸತ್ಯ ಇತ್ಯಾದ್ಯನಂತ ದುರ್ಗುಣಗಳು ಮನುಷ್ಯನನ್ನು ಸ್ವಾಧೀನಪಡಿಸಿಕೊಂಡವು. ಇಂಥ ಇನ್ನೂ ಅನೇಕ ಹೀನ ಗುಣಗಳು ಮಾನವ ನಲ್ಲಿ ಬೆಳೆದುದರಿಂದ ಯಜ್ಞವು ನಿಂತುಹೋಯಿತು. ಸತ್ಕರ್ಮಗಳಿಂದ ಮಾನವನು ದೂರ ಉಳಿದುದರಿಂದ ದೇವರ ಒಲಿಮೆಯು ಕಡಿಮೆಯಾಯಿತು. ಪಾಪಕರ್ಮಗಳಿಂದ ಮಾನವನ ಮನಸ್ಸು ಹೀನ ವೀರ್ಯವುಳ್ಳುದಾಯಿತು. ಕಳೆದ ಯುಗಗಳಲ್ಲಿ ಮಾನವನು ಪಂಚಾಗ್ನಿ ಮಧ್ಯದಲ್ಲಿ ತಪಸ್ಸನ್ನಾಚರಿಸಿ ಶಿವಸಾಕ್ಷಾತ್ಕಾರ ಪಡೆಯುತ್ತಿದ್ದನು. ಈ ಕಲಿಯುಗದಲ್ಲಿ ಭಕ್ತಿಯಿಂದ ಮೂರು ನಿಮಿಷ ಧ್ಯಾನಮಾತ್ರದಿಂದ ಶಿವನು ಒಲೆಯುವನೆಂದು ನಿಜಗುಣ ಶಿವಯೋಗಿ ಗಳು ಹೇಳಿದ್ದಾರೆ. ಅದರ ಅರ್ಥ ಇಷ್ಟೇ ಇದೆ. ಮೂರು ನಿಮಿಷ ಮನುಷ್ಯನು ತನ್ನ ಮನಸ್ಸನ್ನು ಸ್ವಾಧೀನದಲ್ಲಿ ಇಟ್ಟುಕೊಳ್ಳುವಷ್ಟು ಈಗ ಸಮರ್ಥ ನಾಗಿರುವದಿಲ್ಲ.

ಕಲಿಯುಗವೆಂದರೆ– ಕಲಹದ ಯುಗ. ಅರ್ಥಾತ್ ಜಗಳದ ಯುಗ. ಈ ಯುಗದಲ್ಲಿ ಮಾನವನು ತನ್ನ ಮನೋಬಲ, ಬುದ್ಧಿಬಲ, ಶರೀರಬಲ, ಇವುಗಳನ್ನು ಕಳೆದುಕೊಂಡಿರುವನು. ಅದರಿಂದ ಅವನಿಗೆ ವಿಷಯೇಚ್ಛೆಯು ಅಭಿವೃದ್ಧಿ ಹೊಂದುತ್ತಲಿದೆ. ಈ ಕಾಲದಲ್ಲಿ ಸದಾಚಾರದ ಸತ್ಕರ್ಮಗಳ ಕೊಲೆ ಯಾಗಿದೆ. ಭಕ್ತಿ-ಜ್ಞಾನ-ವೈರಾಗ್ಯಗಳು ಮಣ್ಣುಗೂಡಿವೆ. ಮಾನವನು ವಿಚಾರ ಶೂನ್ಯವಾಗಿ ಹುಚ್ಚು ಹಿಡಿದವನಂತೆ ಏನೇನೋ ಮಾತಾಡುತ್ತಾನೆ. ತನಗೆ ತಿಳಿದ ಕೃತಿಯನ್ನೆಸಗುತ್ತಾನೆ. ದೇವರ ನಾಮಸ್ಮರಣೆಯೆಂದರೆ ದೂರ ಸರಿದು ಭೂತಗ್ರಸ್ತನಂತೆ ಬಡಬಡಿಸುತ್ತಾನೆ. ಆದರೆ ಕೇವಲ ವಿಷಯಭೋಗವೇ ತನ್ನ

ಘನಕರ್ತವ್ಯವೆಂದು ಬಿಗುವಾಗಿ ನಂಬಿದ್ದಾನೆ. ಆ ವಿಷಯೋಪಭೋಗ ವಾದರೋ, ಅತ್ಯಂತ ದುರ್ಲಭವೂ, ಬಹುಮೂಲ್ಯವುಳ್ಳುದೂ ಆಗುತ್ತ ಹೊರಟಿದೆ. ಮಾನವನು ಅದನ್ನು ಹಿಡಿಯಲು ಮುಂದೆ ಮುಂದೆ ಹೋದಹಾಗೆ ಅದು ಬಿಸಿಲುಗುದುರೆಯಂತೆ ದೂರ ದೂರ ಸರಿಯುತ್ತಲಿದೆ. ಆದರೂ ಮಾನವನು ಅದನ್ನು ಬಿಡಬಾರದೆಂದು ಭ್ರಮಿಸಿ ಬೇಸರಪಡದೇ ಬಾಯ್ದೆರೆದು ಬೆನ್ನುಹತ್ತಿ ತಿರುಗುತ್ತಿರುವನು. ಈಗ ಉತ್ತಮ ಬುದ್ಧಿಶಾಲಿಗಳೆನ್ನುವವರೂ ಕೂಡಾ ಈ ವಿಶ್ವದಲ್ಲಿ ಸಂಸಾರಸುಖದ ಶೋಧನೆಗಾಗಿ ಹಗಲು ಇರುಳೆನ್ನದೇ ಕಣ್ಮುಚ್ಚಿ ವಿಚಾರಮಗ್ನರಾಗಿರುವರು. ಐಹಿಕ ಸುಖಕ್ಕಾಗಿ ಆಮರಣಾಂತ ಎಂಥ ಹೀನ ಕೃತಿಯನ್ನಾದರೂ ಮಾಡಲು ಹಿಂಜರಿಯುವುದಿಲ್ಲ. ಇನ್ನು ಹಲವರು ತಾವು ಮಹಾತ್ಮರೆಂತಲೂ, ಸಾಧು ಸ್ವಾಮಿಗಳೆಂತಲೂ, ತಾವೇ ಸಾಕ್ಷಾತ್ ದೇವರ ಅವತಾರಿಗಳೆಂತಲೂ, ಮಹಾಗುರುಗಳೆಂತಲೂ, ಹೇಳಿ ಕೊಳ್ಳುತ್ತ ನಾಟಕದ ಪಾತ್ರಧಾರಿಯಂತೆ ನಟಿಸುವರು. ಆದರೆ ಅವರನ್ನು ವಿಷಯವೆಂಬ ಒರೆಗಲ್ಲಿಗೆ ನಿಲ್ಲಿಸಿದಾಗ ವಸ್ತುಸ್ಥಿತಿ ಹೊರಬೀಳದಿರಲಾರದು. ಈ ಮಾತಿನಿಂದ ಈಗ ವಿಭೂತಿ ಪುರುಷರು ಇಲ್ಲವೆಂತೇನಲ್ಲ. ಕೈಬೆರಳಿನಿಂದ ಎಣಿಸುವಷ್ಟು ಮಾತ್ರ ಸಿಕ್ಕಬಹುದು. ಕೆಲವು ಮಹಾತ್ಮರು ಈ ಕಲಿ ಕಾಲದ ಕಪಿಚೇಷ್ಟೆಗೆ ಬೇಸತ್ತು ಜನರ ಕಣ್ಣಿಗೆ ಕಾಣಿಸಿಕೊಳ್ಳದಂತೆ ನಿರಾಡಂಬರರ ವೃತ್ತಿ ಯಿಂದಿರುವರು. ಇನ್ನು ಹಲವರು ವಿಷಮ ಸಂಸಾರ ಸಾಗರದ ಕಲ್ಲೋಲ ಕೋಲಾಹಲದ ಆಘಾತಕ್ಕೆ ಸಿಕ್ಕದೇ ಗಿರಿಗುಹೆಗಳಲ್ಲಿ ತಾವೇ ತಾವಾಗಿ ವಾಸಿ ಸುತ್ತಿರುವರು. ಈ ಕಲಿಯುಗದಲ್ಲಿ ಎತ್ತ ನೋಡಿದತ್ತ ಅರಿಷಡ್ವರ್ಗವೆಂಬ ಪೆಡಂಭೂತ ಬಡಿದ ಮಾನವರ ಗದ್ದಲವೇ ಗದ್ದಲ. ಈಗಿನ ಕಾಲದಲ್ಲಿ ಮನ ಬಂದಂತೆ ಮಿತಿಮೀರಿ ತಿರಗುವ ಕಾಕುಪೋಕರ ಜನಜಂಗುಳಿಯ ಭಾರದಿಂದ ಭೂದೇವಿಯು ಬಡಕಾಗಿ ಬಾಗಿ ನಿಂತಿದ್ದಾಳೆ. ಇವರಿಗೆಲ್ಲ ನಿತ್ಯ ಹೊಟ್ಟೆಗೆ ಕೊಟ್ಟು ಸಲುಹಲು ಭೂಮಾತೆಯಲ್ಲಿ ಈಗ ಸಾಕಷ್ಟು ಧಾನ್ಯ ದವಸವಿಲ್ಲ. ಕಲಿಯ ಕುಚೇಷ್ಟೆಗೆ ಬೇಸತ್ತ ಮೇಘರಾಜನು ಮಳೆಗರೆಯಲಾರೆನೆಂದು ಮೇಲೆ ಮೇಲೆ ಮೌನಾವಸ್ಥೆ ಹೊಂದುವನು. ಆದರೆ ಜನರು ಅವನನ್ನೇ ಬಯ್ಯುವರು. ಆಗ ಅವನು ಸಿಟ್ಟಿಗೆದ್ದು ಅತಿವೃಷ್ಟಿಗೈದು ಹೊಳೆ ಹಳ್ಳಗಳನ್ನೆಲ್ಲ ಹೊರಚಲ್ಲಿ ಹರಿಸುವನು. ಆಗ ಅಸಂಖ್ಯ ಜೀವರಾಶಿಯು ತನ್ನ ಇದ್ದ ಬಿದ್ದ

ಅಸ್ತಿಯೊಡನೆ ಮಹಾಪೂರದ ಸೆಳವಿಗೆ ಸಿಕ್ಕು ಸಮುದ್ರಕ್ಕೆ ಹೋಗಿ ಸೇರಿ ಕೊಳ್ಳುವುದು. ಪ್ರತಿವರುಷವೂ ಬರಗಾಲವೆಂಬ ಬೇತಾಲ ಮನಸ್ವಿಯಾಗಿ ತಾಂಡವನೃತ್ಯವನ್ನಾಡುತ್ತ ಜನಕೋಟಿಯನ್ನು ಆಹುತಿಗೈಯುತ್ತಿದೆ ಬರದ ಬೊಗಸಿಯೊಳಗಿಂದ ದೈವವಶಾತ್ ನುಸುಳಿದವರಿಗೆ ಸಾಕಷ್ಟು ಸುಖವಿಲ್ಲ. ಅರ್ಥಾತ್ ಹೊಸ ರಕ್ತವಾಗಲು ಬಿಸಿ ಅಶನವಿಲ್ಲ. ಇಂಥ ಪರಿಸ್ಥಿತಿಯಲ್ಲಿ "ಧನ್ಯಾ ನರಾ ಯೇ ಮೃತಾಃ"॥ ಅಂದರೆ ಸತ್ತವರೇ ಸುಖಿಗಳೆನ್ನಬಹುದು. ಬದುಕಿರುವವರಿಗೆ ಎಳ್ಳಿನಿತು ಸುಖವಿಲ್ಲ. ಯಾಕಂದರೆ ಭೂದೇವಿಗೆ ಬಹಳ ಆಯುಷ್ಯ ಕಳೆಯಿತು. ಈಗ ಅವಳಿಗೆ ವಾರ್ಧಕ್ಯಕಾಲ ಆವರಿಸಿದೆ. ಆಯುರ್ವೇದದಲ್ಲಿ "ವಾರ್ಧಕ್ಯಾವಸ್ಥೆಯಲ್ಲಿ ವಾತಪ್ರಕೋಪವಾಗುವುದೆಂದು"ಹೇಳಿದೆ. ಆ ಪ್ರಕಾರವಾಗಿ ಧರಣಿ ದೇವಿಗೆ ಒಂದು ದಿವಸ ನಡುನೋವು, ಮರು ದಿವಸ ಕಾಲುಸೆಳೆತ, ಮತ್ತೊಂದು ದಿವಸ ಸರ್ವಾಂಗಶೂಲೆ, ಹೀಗೆ ವಾತರೋಗದಿಂದ ಬಳಲುತ್ತ ಬೆಂಡಾಗಿರುವಳು. ಅದರಲ್ಲಿ ಕಲಿರಾಯನ ಕುಶಾಸನದ ವ್ಯಸನದಿಂದ ವಿಕಾರ ಹೆಚ್ಚಾಗಿ ಕೃಶಳಾಗಿರುವಳು. ಈ ಭೂದೇವಿಯ ಗತವೈಭವವನ್ನು ಎಷ್ಟು ವರ್ಣಿಸಿದರೂ ತೀರದು. ಕೃತಯುಗದಲ್ಲಿ ಅವಳು ಶೈಶವಾವಸ್ಥೆಯಲ್ಲಿದ್ದಾಗ ಪರಿಪುಷ್ಟದೇಹಿಯಾಗಿದ್ದಳು. ತ್ರೇತಾಯುಗದಲ್ಲಿ ಆ ಭೂದೇವಿ ಬಾಲ್ಯಾವಸ್ಥೆಗೆ ಬಂದಳು. ದ್ವಾಪರಯುಗದಲ್ಲಿ ಅವಳು ತಾರುಣ್ಯಾವಸ್ಥೆಯಿಂದ ಸುಶೋಭಿತಳಾಗಿದ್ದಳು. ಈ ಕಲಿಯುಗದಲ್ಲಿ ಆ ಭೂಮಾತೆಯು ಮುಪ್ಪಿನಿಂದ ಹಾಗಲಹಣ್ಣಾಗಿದ್ದಾಳೆ. ಅದರಲ್ಲಿ ಹುಟ್ಟಿದ ಅವಳ ಮಕ್ಕಳು ಮರಿಮಕ್ಕಳು ಕಿರಿಮಕ್ಕಳಾದರೂ ಬಡವರಾಗಿ ಅಸನವಶನವಿಲ್ಲದೇ ಗತಿಗಾಣದವರಾದರು. ಇದರಿಂದ ಚಿಂತೆಯೊಳಗಾಗಿ ಆ ತಾಯಿಗೆ ಅಹೋರಾತ್ರಿ ಸುಖಶಾಂತಿಯಿಲ್ಲ. ಶಾರೀರಿಕ ರೋಗದಲ್ಲಿ ಮಾನಸಿಕ ರೋಗವು ಕೂಡಿ ದಿನೇ ದಿನೇ ವಿಕಾರ ಹೆಚ್ಚಾಗಿ ಚಿಕಿತ್ಸೆಗೆ ಅಸಾಧ್ಯವಾಗಿದೆ.

ಈ ದಿಸೆಯಲ್ಲಿ ರೋಗವು ಅಸಾಧ್ಯ ಸ್ಥಿತಿಯಲ್ಲಿರುವಾಗ ಸುಯೋಗ. (ಔಷಧ) ವಿಲ್ಲವೆಂದು ವೈದ್ಯರ ಅಭಿಪ್ರಾಯವಿದೆ. ತಥಾಪಿ "ಯಾವತ್ಕಂಠಗತಾಃ ಪ್ರಾಣಾಃ", ಅಂದರೆ ಜೀವ ಇರುವ ಪರ್ಯಂತ ವೈದ್ಯನು ತನ್ನ ಕರ್ತವ್ಯ ಬಿಡಬಾರದೆಂದು ಆಯುರ್ವೇದದ ಆದೇಶವಿದೆ. ಅದೂ ಸರಿಯೇ ! ಕ್ವಚಿದ್

ಯೋಗಾತ್ ಪ್ರಜೀವತಿ", ಕದಾಚಿತ್ ಸುಯೋಗ (ಔಷಧ) ದಿಂದ ರೋಗಿ ಬದುಕುವುದುಂಟು. ಔಷಧಿಯಿಂದ ರೋಗ ವಾಸಿಯಾಗದಿರುವಾಗ ಇನ್ನೂ ಒಂದು ಉಪಾಯವುಂಟು ಏನಂದರೆ – ಮೃತ್ಯುಂಜಯಜಪ, ಇನ್ನೂ ಅನೇಕ ಧಾರ್ಮಿಕ ವ್ರತ, ನಿಯಮಾಚರಣೆ ಇತ್ಯಾದಿ ಶಾಂತಿ ಪಾಠಗಳಿಂದ ಕಂಟಕ ಪರಿಹಾರವಾಗುವದೆಂದು ಜ್ಯೋತಿಷ ಶಾಸ್ತ್ರದ ಅಭಿಪ್ರಾಯವಿದೆ. ಭಾ ಶಾಂಬೆಯ ನಿಜವಾದ ಪುತ್ರರು ಮೇಲೆ ಹೇಳಿದ ಸತ್ಕರ್ಮಾಚರಣೆಯಲ್ಲಿ ತತ್ಪ ರಾದರೆ ಹೆತ್ತಮ್ಮನಿಗೆ ತಗಲಿದ ಅನಿಷ್ಟ ರೋಗ ದೂರಾಗಿ ಸರ್ವರಿಗೂ ಸುಖ ಸಿಗುವುದರಲ್ಲಿ ಸಂದೇಹವಿಲ್ಲ. ಈ ಕಲಿಯುಗದಲ್ಲಿ ಯಜ್ಞ, ತಪಸ್ಸು ಇವುಗ ಸಿದ್ಧಿಯಾಗಲಾರದೆಂದು ಹಿರಿಯರು ಹೇಳಿ ಈಗಿನವರನ್ನು ನಿರಾ ಗೊಳಿಸಿರುವರು. ಈಗ ಅವುಗಳಿಗೆ ತಕ್ಕ ಸೌಕರ್ಯ ಸಿಕ್ಕದಿರುವುದರಿಂ ಅವರು ಹೀಗೆ ಹೇಳಿರಬೇಕೆಂದು ನಾವು ನಂಬಬೇಕಾಗುವದು. ಸುಕುಮಾ ರಿಗೂ, ಅಶಕ್ತರಿಗೂ, ವೃದ್ಧರಿಗೂ ತೆಗೆದುಕೊಳ್ಳಲು ರುಚಿಕರ ಔಷಧಿಗ ತಯಾರಿಕೆ ಇರುವಂತೆ, ಕಲಿಕಾಲದಲ್ಲಿ ಹೀನ ಮನಸ್ಸಿನಿಂದ ದುರ್ಬಲನಾ ಮಾನವ ಪ್ರಾಣಿಯ ಸುಲಭ ಉದ್ಧಾರಕ್ಕಾಗಿ ಹಿಂದಿನ ಹಿರಿಯರು, ಪುರಾಣೇ ಹಾಸಗಳ ಆಧಾರದಿಂದ ವ್ರತ, ಜಪ, ನಿಯಮ (ಹಬ್ಬ) ಗಳನ್ನಾಚರಿಸಲ ದಾರಿ ತೋರಿಸಿಕೊಟ್ಟಿರುವರು. ಅಂಥವುಗಳನ್ನು ನಾವು ಸಂಗ್ರಹಿಸಿ ಇಲ್ಲಿ ವಿವರಿಸಿದ್ದೇವೆ.

## ವ್ರತ

ವೈದಿಕ ಸಾಹಿತ್ಯದಲ್ಲಿ ವ್ರತ ಶಬ್ದಕ್ಕೆ ಇಷ್ಟ ಪ್ರಾಪಕಕರ್ಮ ಅರ್ಥಾತ್ ಇಚ್ಛಿತ ಫಲವನ್ನುಂಟುಮಾಡುವ ಕರ್ಮವೆಂದು ಹೇಳಲಾಗಿದೆ. ಹಾಗೂ ವೇ ಬೋಧಿತ ಅಗ್ನಿಹೋತ್ರಾದಿ ಕರ್ಮಗಳಿಗೂ, ಶಾಸ್ತ್ರದಲ್ಲಿ ಹೇಳಲ್ಪಟ್ಟ ಸಾಧಾ ರಣ, ಅಸಾಧಾರಣ ಕರ್ಮಕ್ಕೂ 'ವ್ರತವೆಂ'ದು ಅರ್ಥವಾಗುವದು. ವ್ರತಾ ಚರಣೆಯಿಂದ ಸರ್ವಸಿದ್ಧಿಯು ಲಭಿಸುವುದಲ್ಲದೆ ಚತುರ್ವಿಧ ಪುರುಷಾರ್ಥ ವನ್ನು ಸಾಧಿಸಿಕೊಳ್ಳಬಹುದು.

ವ್ರತಾಂಗವೆನಿಸಿದ ಸ್ನಾನ ಮೊದಲಾದ ಧಾರ್ಮಿಕ ಕರ್ಮಗಳು ನಿತ್ಯ ನಿಯಮಗಳಾಗಿರುತ್ತವೆ. ಆ ನಿಯಮದಂತೆ ತಪ್ಪದೇ ನಡೆಯುವದಕ್ಕೆ ಆಚಾ

ವೆನ್ನುವರು. ಆಚಾರದಿಂದ ಆರೋಗ್ಯವು ಲಭಿಸುವುದು; ಆಚಾರಕ್ಕೂ, ಆರೋಗ್ಯಕ್ಕೂ ಅವಿನಾಭಾವ ಸಂಬಂಧವಿರುತ್ತದೆ.

## ಆಚಾರವೂ ಆರೋಗ್ಯವೂ

ಪ್ರತಿಯೊಬ್ಬನು ನಿರಂತರ ಬ್ರಾಹ್ಮಿ ಮುಹೂರ್ತದಲ್ಲಿ (ಬೆಳಿಗ್ಗೆ ೫ ಘಳಿಗೆ ರಾತ್ರಿ ಇರುವಾಗ) ದೇವರ ಧ್ಯಾನಮಾಡುತ್ತ ಏಳಬೇಕು. ಆ ಸಮಯ ಬ್ರಹ್ಮಚಿಂತನೆಗೆ ಯೋಗ್ಯವಾಗಿರುತ್ತದೆ. ಆಗ ಮನಸ್ಸು ಬಹಳ ಪ್ರಸನ್ನವಾಗಿ ರುವುದರಿಂದ ಯಾವುದಾದರೊಂದು ಶಾಸ್ತ್ರಾಭ್ಯಾಸವನ್ನು ಮಾಡಿದರೆ ಸಫಲ ವಾಗುವುದು. ಇಲ್ಲವೇ ಈಶ್ವರ ಪೂಜಾ, ಜಪತಪಾದಿ ಧಾರ್ಮಿಕ ಕರ್ಮ ಗಳನ್ನಾಚರಿಸುವುದು ಆ ಸಮಯಕ್ಕೆ ವಿಹಿತವಾಗಿದೆ. ಬ್ರಾಹ್ಮೀ ಮುಹೂರ್ತ ದಲ್ಲಿ ಏಳದಿದ್ದರೆ ರೋಗರುಜಿಗಳಾಗುವವು. ರೋಗಾವಸ್ಥೆಯಲ್ಲಿ ಧರ್ಮ ಸಂಗ್ರಹ ಮಾಡಲು ಶಕ್ತನಾಗುವುದಿಲ್ಲ. ಆದಕ್ಕಾಗಿಯೇ ನೀತಿಕಾರರು "ಶರೀರ ಮಾದ್ಯಂಖಲು ಧರ್ಮಸಾಧನಂ" ಎಂದು ಹೇಳಿರುವರು. ಒಟ್ಟಾರೆ ಧರ್ಮಸಾಧನೆಗೆ ಆರೋಗ್ಯ ಬೇಕೇಬೇಕು. ಆರೋಗ್ಯ ಬೇಕಾದರೆ ಬ್ರಾಹ್ಮೀ ಮೂಹೂರ್ತದಲ್ಲಿ ಏಳಲೇಬೇಕು. ಇದೇ ವಿಷಯವನ್ನು ಕುರಿತು ವಾಗ್ಭಟ ದಲ್ಲಿ–"ಬ್ರಾಹ್ಮೇಮುಹೂರ್ತೇ ಉತ್ತಿಷ್ಠೇತ್ ಸ್ವಸ್ಥೋರಕ್ಷಾರ್ಥಮಾಯುಷಾ"|| ಎಂದು ಹೇಳಿದೆ.

ಬ್ರಾಹ್ಮೀ ಮುಹೂರ್ತ ಅಂದರೆ – ಪೂರ್ವಕಾಲದಲ್ಲಿ ದೇವತೆಗಳಿಗೂ, ದಾನವರಿಗೂ ಒಡೆತನದ ಸಲುವಾಗಿ ಒಡಕು ಉಂಟಾಯಿತು. ಆಗ ಜಗ ದೀಶನು ಮಧ್ಯಸ್ಥಿಕೆ ವಹಿಸಿ, ರಾತ್ರಿಯನ್ನು ರಾಕ್ಷಸರಿಗೆ, ಹಗಲನ್ನು ದೇವತೆ ಗಳಿಗೆ ಹಂಚಿಕೊಟ್ಟನು. ಹಗಲು ದೇವತೆಗಳಿಗೆ ಬಂದ ಕಾರಣ ಅದಕ್ಕೆ ದಿವಾ ಎಂದು ಹೆಸರು ಬಂದಿದೆ. ರಾತ್ರಿಯಲ್ಲಿ ರಾಕ್ಷಸರು ಸಂಚರಿಸುವರು. ಅವರ ಕಾಲ ಕಳೆದುಹೋದ ಮೇಲೆ ದಿವಾ ಪ್ರಾರಂಭವಾಗುತ್ತದೆ. ಆ ಮುಹೂ ರ್ತಕ್ಕೆ ಬ್ರಹ್ಮ ಒಡೆಯನಾದುದರಿಂದ ಬ್ರಾಹ್ಮಿ ಮುಹೂರ್ತವೆಂದು ಹೆಸರು ಬಂದಿದೆ. ಆ ಸಮಯದಲ್ಲಿ ಬ್ರಹ್ಮನು ತನ್ನ ಸೃಷ್ಟಿಯ ಕಾರ್ಯವನ್ನು ಪ್ರಾರಂಭಿ ಸುವನು. ಆಗ ಪೃಥ್ವಿಯಲ್ಲಿ ವೈಶಿಷ್ಟ್ಯ ಉತ್ಪನ್ನವಾಗಿ, ಎಲ್ಲ ಜೀವಿಗಳಿಗೆ

ಹೊಸ ಹುರುಪು ಹುಟ್ಟುವುದು. ಆಗ ಹಕ್ಕಿಪಕ್ಕಿಗಳೂ ಕೂಡ ಹರುಷದಿಂದ ಹಾಡತೊಡಗುವವು. ಎಲ್ಲ ಗಿಡಬಳ್ಳಿಗಳು, ಹೊಸ ದಿವಸವು ಉದಯಿಸಿತೆಂದು, ಉಬ್ಬುಬ್ಬಿ ನಗುತ್ತಿರುವಂತೆ ಅರ ಅರಳಿದ ಕುಸುಮಗಳಿಂದ ಪರಿಶೋಭಿಸುವವು. ಈ ಮುಹೂರ್ತಕ್ಕೆ ಅಮರಸಿಂಹ ಕವಿಯು "ಅಹರ್ಮುಖಂ" ಅಂದರೆ ದಿವಸದ ಮುಖವೆಂದು ಹೇಳಿರುವನು.

ಸಮಸ್ತ ವನಸ್ಪತಿಗಳು ಬ್ರಾಹ್ಮಿ ಮುಹೂರ್ತದಲ್ಲಿ ಶುದ್ಧ ಹವೆಯನ್ನು ಬೀರುತ್ತಿರುವವು. ಆ ಹವೆಯಲ್ಲಿ ಹೊರಗೆ ಹೋಗಿ ತಿರುಗಾಡುವದರಿಂದ ಆರೋಗ್ಯವು ಲಭಿಸುವದು. ಈ ಸಮಯದಲ್ಲಿ ಮನುಷ್ಯನ ಎಲ್ಲ ಇಂದ್ರಿಯಗಳು ಪ್ರಸನ್ನವಾಗಿರುತ್ತವೆ, ಮಲ, ಮೂತ್ರ ಮೊದಲಾದ ಮಲದ್ವಾರಗಳು ಸಹಜವಾಗಿ ಸರಳವಾಗಿರುತ್ತವೆ. ಆಗ ಹಾಸಿಗೆಯಿಂದ ಎದ್ದು ಮಲಮೂತ್ರಾದಿಗಳನ್ನು ವಿಸರ್ಜಿಸುವುದು ಒಳ್ಳೆಯದು. ಅವುಗಳನ್ನು ತಡೆಹಿಡಿದು ಕಂಬಳಿಯ ಮುಸುಕಿನಲ್ಲಿ ಮಲಗಿದರೆ, ರೋಗಗಳಿಗೆ ಬಲಿಯಾಗುವನು.

ಮಲದ ವೇಗವನ್ನು ತಡೆಯುವುದರಿಂದ ಹೊಟ್ಟೆಯಲ್ಲಿ 'ಆಧ್ಮಾನ'ವೆಂಬ ರೋಗವಾಗುವುದಲ್ಲದೆ ಗುದದ್ವಾರದಲ್ಲಿ ಚುಚ್ಚಿದಂತೆ ವೇದನೆ, ಮಲಾವರೋಧ ವಾತದ ಊರ್ಧ್ವಗತಿ ಇನ್ನೂ ಅನೇಕ ಕೆಟ್ಟರೋಗಗಳು ಹುಟ್ಟುತ್ತವೆ.

ಮೂತ್ರ ನಿಗ್ರಹದಿಂದ – "ಬಸ್ತಿಮೇಹನಯೋಃ ಶೂಲಂ" ಅಂದರೆ ಮೂತ್ರಪಿಂಡದಲ್ಲಿಯೂ, ಜನನೇಂದ್ರಿಯದಲ್ಲಿಯೂ ಶೂಲಿಯುಂಟಾಗುವದು. ಮೂತ್ರಕೃಚ್ಛ್ರವಾಗುವುದಲ್ಲದೆ ತಲೆ, ಟೊಂಕ ಇತ್ಯಾದಿಗಳಲ್ಲಿ ಶೂಲಿಯುಂಟಾಗುವುದು.

ಹೀಗೆಯೇ ಮಾನವನ ದೇಹದಲ್ಲಿ ಹಲವು ವಿಧ ಮಲದ್ವಾರಗಳಿರುತ್ತವೆ. ಆಯಾಯ ದ್ವಾರಗಳಲ್ಲಿ ಹುಟ್ಟುವ ಮಲಗಳನ್ನು ಬ್ರಾಹ್ಮಿ ಮುಹೂರ್ತದಲ್ಲಿ ಎದ್ದು ವಿಸರ್ಜಿಸುವುದರಿಂದ ದೇಹಕ್ಕೆ ಕಾಂತಿ, ಶಾಂತಿ, ಬಲಗಳುಂಟಾಗಿ ಬಹಳ ದಿವಸ ಬಾಳುತ್ತಾನೆ. ಇಲ್ಲವಾದರೆ ಎಲ್ಲ ರೋಗಗಳಿಗೆ ತವರೂರಾಗಿ ಹಾಸಿಗೆ ಹಿಡಿದು ನರಳುತ್ತ ಕೊನೆಗೊಂದು ದಿನ ಯಮಪುರದ ಯಾತ್ರೆಗೆ ಹೊರಡುವನು. ಆರೋಗ್ಯಗಳಿಸದವನು ಧರ್ಮ ಗಳಿಸಲಾರನು. ಆದುದ

ರಿಂದ ಆರೋಗ್ಯದ ನಿಯಮವನ್ನು ಆಶ್ರಯಿಸಿ ಆಯುಷ್ಯವನ್ನು ಗಳಿಸಬೇಕು. ಆಯುಷ್ಯ ಬೇಕಾದರೆ ಬ್ರಾಹ್ಮೀ ಮುಹೂರ್ತದಲ್ಲಿ ಏಳಬೇಕು.

ಹೀಗೆಯೇ ದಿನಚರ್ಯೆಯಲ್ಲಿ ಹೇಳಿದ ದಂತಧಾವನ, ಗಂಡೂಷ ವಿಧಿ ನಸ್ಯಕರ್ಮ, ಅಭ್ಯಂಗ ಸ್ನಾನ ಮೊದಲಾದ ಆರೋಗ್ಯಪಾಠವು ಧರ್ಮಾಚಾರ ವಾಗಿರುವುದು. ಅಷ್ಟೇ ಅಲ್ಲ. ನಾವು ನಿತ್ಯ ಸ್ನಾನ ಮಾಡಿದ ನಂತರ ಆಚರಿ ಸಲಾಗುವ ಪೂಜಾಪಾಠಾದಿಗಳೂ ಕೂಡ ನಮ್ಮನ್ನು ಆರೋಗ್ಯವಂತರನ್ನಾಗಿ ಮಾಡಿ ಧರ್ಮನಿರತರನ್ನಾಗಿ ಮಾಡುತ್ತವೆ.

ಆದೇ ಪ್ರಕಾರವಾಗಿ ನಾವು ನಿತ್ಯ ಧರಿಸುವ ಭಸ್ಮ, ಚಂದನಗಳು ಪವಿ ತ್ರವಾಗಿರುವವಲ್ಲದೆ ಆರೋಗ್ಯವನ್ನುಂಟುಮಾಡುತ್ತವೆ. ತಮ್ಮ ತಮ್ಮ ಧರ್ಮದ ನಿಯಮದಂತೆ ಕೆಲವರು ಭಸ್ಮವನ್ನು, ಇನ್ನು ಕೆಲವರು ಚಂದನವನ್ನು ಧರಿಸು ವುದುಂಟು. ಭಸ್ಮ ಚಂದನಗಳು ಭಿನ್ನವಸ್ತುಗಳಾಗಿದ್ದರೂ ಅವುಗಳನ್ನು ಧರಿ ಸುವ ಸ್ಥಾನ, ತತ್ವಗಳು ಒಂದೇ ಆಗಿರುತ್ತವೆ.

ದೇಹದಲ್ಲಿ ದೇವರಿರುವುದು ಸರಿಯಷ್ಟೇ ! ದೇಹದಲ್ಲಿ ದೇವರಿರುವ ಸ್ಥಾನಗಳಿಗೆ ಆಯಾಯ ಮಂತ್ರವನ್ನುಚ್ಚರಿಸುತ್ತ ಭಸ್ಮ–ಚಂದನಗಳನ್ನು ಧರಿಸ ಬೇಕೆಂದು ಧರ್ಮವಿಧಿ ಬೋಧಿಸುತ್ತದೆ. ಹೀಗೆ ಧರಿಸುವ ಭಸ್ಮ–ಚಂದನ ಗಳು ಆ ದೇವರಿರುವ ಮನೆಯ (ದೇಹವ)ನ್ನು ಭದ್ರವಾಗಿ ಕಾಯುತ್ತಿರುವವು.

ಕೆಲವು ಧರ್ಮದವರು ಹಣೆಯಲ್ಲಿ ಭಸ್ಮವನ್ನು ಧರಿಸುವರು. ಕೆಲವರು ಎರಡು ಹುಬ್ಬುಗಳ ಮಧ್ಯದಲ್ಲಿ ಹಣೆಯ ಮೇಲೆ ಚಂದ್ರನಂತೆ ಚಂದನದ ಚಿಕ್ಕೆ ಯನ್ನು ಇಟ್ಟುಕೊಳ್ಳುವರು. ವಿಶೇಷವಾಗಿ ಲಲಾಟ, ಗಲ್ಲ, ಶಂಖಸ್ಥಾನ, ವಕ್ಷಃಸ್ಥಲ, ನಾಭಿ, ಭುಜ ಇತ್ಯಾದಿ ಸ್ಥಾನಗಳಲ್ಲಿ ಭಸ್ಮ–ಚಂದನಗಳನ್ನು ಧರಿ ಸುವುದುಂಟು. ಇದು ಧರ್ಮದ ಕರ್ಮವಾಗಿದ್ದರೂ ವೈಜ್ಞಾನಿಕವಾಗಿದೆ.

ಭಸ್ಮ–ಚಂದನಗಳು, ಶೀತಲ, ಪಿತ್ತಶಾಮಕ, ರಕ್ತವಿಕಾರ, ಕೀಟಾಣು ನಾಶಕವಾಗಿರುತ್ತವೆಂದು ಆಯುರ್ವೇದ ದ್ರವ್ಯಗುಣವು ಹೇಳುತ್ತದೆ. ಇವು ಗಳು ಹೇಗೆ ವೈಜ್ಞಾನಿಕವಾಗಿರುವುವೆಂಬುದು ಕೆಳಗೆ ವಿವರಿಸಿದ ವಿಷಯದಿಂದ ವಿದಿತವಾಗುವುದು,

ಕಿವಿಯಿಂದ ಎತ್ತರದ ಮೇಲೆ 'ಟ್ರೆಜಿಮಲ್‌ನರ್‍ವ್' ಎಂಬ ಮಸ್ತಕದ ಐದ ನೆಯ ನಾಡಿಯು ಹೊರಡುತ್ತದೆ. ಇದಕ್ಕೆ ತಿರುಶಾಖೆಯೆನ್ನುತ್ತಾರೆ. ಇದು ಹೊರಡುವ ಸ್ಥಳಕ್ಕೆ "ಗೆಸರಿನ್ ಗ್ಯಾಂಗರಿನ್"ಅನ್ನುವರು. ಈ ತಿರುಶಾಖೆಯು ಮೂರು ಶಾಖೆಗಳಾಗುವದು, ಅವುಗಳ ಪೈಕಿ ಒಂದು ಹಣೆಯಲ್ಲಿ ಹಾದು ಮೂಗಿನ ವರೆಗೂ ಬರುತ್ತದೆ. ಎರಡನೆಯದು ಕಣ್ಣಿನಲ್ಲಿ ಶುಕ್ಲ ಮಂಡಲದ ವರೆಗೆ ಬರುತ್ತದೆ. ಮೂರನೆಯದು ಗಲ್ಲದ ಮೇಲೆ ಬರುತ್ತದೆ. ಅಹಿತಕಾರಕ ಆಹಾರ ವಿಹಾರ ಸೇವನೆಯಿಂದ ಮೊದಲನೆಯ ಶಾಖೆಯ ವಿಭಾಗದಲ್ಲಿ 'ನಿವರ್ಲ್ಲಜಿಕ್‌ಪೇನ್' ಅಂದರೆ ವಾತಶೂಲಿಯಾಗುತ್ತದೆ. ಮುಂದೆ ನೋವಿನಿಂದ ಗುರುಳೆಗಳೇಳುತ್ತವೆ.

ಈ ನಾಡಿ ಹಾಯ್ದ ಭಾಗ, ಹಣೆ, ಮೂಗು ಇವುಗಳ ಮೇಲೆ ಚಿಕ್ಕ ಪುಟ್ಟ ಗುರುಳೆಗಳೇಳುತ್ತವೆ. ಹಾಗೂ ಅಲ್ಲಿ ಚರ್ಮವು ಕೆಂಪು ಆಗಿ ಉರುಪು ಬೀಳುವುದಲ್ಲದೆ ನೋವು ಉಂಟಾಗುತ್ತದೆ. ಒಮ್ಮೊಮ್ಮೆ ಜ್ವರ ಸಹ ಬರುವುದುಂಟು. ಈ ರೋಗವುಂಟಾಗಬಾರದೆಂಬ ದೃಷ್ಟಿಯಿಂದ ನಮ್ಮ ಪೂರ್ವ ಧರ್ಮಾಚಾರ್ಯರು, ಶಂಖಸ್ಥಾನ (ಮಲಕು) ಹಣೆ, ಭ್ರೂಮಧ್ಯ, ಈ ಸ್ಥಾನಗಳಲ್ಲಿ ಭಸ್ಮ ಮತ್ತು ಚಂದನಗಳನ್ನು ಆರೋಗ್ಯ, ಆಚಾರ ಇವುಗಳನ್ನು ಅನುಲಕ್ಷಿಸಿ, ಲೇಪಿಸಬೇಕೆಂದು ಅಪ್ಪಣೆ ವಿಧಿಸಿದ್ದಾರೆ. ಇವುಗಳ ನಿತ್ಯ ಲೇಪನ ಡಿಂದ ಆ ಸ್ಥಾನದಲ್ಲಿದ್ದ ಉಷ್ಣತೆಯು ಉಪಶಮನಹೊಂದಿ ಮನುಷ್ಯ ನಿರೋಗಿಯಾಗಿರುವನು.

ಎರಡನೆಯ ನಾಡಿಯಲ್ಲಿ ದೋಷವು ಉಂಟಾಗುವುದರಿಂದ ಕಾರ್ನಿಯಾ ಹಾಗೂ ಕೆಳಗಿನ ರೆಪ್ಪೆಗಳಲ್ಲಿ ಗುರುಳೆಗಳೇಳುತ್ತವೆ. ಆ ಗುರುಳೆಗಳಿಂದ ನೀರು, ಕೀವು ಹೊರಡುತ್ತದೆ. ಈ ಗುರುಳೆ ಮಾಯ್ದನಂತರ ಕಾರ್ನಿಯಾದ ಮೇಲೆ ಕಲೆಕೂತು, ಕಣ್ಣು ಕಾಣಿಸದಾಗುವವು. ಇಂಥ ದೋಷ ನಿವಾರಣೆಗಾಗಿ ಕಣ್ಣುಗಳ ಎರಡೂ ರೆಪ್ಪೆಗಳ ಮೇಲೆ ಭಸ್ಮ-ಚಂದನಗಳ ಲೇಪ ಮಾಡುವದುಂಟು.

೩ ನೆಯ ನಾಡಿಯಲ್ಲಿ ದೋಷವುಂಟಾದರೆ, ಗಲ್ಲದ ಮೇಲೆ ಗುರುಳೆಗಳೇಳುತ್ತವೆ. ಇವುಗಳಿಂದ ಕೀವು, ನೀರು ಬರುತ್ತದೆ. ಅವು ಒಣಗಿ ಪಕ

ಯಾಗಿ ಉದುರುತ್ತವೆ. ಅವು ಉದುರಿದ ಮೇಲೆ ಆ ಸ್ಥಳದಲ್ಲಿ ಕಪ್ಪುಕಲೆ ಕೂಡ್ರುತ್ತದೆ. ಅಷ್ಟೊಂದು ದುಷ್ಪರಿಣಾಮವೇನೂ ಆಗುವುದಿಲ್ಲ. ಆದರೂ ಈ ರೋಗ ವುಂಟಾಗಬಾರದೆಂದೇ ಎರಡು ಮೆಲಕು ಮತ್ತು ಗಲ್ಲಗಳ ಮೇಲೆ ಭಸ್ಮ-ಚಂದನಗಳ ಲೇಪ ಮಾಡುವದುಂಟು. ಅತ್ಯಂತ ಉಷ್ಣ ಪ್ರದೇಶವಾದ ಉತ್ತರ ಭಾರತದಲ್ಲಿ ಕಲಕತಾ, ಕಾಶೀ, ಪ್ರಯಾಗ ಮೊದಲಾದ ಪ್ರಾಂತದಲ್ಲಿ ಈ ರೋಗವು ಹೆಚ್ಚು ಆಗುತ್ತಿರುವುದರಿಂದ ಅಲ್ಲಿಯ ಆಬಾಲವೃದ್ಧರು, ಹಣೆ ಮೆಲಕುಗಳಲ್ಲಿ ಮತ್ತು ಗಲ್ಲಗಳ ಮೇಲೆ ಚಿತ್ರವಿಚಿತ್ರವಾಗಿ, ಚಂದನ-ಭಸ್ಮ ಗಳನ್ನು ಅನುಲೇಪಿಸಿಕೊಳ್ಳುವರು. ಪಾಶ್ಚಿಮಾತ್ಯರು ಮತ್ತು ಅವರನ್ನನು ಕರಿಸುವ ಕೆಲವು ಭಾರತ ವಾಸಿಗಳು ಈ ಧರ್ಮದ ಪದ್ಧತಿಯನ್ನನುಲಕ್ಷಿಸಿ ಆರೋಗ್ಯಕ್ಕಾಗಿ ಮುಖಕ್ಕೆ ಸ್ನೋ, ಪಾವಡರ್‌ಗಳನ್ನು ಬಳಿದುಕೊಳ್ಳುವಂತೆ ಕಾಣುತ್ತದೆ. ಅಸ್ತು.

ದೇಹದ ಬೇರೆ ಬೇರೆ ಭಾಗದಲ್ಲಿ ಭಸ್ಮ-ಚಂದನಗಳ ಲೇಪನವು ಧಾರ್ಮಿಕ ದೃಷ್ಟಿಯಿಂದ ಪರಮ ಪವಿತ್ರವಾಗಿರುವುದು ಸರಿಯಷ್ಟೇ ! ಆದರೆ ಅವುಗಳನ್ನು ಧರಿಸಿಕೊಳ್ಳುವದು ಆರೋಗ್ಯಕ್ಕೆ ಕಾರಣವಾಗಿದೆಯೆಂಬುದು ಕೂಡ ಕೆಳಗಿನ ವಿವರಣೆಯಿಂದ ವಿದಿತವಾಗುತ್ತದೆ.

ಎಡಮೊಲೆಯ ಹತ್ತರ ಭಸ್ಮ ಲೇಪನ ಮಾಡುವುದು ಎಡ ಫುಪ್ಫುಸ ಮತ್ತು ಹೃದಯದ ರಕ್ಷಣೆಗಾಗಿಯೂ, ಬಲಭಾಗದಲ್ಲಿ ಬಲ ಫುಪ್ಫುಸದ ದಾಹದ ನಿವಾರಣೆಗಾಗಿಯೂ ಇರುತ್ತದೆ. ಇದು ಕೆಳಭಾಗದಲ್ಲಿ ಆಮಾಶಯದ ಕಡೆಗೆ ಹೃದಯದಿಂದ ಹೊರಟು ಹೋಗುವ ಫುಪ್ಫುಸೀಯ ಮಹಾಧಮನೀಯ ಉಷ್ಣತೆಯನ್ನು ಪ್ರಾಕೃತ ರೂಪದಲ್ಲಿಡುತ್ತದೆ.

ನಾಭಿಯಲ್ಲಿ ಭಸ್ಮ-ಚಂದನಗಳ ಲೇಪನ ಮಾಡುವುದಾದರೂ ಇದೇ ತತ್ವವನ್ನು ತೋರಿಸುತ್ತದೆ. ಹಾಗೂ ನಾಭಿಯು ಶರೀರದ ಮೂಲ ಸ್ಥಾನ ವಾಗಿರುತ್ತದೆ. ಅಲ್ಲಿ ಭಸ್ಮ-ಚಂದನಗಳ ಲೇಪನವು ಉದರಸ್ಥ ಅಂಗಗಳ ಉಷ್ಣತೆಯನ್ನು ಹೋಗಲಾಡಿಸುತ್ತದೆ.

ಪುರುಷರಿಗಿಂತ ಸ್ತ್ರೀಯರು ಗಂಧ, ಕುಂಕುಮ, ಅರಿಸಿಣ ಇವುಗಳನ್ನು ಬಹಳವಾಗಿ ಹಚ್ಚಿಕೊಳ್ಳುವರು. ಮದುವೆಯ ಕಾಲದಲ್ಲಿ ಮದುಮಕ್ಕಳಿಗೆ ಹಚ್ಚುವ ಅರಿಸಿಣವು ಧರ್ಮದೃಷ್ಟಿಯಿಂದ ಶುಭಪ್ರದವಾಗಿದೆ- ಅದರಲ್ಲಿ ಅರ್ಸೆನಿಕ್ ( Arsenic ) ಇರುತ್ತದೆ. ಅದು ಅಕಾಲ ನಿದ್ರಾ, ಅನಿಮಿಯತ ಭೋಜನ ಇವುಗಳಿಂದುಂಟಾದ ಅಶಕ್ತತೆಕಳೆದು ರಕ್ತವೃದ್ಧಿ ಮಾಡುತ್ತದೆ. ಸ್ತ್ರೀಯರ ಪ್ರಸೂತಿ ಕಾಲದಲ್ಲಿ ಹಚ್ಚುವ ಅರಿಸಿಣವು ಧರ್ಮದೃಷ್ಟಿಯಿಂದ ಮಂಗಲಕಾರಕವಾಗಿದ್ದರೂ, ಬಾಣಂತಿಯ ಶೈತ್ಯತೆಯನ್ನು ನಿವಾರಿಸಿ, ಪ್ರಸೂತಿಕಾಲದಲ್ಲಿ ಹೋದ ರಕ್ತವನ್ನು ಪೂರ್ಣಗೊಳಿಸುವುದಲ್ಲದೇ ಯಕೃತ್ ಪ್ಲೀಹಗಳನ್ನು ರಕ್ಷಿಸುತ್ತದೆ.

ಸುಮಂಗಲೆಯರು ಧರಿಸುವ ಕುಂಕುಮವು ಸೌಭಾಗ್ಯಸೂಚಕವಾಗಿದ್ದರೂ, ಅದು ತನ್ನಲ್ಲಿರುವ ಅರ್ಸೆನಿಕ್ ಗುಣದಿಂದ ಸ್ತ್ರೀಯರ ಆರೋಗ್ಯವನ್ನು ರಕ್ಷಿಸುತ್ತದೆ.

ಈ ಪ್ರಕಾರ ಆಚಾರವೇ ಆರೋಗ್ಯವಾಗಿಯೂ, ಆರೋಗ್ಯವು ಆಚಾರವಾಗಿಯೂ ಇದ್ದು, ಇವೆರಡು ಮೋಕ್ಷಮಾರ್ಗಕ್ಕೆ ಕೈದೀಪದಂತಿರುವವು. ಈ ಹಿಂದೆ ಹೇಳಿದ ಧರ್ಮದ ನಿಯಮಗಳನ್ನು ತತ್ವದೃಷ್ಟಿಯಿಂದ ಪರಿಪಾಲಿಸಿದವರು ಮಾತ್ರ ಮುಂದೆ ವಿವರಿಸಿದ ವ್ರತಗಳನ್ನಾಚರಿಸಲು ಅರ್ಹರಾಗುವರು.

## ಏಕಾದಶೀ ವ್ರತ

ಮಾನವನ ಏರಿಳಿತಗಳೆರಡೂ ಅವನ ಬುದ್ಧಿ ಶಕ್ತಿಯನ್ನೇ ಅವಲಂಸಿರುತ್ತವೆ. ಸಕಲ ಜೀವಿಗಳಲ್ಲಿ ಶ್ರೇಷ್ಠನೆನಿಸಿಕೊಂಡ ಮಾನವನು ಸದಸದ್ವಿವೇಕ ಬುದ್ಧಿಯಿಂದ ವರ್ತಿಸುತ್ತ ತನ್ನ ಶ್ರೇಷ್ಠವಾದ ಗುರಿಯ ಸಾಧನೆಗಾಗಿ ಪ್ರಯತ್ನಿಸುತ್ತಿದ್ದರೆ, ಅವನಿಗೆ ನಿಸ್ಸಂದೇಹವಾಗಿ ಜಯವು ಸಿಗುವುದು. ಈಗುರಿಯ ಸಾಧನೆಗಾಗಿ ಹಿಂದಿನ ಹಿರಿಯರು ವೇದ, ಆಗಮ, ಪುರಾಣ, ಇತಿಹಾಸ ಮೊದಲಾದವುಗಳನ್ನು ಹೇಳಿರುವರು. ಅವುಗಳಲ್ಲಿಯ ತತ್ವವನ್ನು ಆಮೂಲಾಗ್ರವಾಗಿ ವಿಚಾರಿಸಿ ನೋಡಿದರೆ, ಅವುಗಳ ಬಗ್ಗೆ ಆದರ ಭಾವನೆಯು ಹುಟ್ಟುವದಲ್ಲದೆ ಜ್ಞಾನಾಭಿವೃದ್ಧಿಯೂ ಆಗುವುದುಂಟು.

ಪ್ರಸ್ತುತ ಕಾಲದಲ್ಲಿ ಆಚರಿಸಲ್ಪಡುವ ಏಕಾದಶೀ ವ್ರತವು ಶಾಸ್ತ್ರಸಿದ್ಧ ವಿದ್ದು ಪರಂಪರೆಯಾಗಿ ನಡೆದು ಬಂದಿದೆ. ಇಂಥ ವ್ರತ, ಜಪ, ನಿಯಮಾದಿ ಸತ್ಕರ್ಮಗಳಲ್ಲಿಯ ತತ್ವ ಮತ್ತು ಉದ್ದೇಶಗಳನ್ನು ಕೆಲವರು ತಿಳಿಯದವರಾಗಿ ಪರಿಹಾಸ್ಯ ಗೈಯ್ಯುವುದುಂಟು. ಇದು ಅವರ ಅವನತಿಗೆ ಕಾರಣವಾಗಿದೆ. ಅದು ಸಂಭವಿಸಬಾರದೆಂದೇ ಭವಿಷ್ಯೋತ್ತರ ಪುರಾಣವು ಏಕಾದಶೀ ವ್ರತದ ಮಹಾತ್ಮ್ಯೆಯನ್ನು ವಿಶದವಾಗಿ ಹೇಳಿದೆ, ಅದನ್ನು ಸುಹೃದಯರು ವಿಶಾಲ ಭಾವನೆಯಿಂದ ಅರಿತು ಆಚರಿಸಿದರೆ, ಅವರ ಜೀವನ ಸುಖಮಯವಾಗುವುದ ರಲ್ಲಿ ಸಂದೇಹವಿಲ್ಲ.

ಕೃತಯುಗದಲ್ಲಿ ಅತ್ಯಂತ ಕ್ರೂರನಾದ ಮುರನೆಂಬ ರಾಕ್ಷಸನಿದ್ದನು. ಅವನು ತನ್ನ ಬಾಹುಬಲದಿಂದ ದೇವೇಂದ್ರನನ್ನು ಸೋಲಿಸಿ ಸಕಲ ಸುರರಿಗೆ ತಾನೇ ಅಧಿಪತಿಯೆಂದು ಸಾರಿದನು. ಇಂದ್ರಾದಿ ದೇವತೆಗಳು ನಿರುಪಾಯ ರಾಗಿ ಸ್ವರ್ಗವನ್ನು ಬಿಟ್ಟು ಮರ್ತ್ಯಲೋಕಕ್ಕೆ ಬಂದು ತಿರುಕರಂತೆ ತಿರುಗಾಡ ಹತ್ತಿದರು. ದೇವೇಂದ್ರನು ದುಃಖಿತನಾಗಿ, ಒಂದು ದಿವಸ ಭಗವಾನ್ ಶಂಕ ರನಲ್ಲಿಗೆ ಹೋಗಿ ಮುರನನ್ನು ಸಂಹರಿಸಬೇಕೆಂದು ನಮ್ರವಾಗಿ ಬೇಡಿ ಕೊಂಡನು. ಶಂಕರನು ಆ ಮುರಮರ್ದನ ಕೆಲಸವನ್ನು ಶ್ರೀ ವಿಷ್ಣುವಿಗೆ ಒಪ್ಪಿ ಸಿದನು.

ಭಗವಾನ್ ವಿಷ್ಣುವು ಇಂದ್ರಾದಿ ದೇವತೆಗಳ ದುರ್ದಶೆಯನ್ನು ಕಣ್ಣಾರೆ ಕಂಡು ಕ್ರೋಧಾವಿಷ್ಟನಾಗಿ, ಮುರನೊಡನೆ ಯುದ್ಧವನ್ನು ಹೂಡಿ, ಅಸಂಖ್ಯ ದೈತ್ಯರನ್ನು ಕೊಂದುಹಾಕಿದನು. ಆದರೆ ಮುರನಲ್ಲಿ ವಿಷ್ಣುವಿನ ಆಟ ಸಾಗ ಲಿಲ್ಲ. ವಿಷ್ಣುವು ತನ್ನ ಎಲ್ಲ ಶಸ್ತ್ರಾಸ್ತ್ರಗಳು ಕುಂಠಿತವಾದುದನ್ನರಿತು ಮುರ ನೊಡನೆ ಮಲ್ಲಯುದ್ಧವನ್ನು ಪ್ರಾರಂಭಿಸಿದನು. ಉಭಯತರಿಗೂ ಒಂದು ಸಾವಿರ ವರ್ಷ ಮಲ್ಲಯುದ್ಧವು ಎಡಬಿಡದೆ ನಡೆಯುವಷ್ಟರಲ್ಲಿ, ವಿಷ್ಣುವು ಧೈರ್ಯಗುಂದಿ, ಬಲಹೀನನಾಗಿ ಪಲಾಯನಮಾಡಿ, ಬದರಿಕಾಶ್ರಮದ ಒಂದು ಗವಿಯಲ್ಲಿ ಹೊಕ್ಕು ಮಲಗಿಕೊಂಡನು.

ಮುರನು ವಿಷ್ಣುವಿನ ಬೆನ್ನುಹತ್ತಿ ಹುಡುಕುತ್ತ, ಹುಡುಕುತ್ತ ಬದರಿ ಕಾಶ್ರಮದ ಗವಿಯನ್ನು ಹೊಕ್ಕು ಅಲ್ಲಿ ಅವನು ಮಲಗಿರುವುದನ್ನು ಕಂಡು,

ಕೊಲ್ಲಬೇಕೆಂದು ಶಸ್ತ್ರವನ್ನು ಮೇಲಕ್ಕೆತ್ತುವಷ್ಟರಲ್ಲಿಯೇ ಶ್ರೀವಿಷ್ಣುದೇವನ ಶರೀರದೊಳಗಿಂದ ಓರ್ವ ತೇಜಸ್ವಿನಿಯಾದ ಕನ್ಯೆಯು ಹೊರಹೊರಟಳು. ಅವಳು ಅಮೋಘವಾದ ಶಸ್ತ್ರಾಸ್ತ್ರಗಳನ್ನು ಪಿಡಿದವಳಾಗಿ ಮುರನೊಡನೆ ಯುದ್ಧಕ್ಕೆ ಸನ್ನದ್ಧಳಾದಳು. ಮುರನು ಅವಳೊಡನೆ ಹೋರಾಡುತ್ತಿರಲು ಕೆಲವು ಹೊತ್ತಿನಲ್ಲಿಯೇ ತನ್ನ ರಥವನ್ನು ಕಳೆದುಕೊಂಡನು. ಆದರೂ ಅವನು ಧೈರ್ಯತಾಳಿ ದೇವಿಯೊಡನೆ ಮುಷ್ಟಿ ಯುದ್ಧವನ್ನಾರಂಭಿಸಿದನು. ಹೀಗೆ ಉಭಯತರಲ್ಲಿ ತುಮುಲವಾದ ಯುದ್ಧ ಜರಗಿತು. ಕೊನೆಗೆ ದೇವಿಯು ಮುಷ್ಟಿಯಿಂದ ದೈತ್ಯನ ಎದೆಗೆ ಹೊಡೆಯಲಾಗಿ, ಅವನು ಮೂರ್ಛಿತನಾಗಿ ನೆಲಕ್ಕೆ ಬಿದ್ದನು; ಕೂಡಲೇ ಅವಳು ಮುರನ ಶಿರಸ್ಸನ್ನು ಕತ್ತರಿಸಿದಳು. ಅಷ್ಟರಲ್ಲಿ ಭಗವಾನ್ ವಿಷ್ಣುವು ನಿದ್ರೆಯಿಂದ ಎಚ್ಚೆತ್ತು, ಮುರನ ಮೃತವಾದ ದೇಹವನ್ನು ಮತ್ತು ತನ್ನೆದುರು ಕೈಜೋಡಿಸಿಕೊಂಡು ನಿಂತಿರುವ ಕನ್ಯೆಯನ್ನು ಕಂಡು ಆಶ್ಚರ್ಯ–ಆನಂದಪುಲಕಿತನಾದನು.

ಕನ್ಯೆಯು ವಿಷ್ಣುವಿಗೆ ಅಭಿವಂದಿಸಿ-"ಸ್ವಾಮಿ, ನಾನು ನಿಮ್ಮ ದೇಹದಿಂದ ಉದ್ಭವಿಸಿದ ಶಕ್ತಿಯಾಗಿರುವೆನು. ಈ ದುಷ್ಟ ದೈತ್ಯನು ನಿದ್ರಿಸುತ್ತಿರುವ ನಿಮ್ಮನ್ನು ಕೊಲ್ಲಲು ಬಂದನು; ಅದನ್ನು ಅರಿತು ನಾನು ಇವನನ್ನು ಸಂಹರಿಸಿದೆನು." ಎಂದು ನುಡಿದಳು. ಭಗವಾನ್ ವಿಷ್ಣುವು ಈ ಪ್ರಕಾರವಾದ ಅವಳ ಮಾತನ್ನು ಕೇಳಿ ಅತ್ಯಂತ ಪ್ರಸನ್ನನಾಗಿ ದೇವಿಯನ್ನುಕುರಿತು:–"ನೀನು ನನ್ನ ಪರಮ ಶ್ರೇಷ್ಠ ಶಕ್ತಿಯಾಗಿದ್ದು ಇಂದಿನ ಏಕಾದಶಿಯ ದಿವಸ ಉದಯಿಸಿ, ಈ ದುಷ್ಟದಾನವನನ್ನು ಕೊಂದಿಯಾದುದರಿಂದ ನಿನ್ನ ಹೆಸರು 'ಏಕಾದಶೀ' ಎಂದು ಆಗಲಿ; ಈ ದಿನದಲ್ಲಿ ನಿನ್ನ ಹೆಸರಿನಿಂದ ಉಪವಾಸ ವ್ರತವನ್ನಾಚರಿಸಿದವನು ಸಮಸ್ತ ದುರಿತಂಗಳಿಂದ ದೂರನಾಗಿ ಸಕಲ ಸೌಭಾಗ್ಯ ಹೊಂದಲಿ" ಎಂಬುದಾಗಿ ವರದಾನವನ್ನು ಮಾಡಿದನು.

ಈ ಪ್ರಕಾರವಾಗಿ ಮಾರ್ಗಶಿರ ವದ್ಯ ೧೧ ರಲ್ಲಿ ಏಕಾದಶೀ ದೇವಿಯು ಉದಯಿಸಿ ಮುರನೆಂಬ ರಾಕ್ಷಸನನ್ನು ಸಂಹರಿಸಿದ ಸ್ಮಾರಕವಾಗಿ ಏಕಾದಶೀ ವ್ರತವು ಪ್ರಚಲಿತವಾಯಿತೆಂದು ಭವಿಷ್ಯೋತ್ತರ ಪುರಾಣದಿಂದ ತಿಳಿದು ಬರುವದು. ಇಷ್ಟರಿಂದಲೇ ಏಕಾದಶೀ ವ್ರತದ ಕಥೆ ಪರಿಸಮಾಪ್ತಿಯಾಗಲಾರದು.

ಏಕಾದಶಿಯು ಒಂದು ತಿಂಗಳಲ್ಲಿ ಎರಡು ಸಾರೆ ಬರುತ್ತದೆ. ಶುಕ್ಲ ಪಕ್ಷ ಕೃಷ್ಣ ಪಕ್ಷಗಳ ಹನ್ನೊಂದನೆಯ ದಿವಸಕ್ಕೆ ಏಕಾದಶಿಯೆನ್ನುವರು. ಒಂದು ವರುಷದಲ್ಲಿ ಪ್ರತಿಯೊಂದು ತಿಂಗಳಲ್ಲಿ ಬರುವ ಏಕಾದಶಿಗಳ ಮಹಿಮೆ, ಅವುಗಳ ಉತ್ಪತ್ತಿಯ ಕಾರಣಗಳು ಭಿನ್ನ ಭಿನ್ನ ವಾಗಿರುತ್ತವೆ.

ಪುಷ್ಯ ಶುಕ್ಲ ಪುತ್ರದಾ ಏಕಾದಶೀ
ಪುಷ್ಯ ವದ್ಯ ಸಫಲಾ ಏಕಾದಶೀ
ಮಾಘ ಶುಕ್ಲ ಜಯಾ ಏಕಾದಶೀ
ಮಾಘ ವದ್ಯ ಷಟ್‌ತಿಲಾ ಏಕಾದಶೀ
ಫಾಲ್ಗುಣ ಶು। ಆಮಲಕೀ ಏಕಾದಶೀ
ಫಾಲ್ಗುಣ ವ। ವಿಜಯಾ ಏಕಾದಶೀ
ಚೈತ್ರ ಶು। ಕಾಮದಾ ಏಕಾದಶೀ
ಚೈತ್ರ ವ। ಪಾಪ ಮೋಚನೀ ಏಕಾದಶೀ
ವೈಶಾಖ ಶು। ಮೋಹನೀ ಏಕಾದಶೀ
ವೈಶಾಖ ವ। ವರೂಥಿನೀ ಏಕಾದಶೀ
ಜ್ಯೇಷ್ಠ ಶು। ನಿರ್ಜಲಾ ಏಕಾದಶೀ
ಜ್ಯೇಷ್ಠ ವ। ಅಪರಾ ಏಕಾದಶೀ
ಆಷಾಢ ಶು। ಪದ್ಮನಾಭಾ ಏಕಾದಶೀ
ಆಷಾಢ ವ। ಯೋಗಿನೀ ಏಕಾದಶೀ
ಶ್ರಾವಣ ಶು। ಪುತ್ರದಾ ಏಕಾದಶೀ
ಶ್ರಾವಣ ವ। ಕಾಮದಾ ಏಕಾದಶೀ
ಭಾದ್ರಪದ ಶು। ವಾಮನ ಏಕಾದಶೀ
ಭಾದ್ರಪದ ವ। ಅಜಾ ಏಕಾದಶೀ
ಆಶ್ವಿನ ಶು। ಪಾಪಂಕುಶಾ ಏಕಾದಶೀ
ಆಶ್ವಿನ ವ। ಇಂದಿರಾ ಏಕಾದಶೀ
ಕಾರ್ತಿಕ ಶು। ತುಲಸೀ ವಿವಾಹ ಏಕಾದಶೀ
ಕಾರ್ತಿಕ ವ। ರಮಾ ಏಕಾದಶೀ
ಮಾರ್ಗಶಿರ ಶು। ಮೋಕ್ಷದಾ ಏಕಾದಶೀ

ಈ ಪ್ರಕಾರವಾಗಿ ಏಕಾದಶಿಯು ಬಹು ವಿಧವಾಗಿದೆ. ಬೇರೆ ಬೇರೆ ಫಲ ಪೇಕ್ಷಿಗಳು ಆಯಾಯ ಏಕಾದಶೀ ವ್ರತವನ್ನು ಆಚರಿಸುವದುಂಟು.

ಏಕಾದಶೀ ವ್ರತಾಚರಣೆಯ ದಿವಸ ನಿರಾಹಾರ ಮಾಡಿ, ರಾತ್ರಿ ಜಾಗರ ಮಾಡುವ ವಿಧಾನವಿರುತ್ತದೆ. ಅಂದು ಆಹಾರ ಸ್ವೀಕಾರವು, ಪಾಪ ಸ್ವೀಕಾ ವಿರುತ್ತದೆ. ಆಹಾರದಲ್ಲಿರುವ ತಮೋಗುಣವು ಮಾನವನ ಮನಸ್ಸಿನ ಮೇ ಪರಿಣಾಮನ್ನುಂಟುಮಾಡುವ ಕಾರಣ ಮಾಂಸ, ಮದ್ಯ, ಕಡಲಿ, ಕುಂಬಳಕಾಯಿ ಉಳಿದ ಶಾಕ, ಪರಾನ್ನ ಸ್ವೀಕಾರ, ವ್ಯಾಯಾಮ, ಪ್ರವಾಸ, ಸ್ತ್ರೀಸಂಗ ಕೇಶನ ಕರ್ತನ, ಪಾಪವಿಚಾರ, ಇತ್ಯಾದಿ ಆಹಾರ–ವಿಹಾರಗಳನ್ನು ವರ್ಜಮಾ ದೇವರ ಚಿಂತನೆಯಲ್ಲಿ ಕಾಲಕಳೆಯಬೇಕು. ವ್ರತ, ನಿಯಮ, ಉಪೋಷ ಇತ್ಯಾದಿ ಸತ್ಕರ್ಮಗಳು ಪರಲೋಕದಲ್ಲಿ ಸದ್ಗತಿಯನ್ನುಂಟು ಮಾಡತಕ್ಕ ಗಳಾಗಿದ್ದರೂ ಈ ಲೋಕದಲ್ಲಿ ಮಾನವನಿಗೆ ಸನ್ಮಾನ, ಸತ್ಕೀರ್ತಿ, ಸು ಸೌಭಾಗ್ಯಗಳನ್ನುಂಟು ಮಾಡತಕ್ಕವುಗಳಾಗಿವೆ. ಹಾಗೂ ಎಲ್ಲ ಸಂಪತ್ತುಗ ಗಿಂತಲೂ ಮಿಗಿಲಾದ ಆರೋಗ್ಯ ಸಂಪತ್ತುಕೂಡ ಉಪವಾಸವ್ರತಾಚರ ಯಿಂದ ಲಭಿಸತಕ್ಕದಾಗಿದೆ ಅಂತೇ "ಲಂಘನಂ ಪರಮೌಷಧಂ" ಉಪವಾಸ ಪರಮ ಔಷಧವಾಗಿದೆ ಎಂದು ಆರೋಗ್ಯ ಶಾಸ್ತ್ರದ ಆದೇಶವಿದೆ. ವಾತ ತ್ರಿದೋಷಗಳು ಉಪವಾಸದಿಂದ ಉಪಶಮನ ಹೊಂದುವದುಂಟು. ಆದಕಾ "ಜ್ವರಾದೌಲಂಘನಂ ದೇಯಂ" ಜ್ವರ ಪ್ರಾರಂಭದಲ್ಲಿ ಉಪವಾಸ ಮಾಡಿ ಬೇಕೆಂದು ಚಿಕಿತ್ಸಾಶಾಸ್ತ್ರ ಹೇಳುತ್ತದೆ. ಒಟ್ಟನಲ್ಲಿ ಹೇಳಬೇಕೆಂದರೆ ಉಪವಾ ದಿಂದ ಮನುಷ್ಯನು ಸಕಲ ರೋಗಗಳಿಂದ ಮುಕ್ತನಾಗಿ ದೃಢಶರೀರಿಯಾ ವನು. ದೃಢ ಶರೀರವುಳ್ಳವನು ಧರ್ಮ ಸಾಧನೆಗೆ ಸಮರ್ಥನಾಗುವನು. ನಾ ಆಚರಿಸುವ ಉಪವಾಸವ್ರತ ಮೊದಲಾದ ಧರ್ಮದ ನಿಯಮಗಳು ನವ ಆರೋಗ್ಯವನ್ನು ರಕ್ಷಿಸಿ, ಇಹದಲ್ಲಿ ಸುಖಸೌಭಾಗ್ಯವನ್ನೂ ಪರದಲ್ಲಿ ಸದ್ಗ ಯನ್ನೂ ಉಂಟು ಮಾಡುವವೆಂದು ದೃಢವಾಗಿ ಹೇಳಬಲ್ಲೆವು.

ಧರ್ಮದೃಷ್ಟಿಯಿಂದಾಗಲಿ, ಆರೋಗ್ಯದ ದೃಷ್ಟಿಯಿಂದಾಗಲಿ ಉಪವಾ ಮಾಡತಕ್ಕವರು ಆರೋಗ್ಯಶಾಸ್ತ್ರದ ನಿಯಮದಕಡೆಗೆ ಲಕ್ಷ್ಯಗೊಡುವದು ಒ ಯದು. ಅನೇಕ ಜನರು ಏಕಾದಶಿಯ ದಿವಸ ನಿರಾಹಾರ ಮಾಡುವದುಂ

ಏಕಕಾಲದಲ್ಲಿಯೇ ಪೂರ್ಣ ಉಪವಾಸ ಮಾಡುವದು ಶರೀರಕ್ಕೆ ಹಿತಕರವಲ್ಲ. ದಶಮಿ ಮಿತಿಯ ದಿವಸ ಹಗುರಾದ ಅರ್ಥಾತ್ ಅಲ್ಪಾಹರ ಸೇವಿಸಿ ಏಕಾದಶಿಯ ದಿವಸ ಹಗಲು ನಿರಾಹಾರ ಮಾಡಿ ಸಂಜೆಗೆ ಅಲ್ಪೋಪಹಾರ ಮಾಡಬೇಕು. ದ್ವಾದಶಿಯ ದಿನವಾದರೂ ಲಘು ಭೋಜನ ಮಾಡುವುದು ಉತ್ತಮ. ಯಾಕಂದರೆ ಉಪವಾಸವಿದ್ದು ಅಧಿಕ ಆಹಾರ ತೆಗೆದುಕೊಳ್ಳುವದಾಗಲಿ, ಜಡವಾದ ಸುಗ್ರಾಸ ಭೋಜನಮಾಡುವದಾಗಲಿ ಅಜೀರ್ಣಕ್ಕೆ ಆಮಂತ್ರಣ ಕೊಟ್ಟಂತಾಗುವದು. ಈ ಆರೋಗ್ಯ ಶಾಸ್ತ್ರವನ್ನು ಅನುಲಕ್ಷಿಸಿ ಪೂರ್ವಾಚಾರ್ಯರು ಏಕಾದಶೀ ವ್ರತವನ್ನು ದಶಮೀ, ಏಕಾದಶೀ, ದ್ವಾದಶೀ ಈ ಮೂರು ದಿವಸಗಳಲ್ಲಿ ಆಚರಿಸಬೇಕೆಂದು ಹೇಳಿರುವರಲ್ಲದೇ ಆ ಮೂರು ದಿನಗಳಲ್ಲಿ ಇಂಥ ಇಂಥ ಆಹಾರ, ವಿಹಾರದಿಂದಲೇ ಇರಬೇಕೆಂದು ಕಟ್ಟು ನಿಟ್ಟಾಗಿ ಹೇಳಿರುವುದುಂಟು. ಆ ಮಾರ್ಗವನ್ನನುಸಿರಿಸಿ ಸಾಧಕರು ಏಕಾದಶಿ ವ್ರತವನ್ನಾಚರಿಸುವುದು ಹೆಚ್ಚು ಶ್ರೇಯಸ್ಕರವು.

## ೮. ಗಜಗೌರೀ ವ್ರತ

(ಸ್ಕಂದ ಪುರಾಣಾಂತರ್ಗತ)

ಈ ವ್ರತವನ್ನು, ಸೂರ್ಯನು ಹಸ್ತಾ ನಕ್ಷತ್ರದಲ್ಲಿದ್ದಾಗ ಆರಂಭಿಸುವುದರಿಂದ "ಹಸ್ತಾ ಗೌರೀವ್ರತವೆಂತಲೂ ಅನ್ನುವದುಂಟು. ಹದಿನಾಲ್ಕು ವರುಷ ಈ ವ್ರತವನ್ನು ಮಾಡಿ ಉದ್ಯಾಪನೆ ಮಾಡಬೇಕು.

ಸಂಕಲ್ಪ–ನನ್ನ ಈ ಜನ್ಮ–ಜನ್ಮಾಂತರದಲ್ಲಿಯೂ ಅಖಂಡ ಸೌಭಾಗ್ಯ, ಪುತ್ರ, ಪೌತ್ರ, ಐಶ್ವರ್ಯ, ಸದ್ಗತಿ ಪ್ರಾಪ್ತಿಗಾಗಿ ಈ ವೃತವನ್ನು ಆಚರಿಸುತ್ತೇನೆ. ತದಂಗ ಗಣಪತಿ ಪೂಜಾ, ಪುಣ್ಯಾಹವಾಚನೆ ಮಾಡಿಸಬೇಕು. ಭಂಗಾರದ ಆನೆಯ ಮೇಲೆ ಕುಳಿತಂಥ ಶಿವ, ಗಣೇಶ, ಗೌರೀಪೂಜಾ ಮಾಡಬೇಕು. ಷೋಡಶೋಪಚಾರಗಳಿಂದ ಪೂಜಿಸಬೇಕು.

ಈ ಬಗ್ಗೆ ಪೌರಾಣಿಕ ಕಥೆಯುಂಟು—ಒಂದಾನೊಂದು ದಿವಸ ಶ್ರೀ ಕೃಷ್ಣನು ಕುಂತೀದೇವಿಯ ಮನೆಗೆ ಬಂದನು. ಕುಂತಿಯು ಆವನಿಗೆ ನಮಸ್ಕರಿಸಿ ಉನ್ನತಾಸನದಲ್ಲಿ ಕುಳ್ಳಿರಿಸಿ ಪ್ರಶ್ನೆ ಮಾಡಿದಳು–"ಸ್ವಾಮೀ ! ನಿನ್ನ ಆಗಮನ

ದಿಂದ ನಾನು ಧನ್ಯಳಾದೆನು. ನನಗೆ ನೀನು ಪ್ರಸನ್ನನಾದುದಾದರೆ, ನನ್ನ ಮಕ್ಕಳಿಗೆ ಅನಾಯಾಸವಾಗಿ ರಾಜ್ಯಲಭಿಸಬೇಕು. ಅಂಥ ವ್ರತನಿಯಮಗಳಿದ್ದರೆ ತಿಳಿಸು" ಎಂದು ಬೇಡಿಕೊಂಡಳು. ಪ್ರಸನ್ನ ಚಿತ್ತನಾದ ಶ್ರೀ ಕೃಷ್ಣನು ಕುಂತಿದೇವಿಯನ್ನು ಕುರಿತು–"ಸಮಸ್ತ ವ್ರತಗಳಲ್ಲಿ ಹಸ್ತ ಗೌರೀ ವ್ರತವು ಪರಮ ಶ್ರೇಷ್ಠವಾದುದಾಗಿದೆ. ಈ ವ್ರತಾಚರಣೆಯಿಂದ ನಿನ್ನ ಮಕ್ಕಳು ಸಹಜವಾಗಿ ರಾಜ್ಯವನ್ನು ಪುನಃ ಹೊಂದುವರು''ಎಂದು ನುಡಿದನು. ಕುಂತಿಯು "ಸ್ವಾಮಿ! ಈ ವ್ರತವನ್ನು ಪೂರ್ವದಲ್ಲಿ ಯಾರಾದರೂ ಆಚರಿಸಿರುವರೇ ಹೇಗೆ?" ಎಂಬುದಾಗಿ ಕೇಳಿದಳು. ಆಗ ಕೃಷ್ಣನು – "ಕೈಲಾಸಪರ್ವತದಲ್ಲಿ ಒಂದು ದಿವಸ ಪಾರ್ವತೀದೇವಿಯು, ಹಸ್ತಾ ನಕ್ಷತ್ರದಲ್ಲಿ ಸೂರ್ಯನಿರುವಾಗ ಹಗಲು ಮಲಗಿದವಳಾಗಿ ನಿದ್ರಿಸುತ್ತಿದ್ದಳು. ಆ ಸಮಯದಲ್ಲಿ ಅವಳು ಅರ್ಧ ಹೋರಿಯನ್ನು ಹತ್ತಿದ ಶಿವನ ಅರ್ಧದೇಹವನ್ನು ಕನಸಿನಲ್ಲಿ ಕಂಡಳು. ಗಾಬರಿಯಾಗಿ ಹಾಸಿಗೆಯಿಂದ ಎದ್ದು ಕುಳಿತವಳಾಗಿ, ಈ ದುಃಸ್ವಪ್ನದ ವಿಷಯವನ್ನು ಶಿವನಿಗೆ ಅರುಹಿದಳು. ಮತ್ತು ಅದಕ್ಕೆ ಶಾಂತಿಯನ್ನು ಕೇಳಿಕೊಂಡಳು. ಶಿವನು–"ದೇವಿ! ಸೂರ್ಯನು ಹಸ್ತಾ ನಕ್ಷತ್ರದಲ್ಲಿರುವಾಗ ಹಗಲು ನಿದ್ರಿಸಬಾರದು ಮತ್ತು ನೀನು ಈ ಪೂರ್ವದಲ್ಲಿ ವ್ರತಗ್ರಹಣಮಾಡಿ, ಅದನ್ನು ಅಪೂರ್ತಿಮಾಡಿದೆ ಈ ಎರಡು ಕಾರಣಗಳಿಂದ ಇಂಥ ಅಶುಭ ಸ್ವಪ್ನ ಕಂಡೆಯಾದುದರಿಂದ ಅದರ ನಿವಾರಣೆಗಾಗಿ, ಸೂರ್ಯನು ಹಸ್ತಾ ನಕ್ಷತ್ರದಲ್ಲಿ ಉದಯನಾದಾಗ ಬಂಗಾರದ ಆನೆಯ ಮೇಲೆ ಗಣೇಶನಿಂದ ಸಮೇತರಾದ ಪಾರ್ವತೀ ಪರಮೇಶ್ವರರನ್ನು ಕುಳ್ಳಿರಿಸಿ ಮುತ್ತು, ರತ್ನಾದಿ ಸರ್ವಾಲಂಕಾರದಿಂದ ಶೃಂಗರಿಸಿ ಪತ್ರ, ಪುಷ್ಪ, ಧೂಪ, ದೀಪ, ನೈವೇದ್ಯಾದಿಗಳಿಂದ ಪೂಜಿಸಬೇಕು''ಎಂದು ನುಡಿದನು. ಶಿವನ ಅಪ್ಪಣೆಯಂತೆ ಶೈಲಪುತ್ರಿಯು ಬಂಗಾರದ ಶಿವ–ಪಾರ್ವತಿಯರ ಪ್ರತಿಮೆಯನ್ನು ವಿಧ್ಯುಕ್ತವಾಗಿ ಸ್ಥಾಪಿಸಿ, ಆಹ್ವಾನಿಸಿ ೧೩೦ ದೀಪಗಳನ್ನು ಹಚ್ಚಿ ಗಂಧಾಕ್ಷತೆಗಳನ್ನು ಧರಿಸಿ, ನಾನಾ ಪ್ರಕಾರದ ಕುಸುಮಗಳನ್ನರ್ಪಿಸಿ ವಿಧ ವಿಧವಾದ ಫಲ ಪಕ್ವಾನ್ನಗಳನ್ನು ನೈವೇದ್ಯಮಾಡಿ, ಧ್ಯಾನಮಗ್ನಳಾಗಿಪೂಜಿಸಿ ವಿಸರ್ಜನೆಮಾಡಿದಳು. ಹೀಗೆ ೧೪ ವರುಷಗಳವರೆಗೆ ವ್ರತವನ್ನಾಚರಿಸಿ ೨೭ ಎಲೆಗಳಲ್ಲಿ ಮಾಡಿದ ಪಕ್ವಾನ್ನವನ್ನು ಬಂಗಾರದ ಪ್ರತಿಮೆಯನ್ನೂ ದಾನವಾಗಿಕೊಟ್ಟಳು. ಹೀಗೆ ಪಾರ್ವತಿಯು ಮನಃಶಾಂತಿಗಾಗಿ ಅನಾದಿಯಾದ ಈ ವ್ರತವನ್ನು ಆಚರಿಸಿದಳು

ಈ ಪ್ರಕಾರವಾದ ಶ್ರೀಕೃಷ್ಣನ ಮಾತನ್ನು ಕೇಳಿ ಕುಂತಿಯು–ಸ್ವಾಮೀ! ನಾನು ಅಷ್ಟೊಂದು ಬಂಗಾರವನ್ನು ಎಲ್ಲಿಂದ ತರಬೇಕು. ಬೇರೆ ಉಪಾಯ ವಿದ್ದರೆ ತಿಳಿಸಬೇಕೆಂದು ಕೇಳಿಕೊಂಡಳು. ಆಗ ಕೃಷ್ಣನು 'ಮೂರ್ತಿರ್ಮೃಣ್ಮಯಾ ಬಿಲ್ವದಲೇನ ಪೂಜಾ', ಎಂಬಂತೆ ದಯಾನಿಧಿಯಾದ ಆ ಶಿವನು ಸರ್ವರಿಗೂ ಒಂದೇ ವಿಧನಾಗಿರುವನು. ಯಾವ ದರಿದ್ರನು ಮಣ್ಣಿನ ಪ್ರತಿಮೆಯನ್ನು ಮಾಡಿ, ಬಿಲ್ವದಲದಿಂದ ಭಕ್ತಿ ಪೂರ್ವಕವಾಗಿ ಪೂಜಿಸಿದ ಮಾತ್ರಕ್ಕೆ ಅವನಿಗೆ ಪ್ರಸನ್ನ ನಾಗುವನು ಎಂದನು.

ಈ ಮಾತನ್ನು ಗಾಂಧಾರಿಯೂ ಕೇಳಿದಳು. ತತ್‌ಕ್ಷಣದಲ್ಲಿಯೇ ತನ್ನ ನೂರು ಜನ ಮಕ್ಕಳನ್ನು ಕರೆದು ಬಿಳೀ ಮಣ್ಣನ್ನು ತರಿಸಿ ಶಿವಪಾರ್ವತಿಯರ ಪ್ರತಿಮೆಯನ್ನು ನಿರ್ಮಿಸಿ. ವಿಧ್ಯುಕ್ತವಾಗಿ ಪೂಜೆಯನ್ನು ಪೂರೈಸಿದಳು. ಇದನ್ನು ಕೇಳಿ ಕುಂತಿಯು ದರಿದ್ರರಾದ ತನ್ನ ಐದು ಜನ ಮಕ್ಕಳು ಇಂಥ ವ್ರತವನ್ನು ಹೇಗೆ ಆಚರಿಸುವರು, ಎಂಬುದಾಗಿ ಚಿಂತಿಸುತ್ತಿರಲು ಅರ್ಜುನನು ಅಮ್ಮಾ! ಮಣ್ಣಿನ ಪ್ರತಿಮೆಯನ್ನು ತೆಗೆದುಕೊಂಡು ನೀನೇನುಮಾಡುವೆ? ಸಾಕ್ಷಾತ್ ಶಿವ ನನ್ನೇ ನಿನ್ನಲ್ಲಿಗೆ ಕರೆದುಕೊಂಡು ಬರುವೆ, ಎಂದು ಅರ್ಜುನನು ತಾಯಿಗೆ ನಮಸ್ಕರಿಸಿ ಗಂಗಾ ತೀರಕ್ಕೆ ಹೋದನು. ಅಲ್ಲಿ ಪಾರ್ವತೀ ಪರಮೇಶ್ವರರನ್ನು ಭಕ್ತಿತತ್ಪರನಾಗಿ ಸ್ತೋತ್ರ ಮಾಡಿದನು. ಆಶುತೋಷನಾದ ಭಗವಾನ್ ಶಂಕ ರನು ಅರ್ಜುನನ ಭಕ್ತಿಗೊಲಿದು ಅವನಿಚ್ಛೆಯಂತೆ ಪಾರ್ವತಿಯೊಡನೆ ಗಜ ವಾಹನನಾಗಿ ಮನೆಗೆ ಬಂದನು. ಕುಂತಿಯು ಹರ್ಷಭರಿತಳಾಗಿ ತನ್ನ ಐದು ಜನ ಮಕ್ಕಳೊಡನೆ ಪಾರ್ವತೀ ಪರಮೇಶ್ವರರನ್ನು ಸೂರ್ಯನು ಹಸ್ತಾನಕ್ಷತ್ರ ದಲ್ಲಿರುವಾಗ ಭಕ್ತಿ ತತ್ಪರಳಾಗಿ ಷೋಡಶೋಪಚಾರದಿಂದ ಪೂಜಿಸಿದಳು. ಮತ್ತು ತನ್ನ ಪುತ್ರರು ಸಹಜವಾಗಿ ಪುನಃ ರಾಜ್ಯವನ್ನು ಪಡೆಯಬೇಕೆಂದು ಪ್ರಾರ್ಥಿಸಿದಳು. ಪ್ರಸನ್ನಾದ ಶಂಕರನು 'ತಥಾಸ್ತು' ಎಂದು ಉಚ್ಚರಿಸಿ ಕುಂತಿಗೆ ಆಯುರಾರೋಗ್ಯ ಭಾಗ್ಯಾದಿಗಳನ್ನು ಅನುಗ್ರಹಿಸಿ, ಪಾರ್ವತಿಯೊಡನೆ ಗಜಾ ರೋಹಿಯಾಗಿ ಅದೃಶ್ಯನಾದನು. 'ಹೀಗೆ ಈ ವ್ರತವು ಸ್ತ್ರೀಯರಿಗೆ ಸಕಲ ಸೌಭಾಗ್ಯವನ್ನುಂಟುಮಾಡುವುದಾಗಿದೆ.'

# ಶ್ರೀ ವರದಶಂಕರ ವ್ರತ



ಶ್ರೀವರದಶಂಕರ ವ್ರತವನ್ನು ಆಚರಿಸುವವರು ಉದಯಕಾಲದಲ್ಲೆದ್ದು ದಂತಧಾವನಾದಿ ನಿತ್ಯಕರ್ಮಗಳಿಂದ ನಿವೃತ್ತರಾಗಿ, ಸ್ನಾನವನ್ನು ಮಾಡಿ ಪ್ರಶಾಂತ ಮನಸ್ಸುಳ್ಳವರಾಗಬೇಕು. ಒಂದು ವೇದಿಕೆಯ ನಾಲ್ಕು ದಿಕ್ಕುಗಳಲ್ಲಿ ಬಾಳೇ ಗಿಡಗಳನ್ನು ಕಟ್ಟಿ ಮಂಟಪವನ್ನು ರಚಿಸಿ, ಅದನ್ನು ತಳಿರು ತೋರಣಗಳಿಂದ ಅಲಂಕರಿಸಬೇಕು. ಆ ಮಂಟಪದ ಮಧ್ಯದಲ್ಲಿ ಒಂದು ಚೌಕಿಯ ಮೇಲೆ ಮೊದಲು ಶ್ರೀ ಗಜಾನನನ್ನು ಸ್ಥಾಪಿಸಿ ಆಹ್ವಾನಿಸಿ ಪೂಜಿಸಬೇಕು. ಉತ್ತರ ದಿಕ್ಕಿನಲ್ಲಿ ಶ್ರೀ ವರುಣನನ್ನು ಆಹ್ವಾನಿಸಬೇಕು. (ಉತ್ತರ ದಿಕ್ಕಿನಲ್ಲಿ ಕಲಶವನ್ನು ಸ್ಥಾಪಿಸಿ ಅಲ್ಲಿ ವರುಣನನ್ನು ಆಹ್ವಾನಿಸಿ ಪೂಜಿಸಬೇಕು.) ಮಧ್ಯದ ಅಷ್ಟದಳ ಕಮಲದ ಮಧ್ಯದಲ್ಲಿ ಶ್ರೀವರದ ಶಂಕರ ಮೂರ್ತಿಯನ್ನು ಸ್ಥಾಪಿಸಿ ಎದುರಿಗೆ ನಂದೀಶ್ವರನನ್ನು ಸ್ಥಾಪಿಸಬೇಕು. ಸುತ್ತಲೂ ಅಂದರೆ ಅಷ್ಟ ದಿಕ್ಕುಗಳಲ್ಲಿ ಅಷ್ಟ ದಿಕ್ಪಾಲರನ್ನು ಸ್ಥಾಪಿಸಿ ಆಹ್ವಾನಿಸಿ ಪೂಜಿಸಬೇಕು. ಶ್ರೀವರದಶಂಕರನ ಎಡಭಾಗಕ್ಕೆ ಶ್ರೀಭವಾನಿಯನ್ನು, ಭವಾನಿಯ ಎಡಭಾಗಕ್ಕೆ

ಜಯ ಹಾಗೂ ಸೋಮನನ್ನು ಪ್ರತಿಷ್ಠಿಸಬೇಕು. ಇದರಂತೆ ಶ್ರೀವರದ ಶಂಕರನ ಬಲಭಾಗಕ್ಕೆ ಶ್ರೀ ವಿಷ್ಣುವನ್ನು, ಆ ವಿಷ್ಣುವಿನ ಬಲಕ್ಕೆ ಶ್ರೀ ಲಕ್ಷ್ಮಿಯನ್ನು ಪ್ರತಿಷ್ಠಾಪನೆ ಮಾಡಬೇಕು. ಮೊದಲು ಗಣಪತಿ ಪೂಜಾ ಆದ ನಂತರ ಘಂಟಾಪೂಜಾ, ದೀಪಪೂಜಾ, ಶ್ರೀ ವರುಣ ಪೂಜಾ, ಇಂದ್ರಾದಿ ಅಷ್ಟ ದಿಕ್ಪಾಲಕರ ಪೂಜಾ ಮಾಡಬೇಕು. ಆ ನಂತರ ಶ್ರೀ ವರದ ಶಂಕರ ಪೂಜಾ ಮಾಡಿ, ಪ್ರಸಾದ ನೈವೇದ್ಯ ಮಾಡಬೇಕು.

## ಪ್ರಸಾದಕ್ರಮ

ಗೋದಿ, ಸಜ್ಜಿಗೆಯನ್ನು ತುಪ್ಪದಲ್ಲಿ ಹುರಿದು ಸಕ್ಕರೆ ಬೆರಿಸಿ ಶಿರಾ ತಯಾರಿಸಬೇಕು. ಅದನ್ನು ಶ್ರೀ ವರದ ಶಂಕರನಿಗೆ ನೈವೇದ್ಯ ಮಾಡಬೇಕು. ಆ ಪ್ರಸಾದದಲ್ಲಿ ಮೂರು ಭಾಗ ಮಾಡಿ, ೧ ನೆಯ ಭಾಗವನ್ನು ಅರ್ಚಕರಿಗೆ ಅರ್ಪಿಸಬೇಕು. ೨ ನೇ ಭಾಗವನ್ನು ಯಜಮಾನನಿಗೂ, ಅವರ ಪರಿವಾರಕ್ಕೂ ವಿನಿಯೋಗಿಸಬೇಕು. ೩ ನೆಯ ಭಾಗವನ್ನು ಬಂದಂಥ ಜನತೆಗೆ ಅರ್ಪಿಸ ಬೇಕು. ಆ ಪ್ರಸಾದವನ್ನು ಎಲ್ಲರೂ ಶ್ರದ್ಧೆಯಿಂದ ಸ್ವೀಕರಿಸಬೇಕು. ಹೀಗೆ ಮಾಡಿದರೆ ಅವರ ಸಕಲಾಭೀಷ್ಟೆಯು ಸಿದ್ಧಿಯಾಗುವುದು.

## ಶ್ರೀ ವರದ ಶಂಕರ ಕಥಾ

ಒಂದು ಸಾರೆ ಸೂತಾಚಾರ್ಯರು ಶಾಂತ ಮನಸ್ಸಿನಿಂದ ಕೂತಿರಲು, ಅಲ್ಲಿಗೆ ಶೌನಕಋಷಿಯು ಹೋಗಿ, ಅಭಿವಂದಿಸಿ ಕೇಳಿದುದೇನಂದರೆ–"ಮಹಾ ಪ್ರಾಜ್ಞರೆ ! ಯಾವ ವ್ರತಾಚರಣೆಯಿಂದ ಅಪೇಕ್ಷಿತ ಫಲಪ್ರಾಪ್ತಿಯಾಗುವುದು? ಅಂಥ ವ್ರತವನ್ನು ಹೇಳಬೇಕು" ಅದಕ್ಕೆ ಸೂತಾಚಾರ್ಯರು "ಹಿಂದಕ್ಕೆ ಶ್ರೀಸ್ಕಂದನು ಅಗಸ್ತ್ಯ ಮಹರ್ಷಿಗೆ ಹೇಳಿದುದನ್ನೇ ನಾನೀಗ ನಿನಗೆ ಹೇಳು ತ್ತೇನೆ. ಲಕ್ಷ್ಯವಿಟ್ಟು ಕೇಳುವವನಾಗು – "ಪೂರ್ವ ಕಾಲದಲ್ಲಿ ಕ್ರೌಂಚಾದ್ರಿ ಶಿಖರದಲ್ಲಿ ಅಗಸ್ತ್ಯ ಮಹರ್ಷಿಯು ಸ್ಕಂದನಿಗೆ ನಮಸ್ಕರಿಸಿ ಕೇಳಿಕೊಂಡನು. "ಸ್ವಾಮೀಕಾರ್ತಿಕೇಯ ! ನಾನು ಕಾಶೀ ಕ್ಷೇತ್ರವನ್ನು ಬಿಟ್ಟೆನು. ಭಾಗೀರಥಿ ಸ್ನಾನವನ್ನು ಬಿಟ್ಟು ಲೋಕಕಲ್ಯಾಣಕ್ಕಾಗಿ ಈ ದಂಡಕಾರಣ್ಯಕ್ಕೆ ಬಂದೆನು. ಆದರೆ ಶ್ರೀ ವಿಶ್ವನಾಥನನ್ನು ಅಗಲಿ ಬಂದೆನು. ಆವನೆಲ್ಲಿ ಈ ದಂಡಕಾರಣ್ಯವೆಲ್ಲಿ

ಎಂದು ನನ್ನ ಮನಸ್ಸು ಗಾಬರಿಗೊಂಡಿದೆ. ಇಂದು ತಮ್ಮ ದರ್ಶನದಿಂದ ಧನ್ಯನಾದೆನು. ಯಾವ ಉಪಾಯದಿಂದ ಮನಸ್ಸಿಗೆ ಚಿರಶಾಂತಿ ಸಿಗುವುದು'' ಎಂದು ಕೇಳಿಕೊಂಡನು. ಆಗ ಷಣ್ಮುಖನು-''ಅಗಸ್ತ್ಯನೇ ಪೂರ್ವ ಕಾಲದಲ್ಲಿ ಸಾಕ್ಷಾತ್ ಶಂಕರನು ಬ್ರಹ್ಮದೇವನಿಗೆ ಉಪದೇಶ ಮಾಡಿದ ಶ್ರೀವರದ ಶಂಕರ ವ್ರತವನ್ನು ಮಾಡುವವನಾಗು. ಅದರಿಂದ ನಿನಗೆ ಮನಶ್ಶಾಂತಿಯು ಲಭಿಸುವುದು'' ಎಂದನು ಅದಕ್ಕೆ ಅಗಸ್ತ್ಯ ಮಹರ್ಷಿಯು,-''ಸ್ವಾಮೀಕಾರ್ತಿಕೇಯ! ಆ ವ್ರತವನ್ನು ತಮ್ಮ ಮುಖದಿಂದ ನಾನು ಕೇಳಿಕೊಳ್ಳಲು ಆತುರನಾರುಗಿವನೆಂ''ದನು. ಆಗ ಷಣ್ಮುಖಸ್ವಾಮಿಯು,—''ಒಂದು ಸಾರೆ ಶ್ರೀವಿಷ್ಣುದೇವನು ಪ್ರಳಯೋದಕದಲ್ಲಿ ಶಯನ ಮಾಡಿರಲು, ಅವನ ನಾಭಿಯಿಂದ ಕಮಲವು ಹುಟ್ಟಿತು. ಅದರಿಂದ ಬ್ರಹ್ಮನು ಉತ್ಪನ್ನನಾದನು. ಸುಪ್ತಾವಸ್ಥೆಯಲ್ಲಿರುವ ವಿಷ್ಣುದೇವನ ಕಿವಿಯ ಮಲದಿಂದ ಮಧು, ಕೈಟಭರೆಂಬ ಇಬ್ಬರು ದೈತ್ಯರು ಉದ್ಭವಿಸಿದರು. ಅವರು ಬ್ರಹ್ಮದೇವನೊಡನೆ ಹೋರಾಡಹತ್ತಿದರು. ಆಗ ಬ್ರಹ್ಮನು ಜಗತ್ಪಾಲಕನಾದ ಶಂಕರನಿಗೆ ಮೊರೆಹೊಕ್ಕು ''ದೇವ ಈ ದುರ್ಧರ ಸಮಯದಲ್ಲಿ ನನ್ನನ್ನು ನೀನೇ ರಕ್ಷಿಸು. ಈ ಮಧುಕೈಟಭರು ನನ್ನನ್ನು ಕೊಲ್ಲಲು ಬಂದಿರುವರು. ಕಾರಣ ಶ್ರೀವಿಷ್ಣುವನ್ನು ಎಬ್ಬಿಸು'' ಎಂದು ಪ್ರಾರ್ಥಿಸಿದನು. ಆಗ ಶಿವನು ಬ್ರಹ್ಮನಿಗೆ ಪ್ರಸನ್ನನಾಗಿ-''ಶ್ರೀವರದ ಶಂಕರನ ವ್ರತಾಚರಣೆಯಿಂದ ನಿನ್ನ ಕಂಟಕವು ದೂರಾಗುವುದೆಂದು'' ಹೇಳಿದನು. ಬ್ರಹ್ಮನು ಶ್ರೀವರದ ಶಂಕರನವ್ರತ್ತವನ್ನು ವಿಧ್ಯುಕ್ತವಾಗಿ ಆಚರಿಸಿದನು. ಆಗ ಶ್ರೀವಿಷ್ಣುವು ಎಚ್ಚತ್ತು ನೋಡಿದನು. ಮಧುಕೈಟಭರೆಂಬ ಕ್ರೂರ ದೈತ್ಯರನ್ನು ಲೋಕ ಕಲ್ಯಾಣಕ್ಕಾಗಿ ಸಂಹರಿಸಲು ಅವರೊಡನೆ ಯುದ್ಧವನ್ನು ಮಾಡಿದನು. ಐದು ಸಹಸ್ರ ವರುಷಗಳವರೆಗೆ ಎಡೆಬಿಡದೇ ಹೋರಾಡಿದರೂ ಆ ದೈತ್ಯರು ಮೃತರಾಗಲಿಲ್ಲ. ವಿಷ್ಣುವು ಬಲಹೀನನಾದನು. ದೈತ್ಯರು ಪ್ರಬಲರಾದ ಕಾರಣ ಅವನು ರಣಾಂಗಣದಿಂದ ಓಡಿಹೋದನು. ಆಗ ದೈತ್ಯರು ಶ್ರೀ ವಿಷ್ಣುವನ್ನು ಕೊಲ್ಲಲು ಹುಡುಕಹತ್ತಿದರು. ವಿಷ್ಣುವು ಈ ವಿಪತ್ತಿನಿಂದ ಪಾರಾಗಲು ಶಿವನನ್ನು ಪ್ರಾರ್ಥಿಸಲಾಗಿ ಅವನು ಪ್ರಸನ್ನನಾಗಿ ವಿಷ್ಣುವಿಗೆ ವರದ ಶಂಕರ ವ್ರತದ ಮಹಿಮೆಯನ್ನೂ, ಅದರ ವಿಧಾನವನ್ನೂ ಬೋಧಿಸಿದನು. ಜಲಮಯವಾದ ಜಗತ್ತಿನಲ್ಲಿ ಪೂಜೆ ಸಾಮಗ್ರಿಯ ಅಭಾವವಾಗಿದ್ದರೂ ಶ್ರೀ ವಿಷ್ಣುವು ಶಿವನ

ಆಜ್ಞೆಯಂತೆ ಕೇವಲ ಜಲದಿಂದಲೇ ವರದ ಶಂಕರನನ್ನು ಆರಾಧಿಸಿದನು. ಪೂಜಾ ಕಥೆಯನ್ನು ಹೇಳುವವರಿರಲಿಲ್ಲ. ಆಗ ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮದೇವನು ಪ್ರಕಾಶಮಾನನಾಗಿ ನಾಲ್ಕು ವೇದಗಳಿಂದ ಶ್ರೀ ಶಂಕರನ ಸ್ತೋತ್ರಮಾಡಿ ಅವನ ಮಹಾತ್ಮೆ ಹೇಳಿದನು. ಆಗ ವಿಷ್ಣುವು ಕಥೆ ಕೇಳಿ ಪ್ರಸಾದ ಕೊಟ್ಟನು. ಸಮಸ್ತ ದೇವತೆಗಳಿಗೂ ಶ್ರೇಷ್ಠನಾದ ವಿಷ್ಣುವಿಗೆ ಶ್ರೀ ವರದಶಂಕರನು ಪ್ರಸನ್ನನಾಗಿ ಯುದ್ಧದಲ್ಲಿ ವಿಜಯವನ್ನು ಪಡೆಯಲು ಅವನಿಗೆ ಅನುಗ್ರಹಿಸಿ ಅದೃಶ್ಯನಾದನು. ಶ್ರೀ ವಿಷ್ಣುವು ವರಪ್ರಾಪ್ತಿಯಿಂದ ಪ್ರಬಲನಾಗಿ ನೀರಿನಿಂದ ಮೇಲಕ್ಕೆದ್ದು ಮಧುಕೈಟಭರೊಡನೆ ಹೋರಾಡಿ ಕ್ಷಣಾರ್ಧದಲ್ಲಿ ಆ ಉಭಯ ದೈತ್ಯರನ್ನು ಸಂಹರಿಸಿದನು. ಅವರ ಮೇದಸ್ಸಿನಿಂದ ರಂಜಿತವಾದ ಭೂಮಿಯನ್ನು ಮೇಲಕ್ಕೆ ತಂದನು. ಆದಕಾರಣ ಸಕಲ ದುರಿತ ದೂರಾಗಲು ಶ್ರೀ ವರದಶಂಕರ ವ್ರತವನ್ನು ಮಾಡಬೇಕೆಂದು ಹೇಳಿದನು.

೧ ನೆಯ ಅಧ್ಯಾಯ ಸಮಾಪ್ತಿಯಾದುದು.

## ೨ ನೆಯ ಅಧ್ಯಾಯ

ಒಂದಾನೊಂದು ಕಾಲದಲ್ಲಿ ಬ್ರಹ್ಮನು ಸೃಷ್ಟಿಯನ್ನು ನಿರ್ಮಿಸತೊಡಗಿದನು. ಆದರೆ ಅದು ಸ್ಥಿರವಾಗಿರಲಿಲ್ಲ. ಅವನು ವಿಸ್ಮಿತನಾಗಿ ಶ್ರೀವಿಷ್ಣು ದೇವನನ್ನು ಸ್ಮರಿಸಿದನು. ಅವನು ಪ್ರಸನ್ನನಾಗಿ-"ನೀನು ವರದ ಶಂಕರನ ವ್ರತವನ್ನು ಆಚರಿಸು ಅವನ ಪ್ರಸಾದದಿಂದ ನೀನು ಕೈಕೊಂಡ ಕಾರ್ಯವು ಸಿದ್ಧಿಸುವುದು" ಎಂದು ನುಡಿದನು. ಆ ಪ್ರಕಾರವಾಗಿ ಬ್ರಹ್ಮದೇವನು ವಿಧ್ಯುಕ್ತವಾಗಿ ವ್ರತವನ್ನಾಚರಿಸಿ, ಸ್ಥಿರವಾದ ಸ್ಥಿತಿಹೊಂದಿದನು. ಯಾರು ಯಾವುದನ್ನು ಅಪೇಕ್ಷಿಸುವರೋ, ಅವರು ಅದನ್ನು ಪಡೆಯುವರು. ವಿದ್ಯಾರ್ಥಿಯು ವಿದ್ಯಾಸಂಪನ್ನನಾಗುವನು. ಧನಾರ್ಥಿಯು ಧನವನ್ನು ಗಳಿಸುವನು. ಬಂಜೆಯು ಸಂತಾನವುಳ್ಳವಳಾಗುವಳು. ಕನ್ಯೆಯು ಯೋಗ್ಯ ವರನನ್ನು ಪಡೆಯುವಳು. ಪವಿತ್ರ ಮನಸ್ಸಿನಿಂದ ವಿಧಾನೋಕ್ತವಾಗಿ ಈ ವ್ರತವನ್ನಾಚರಿಸುವವರಿಗೆ ಗ್ರಹಬಾಧೆ ಭೂತಬಾಧೆ ಇತ್ಯಾದಿ ದುರಿತಗಳು ದೂರಾಗುವವು.

ವಿಶ್ರವಸನಿಗೆ 'ಇಲಬಿಲಾ' 'ಕೇಶಿನೀ' ಎಂಬುದಾಗಿ ಇಬ್ಬರು ಸತಿಯರಿದ್ದರು. ಇಲಬಿಲಾ,, ಇವಳಿಗೆ ಕುಬೇರನು ಮಗನಾಗಿದ್ದನು. ಕೇಶಿನೀ ಇವಳ

ಉದರದಲ್ಲಿ ರಾವಣನು ಜನಿಸಿದನು. ಕುಬೇರನು ಸಕಲ ಸಂಪತ್ತಿನೊಡನೆ ಲಂಕಾಧಿಪತ್ಯವನ್ನುವಹಿಸಿ ಸುಖದಿಂದಿದ್ದನು. ಅವನ ಅಣ್ಣನಾದ ರಾವಣನು ಪಾತಾಳದಲ್ಲಿ ವಾಸಿಸುತ್ತಿದ್ದನು. ಇವನಿಗೆ ಕುಬೇರನು ಇಷ್ಟು ಸುಖದಿಂದಿರುವುದು ಸೇರಿಕೆ ಬರಲಿಲ್ಲ. ತಾನೂ ಅವನಂತೆ ಧನಪತಿಯಾಗಬೇಕೆಂದು ನಿರ್ಧರಿಸಿ, ಗೋಕರ್ಣದಲ್ಲಿ ಒಂದು ಸಾವಿರ ವರುಷ ತಪಸ್ಸು ಮಾಡಿದನು. ಶಿವನು ಒಲೆಯದಿರುವುದನ್ನು ನೋಡಿ,ತನ್ನ ಶಿರಸ್ಸನ್ನು ಕತ್ತರಿಸಿ ಶಿವನಿಗೆ ಅರ್ಪಿಸಿದನು. ಆದರೂ ಶಿವನು ಪ್ರಸನ್ನನಾಗಲಿಲ್ಲ. ಅದನ್ನು ನೋಡಿ ರಾವಣನು ವಿಚಾರಶೂನ್ಯನಾದನು. ಹೀಗಿರಲು ಅಲ್ಲಿಗೆ ಒಂದು ದಿನ ನಾರದನು ಬಂದನು. ಅವನಿಗೆ ರಾವಣನು ಉನ್ನತಾಸನ ಕೊಟ್ಟು, ಸತ್ಕರಿಸಿ, ನಮುಸ್ಕಾರ ಮಾಡಿ, ಶಿವನು ಒಲಿಯುವ ಉಪಾಯವನ್ನು ಕೇಳಿಕೊಂಡನು ಆಗ ನಾರದನು ರಾವಣನಿಗೆ ಶ್ರೀವರದಶಂಕರ ವ್ರತದ ಮಹಿಮೆಯನ್ನೂ ಅದನ್ನು ಆಚರಿಸುವ ವಿಧಾನವನ್ನೂ ತಿಳಿಸಿದನು. ಆ ಪ್ರಕಾರವಾಗಿ ರಾವಣನು ಆ ವ್ರತವನ್ನಾಚರಿಸಿ, ಕುಬೇರನಿಂದ ಲಂಕಾಧಿಪತ್ಯವನ್ನು ಪಡೆದುಕೊಂಡನು. ಮುಂದೆ ಕುಬೇರನು ಶಿವಾರಾಧನೆ ಮಾಡಲು ಶಿವನು ಪ್ರಸನ್ನನಾಗಲಿಲ್ಲ. ಆಗ ಅವನು ದಧೀಚಿ ಋಷಿಯ ಅಪ್ಪಣೆಯ ಮೇರೆಗೆ ದಿವ್ಯ ಶ್ರೀವರದಶಂಕರ ವ್ರತವನ್ನಾಚರಿಸಿ ಮಹತ್ತರವಾದ ಸಂಪತ್ತನ್ನು ಪಡೆದು 'ಧನಪತಿ' ಎಂದು ಅನಿಸಿಕೊಂಡನು.

## ೩ ನೆಯ ಅಧ್ಯಾಯ

ಪೂರ್ವದಲ್ಲಿ 'ಜಯನೆಂ'ಬ ಅರಸನು ಅವಂತ್ಯ ದೇಶಕ್ಕೆ ಅಧಿಪತಿ ಯಾಗಿದ್ದನು. ಅವನಿಗೆ ಆಕಸ್ಮಿಕವಾಗಿ ಕಣ್ಣುಗಳು ಹೋದವು. ಹಲವಾರು ರಾಜವೈದ್ಯರಿಂದ ಚಿಕಿತ್ಸೆ ಪಡೆದರೂ ಗುಣಹೊಂದಲಿಲ್ಲ. ಆದ್ದರಿಂದ ಅವನು ಪೂರ್ವಜನ್ಮದ ದುಷ್ಕೃತದ ಫಲವಾಗಿ "ಅಂಧನಾಗಿರುವೆನೆಂ"ದು ವ್ಯಥೆ ಪಡುತ್ತಿರಲು ಪ ಹಾಡದ ಅರಸು ದಾಳಿಮಾಡಿ, ಅವನ ಅರಸೊತ್ತಿಗೆಯನ್ನು ಕಸಿದುಕೊಂಡನು ಜಯನು ಮತ್ತಷ್ಟು ಚಿಂತಾಕ್ರಾಂತನಾಗಿ ತನ್ನ ಸತಿಸುತರೊಡನೆ ಅರಣ್ಯಕ್ಕೆ ಬಂದನು. ಅಲ್ಲಿ ಅವನು ಕೆಲವುಕಾಲ ಕಳೆಯುತ್ತಿರಲು, ಒಂದು ದಿನ ವಾಮ ದೇವ ಮುನಿಗಳು ಅಲ್ಲಿಗೆ ಬಂದರು. ಜಯನು ತನ್ನ ಸತಿಯೊಡನೆ ಆ ಮುನಿವರ್ಯನಿಗೆ ನಮುಸ್ಕರಿಸಿ ತನ್ನ ದುರ್ದೈವದ ಸಂಗತಿಯನ್ನು ಅರಿಕೆ ಮಾಡಿಕೊಂ

ವುದಲ್ಲದೇ ಅದರ ನಿವಾರಣೆಯ ಉಪಾಯವನ್ನೂ ಸಹ ಕೇಳಿಕೊಂಡನು. ಆ ಮುನಿ ಶ್ರೇಷ್ಠನು ಎಲ್ಲ ವ್ರತಗಳಲ್ಲಿ ಉತ್ತಮವಾದ ವರದಶಂಕರ ವ್ರತವನ್ನು ಮಾಡಲು ಆ ದಂಪತಿಗಳಿಗೆ ಉಪದೇಶವನ್ನು ಮಾಡಿದನು. ಅರಸನು ಮುನಿಯ ಹೇಳಿಕೆಯಂತೆ ವ್ರತವನ್ನು ಆಚರಿಸಿದನು ಅದರ ಪ್ರಭಾವದಿಂದ ಜಯನಿಗೆ ಕಣ್ಣುಗಳು ಲಭಿಸುವುದಲ್ಲದೇ ಹೋದ ರಾಜ್ಯವು ಕೂಡ ಪ್ರಾಪ್ತಿಯಾಯಿತು.

## ಶ್ರೀ ಸತ್ಯನಾರಾಯಣ ವ್ರತ

ಸತ್ಯ, ಶಬ್ದಕ್ಕೆ ಜ್ಞಾನ, ಆನಂದವೆಂಬ ಅರ್ಥ. ಜ್ಞಾನ-ಆನಂದಾತ್ಮಕನಾದ ನಾರಾಯಣನ ವ್ರತವಿದು. ಇದರಿಂದ ಅಸತ್ಯ ನಾರಾಯಣ ವ್ರತ ವೆಂಬುದೊಂದು ಅದೇಯೇ ಹೇಗೆ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಈ ವ್ರತವನ್ನು ಇಂಥವರೇ ಮಾಡಬೆಕೇಂಬ ನಿರ್ಬಂಥವಿಲ್ಲ. ಇಂಥ ದಿನವೇ ಮಾಡಬೇಕೆಂಬ ಕಟ್ಟಳೆಯೂ ಇಲ್ಲ. ಯಾರೇ ಆಗಲಿ ಭಕ್ತಿ ಪೂರ್ವಕ ಈ ವ್ರತವನ್ನು ಆಚರಿಸಬೇಕು. ಉಷಃ ಕಾಲದಲ್ಲೆದ್ದು, ನಿರ್ಮಲವಾದ ಜಲಾಶಯದಲ್ಲಿ ಸ್ನಾನಮಾಡಿ, ಕಲಶದಲ್ಲಿ ನೀರು ತೆಗೆದುಕೊಂಡು ಬಂದು, ಅದನ್ನು ಮಂಟಪದಲ್ಲಿಟ್ಟು, ಧ್ಯಾನ ಆಹ್ವಾನಾದಿ ಷೋಡಶೋಪಚಾರಗಳಿಂದ ಪೂಜಿಸಬೇಕು. ಅದಕ್ಕಿಂತ ಪೂರ್ವದಲ್ಲಿ ಶ್ರೀ ಗಣಪತಿ ನವಗ್ರಹ ಇಂದ್ರಾದಿ ಅಷ್ಟದಿಕ್ಪಾಲಕರನ್ನು ವಿಧ್ಯುಕ್ತವಾಗಿ ಪೂಜಿಸಿ, ಸತ್ಯನಾರಾಯಣನನ್ನು ವಿವಿಧ ಪತ್ರಿ, ಪುಷ್ಪ, ಧೂಪ, ದೀಪಾದಿಗಳಿಂದ ಪೂಜಿಸಬೇಕು. ಇದಕ್ಕೆ ಒಂದು ಕಥೆಯುಂಟು.

ನೈಮಿಷಾರಣ್ಯದಲ್ಲಿ ಸೂತಾಚಾರ್ಯನಿಗೆ ಶೌನಕನು ವಿನಯ ಪೂರ್ವಕ ನಮಸ್ಕರಿಸಿ ಮನಸ್ಸಿನಲ್ಲಿ ಅಪೇಕ್ಷಿತ ಅಶೇಷ ಪುರುಷಾರ್ಥಗಳು ಸಹಜವಾಗಿ ದೊರೆಯುವ ಸುಲಭವಾದ ವ್ರತವನ್ನು ಹೇಳಬೇಕೆಂದು ಕೇಳಿದನು. ಆಗ ಶೌನಕನು–ನುಡಿದುದೇನಂದರೆ:–

ಒಂದಾನೊಂದು ಕಾಲದಲ್ಲಿ ಯೋಗಿವಂದ್ಯನಾದ ನಾರದನು ಅನೇಕ ಲೋಕಗಳನ್ನು ಸಂಚಾರಮಾಡುತ್ತ ಮನುಷ್ಯ ಲೋಕಕ್ಕೆ ಬಂದು ಜನರು ಮಾಡುವ ದುಷ್ಕೃತ್ಯಗಳನ್ನು ನೋಡಿ ಮನದಲ್ಲಿ ನೊಂದುಕೊಂಡು, ಹೀಗೆ ಅಂದನು:–ಜನರು ಸದಾ ಪಾಪಕರ್ಮವನ್ನೇ ಮಾಡುತ್ತಾರೆ, ಅದರ ಫಲವಾಗಿ

ದುಃಖವನ್ನು ಅನುಭವಿಸಬೇಕಾಗುತ್ತದೆ. ಈ ಜನರ ಪಾಪವು ಯಾವ ಉಪಾಯದಿಂದ ಹೋಗುವುದು, ಎಂದು ಆಲೋಚಿಸಿ, ಸರ್ವವಂದ್ಯವಾದ ವೈಕುಂಠಕ್ಕೆ ಬಂದು ದೇವರಿಗೆ ನಮಸ್ಕರಿಸಿ ಸ್ತೋತ್ರ ಮಾಡಿದನು. ನಾರದನ ಸ್ತುತಿಗೆ ನಾರಾಯಣನು ಪ್ರಸನ್ನನಾಗಿ ಮುಂದೆ ಬಂದು–"ನಾರದಾ ! ನಾನು ಭಕ್ತರ ಭಕ್ತಿ ಭರಿತ ಸ್ತೋತ್ರಕ್ಕೆ ವಶನಾಗುವವನು. ನಿನಗೆ ನಾನು ಅನುಗ್ರಹ ಮಾಡಿದ್ದೇನೆ, ಬೇಕಾದ ವರಗಳನ್ನು ಕೇಳಿಕೊಳ್ಳುವವನಾಗು" ಎಂದು ನುಡಿದನು. ಆಗ ನಾರದನು ತಾನು ಮೊದಲು ಮನದಲ್ಲಿ ವಿಚಾರಿಸಿದಂತೆ ಜನರ ಪಾಪಪರಿಹಾರಕ ವರವನ್ನು ಕೇಳಿದನು. ಶ್ರೀಮನ್ನಾರಾಯಣನು–"ಶ್ರೀ ಸತ್ಯ ನಾರಾಯಣ ವ್ರತವನ್ನು ವಿಧ್ಯುಕ್ತವಾಗಿ ಭಕ್ತಿ ಪೂರ್ವಕ ಆಚರಿಸುವದರಿಂದ ಸಕಲ ಪಾಪ ಪರಿಹಾರವಾಗುವುದೆಂ"ದು ನಾರದನಿಗೆ ಬೋಧಿಸಿದುದು.

೧ನೆಯ ಅಧ್ಯಾಯ ಸಮಾಪ್ತಿಯಾದುದು.

## ೨ ನೆಯ ಅಧ್ಯಾಯ

ಈ ವ್ರತವು ಜಗತ್ತಿನಲ್ಲಿ ಹೇಗೆ ಪ್ರಕಾಶವಾಯಿತೆಂದರೆ ಕಾಶಿ ಪಟ್ಟಣದಲ್ಲಿ ಕಡುಬಡವನಾದ ಓರ್ವ ಗೃಹಸ್ಥನಿದ್ದನು. ಅವನು ಭಿಕ್ಷೆಗಾಗಿ ಊರು ಊರುಗಳಲ್ಲಿ ತಿರುಗಿದರೂ ಹೊಟ್ಟೆತುಂಬ ಅಶನ ಲಭಿಸುತ್ತಿರಲಿಲ್ಲ. ಅವನ ಮೇಲೆ ಶ್ರೀಹರಿಯು ಕೃಪೆಮಾಡಿ ದರ್ಶನವಿತ್ತು–"ನೀನು ನಿತ್ಯದಲ್ಲಿ ಭಕ್ತಿ ತತ್ಪರನಾಗಿ ಸತ್ಯ ದೇವನನ್ನು ಸ್ತುತಿಸು. ನಿನ್ನ ದಾರಿದ್ರ್ಯ ದೂರಾಗುವುದು"ಎಂದು ನುಡಿದು ವ್ರತದ ವಿಧಿಯನ್ನು ಹೇಳಿ ಅದೃಶ್ಯನಾದನು. ಆ ಪ್ರಕಾರವಾಗಿ ಬಡಗೃಹಸ್ಥನು ತಾನು ಭಿಕ್ಷೆಬೇಡಿ ತಂದ ಹಣದಿಂದ ಸತ್ಯ ದೇವನನ್ನು ಪೂಜಿಸಿ ಅಪರಿಮಿತ ಸಂಪತ್ತನ್ನು ಹೊಂದಿದನು ಬೇರೊಬ್ಬ ಕಟ್ಟಿಗೆ ಹೊರೆ ಮಾರುವವನು ಆ ದೇವ ಭಕ್ತನ ಹತ್ತಿರ ಕುಳಿತು ವ್ರತದ ವಿಧಾನವನ್ನು ಕೇಳಿ ಸತ್ಯ ನಾರಾಯಣ ಪ್ರಸಾದವನ್ನು ಸ್ವೀಕರಿಸಿದನು ತಾನೂ ಕಟ್ಟಿಗೆ ಹೊರೆ ಮಾರಿ, ಬಂದ ಧನದಿಂದ ಶ್ರೀ ಸ್ವಾಮಿಯನ್ನು ವಿಧ್ಯುಕ್ತವಾಗಿ ಪೂಜಿಸಿ ಇಹಲೋಕದಲ್ಲಿ ಸೌಖ್ಯವನ್ನು ಹೊಂದಿ, ಪರಲೋಕದಲ್ಲಿ ಸದ್ಗತಿಯನ್ನು ಪಡೆದನು.

## ೩ ನೆಯ ಅಧ್ಯಾಯ

ಉಲ್ಕಾ ಮುಖನೆಂಬ ರಾಜನು ತನ್ನ ಸತಿಯೊಡನೆ ಪ್ರತಿದಿನ ದಕ್ಷಿಣ–ತಾಂಬೂಲಾದಿಗಳಿಂದ ಶ್ರೀಸತ್ಯ ದೇವನನ್ನು ಭಕ್ತಿಯಿಂದ ಅರ್ಚಿಸುತ್ತಿದ್ದನು. ಇದನ್ನು ಓರ್ವ ವ್ಯಾಪಾರಿಯು ನೋಡಿ, ರಾಜನಿಗೆ ನಮಸ್ಕರಿಸಿ, "ಮಹಾ ರಾಜರೇ ನೀವು ಯಾವ ದೇವರನ್ನು ಪೂಜಿಸುತ್ತಿರುವಿರಿ ? ಅದಕ್ಕೆ ಫಲವೇನು?" ಎಂದು ಕುತೂಹಲದಿಂದ ಕೇಳಿದನು. ಆಗ ರಾಜನು "ನಾನು ಪುತ್ರಾರ್ಥಿಯಾಗಿ ಸತ್ಯ ದೇವನನ್ನು ಪೂಜಿಸುತ್ತಿರುವೆನು" ಎಂದು ಉತ್ತರಿಸಿದನು. ಆ ವ್ಯಾಪಾರಿಗೆ ಮಕ್ಕಳಿರಲಿಲ್ಲ. ರಾಜನಿಂದ ವ್ರತಾಚರಣೆಯ ನಿಯಮುವನ್ನೆಲ್ಲ ತಿಳಿದು ಕೊಂಡನು. ತಾನೂ ತನ್ನ ಸತಿಯಾದ ಲೀಲಾವತಿಯೊಡನೆ ಆ ಪ್ರಕಾರ ಸತ್ಯ ನಾರಾಯಣ ವ್ರತವನ್ನಾಚರಿಸಿ, ದೇವರ ಅನುಗ್ರಹ ಪಡೆದು ಕನ್ಯಾ ರತ್ನವನ್ನು ಪಡೆದನು. ಅವಳಿಗೆ ಕಲಾವತಿಯೆಂದು ಹೆಸರಿಟ್ಟನು. ಅವಳು ಬೆಳೆದು ದೊಡ್ಡವ ಳಾದಮೇಲೆ ಯೋಗ್ಯ ವರನಿಗೆ ಕೊಟ್ಟು ವಿವಾಹವನ್ನು ನೆರವೇರಿಸಿದನು. ಮಗಳ ಮೇಲಿನ ಮಮತೆಯಿಂದ ಅಳಿಯನನ್ನು ಮನೆಯಲ್ಲಿಯೇ ಇರಿಸಿ ಕೊಂಡನು. ದೇವರ ಅನುಗ್ರಹದಿಂದ ಸಕಲಸಂಪತ್‌ಸಮೃದ್ಧಿಯಿಂದಿದ್ದರು. ಹೀಗೆ ಕೆಲವು ಕಾಲ ಗತಿಸಲು ವಿಧಿವಿಲಾಸದಿಂದ ಆ ವ್ಯಾಪಾರಿಯು ಸತ್ಯ ದೇವನ ವ್ರತವನ್ನು ಮರೆತುಬಿಟ್ಟನು. ಹೀಗಿರಲು ಒಂದು ದಿನ ಅಳಿಯ–ಮಾವಂದಿರು ಸಿಂಧು ತೀರಕ್ಕೆ ವ್ಯಾಪಾರಕ್ಕೆ ಹೋದರು. ಅವರು ವ್ಯಾಪಾರದ ಮಾತುಗಳನ್ನು ಹೇಳುತ್ತ ಕುಳಿತಿರುವಾಗ, ಆ ಊರ ಚಂದ್ರಕೇತು ರಾಜನ ಭಾಂಡಾರ ಕದ್ದುಕೊಂಡು ಓಡಿ ಹೋಗುತ್ತಿರುವ ತಕ್ಕರನ್ನು ಬೆನ್ನಟ್ಟ ಶಿಪಾಯಿ ಗಳು ಅಲ್ಲಿಗೆ ಬಂದರು. ಇವರೇ ಕಳ್ಳರಿದ್ದಾರೆಂದು ವ್ಯಾಪಾರಿಗಳಾದ ಅಳಿಯ ಮಾವ ಇವರೀರ್ವರನ್ನು ಹಿಡಿದು ಅಂಗ ಜಪ್ತಿ ಮಾಡಿದರು. ಅಲ್ಲದೇ ರಾಜ ನಲ್ಲಿಗೆ ಎಳೆದೊಯ್ದು ನಿಲ್ಲಿಸಿದರು. ಅವರೀರ್ವರೂ ಎಷ್ಟು ಬೇಡಿಕೊಂಡರೂ ರಾಜನು ಕೇಳಲಿಲ್ಲ. ಅವರನ್ನು ಶೆರೆಮನೆಗೆ ಸೇರಿಸಿದನು. ಅತ್ತ ವ್ಯಾಪಾರಿಯ ಹೆಂಡತಿಯಾದ ಲೀಲಾವತಿ, ಮತ್ತು ಮಗಳಾದ ಕಲಾವತಿ ಇವರು ನಿರ್ಗತಿಕ ರಾಗಿ ಮನೆ ಮನೆಗೆ ಭಿಕ್ಷೆ ಬೇಡಹತ್ತಿದರು. ಹೀಗಿರುತ್ತಿರಲು ಕಲಾವತಿಯು ನೆರೆಮನೆಯಲ್ಲಿ ನಡೆದ ಸತ್ಯ ನಾರಾಯಣ ಕಥೆಯನ್ನು ಕೇಳಿದಳು. ಅಲ್ಲಿ ದೊರೆತ ಪ್ರಸಾದವನ್ನು ತಂದು ತಾಯಿಗೆ ಅರ್ಪಿಸಿ ತಾನೂ ಸೇವಿಸಿದಳು. ಆಗ ತಾಯಿಗೆ

ನೆನಪಿಗೆ ಬಂತು. ಅವಳು ತನ್ನ ಮಗಳೊಡನೆ ಭಕ್ತಿಯಿಂದ ಸತ್ಯ ದೇವನನ್ನು ಪೂಜಿಸಿದಳು. ಅತ್ತ ಚಂದ್ರಕೇತು ರಾಜನು ಒಂದು ದಿನ ಮಲಗಿರುವಾಗ ಅವನ ಸ್ವಪ್ನದಲ್ಲಿ "ಶಿರೆಮನೆಯಲ್ಲಿರುವ ಆ ಉಭಯ ವ್ಯಾಪಾರಿಗಳು ನಿರಪರಾಧಿಗಳಿರುವರೆಂ"ದು ಯಾರೋ ಹೇಳಿದಂತಾಯಿತು. ಆಗ ರಾಜನು ಮರುದಿನವೇ ಅವರೀರ್ವರನ್ನು ಶಿರೆಮನೆಯಿಂದ ಮುಕ್ತ ಮಾಡಿದನು. ಅಲ್ಲದೇ ಅವರ ಧನವನ್ನು ಅವರಿಗೆ ಕೊಟ್ಟು ಕಳುಹಿದನು. ಅವರು ಸಂತೋಷದಿಂದ ತಮ್ಮ ಊರಿಗೆ ಬಂದರು.

ಲೀಲಾವತಿಯು ಸಂತೋಷದ ಭರದಲ್ಲಿ ತನ್ನ ಮಗಳಿಗೆ ಸತ್ಯ ನಾರಾಯಣನ ಪೂಜೆ ಮಾಡಲು ಹೇಳಿ ಮುಂದೆಬಂದಳು. ಮಗಳು ಪತಿದರ್ಶನಕ್ಕಾಗಿ ಆತುರಳಾಗಿ ಸತ್ಯ ಪ್ರಸಾದ ಬಿಟ್ಟು ಬಂದದ್ದರಿಂದ ಅವಳಿಗೆ ಪತಿಯೇ ಕಾಣಿಸಲಿಲ್ಲ. ಆಗ ಎಲ್ಲರೂ ಗಾಬರಿಗೊಂಡರು ಆಕಾಶವಾಣಿಯ ಆದೇಶದಂತೆ ಎಲ್ಲರೂ ಭಕ್ತಿಯುತರಾಗಿ ಶ್ರೀಸತ್ಯನಾರಾಯಣ ವ್ರತವನ್ನಾಚರಿಸಿ ಪ್ರಸಾದವನ್ನು ಸ್ವೀಕರಿಸಲು ಮಗಳಿಗೆ ಪತಿದರ್ಶನವಾಯಿತು. ಎಲ್ಲರೂ ಸಂತೋಷಭರಿತರಾಗಿ ಶ್ರೀ ಸ್ವಾಮಿಯ ನಾಮ ಸಂಕೀರ್ತನೆಯಲ್ಲಿ ಲೀನರಾದರು.

ತುಂಗಧ್ವಜನೆಂಬ ಅರಸನು ವನವಿಹಾರಕ್ಕಾಗಿ ಹೋಗುತ್ತಿರುವಾಗ ಮಾರ್ಗ ಮಧ್ಯದಲ್ಲಿ ಒಂದು ಆಲದ ಗಿಡದ ಅಡಿಯಲ್ಲಿ ಗೋಪಾಲರು ಸತ್ಯದೇವನ ಪೂಜೆ ಮಾಡುತ್ತಿದ್ದರು. ಅವರು ರಾಜನನ್ನು ನೋಡಿ ಪೂಜೆಗಾಗಿ ಕರೆದರು, ಅರಸು ಬುದ್ಧಿ ಪೂರ್ವಕವಾಗಿ ಸೊಕ್ಕಿನಿಂದ ಪೂಜೆಯನ್ನು ಅನಾದರಿಸಿ ಪ್ರಸಾದವನ್ನು ತ್ಯಾಗಮಾಡಿದನು. ಹೀಗಿರಲು ಕೆಲವು ದಿವಸಗಳಲ್ಲಿ ಆ ರಾಜನು ಸಕಲ ಸಂಪತ್ತನ್ನು ಕಳೆದುಕೊಂಡು ನಿರ್ಗತಿಕನಾದನು. ರಾಜನು ತನ್ನ ತಪ್ಪನ್ನು ಅರಿತವನಾಗಿ ಆ ವಟ ವೃಕ್ಷಕ್ಕೆ ಬಂದು ಸ್ವಾಮಿಯನ್ನು ಪೂಜಿಸಿ ಪ್ರಸಾದವನ್ನು ಸ್ವೀಕರಿಸಲಾಗಿ, ಕಳೆದುಹೋದ ಧನಕನಕಾದಿ ಸಕಲ ಸಂಪತ್ತನ್ನು ಪುನಃ ಹೊಂದಿದನು, ಅಲ್ಲದೇ ಚಿರಕಾಲ ಸುಖವಾಗಿ ಬಾಳಿದನು.

ಈ ವ್ರತವು ವಿದ್ಯಾರ್ಥಿಗಳಿಗೆ ವಿದ್ಯೆಯನ್ನೂ, ಧನಾರ್ಥಿಗಳಿಗೆ ಧನವನ್ನೂ ವಿಪುಲವಾಗಿ ಕೊಡುವುದು. ಅಲ್ಲದೇ ರೋಗಾರ್ತರು ರೋಗದಿಂದ ಮುಕ್ತರಾಗುವರು" ಎಂಬುದಾಗಿ ಸನತ್ಕುಮಾರನು ಶೌನಕನಿಗೆ ಹೇಳಿದನು.

## ಸೋಮವತಿ ಅಮವಾಸ್ಯಾ

ಸೋಮವಾರ ಅಮಾವಾಸ್ಯಾ ಬಂದ ದಿನ ಈ ವ್ರತವನ್ನು ಆಚರಿಸುವರು. ಮುತ್ತೈದೆಯರು ಅಂದು ಅರಳೀ ಗಿಡದ ಅಡಿಯಲ್ಲಿ ಹೋಗಿ ತಾಂಬೂಲ ದಕ್ಷಿಣಾದಿಗಳಿಂದ ಆ ಗಿಡವನ್ನು ಪೂಜಿಸಿ, ೧೦೮ ಸಾರೆ ಪ್ರದಕ್ಷಿಣೆ ಹಾಕುವರು. ಹಣ್ಣು-ಹಂಪಲ, ಧನ ಮೊದಲಾದವುಗಳನ್ನು ಸುಮಂಗಲೆಯರಿಗೆ ದಾನ ಮಾಡುವುದುಂಟು. ಬಹುತರವಾಗಿ ಸ್ತ್ರೀಯರು ತಮಗೆ ಮುತ್ತೈದಿತನ ಹೆಚ್ಚಲೆಂದೂ, ಸಂತಾನ ಅಭಿವೃದ್ಧಿಯಾಗಲೆಂದೂ ಸೋಮವತೀ ಅಮಾವಾಸ್ಯಾ ತಿಥಿಯನ್ನಾಚರಿಸುವರು.

ಮಹಾಭಾರತದ ಯುದ್ಧದಲ್ಲಿ ಧರ್ಮರಾಜನ ಕುಟುಂಬದವರು ವೈರಿಗಳ ಶಸ್ತ್ರಗಳಿಗೆ ಲೆಕ್ಕವಿಲ್ಲದೇ ಆಹುತಿಯಾದರು. ಉತ್ತರೆಯ ಗರ್ಭದಿಂದ ಜನಿಸಿದ ಪರೀಕ್ಷಿತನು ಕೂಡಾ ಅಶ್ವತ್ಥಾಮನ ಅಸ್ತ್ರದಿಂದ ದಗ್ಧನಾದನು. ಇದನ್ನೆಲ್ಲ ಧರ್ಮರಾಜನು ಕಣ್ಣಾರೆ ಕಂಡು ಚಿಂತಾಕ್ರಾಂತನಾಗಿ, ಶರಶಯ್ಯಾಸ್ಥಿತನಾದ ಭೀಷ್ಮನ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿ "ಪಿತಾಮಹಾ ! ನನ್ನ ವಂಶವೃಕ್ಷವು ಅಭಿವೃದ್ಧಿಯಾಗಬೇಕಾದರೆ ಯಾವುದಾದರೊಂದು ವ್ರತವಿದ್ದರೆ ತಿಳಿಸಬೇಕೆಂ"ದು ಕೇಳಿಕೊಂಡನು. ಆಗ ಭೀಷ್ಮನು ಅಮಾವಾಸ್ಯಾಯುಕ್ತವಾದ ಸೋಮವಾರ ದಿವಸ ಅಶ್ವತ್ಥವೃಕ್ಷ(ಅರಳೀ ಗಿಡ)ದ ಅಡಿಗೆ ಹೋಗಿ ಪರಮೇಶ್ವರನನ್ನು ಭಕ್ತಿಯಿಂದ ಪೂಜಿಸಿ, ೧೦೮ ರತ್ನ, ದಕ್ಷಿಣೆ ಇತ್ಯಾದಿಗಳನ್ನು ಕೈಯಲ್ಲಿ ತೆಗೆದುಕೊಂಡು, ೧೦೮, ಸಾರೆ ಅಶ್ವತ್ಥ ವೃಕ್ಷಕ್ಕೆ ಪ್ರದಕ್ಷಿಣೆ ಹಾಕಬೇಕು. ಆ ನಂತರ ಅನ್ನವಸ್ತ್ರಾದಿಗಳನ್ನು ಮುತ್ತೈದೆಯರಿಗೂ, ಪೂಜ್ಯರಿಗೂ ಯಥೋಚಿತವಾಗಿ ದಾನ ಮಾಡಬೇಕು ಎಂದು ಹೇಳಿದನು.

ಈ ವ್ರತವನ್ನು ಉತ್ತರೆಯ ಕಡೆಯಿಂದ ಮಾಡಿಸು. ಅವಳು ಲೋಕ ವಿಖ್ಯಾತವಾದ, ಗುಣಾಢ್ಯ ಸಂತತಿಯನ್ನು ಹೊಂದುವಳು"ಎಂದು ಹೇಳಿದನು. ಆಗ ಧರ್ಮರಾಜನು ಭೀಷ್ಮನನ್ನು ಕುರಿತು "ಸ್ವಾಮೀ ! ಭೂಲೋಕದಲ್ಲಿ ಈ ಮೊದಲು ಈ ವ್ರತವನ್ನು ಆಚರಿಸಿ ಫಲವನ್ನು ಹೊಂದಿ ಯಾರಾದರೂ ಸುಖಿಗಳಾಗಿದ್ದಾರೆ? ಆ ವೃತ್ತಾಂತವನ್ನು ದಯವಿಟ್ಟು ಹೇಳಬೇಕೆಂದು ಕೇಳಿ

ಕೊಂಡನು. ಆಗ ಭೀಷ್ಮನು:-"ಈ ಭಾರತ ಭೂಮಿಯಲ್ಲಿ" 'ಕಾಂತಿ' ಎಂಬ ಸುಂದರವಾದ ಪಟ್ಟಣವಿತ್ತು ಅಲ್ಲಿ "ರತ್ನಸೇನನೆಂ"ಬ ರಾಜನು ಧರ್ಮದಿಂದ ರಾಜ್ಯವಾಳುತ್ತಿದ್ದನು. ಆ ಪಟ್ಟಣದಲ್ಲಿ 'ದೇವಸ್ವಾಮಿ' ಎಂಬ ಪರಮಶಿವ ಭಕ್ತನಾದ ಗೃಹಸ್ತನಿದ್ದನು ಅವನಿಗೆ 'ಧನವತಿ' ಎಂಬ ಸಾಧ್ವಿಸತಿ ಯಿದ್ದಳು ಆ ದಂಪತಿಗಳಿಗೆ ಗುಣವತಿ ಎಂಬೋರ್ವ ಮಗಳೂ ಏಳು ಜನ ಗಂಡು ಮಕ್ಕಳೂ ಇದ್ದರು. ಗಂಡು ಮಕ್ಕಳ ಲಗ್ನವಾಗಿ ಎಲ್ಲ ಸೊಸೆಯರು ತಮ್ಮ ತಮ್ಮ ಪತಿ ಸೇವಾ ನಿರತರಾಗಿದ್ದರು. ಆದರೆ ಗುಣವತಿಯ ಲಗ್ನ ವಾಗಿರಲಿಲ್ಲ. ಹೀಗಿರಲು ಒಂದು ದಿನ ಒಬ್ಬ ಯೋಗಿಯು ಆ ದೇವ ಸ್ವಾಮಿಯ ಮನೆಗೆ ಬಿಕ್ಷೆಗಾಗಿ ಬಂದನು. ಆಗ ಏಳು ಜನ ಸೊಸೆಯರು ಆ ಯೋಗಿಗೆ ಪೃಥಿಕ್-ಪೃಥಕ್ಕಾಗಿ ಭಿಕ್ಷೆ ನೀಡಿದರು. ಅವರೆಲ್ಲರಿಗೂ ಯೋಗಿಯು-"ಸೌಭಾಗ್ಯವತಿಯರಾಗಿರೆಂ"ದು ಆಶೀರ್ವದಿಸಿದನು. ಆದರೆ ಗುಣವತಿ ಕನ್ಯೆಯು ಭಿಕ್ಷೆ ನೀಡಲಾಗಿ ಅವಳಿಗೆ "ಧರ್ಮವತಿಯಾಗೆಂ"ದು ಆಶೀರ್ವದಿಸಿದನು. ಆಗ ಗುಣವತಿಯು ಯೋಗಿಯು ತನಗೆ ಆಶೀರ್ವದಿಸಿದ್ದನ್ನೂ, ಅತ್ತಿಗೆಯರಿಗೆ ಆಶೀರ್ವದಿಸಿದ್ದನ್ನೂ ತಾಯಿಗೆ ಸಾದ್ಯಂತವಾಗಿ ನಿವೇದಿಸಿಕೊಂಡಳು. ಆಗ ತಾಯಿಯು ಯೋಗಿಯ ಬಳಿಗೆ ಬಂದು-"ಸ್ವಾಮೀ ಗುಣವತಿಗೆ ಹೀಗೇಕೆ ಆಶೀರ್ವದಿಸಿದಿರಿ" ಎಂಬು ದಾಗಿ ಕೇಳಿದಳು. ಆಗ ಯೋಗಿಯು-"ಅಮ್ಮಾ ಗುಣವತಿಗೆ ಮಾಂಗಲ್ಯಧಾರಣ ವಾದನಂತರ ಶೋಭನ ಕಾರ್ಯದಲ್ಲಿ ವೈಧವ್ಯಪ್ರಾಪ್ತಿ ಯಾಗುವುದು. ಆದ್ದ ರಿಂದ ಹೀಗೆ ಆಶೀರ್ವದಿಸಿದ್ದೇನೆಂ"ದು ಉತ್ತರವಿತ್ತನು.

ಯೋಗಿಯು ಹೇಳಿದುದನ್ನು ಕೇಳಿ ಧನವತಿಗೆ ಬಹಳ ದುಃಖವೆನಿಸಿತು. ಅವಳು ಯೋಗಿಗೆ ನಮಸ್ಕರಿಸಿ-"ಸ್ವಾಮಿ ಇದಕ್ಕೆ ಉಪಾಯವೇನಾದರೂ ಇದ್ದರೆ ಕೃಪೆಮಾಡಿ ತಿಳಿಸಬೇಕೆಂ"ದು ಕೇಳಿಕೊಂಡಳು. ಆಗ ಯೋಗಿಯು:- "ವ್ರತ ನಿಷ್ಠಳಾದ ಸೋಮಾ, ಎಂಬವಳು ಅದೇ ಸಮಯಕ್ಕೆ ನಿಮ್ಮ ಮನೆಗೆ ಬರುವಳು. ಅವಳ ಪೂಜನದಿಂದ ಗುಣವತಿಯ ವೈಧವ್ಯವು ನಾಶವಾಗುವದು. ಸೋಮಾ ಇವಳು ಸಿಂಹಳ ದ್ವೀಪದಲ್ಲಿರುವಳು. ಅವಳು ಅಗಸರವಳು. ಅವಳನ್ನು ನೀನು ತೀವ್ರವಾಗಿ ಕರೆಯಿಸಿಕೊಳ್ಳುವವಳಾಗು" ಎಂದು ಹೇಳಿ ಯೋಗಿಯು ಭಿಕ್ಷಾರ್ಜನೆಗಾಗಿ ಹೊರಟು ಹೋದನು.

ಗುಣವತಿಯ ತಂದೆ–ತಾಯಿಗಳು ಸೋಮಾ ಇವಳನ್ನು ಕರೆತರಲು ಏಳು ಜನ ಗಂಡು ಮಕ್ಕಳಿಗೆ ಆದೇಶವಿತ್ತರು. ಆದರೆ ಸಿಂಹಳ ದ್ವೀಪವು ದುರ್ಗಮ ಸ್ಥಾನದಲ್ಲಿರುವುದರಿಂದ ಅವರ ಮಕ್ಕಳು ಅಲ್ಲಿಗೆ ತಂಗಿಯನ್ನು ಕರೆದುಕೊಂಡು ಹೋಗಲು ನಿರಾಕರಿಸಿದರು. ಕಡೆಗೆ ತಂದೆಯ ಆಗ್ರಹದ ಮೇರೆಗೆ ಎಲ್ಲರಿಗಿಂತ ಚಿಕ್ಕವನಾದ 'ಶಿವಸ್ವಾಮಿ' ಎಂಬವನು ತನ್ನ ತಂಗಿಯನ್ನು ಕರೆದುಕೊಂಡು ಸಿಂಹಳ ದ್ವೀಪಕ್ಕೆ ಹೊರಟನು. ಬಹಳ ದಿನಗಳಿಂದ ಕಾಲು ನಡಿಗೆಯಿಂದ ನಡೆಯುತ್ತ ನಡೆಯುತ್ತ ಅವರಿಬ್ಬರು ಸಮುದ್ರ ತೀರಕ್ಕೆ ಬಂದರು. ಅಲ್ಲಿ ಅವರು ಸಮುದ್ರವನ್ನು ದಾಟಲು ಅಸಮರ್ಥರಾಗಿ ಚಿಂತಾಯುಕ್ತರಾದರು. ಅಲ್ಲಿಯೇ ಸಮುದ್ರ ತೀರದಲ್ಲಿ ವಿಶಾಲವಾದ ಒಂದು ಅಶ್ವತ್ಥ ವೃಕ್ಷವಿತ್ತು. ಆ ಗಿಡದ ನೆರಳಲ್ಲಿ ಶಿವಸ್ವಾಮಿ ಹಾಗು ಗುಣವತಿಯರು ವಿಶ್ರಮಿಸಿಕೊಂಡರು. ಸಾಯಂಕಾಲವಾಗುತ್ತಬಂತು, ಸಮುದ್ರವನ್ನು ದಾಟುವ ಉಪಾಯವು ಅವರಿಗೆ ಹೊಳೆಯಲಿಲ್ಲ. ಅಷ್ಟರಲ್ಲಿ ದಿನವೆಲ್ಲ ತನ್ನ ಆಹಾರಕ್ಕಾಗಿ ಹೋದ ರಾಕ್ ಜಾತಿಯ ದೊಡ್ಡ ರಣಹದ್ದು ಆ ಗಿಡಕ್ಕೆ ಬಂದಿಳಿಯಿತು. ಅದು ಕೆಳಗೆ ಕುಳಿತಿರುವ ಶಿವಸ್ವಾಮಿಯನ್ನು ನೀವು ಯಾರೆಂದು ಪ್ರಶ್ನೆ ಮಾಡಿತು. ಅವನು ತನ್ನ ಯಾವತ್ತು ಸಂಗತಿಯನ್ನು ಸಾದ್ಯಂತವಾಗಿ ಆ ಗೃಧ್ರರಾಜನಿಗೆ ತಿಳಿಸಿ ಅಲ್ಲಿಗೆ ಹೋಗಲು ಸಹಾಯಕನಾಗಬೇಕೆಂದು ಅವನಿಗೆ ಬೇಡಿಕೊಂಡನು. ಆಗ ಗೃಧ್ರರಾಜನು ಅವರನ್ನು ದ್ವೀಪಕ್ಕೆ ತಾನು ಮುಟ್ಟಿಸುವುದಾಗಿ ಅಭಯನ್ನಿತ್ತನು. ಅಷ್ಟರಲ್ಲಿಯೇ ಸಾಯಂಕಾಲವಾಯಿತು – ಮರುದಿನ ಮುಂಜಾನೆ ಗೃಧ್ರರಾಜನು ಸ್ವಾಮಿಯವರನ್ನು ಗುಣವತಿ ಸಮೇತವಾಗಿ ಎತ್ತಿಕೊಂಡು ಸಿಂಹಳದ್ವೀಪದಲ್ಲಿ ಸೋಮಾ ಇದ್ದ ಗ್ರಾಮಕ್ಕೆ ಹೋಗಿ ಇಳಿಸಿದನು. ಶಿವಸ್ವಾಮಿ–ಗುಣವತಿ ಉಭಯರೂ ಸೋಮಾ ಇವಳ ಮನೆಯಲ್ಲಿ ದಾಸದಾಸಿಯರಾಗಿ ಸೇವೆಯಲ್ಲಿ ನಿರತರಾದರು. ಹೀಗೆ ಒಂದು ವರುಷವು ಕಳೆಯಿತು. ಇವರ ಅತುಲವಾದ ಸೇವೆಗೆ ಸೋಮಾ ಪ್ರಸನ್ನಳಾಗಿ, ಅವರನ್ನು ಕುರಿತು— "ನೀವು ಯಾರು? ನನ್ನಲ್ಲಿಗೆ ಬಂದು ವರುಷವಾಯಿತು ಹೀಗೆ ದಾಸವೃತ್ತಿಯಿಂದಿರಲು ಕಾರಣವೇನೆಂದು ಕೇಳಲಾಗಿ, ಶಿವಸ್ವಾಮಿಯು ತಾನು ಬಂದ ಕಾರಣವನ್ನು ನಿವೇದಿಸಿದನಲ್ಲದೇ ತನ್ನತಂಗಿಯ ವೈಧವ್ಯ ದೂರಾಗಲು ತಮ್ಮ ಊರಿಗೆ ಬರಬೇಕೆಂದು ಅವಳಿಗೆ ಆಮಂತ್ರಿಸಿಕೊಂಡನು. ಸೋಮಾ ಇವಳು

ಶಿವಸ್ವಾಮಿಯೊಡನೆ ಹೋಗಲು ಒಪ್ಪಿಕೊಂಡಳು. ತಾನು ಹೊರಡುವ ಪೂರ್ವದಲ್ಲಿ ತನ್ನ ಮನೆಯವರನ್ನು ಕುರಿತು – "ನಮ್ಮ ಕುಟುಂಬದಲ್ಲಿ ನಾನು ಇಲ್ಲದ ಸಮಯದಲ್ಲಿ ಯಾರಾದರೂ ಮೃತರಾದರೆ, ಅವರ ಶವವನ್ನು ನಾನು ಬರುವವರೆಗೆ ಹಾಗೆಯೇ ಸುರಕ್ಷಿತವಾಗಿ ಇಟ್ಟಿರಬೇಕೆಂ"ದು ಹೇಳಿ ಶಿವಸ್ವಾಮಿ ಯೊಡನೆ ಕಾಂತಿಪಟ್ಟಣಕ್ಕೆ ಬಂದಳು. ಅಲ್ಲಿ ಹಲವಾರು ದಿನಗಳು ಕಳೆದವು. ಗುಣವತಿಯ ವಿವಾಹವು ರುದ್ರಸ್ವಾಮಿ ಎಂಬವನೊಡನೆ ನಿಶ್ಚಿತವಾಯಿತು. ವಿವಾಹ ಕಾರ್ಯವು ಸಂಭ್ರಮದೊಡನೆ ಜರುಗಿತು. ಶೋಭನಕಾರ್ಯವು ಜರಗುತ್ತಲೇ ರುದ್ರಸ್ವಾಮಿಯು ಏಕಕಾಲದಲ್ಲಿಯೇ ಮೃತನಾದನು. ಎಲ್ಲರೂ ದುಃಖಾಕ್ರಾಂತರಾಗಿ ರೋದಿಸತೊಡಗಿದರು. ಆದರೆ ಸೋಮಾಮಾತ್ರ ನಿಶ್ಚಿಂತಳಾಗಿದ್ದಳು. ಅವಳು ಗುಣವತಿಗೆ ಸೋಮತಿ ಅಮವಾಸ್ಯಾ ವ್ರತದ ನಿಯಮವನ್ನು ತಿಳಿಸಿದಳು: ಆ ವ್ರತವನ್ನು ಗುಣವತಿಯು ವಿಧ್ಯುಕ್ತವಾಗಿ ಆಚರಿಸಲಾಗಿ ರುದ್ರಸ್ವಾಮಿಯು ನಿದ್ರೆಯಿಂದ ಎಚ್ಚತ್ತವನಂತೆ ಎದ್ದು ಕುಳಿತನು.

ಸೋಮಾ ಇವಳು ತಾನು ಬಂದ ಕಾರ್ಯವು ಸಫಲವಾಯಿತೆಂದು ಸಂತುಷ್ಟಳಾಗಿ ಶಿವಸ್ವಾಮಿ ಹಾಗೂ ಗುಣವತಿ ಅವರ ಬಂಧು ಬಳಗದ ಆಜ್ಞೆ ಯನ್ನು ಪಡೆದು ತನ್ನ ಊರಿಗೆ ಮರಳಿ ಬರುವಷ್ಟರಲ್ಲಿಯೇ ತನ್ನ ಪತ್ನಿ-ಪುತ್ರ ಮೊದಲಾದವರೆಲ್ಲರೂ ಮೃತರಾದುದು ತಿಳಿಯಿತು. ಅಂದು ಸೋಮತಿ ಅಮಾ ವಾಸ್ಯಾ ಇತ್ತು. ಅವಳು ಸ್ನಾನವನ್ನು ಮಾಡಿ ಅಶ್ವತ್ಥವೃಕ್ಷಕ್ಕೆ ಹೋಗಿ ಪ್ರದಕ್ಷಿಣೆ ಹಾಕಿ ವಿಧ್ಯುಕ್ತವಾಗಿ ವ್ರತವನ್ನಾಚರಿಸಲು ಮೃತರಾದ ತನ್ನ ಬಳಗದವರೆಲ್ಲರೂ ಮೂರ್ಛೆಯಿಂದ ಎಚ್ಚತ್ತವರಂತೆ ಎದ್ದು ಕುಳಿತರು. ಅಂದಿನಿಂದಲೂ ಭಾರತೀ ಯರಲ್ಲಿ ಸೋಮವತೀ ಅಮಾವಾಸ್ಯಾ ವ್ರತವನ್ನಾಚರಿಸುವದು ರೂಢವಾಗಿದೆ" ಎಂದು ಭೀಷ್ಮನು ಧರ್ಮರಾಜನಿಗೆ ಹೇಳಿದನು.

## ಚೈತ್ರಮಾಸ

ಸರ್ವ ಋತುಗಳಲ್ಲಿ ವಸಂತ ಋತುವು ಪ್ರಧಾನವಾಗಿರುವಂತೆ ಹನ್ನೆರಡು ಮಾಸಗಳಲ್ಲಿ ಚೈತ್ರ ಮಾಸವು ಅತ್ಯಂತ ಶ್ರೇಷ್ಠವಾಗಿರುವುದು. ಒಟ್ಟಿನಲ್ಲಿ ಹೇಳಬೇಕೆಂದರೆ–ಸಮಸ್ತ ಮಾಸಗಳಿಗೆ ಇದು ಮಸ್ತಕದಂತಿರುವುದು. ಋತುವಿ

ನಲ್ಲಿ ತರತರದ ಗಿಡಬಳ್ಳಿಗಳು ಚಿಗಿತು ಚಂದ ಕಾಣುವವು. ಅವು ತಮ್ಮ ಚಿಗುರೆಲೆಗಳಿಂದ ಭೂದೇವಿಯನ್ನು ಶೃಂಗರಿಸಿ ನರ್ತನ ಮಾಡುವಂತೆ ಮಂದ ಮಾರುತನಿಂದ ಕಂಪಿಸಲ್ಪಡುತ್ತಿರುವವು. ಇದನ್ನು ಕಂಡು ಆನಂದದಿಂದ ನಸುನಗುವಂತೆ ಶೋಭಿಸುವ ಅರಳರಳಿದ ಅಲರುಗಳು ಮಂದ ಮಾರುತನೊಡನೆ ಸುಗಂಧವನ್ನು ಬೀರಿ ನೃತ್ಯಕ್ಕೆ ನಾದವನ್ನುಂಟು ಮಾಡಲು ಅಲರುಣಿಗಳನ್ನು ಬರಮಾಡಿಕೊಳ್ಳುವವು. ಈ ತಿಂಗಳಲ್ಲಿ ಬಿಸಿಲು ಬಲಿತಿರುವುದರಿಂದ ದಣಿದ ದಾರಿಕಾರರು, ಕಂಪಾದ ಹೂವುಗಳುಳ್ಳ ಗಿಡಬಳ್ಳಿಗಳ ತಂಪಾದ ನೆರಳಲ್ಲಿ ಇಂಪಾದ ಗಾಳಿಗೆ ಮೈಯೊಡ್ಡಿಕೊಂಡು ಕುಳಿತು, ವಿಶ್ರಮಿಸಿ, ಮುಂದಕ್ಕೆ ಪ್ರಯಾಣಿಸುವುದುಂಟು. ಈ ತಿಂಗಳಲ್ಲಿ ನದ, ನದಿ, ಸರಿತ್, ತಡಾಗಗಳ ನೀರು ನಿರ್ಮಲವಾಗಿದ್ದು ಹವೆಯಾದರೂ ಪರಿಶುದ್ಧ ವಾಗಿರುವುದು. ಆದರೆ ವಾತಾವರಣವು ಕಫಕಾರಕವೆಂದು ಆಯುರ್ವೇದ ಶಾಸ್ತ್ರದ ಅಭಿಪ್ರಾಯವಿದೆ. ಹಿಂದಿನ ಶಿಶಿರ ಋತುವಿನಲ್ಲಿ ಅರ್ಥಾತ್ ಫಾಲ್ಗುಣ ಮಾಸದಲ್ಲಿ ಸಂಚಿತವಾದ ಕಫವು ಪ್ರಕೃತಿಯ ನಿಯಮದಂತೆ ಈ ಋತುವಿನ (ಈ ಮಾಸದ)ಲ್ಲಿ ಪ್ರಕೋಪ ವಾಗುತ್ತದೆ. *

"ವಸಂತೋ ಮಧುರಃ ಸ್ನಿಗ್ಧಃ ಶ್ಲೇಷ್ಮ ವೃದ್ಧಿಕರಶ್ಚಸಃ" ॥ ಅಂದರೆ ವಸಂತಋತವು ಬಹುತರವಾಗಿ ಸಂಪೂರ್ಣ ವಸ್ತುಗಳಲ್ಲಿ ಮಧುರತ್ವವನ್ನುಂಟು ಮಾಡತಕ್ಕದ್ದೂ, ಸ್ನಿಗ್ಧವೂ, ಕಫ ವರ್ಧಕವೂ ಆಗಿದೆ. ಇದಕ್ಕನುಗುಣವಾಗಿಯೇ ಈ ಮಾಸದಲ್ಲಿಯ ಹಬ್ಬಗಳಲ್ಲಿ ಆಹಾರ ವಿಹಾರವನ್ನು ಆಚರಿಸುವುದುಂಟು. ಹೀಗೆಯೇ ಪ್ರತಿ ತಿಂಗಳುಗಳಲ್ಲಿಯ ವ್ರತನಿಯಮಗಳು, ಅವುಗಳಲ್ಲಿ ಉಪಯೋಗಿಸಲ್ಪಡುತ್ತಿರುವ ತಿಂಡಿ ತಿನಸುಗಳೂ, ಆಯಾಯ ಮಾಸಗಳಲ್ಲಿಯ

---

* "ಗೋಧೂಮಾನ್ ಬಹುಭೇದಶಾಲಿ ಸಹಿತಾನ್ ಮುಗ್ದಾನ್ಯವಾನ್ ಷಷ್ಠಿಕಾನ್, ಲೇಪಂ ಚಂದನಕುಂಕುಮಾಗುರುಕೃತಂ ರೂಕ್ಷಂಕಟೂಷ್ಣಂ ಲಘು ॥" ಚೈತ್ರ ಮಾಸದಲ್ಲಿ ಗೋದಿ, ಅರವತ್ತು ದಿವಸದಲ್ಲಿ ಬೆಳೆದ ಅಕ್ಕಿ, ವ ಇತರ ಸಣ್ಣಕ್ಕಿ, ಹೆಸರು ಇತ್ಯಾದಿ ಧಾನ್ಯಗಳಿಂದ ತಯಾರಿಸಿದ ಆಹಾರವನ್ನು ಸೇವಿಸಬೇಕು. ಮತ್ತು ಚಂದನ–ಕೇಸರಿ, ಕೃಷ್ಣಾಗುರು ಇತ್ಯಾದಿ ಸುಗಂಧ ದ್ರವ್ಯಗಳಿಂದ ತಯಾರಿಸಿದ ಲೇಪನವನ್ನು ದೇಹಕ್ಕೆ ಹಚ್ಚಿಕೊಳ್ಳಬೇಕು. ಇದರಿಂದ ಈ ಋತುವಿನಲ್ಲಿ ಪ್ರಕೋಪ ಹೊಂದಿದ ಕಫ ದೋಷವು ಶಮನವಾಗುತ್ತದೆ.

ವಾತಾವರಣಕ್ಕನುಸರಿಸಿ ಆರೋಗ್ಯವನ್ನುಂಟು ಮಾಡತಕ್ಕವುಗಳಾಗಿವೆ. ಉದಾಹರಣೆಗಾಗಿ–ಚೈತ್ರ ಶುದ್ಧ ಪ್ರತಿಪದವು, ಧಾರ್ಮಿಕ ದೃಷ್ಟಿಯಿಂದ ಪರಮ ಪವಿತ್ರವಾಗಿದೆ. ಅಂದು ಉದಯ ಕಾಲದಲ್ಲಿ ಅಭ್ಯಂಗಸ್ನಾನ ಮಾಡುವಾಗ್ಗೆ ನೀರಿನಲ್ಲಿ ಬೇವಿನ ತಪ್ಪಲ ಹಾಕಿ ಕಾಯಿಸುವುದುಂಟು * ಬೇವಿನ ವೃಕ್ಷವು ಭೂಲೋಕದ ಕಲ್ಪವೃಕ್ಷವೆಂದು ಪ್ರತೀತಿ ಇದೆ. ಅದು ಹಲವಾರು ರೋಗ ನಿವಾರಣೆ ಮಾಡುವುದರಲ್ಲಿ ಸಮರ್ಥವಾಗಿದೆ. ಆದುದರಿಂದ ಬೇವಿನ ವೃಕ್ಷವು ತಿಕ್ತರಸ ಪ್ರಧಾನವಾಗಿದೆ. ಈ ರಸವು ಕಫ ನಾಶಕವಾಗಿದೆ. "............ ತ್ರಯಸ್ತಿಕ್ತಾದಯಃ ಕಫಂ" ಅಂದರೆ–ತಿಕ್ತ (ಕಹಿರಸ) ಕಟು (ಕಾರ) ಕಷಾಯ (ಒಗರು) ಈ ಮೂರು ರಸಗಳು ಕಫಶಾಮಕವಾಗಿರುತ್ತವೆ ಅಂತೇ ಈ ತಿಂಗಳು ಪ್ರತಿಪದದ ದಿನದಲ್ಲಿ ಬೇವು ಬೆಲ್ಲವನ್ನು ತಯಾರಿಸಿ ಸ್ವೀಕರಿಸುತ್ತಾರೆ. ಇಲ್ಲಿ ಕೇವಲ ಬೇವನ್ನೇ ಯಾಕೆ ಸ್ವೀಕರಿಸಬಾರದು? ಎಂಬ ಪ್ರಶ್ನೆ ಬರುವುದುಂಟು ಆದರೆ ಕೇವಲ ಬೇವಿನ ತಿಕ್ತ ಪಿತ್ತವಾಗಬಾರದೆಂದು ಅದರ ಸಂಶಮನಕ್ಕಾಗಿ ಮಧು ರಸಪ್ರಧಾನವಾದ ಬೆಲ್ಲ, ಸಕ್ಕರೆ, ಶುಂಠಿ ಇವುಗಳನ್ನು ಕೂಡಿಸುವುದುಂಟು. ಆ ಬೆಲ್ಲ, ಸಕ್ಕರೆಯಿಂದ ಕಫ ವೃದ್ಧಿಯಾಗಬಾರದೆಂದು ಆ ಬೇವಿನಲ್ಲಿ ಲವಂಗ, ಮೆಣಸು, ದಾಲಚಿನ್ನಿ ಇತ್ಯಾದಿಗಳನ್ನು ಸೇರಿಸಿ ರುಚಿಯಾಗುವಂತೆ ಮಾಡುವರು. ಯುಗಾದಿ ಪ್ರತಿಪದದ ದಿನ ಈ ಬೇವನ್ನು ಕರ್ನಾಟಕ ಶಹರ ನಿವಾಸಿಗಳು ಬಹು ರಸವತ್ತಾಗಿ ತಯಾರಿಸುವರು. ಕೆಲವರು ಬೇವಿನ ಹೂವುಗಳ ದಳಗಳನ್ನು ಬೇರ್ಪಡಿಸಿ ತೆಗೆದುಕೊಂಡು ಅದರಲ್ಲಿ ಸಕ್ಕರೆ ಪುಠಾಣಿಯ ಹಿಟ್ಟು ಕೂಡಿಸಿ, ಯಾಲಕ್ಕಿ, ಶುಂಠಿ, ಮೆಣಸು, ಕೇಸರಿ, ಕೊಬ್ರಿ, ದ್ರಾಕ್ಷಿ, ಉತ್ತತ್ತಿ, ಬದಾಮ ಇತ್ಯಾದಿಗಳನ್ನು ಕೂಡಿಸಿ ತಯಾರಿಸುವರು. ಹಳ್ಳಿಗಳಲ್ಲಿಯ ಜನರು ಸ್ವಲ್ಪ ಹುಣಸೀ ಹಣ್ಣಿಯನ್ನು ಹಿಂಡಿ, ಅದರಲ್ಲಿ ಬೆಲ್ಲ ಪುಠಾಣಿ ಹಿಟ್ಟು ಕಸಕಸಿ, ಕೊಬ್ರಿ, ಯಾಲಕ್ಕಿ, ಬಡೇಸೋಪು, ಶುಂಠಿ, ಲವಂಗ ಇತ್ಯಾದಿಗಳನ್ನು ಹಾಕಿ ಅದರಲ್ಲಿ ಮಾವಿನ ಕಾಯಿಯ ಸಣ್ಣ ಸಣ್ಣ ಹೋಳುಗಳನ್ನು ಹೆಚ್ಚಿಹಾಕಿ ಬೇವಿನ ಹೂವಿನ ದ

---

* ಬೇವಿನ ವೃಕ್ಷಕ್ಕೆ ಅರಿಷ್ಟ (ಶುಭ)ವೆಂದು ನಾಮವಿದೆ. ಮಧುಮೇಹ ರೋಗವಿದ್ದವರು ನಿತ್ಯ ಮುಂಜಾನೆ ಅರ್ಧ ಕಪ್ಪು ಬೇವಿನ ರಸ ಸೇವಿಸಿದರೆ ರೋಗ ಮುಕ್ತರಾಗುವರು (ಅನುಭೂತ ಔಷಧ).

ಗಳನ್ನು ಕೂಡಿಸಿ ತಯಾರಿಸಿ ಸೇವಿಸುವರು. ಇದು ರುಚಿಕರವೂ, ಕಫ–ಪಿತ್ತ ಶಾಮಕವೂ, ಆಗಿರುವುದಲ್ಲದೇ ಬಿಸಿಲಿನ ಸಂತಾಪವನ್ನು ನಿವಾರಿಸುವುದು. ಈ ಪೇಯವು ಆರೋಗ್ಯದಾಯಕವಾಗಿದೆ. ಈ ಮಾತು ಸತ್ಯವಾಗಿದ್ದರೂ, ಇಷ್ಟ ರಿಂದಲೇ ಈ ಬೇವುಬೆಲ್ಲಕ್ಕೆ ದೊಡ್ಡ ಬೆಲೆಯು ಈ ಹಬ್ಬದಲ್ಲಿ ಬರುತ್ತಿರಲಿಲ್ಲ. ಭಗವಾನ್ ಶಂಕರನು ವಿಷಪಾನ ಮಾಡಿದ್ದು ಇಂದಿನ ದಿನವಾದುದರಿಂದ ಆದರ ದ್ಯೋತಕವಾಗಿ ಸಕಲರೂ ಬೇವನ್ನು ಸ್ವೀಕರಿಸುವುದು ರೂಢವಾಗಿದೆ ಇದೇ ಪ್ರಕಾರವಾಗಿ ಪ್ರತಿತಿಂಗಳಲ್ಲಿ ಬರುತ್ತಿರುವ ಹಬ್ಬಗಳಲ್ಲಿಯ ಆಹಾರ ವಿಹಾರವು ಆಯಾಯ ಋತುಮಾನಕ್ಕನುಗುಣವಾಗಿಯೂ, ಧಾರ್ಮಿಕವಾಗಿಯೂ ಇದ್ದೂ, ಮಾನವನಿಗೆ ಪುಣ್ಯವನ್ನು ಆಯುರಾರೋಗ್ಯವನ್ನುಂಟು ಮಾಡುವುದಾಗಿದೆ. ಈ ಅಭಿಪ್ರಾಯವನ್ನು ಹಲಕೆಲವರು ಮಾತ್ರ ಅರಿತವರಾಗಿರುವರು. ಬಹು ಜನರು ಮೂಲತಃ ಹಬ್ಬಗಳ ಸ್ವರೂಪವೇನು ? ಅದನ್ನು ಯಾಕೆ ಆಚರಿಸಬೇಕು ? ಎಂಬುವುದರ ಕಡೆಗೆ ಲಕ್ಷ್ಯಗೊಡುವುದಿಲ್ಲ. "ಹಿರಿಯರು ಆಚರಿಸುತ್ತ ಬಂದಿರುವರು ನಾವಾದರೂ ಹಾಗೇ ಮಾಡಿದರಾಯಿತು ಎನ್ನುವವರ ಸಂಖ್ಯೆಯೇ ಬಹಳವಾಗಿದೆ. ಅರಿತು ಆಚರಿಸುವುದು ಫಲಪ್ರದವಾಗುವುದು. ಅರಿಯದೇ ಆಚರಿಸಿದ್ದು ಪ್ರಯೋಜನವಾಗಲಾರದು.

ಈ ತಿಂಗಳಲ್ಲಿ ಅನೇಕ ದೇವತೆಗಳ ಲೀಲಾದ್ಯೋತಕ ಹಬ್ಬಗಳು, ವ್ರತಗಳು, ಪುಣ್ಯಪುರುಷರ ಜಯಂತಿಯ ದಿನಗಳು, ಅಲ್ಲಿಂದ ಇಲ್ಲಿಯವರೆಗೆ ಎಡಬಿಡದೇ ಆಚರಿಸುತ್ತ ಬಂದವುಗಳಾಗಿವೆ ಅವುಗಳನ್ನು ನಾವು ಸಾಧಾರಣವಾಗಿ ಕೆಳಗೆ ವಿವರಿಸಿದ್ದೇವೆ.

## ಚೈತ್ರಮಾಸದ ಹಬ್ಬಗಳು

ಶುದ್ಧದಲ್ಲಿ–ಚೈತ್ರ ಶು. ಪ್ರತಿಪದ ಸಂವತ್ಸರಾರಂಭ, ಪಂಚಾಂಗ ಶ್ರವಣ, ಧ್ವಜಾರೋಹಣ, ಅಲ್ಲಮಪ್ರಭುವಿನ ಜಯಂತಿ, ಶು|| ೫ ರಲ್ಲಿ ಸಿಂಗಟಾಲೂರ ವೀರಭದ್ರೇಶ್ವರ ರಥ, ಶುದ್ಧ ೬ರಲ್ಲಿ ಯಡೆಯೂರ ಸಿದ್ಧಲಿಂಗ ಸ್ವಾಮಿಯ ರಥ. ಶು|| ೯ರಲ್ಲಿ ರಾಮನವಮಿ, ಶು|| ೧೦ರಲ್ಲಿ ಶಾಲಿವಾಹನ ಜಯಂತಿ ಶು|| ೧೧ರಲ್ಲಿ ಬನವಾಸಿಯ ಮಧುಕೇಶ್ವರ ರಥ ಶು|| ೧೩ ರಲ್ಲಿ ಮಹಾವೀರ ಜಯಂತಿ ಮತ್ತು ರೇಣುಕಾ(ಯಲ್ಲಮ್ಮ)ದೇವಿ ೯೦–೧೫ ಸೂತ್ರಮಹೋತ್ಸವ ಶು|| ಪೌರ್ಣಿಮೆ

ಯಲ್ಲಿ ಹನುಮಾನ್ ಜಯಂತಿ ಚೈತ್ರ ಶು|| ೧೫ ದವನದ ಹುಣ್ಣಿವೆ ಈ ಹುಣ್ಣಿವೆ ಯಲ್ಲಿ ದವನವು ವಿಶೇಷವಾಗಿರುವುದರಿಂದ ದವನದ ಹುಣ್ಣಿವೆಯೆಂದು ಹೆಸರು ಬಂದಿದೆ.

ಚೈತ್ರವದ್ಯ ೪ ರಲ್ಲಿ ಶಿಶುವಿನಹಾಳ ಶರೀಫರ ಜಾತ್ರೆ ವ|| ೫ರಲ್ಲಿ ಕೂಡಲ ಸಂಗಮೇಶ್ವರ ಜಾತ್ರೆ ವ|| ೯ ರಲ್ಲಿ ಸವಡಿ ಶ್ರೀ ಸಂಗಮೇಶ್ವರ ಜಾತ್ರೆ ವ|| ೧೫ ರಲ್ಲಿ ಅಕ್ಷತ್ತದಿಗಿ ಅಮವಾಸ್ಯ ಈ ತಿಂಗಳ ಶುದ್ಧ ಪೌರ್ಣಿಮಾ ದಿವಸ ಚಿತ್ರಾ ನಕ್ಷತ್ರ ವಿರುವುದರಿಂದ ಚೈತ್ರ ಮಾಸವೆಂದು ಹೆಸರು ಬಂದಿದೆ. ಈ ಎಲ್ಲ ಹಬ್ಬ ಗಳಲ್ಲಿ ಕೆಲವನ್ನು ಕೆಲವು ಜನರು ಆಚರಿಸುತ್ತಿರುವರು. ಸಂವತ್ಸರಾರಂಭ ಅರ್ಥಾತ್ ಯುಗಾದಿ ಹಬ್ಬವು ಸಕಲರಿಂದಲೂ ಸಂಭ್ರಮದೊಡನೆ ಆಚರಿ ಸಲ್ಪಡುತ್ತದೆ. ಆ ಹಬ್ಬವನ್ನು ಎಲ್ಲರೂ ಅರಿತು ಇತೋಪ್ಯಧಿಕಲಾಗಿ ಶ್ರದ್ಧೆ ಯಿಂದ ಆಚರಿಸಲೆಂದು ಕೆಳಗೆ ಅದನ್ನು ವಿಶದವಾಗಿ ವಿವರಿಸಿದ್ದೇವೆ.

## ಯುಗಾದಿಯ ಹಬ್ಬವು ಸಂವತ್ಸರಾರಂಭ

ಜ್ಯೋತಿಷ ಶಾಸ್ತ್ರವು ವರ್ಷಾರಂಭದ ದಿವಸವನ್ನು ಪರಮ ಪವಿತ್ರ ವನ್ನಾಗಿ ಹೇಳುತ್ತಿರುವುದರಿಂದ ಪ್ರತಿಯೊಂದು ಧರ್ಮದವರಿಗೂ ಈ ವರ್ಷಾ ರಂಭದ ದಿವಸವು ಅತಿ ಮಹತ್ವವುಳ್ಳದಾಗಿರುವುದು. ಈ ದಿವಸವನ್ನು ಹಿಂದೂ ಜನರು ಪುಣ್ಯ ಕಾಲವೆಂದು ಭಾವಿಸುತ್ತಾರೆ. ಆದರೆ ವರ್ಷಾರಂಭವನ್ನು ಹಿಂದು ಸ್ತಾನದಲ್ಲಿ ಚೈತ್ರ ಶುದ್ಧ ಪ್ರತಿಪದದ ದಿನವೇ ಸಾರ್ವತ್ರಿಕ ಆಚರಿಸುವುದಿಲ್ಲ. ಪೂರ್ವ ಕಾಲದಲ್ಲಿ ಜನರು ಮಕರ ಸಂಕ್ರಾಂತಿಯ ದಿನವು ವರ್ಷಾರಂಭವೆಂದು ತಿಳಿಯುತ್ತಿದ್ದರು. ಉತ್ತರಭಾರತೀಯರು ಕಾರ್ತಿಕ ಶುದ್ಧ ಪ್ರತಿಪದವು ವರ್ಷಾ ರಂಭವೆಂದು ಈಗಲೂ ಹೇಳುತ್ತಿರುವರು. ಕಾಶ್ಮಿರ ದೇಶದಲ್ಲಿ ೮೦೦ ನೂರು ವರ್ಷಗಳ ಹಿಂದೆ ಚೈತ್ರ ಶುದ್ಧ ಪ್ರತಿಪದವು ಹೊಸ ದಿವಸವೆಂದು ಆ ದಿವಸ ದೊಡ್ಡ ಉತ್ಸವವನ್ನು ನೆರವೇರಿಸುತ್ತಿದ್ದರೆಂದು ತಿಳಿದುಬರುತ್ತದೆ. ದಕ್ಷಿಣ ಭಾರತದಲ್ಲಿ ಅಂದರೆ ಕರ್ನಾಟಕ, ತೆಲಗು, ತಮಿಳು ಮೊದಲಾದ ದೇಶ ವಾಸಿಗಳು ಚೈತ್ರ ಶುದ್ಧ ಪ್ರತಿಪದವು ವರ್ಷಾರಂಭವೆಂದು ಭಾವಿಸುತ್ತಾರೆ. ಶಾಲಿವಾಹನ ಶಕವು ವ್ಯವಹಾರದಲ್ಲಿ ಚೈತ್ರ ಶುದ್ಧ ಪ್ರತಿಪದದಿಂದ ಪ್ರಾರಂಭ

ವಾಗುವುದರಿಂದ ಈ ದೇಶವಾಸಿಗಳು ಅಂದಿನ ದಿನವನ್ನು ದೊಡ್ಡ ಹಬ್ಬವನ್ನಾಗಿ ಆಚರಿಸುವರು. ಶಾಲಿವಾಹನನ ವಿಷಯವನ್ನು ಹಿಂದೆ ವಿಶದವಾಗಿ ವಿವರಿಸಿದ್ದೇವೆ.

ವಿಕ್ರಮ ಶಕೆಯ ಹೊಸದಿವಸವಾದ ಕಾರ್ತಿಕ ಶುದ್ಧ ಪ್ರತಿಪದಕ್ಕಿಂತಲೂ ಚೈತ್ರ ಶುದ್ಧ ಪ್ರತಿಪದವು ಅತಿ ಪವಿತ್ರವಾದುದೆಂದು ಅನೇಕ ಗ್ರಂಥಗಳಲ್ಲಿ ಉದಾಹರಿಸಲ್ಪಟ್ಟದೆ. ಯಾಕಂದರೆ ಎಲ್ಲ ಮಾಸಗಳಲ್ಲಿಯೂ ಚೈತ್ರಮಾಸವು ಮೊದಲು ಬರುವದು. ಅದರಂತೆಯೇ ಋತುಗಳಲ್ಲಿ ವಸಂತಋತುವೇ ಮೊದಲನೆಯದಾಗಿರುವುದು. ಮತ್ತು ಆ ದಿವಸಕ್ಕೆ ಯುಗಾದಿಯೆಂದು ಪ್ರಸಿದ್ಧಿಯುಂಟು. "ಯುಗ=ವರುಷ ಆದಿ=ಮೊದಲು, ಅಂದರೆ ಯುಗಾದಿಯು ವರುಷದ ಮೊದಲ ದಿನ" ಇದರಿಂದ ಸೃಷ್ಟಿಯ ಮೊದಲ ದಿನವೆಂಬ ಅರ್ಥವು ವ್ಯಕ್ತವಾಗುವದು.

## ಯುಗಾದಿಯ ಉತ್ಪತ್ತಿ

"ಬಹುಸ್ಯಾಂ ಪ್ರಜಾಯೇಯ" ಎಂಬ ಭಗವದ್ವಾಕ್ಯದಂತೆ ಶ್ರೀ ಪರಶಿವನು ತನ್ನಲ್ಲಿ ಅವ್ಯಕ್ತ ರೂಪವಾಗಿರುವ ಸ್ಥಾವರ ಜಂಗಮಾತ್ಮಕವಾದ ಈ ಜಗತ್ತನ್ನು ವ್ಯಕ್ತಗೊಳಿಸುವುದಕ್ಕಾಗಿ ವ್ಯವಹಾರಾರ್ಥವಾಗಿ ವರ್ಷ, ಋತು, ಮಾಸ, ಪಕ್ಷ, ಸಂವತ್ಸರ, ಕಾಲಗಣನಾದಿಗಳನ್ನು ಯೋಚಿಸಿ ಇಂದ್ರಾದಿ ದೇವತೆಗಳನ್ನು ಕರೆದು ಅವರಿಗೆ ಜಗದ್ರಕ್ಷಣಾದಿಕಾರ್ಯಗಳನ್ನು ವಹಿಸಿದನು. ಆ ದೇವತೆಗಳು ಪರಶಿವನ ಆಜ್ಞಾಪಾಲನಾರ್ಥವಾಗಿ ಹಿಮಾಲಯಕ್ಕೆ ಬಂದು ಪ್ರಥಮ ದಿವಸವನ್ನು ಯುಗಾದಿಯೆಂದು ಕರೆದರೆಂದು ಅನೇಕ ಶಾಸ್ತ್ರಗಳು ಹೇಳುತ್ತವೆ.

## ಪ್ರಭವಾದಿ ಅರವತ್ತು ಸಂವತ್ಸರಗಳ ಉತ್ಪತ್ತಿಯು

ಮನುಮುನಿಗಳಿಂದ ವಂದ್ಯನು, ಗಾನಪ್ರಿಯನು ಬ್ರಹ್ಮಚಾರಿಗಳಲ್ಲಿ ಅಗ್ರಗಣ್ಯನೂ ಆದ ನಾರದ ಮಹರ್ಷಿಯು ಒಂದಾನೊಂದು ದಿವಸ ಗಂಗಾ ನದಿಯಲ್ಲಿ ಸ್ನಾನಮಾಡುತ್ತಿದ್ದನು. ಅಲ್ಲಿ ಎರಡು ಮೀನಗಳು ಪರಸ್ಪರ ಕ್ರೀಡಿಸುತ್ತಿ

ದ್ದುದನ್ನು ನೋಡಿ ನಾರದಮುನಿಗೆ ತಾನು ಗೃಹಸ್ಥಾಶ್ರಮಿಯಾಗಬೇಕೆಂಬ ಆಶೆಯುಂಟಾಯಿತು. ಆದರೆ ಅವನು ತ್ರಿಲೋಕ ಸಂಚಾರಿಯಾದುದರಿಂದ ಕನ್ಯೆಯನ್ನು ಕೊಡುವವರು ಯಾರೂ ದೊರೆಯಲಿಲ್ಲ. ಆಗ ಶ್ರೀ ಕೃಷ್ಣನಿಗೆ ಹದಿನಾರು ಸಾವಿರ ಒಂದನೂರಾ ಎಂಟು ಜನ ಸತಿಯರಿದ್ದರು. ನಾರದನು ಶ್ರೀ ಕೃಷ್ಣನ ಬಳಿಗೆ ಹೋಗಿ ಅವರಲ್ಲಿ ಒಬ್ಬ ಸ್ತ್ರೀಯಳನ್ನು ಯಾಚಿಸಬೇಕೆಂದು ಯೋಚಿಸಿ ದ್ವಾರಕಾನಗರಕ್ಕೆ ತೆರಳಿದನು. ಜಗದಾತ್ಮ ಸ್ವರೂಪನಾದ ಶ್ರೀ ಕೃಷ್ಣನಿಗೆ ನಮಸ್ಕರಿಸಿ, "ದೇವಾ ನನಗೆ ಇದೂವರೆಗೂ ಬ್ರಹ್ಮಚರ್ಯಾಶ್ರಮದಲ್ಲಿ ಕಾಲವನ್ನು ಕಳೆದು ಮನಸ್ಸಿಗೆ ಬೇಸರವಾಗಿದೆ. ಇನ್ನುಮುಂದೆ ಗೃಹಸ್ಥಾಶ್ರಮವನ್ನು ಸ್ವೀಕರಿಸಬೇಕೆಂಬ ಆಶೆಯು ನನಗೆ ಉಂಟಾಗಿದೆ. ನಿನ್ನಲ್ಲಿ ಅಸಂಖ್ಯ ಸ್ತ್ರೀಯರಿದ್ದಾರೆ. ಅವರೆಲ್ಲರಲ್ಲಿಯೂ ನೀನೋರ್ವನೇ ಕ್ರೀಡಿಸುವದಾದರೂ ಸಾಧ್ಯವಿಲ್ಲ. ಆದ್ದರಿಂದ ನನಗೋರ್ವ ಸ್ತ್ರೀಯಳನ್ನು ಕೊಡಬೇಕೆಂ"ದು ಕೇಳಿದನು. ಆಗ ಶ್ರೀ ಕೃಷ್ಣನು ಕಾಮಾಂಧನಾದ ನಾರದನ ವಾಕ್ಯವನ್ನು ಕೇಳಿ "ದೇವರ್ಷಿಯೇ ನನಗೆ ಅನೇಕ ಜನ ಸತಿಯರಿರುವದೇನೊ ನಿಜ ಆದರೆ ಯಾವ ಸ್ತ್ರೀಯಳ ಮನೆಯಲ್ಲಿ ನಾನು ಇರುವದಿಲ್ಲವೋ ಆ ಸ್ತ್ರೀಯಳನ್ನು ನೀನು ತೆಗೆದುಕೊಂಡು ಹೋಗೆಂ"ದು ಹೇಳಿದನು. ಆ ಪ್ರಕಾರವಾಗಿ ನಾರದನು ಶ್ರೀ ಕೃಷ್ಣನ ಅಪ್ಪಣೆಯಂತೆ ಎಲ್ಲ ಸ್ತ್ರೀಯರ ಮನೆಯನ್ನು ಪ್ರವೇಶಮಾಡಿ ನೋಡಲಾಗಿ ಶ್ರೀ ಕೃಷ್ಣನು ಪ್ರತಿಯೊಬ್ಬ ಸ್ತ್ರೀಯರ ಮನೆಯಲ್ಲಿಯೂ ವಾಸಮಾಡಿಕೊಂಡಿದ್ದನು. ಆಗ ನಾರದನು ನಿರಾಶೆಯುಳ್ಳವನಾಗಿ ತಿರುಗಿಬಂದನು. ಆಗ ಸಂಧ್ಯಾಕಾಲವಾದುದರಿಂದ ಜಪವಂದನಾದಿಗಳನ್ನು ಮಾಡುವುದಕ್ಕಾಗಿ ಗಂಗಾ ನದಿಯಕಡೆಗೆ ಹೊರಟನು. ವಿವಾಹ ಸುಖವನ್ನು ಅನುಭವಿಸಬೇಕೆಂದು ಹಲವು ಬಗೆಯಿಂದ ಯೋಚಿಸುತ್ತಿರುವ ನಾರದನು ಇನ್ನೊಮ್ಮೆ ಶ್ರೀಕೃಷ್ಣನಲ್ಲಿಗೆ ಹೋಗಿ ಓರ್ವ ಸ್ತ್ರೀಯಳನ್ನು ಯಾಚಿಸಬೇಕೆಂಬುದನ್ನು ನಿರ್ಧರಿಸಿ ನದಿಯಲ್ಲಿ ಇಳಿದು ಸ್ನಾನಮಾಡಹತ್ತಿದ್ದನು. ಅವನು ವಿವಾಹದ ವಿಚಾರದಲ್ಲಿಯೇ ಮಗ್ನನಾಗಿದ್ದನು. ಮತ್ತೊಮ್ಮೆ ನೀರಿನಲ್ಲಿ ಮುಳುಗಿ ಏಳುವಷ್ಟರಲ್ಲಿತನ್ನ ಪುರುಷ ರೂಪವು ಮಾಯವಾಗಿ, ಅದಕ್ಕೆ ಪ್ರತಿಯಾಗಿ ಸ್ತ್ರೀ ರೂಪವು ಅವನಿಗೆ ಬಂದಿತು. ನಾರದನು ನಾರದಿಯಾದನು. ಲಜ್ಜೆಯಿಂದಲೂ ಆಶ್ಚರ್ಯದಿಂದಲೂ ಚಕಿತನಾಗಿ ನದಿಯಿಂದ ಹೊರಬಿದ್ದು ತನ್ನ ಆಶ್ರಮದಕಡೆಗೆ

ಬರಹತ್ತಿದನು. ಮಧ್ಯ ಮಾರ್ಗದಲ್ಲಿ ಓರ್ವ ಸನ್ಯಾಸಿಯು ನಾರದಿಯ ಎದುರಿಗೆ ಬಂದನು. ಆಗ ಆತನು ಅವಳ ರೂಪಲಾವಣ್ಯಾದಿಗಳಿಗೆ ಮೋಹಿತನಾಗಿ ನಾರದಿಯನ್ನು ತೆಗೆದುಕೊಂಡು ಹೋಗಿ ಬಲಾತ್ಕಾರದಿಂದ ಪಾಣಿಗ್ರಹಣ ಮಾಡಿಕೊಂಡನು. ಈ ಪ್ರಕಾರವಾಗಿ ಸನ್ಯಾಸಿ ನಾರದಿ ಇವರೀರ್ವರಿಗೆ ಅರವತ್ತು ವರ್ಷಗಳ ಪರ್ಯಂತರ ಸಂಬಂಧವು ಬೆಳೆಯಿತು. ಆಗ ನಾರದಿಯ ಉದರದಿಂದ ಅರವತ್ತು ಜನ ಪುತ್ರರು ಜನಿಸಿದರು. ಆಗ ನಾರದಿಯು ಪುತ್ರರ ಸೇವಾ ಶುಶ್ರೂಷೆಯಿಂದ ದುಃಖಿತಳಾಗಿ ಗೃಹಸ್ಥ ಜೀವನದಲ್ಲಿ ಅನಂತ ಕ್ಲೇಶಗಳನ್ನು ಸಹಿಸಲಾರದೇ ಭಗವಾನ್ ವಿಷ್ಣುವಿಗೆ ಮೊರೆಹೊಕ್ಕು, "ದೇವಾ ಈ ಮಹಾ ದುಃಖದಿಂದ ನನ್ನನ್ನು ದೂರಮಾಡೆಂ"ದು ಹಲವು ಬಗೆಯಿಂದ ಪ್ರಾರ್ಥಿಸಲು ಕರುಣಾನಿಧಿಯಾದ ಶ್ರೀ ವಿಷ್ಣುವು ಪ್ರಸನ್ನನಾಗಿ ನಾರದಿಗೆ ತನ್ನ ದಿವ್ಯ ದರ್ಶನವನ್ನಿತ್ತನು. ಮತ್ತು "ಎಲೈ ನಾರದನೇ ನೀನು ನಿಗಮಾಗಮಗಳ ಸಾರವನ್ನರಿತು ಮಹಾ ಜ್ಞಾನಿಯೆಂದು ಅನೇಕ ದೇವಾಧಿ ದೇವತೆಗಳಿಂದ ಹೊಗಳಿಸಿಕೊಳ್ಳುವವನಾಗಿ, ಕಡೆಗೆ ನಶ್ವರವಾದ ವಿಷಯ ಜಾಲದಲ್ಲಿ ಧುಮುಕಿ ದುಃಖಕ್ಕೀಡಾದಿ" ಎಂದು ನಾನಾಪ್ರಕಾರವಾಗಿ ಉಪದೇಶ ಮಾಡಹತ್ತಿದನು. ಅಷ್ಟರಲ್ಲಿ ನಾರದಿಯ ಅರವತ್ತು ಜನ ಪುತ್ರರಲ್ಲಿ ಕೆಲವರು ಅವ್ವಾ ನಮಗೆ ಹಸಿವೆಯಾಗಿದೆಯೆಂತಲೂ ಹಲವರು ನಮಗೆ ತೃಷೆಯಾಗಿದೆಯೆಂತಲೂ ಕೂಗಹತ್ತಿದರು. ಅದನ್ನು ಕೇಳಿ ನಾರದಿಯು ಶ್ರೀ ಕೃಷ್ಣನನ್ನು ಕುರಿತು "ದೇವಾ! ಮೊದಲು ಈ ಪುತ್ರರನ್ನು ಸಮಾಧಾನ ಪಡಿಸಿ ಮುಂದೆ ಇವರಿಗೆ ಸುಖ ಜೀವನದ ಮಾರ್ಗವನ್ನು ತೋರಿಸು, ಆಮೇಲೆ ನನಗೆ ಪೂರ್ವದ ನಾರದ ರೂಪವನ್ನು ಕೊಟ್ಟು ನನ್ನನ್ನು ರಕ್ಷಿಸು" ಎಂದು ಬೇಡಿಕೊಂಡಳು. ಆಗ ಭಗವಾನ್ ಕೃಷ್ಣನು ಆ ನಾರದಿಯ ಪ್ರಭವ ಮೊದಲಾದ ಅರವತ್ತು ಜನ ಪುತ್ರರಿಗೆ ಕ್ರಮವಾಗಿ ಒಂದೊಂದು ವರುಷ ರಾಜ್ಯವನ್ನು ಕೊಟ್ಟನು. ಮತ್ತು ನಾರದಿಯನ್ನು ನಾರದನನ್ನಾಗಿ ಮಾಡಿದನು. ನಾರದಿಯ ಪ್ರಭವಾದಿ ಅರವತ್ತು ಜನ ಪುತ್ರರು ಆ ಕಾಲದಿಂದ ಪ್ರತಿಯೊಂದು ವರುಷಕ್ರಮವಾಗಿ ಆಳಹತ್ತಿದರು. ಆದ್ದರಿಂದ ಒಂದು ಸಂವತ್ಸರವು ಅರವತ್ತು ವರ್ಷಕ್ಕೊಮ್ಮೆ ಬರುತ್ತದೆ. ಆ ಸಂವತ್ಸರದ ಆದಿದಿವಸವೇ ಯುಗಾದಿಯು.

## ರೂಢಿ ವಿಧಿಯು

ದಕ್ಷಿಣ ಭಾರತದಲ್ಲಿ ನಡೆಯಬೇಕಾದ ಹಬ್ಬಗಳಿಗೆಲ್ಲ ಯುಗಾದಿ ಹಬ್ಬವು ಮೊದಲನೇ ಸೋಪಾನದಂತಿರುವದು. ಈ ಹಬ್ಬವು ಬರುತ್ತದೆಂದು ತಿಳಿದೊಡನೆ ಬಡವರಿಗೂ ಬಲ್ಲಿದರಿಗೂ ಹಿರಿಯರಿಗೂ ಕಿರಿಯರಿಗೂ ಆನಂದವು ಉಕ್ಕೇರುತ್ತದೆ. ಪ್ರತಿಯೊಬ್ಬ ಆಸ್ತಿಕರೂ ತಮ್ಮ ತಮ್ಮ ಮಠಮನೆಗಳನ್ನು ಸುಣ್ಣಬಣ್ಣಗಳಿಂದಲೂ ತಳಿರುತೋರಣಗಳಿಂದಲೂ ಅಲಂಕರಿಸಿ ಯುಗಾದಿಯು ಶೀಘ್ರವಾಗಿ ಬರಲೆಂದು ಉತ್ಸಾಹದಿಂದ ಆ ಹಬ್ಬವನ್ನು ನಿರೀಕ್ಷಿಸುವರು. ಯಾವುದಾದರೊಂದು ಹೊಸ ಕಾರ್ಯವನ್ನು ಮಾಡಬೇಕಾದರೆ ಪರಮ ಪವಿತ್ರವಾದ ಯುಗಾದಿಯ ದಿವಸ ಪ್ರಾರಂಭಿಸುವದನ್ನೂ ನಾವು ಈಗಲಾದರೂ ಕಾಣುತ್ತೇವೆ. ಈ ದಿವಸವು ಹೊಸ ದಿವಸವಾದುದರಿಂದ ಇಂದಿನ ಪವಿತ್ರ ದಿವಸದಲ್ಲಿ ಪ್ರಾಪ್ತವಾದ ಸುಖದುಃಖಗಳನ್ನು ಈ ವರುಷ ಸಮಾಪ್ತಿಯ ವರೆಗೂ ಅನುಭವಿಸಬೇಕಾಗುವದೆಂದು ಆಸ್ತಿಕ ಜನಗಳ ಅಭಿಪ್ರಾಯವದೆ. ಆದ್ದರಿಂದಲೇ ಈ ದಿವಸ ಅಪಶಬ್ದಗಳನ್ನು ನುಡಿಯದೇ ಅನ್ಯರೊಡನೆ ಅಸತ್ಯ ಮಾತಾಡದೇ ಪವಿತ್ರ ಮನಸ್ಸಿನಿಂದ ಪರಶಿವನನ್ನು ಪ್ರಾರ್ಥಿಸಬೇಕು. ಒಟ್ಟನಮೇಲೆ ಈ ದಿವಸ ಸದಾಚಾರ ಸದ್ವರ್ತನೆಗಳಿಂದ ಕೂಡಿ ಒಡನಾಡಿ ಪುರಾಣ ಪುಣ್ಯಕಥೆಗಳಲ್ಲಿಯೂ ಜಗದೀಶನ ನಾಮಸ್ಮರಣೆಯಲ್ಲಿಯೂ ಕಾಲವನ್ನು ಕಳೆಯಬೇಕೆಂದು ಹಿರಿಯರು ಹೇಳುತ್ತಿರುವರು. ಈ ಪವಿತ್ರ ದಿವಸದಲ್ಲಿ ಶಿರೋಮಣಿಗಳಾದ ಭಾರತವಾಸಿಗಳಲ್ಲಂತೂ ಅಭ್ಯಂಗ ಸ್ನಾನವನ್ನಾಚರಿಸುವದುಂಟು. "ಉತ್ಥಾಯೋಷಸಿವತ್ಸರಾದಿಮತಿಥೌ ತೈಲಾದಿ ಕೈರಾಪ್ಲುತಃ" ಎಂಬ ವಾಕ್ಯದಂತೆ ಉದಯ ಕಾಲದಲ್ಲೆದ್ದು ಶೌಚಾದಿ ಕ್ರಿಯೆಗಳನ್ನು ತೀರಿಸಿಕೊಂಡು ಅಭ್ಯಂಗ ಸ್ನಾನವನ್ನು ಮಾಡಬೇಕು. ಮತ್ತು ವತ್ಸರಾದೌ ವಸಂತಾದೌ ಬಲಿರಾಜ್ಯೇ ತಥೈವಚ "ತೈಲಸ್ನಾನಮಕುರ್ವಾಣೋ ನರಕಂ ಪ್ರತಿಪದ್ಯಾತೇ" ಅಂದರೆ ವಸಂತ ಋತುವಿನ ಆರಂಭದಲ್ಲಿ, ವರ್ಷಾರಂಭದಲ್ಲಿ, ಕಾರ್ತಿಕ ಶುದ್ಧ ಪ್ರತಿಪದದಲ್ಲಿ ಯಾರು ಅಭ್ಯಂಗ ಸ್ನಾನವನ್ನು ಮಾಡುವದಿಲ್ಲವೊ ಅವರು ನರಕವನ್ನು ಹೊಂದುತ್ತಾರೆಂದು ಧರ್ಮಗ್ರಂಥಗಳಲ್ಲಿ ಉಲ್ಲೇಖಿಸಿದೆ. ಆದ್ದರಿಂದ ಆ ದಿವಸ ಸರ್ವರೂ ಅಭ್ಯಂಗ ಸ್ನಾನವನ್ನು ಮಾಡಲೇಬೇಕೆಂದು ಆಸ್ತಿಕರ ಅಭಿಪ್ರಾಯವಿದೆ. ಆ ಮೇಲೆ ಹೊಸ ಹೊಸ ವಸ್ತ್ರಾಲಂಕಾರಗಳಿಂದ ಭೂಷಿತ

ರಾಗಿ ಗುರುದೇವತೆಗಳ ದರ್ಶನವನ್ನು ತೆಗೆದುಕೊಂಡು. ಈ ದಿವಸ ಪಂಚಾಂಗ ಶ್ರವಣವನ್ನು ಮಾಡುವದುಂಟು. ಮತ್ತು "ಭುಕ್ತ್ವಾ ನಿಂಬಸುಮಂ ಗುಡಾಮ್ಲ ಲವಣೈರ್ಯುಕ್ ಪೂರ್ವಯಾಮೇನರಃ । ಶ್ರೀವಿದ್ಯಾಯುರಾರೋಗತಾ ವಿಜಯ ದಂಪೀಯೂಷ ಜಂಭೂಷಿತಃ॥" ಅಂದರೆ ಈ ದಿವಸದ ಪೂರ್ವಯಾಮದಲ್ಲಿ ಬೇವಿನ ವಿಷವನ್ನು ಪಾನಮಾಡುವದರಿಂದ ಆಯುರಾರೋಗ್ಯ ವಿದ್ಯಾ ಮೊದ ಲಾದವು ಅಭಿವೃದ್ಧಿಯಾಗುವದೆಂಬ ಅಭಿಪ್ರಾಯವು. ಈ ಹಬ್ಬದಲ್ಲಿ ಬೇವಿನ ವಿಷಪಾನ ಮಾಡುವ ವಿಷಯವನ್ನು ಹಿಂದೆ ಸೂಚಿಸಿದ್ದೇವೆ. ಅದಕ್ಕೊಂದು ಸುಂದರವಾದ ಪೌರಾಣಿಕ ಕಥೆಯುಂಟು.

## ಭಗವಾನ್ ಶಂಕರನು ವಿಷಪಾನ ಮಾಡಿದ್ದು

ಒಂದಾನೊಂದು ಕಾಲದಲ್ಲಿ ದುರ್ವಾಸ ಋಷಿಯ ಶಾಪದಿಂದ ಇಂದ್ರನ ಸಮಸ್ತ ಐಶ್ವರ್ಯವು ಸಮುದ್ರಪಾಲಾಗಿ ಹೋಯಿತು. ಇದರಿಂದ ಇಂದ್ರನು ಶೋಕಸಾಗರದಲ್ಲಿ ಮುಳುಗಿರಲು, ಅನೇಕ ದಾನವರು ಅವನ ಮೇಲೆ ದಂಡೆತ್ತಿ ಹೋದರು. ಆ ಕಾಳಗದಲ್ಲಿ ದೈತ್ಯರು ಎಷ್ಟೋ ಜನ ದೇವತೆಗಳನ್ನು ಸಂಹರಿಸಿದರು.

ಆಗ ಇಂದ್ರನು ದೈತ್ಯರನ್ನು ದಂಡಿಸುವ ಉಪಾಯವನ್ನು ಕಾಣದೆ ಅನೇಕ ದೇವತೆಗಳಿಂದೊಡಗೂಡಿ ಬ್ರಹ್ಮದೇವನ ಬಳಿಗೆ ಬಂದನು. ಆಗ ಬ್ರಹ್ಮನು ಸ್ವಲ್ಪಹೊತ್ತು ಆಲೋಚಿಸಿ ವಿಷ್ಣುವಿಗೆ ಶರಣು ಹೋಗಬೇಕೆಂದು ನಿಶ್ಚೈಸಿ, ಎಲ್ಲ ದೇವತೆಗಳಿಂದ ಕೂಡಿ ದವನಾಕ್ಷೀರ ಸಮುದ್ರದ ಬಳಿಯಲ್ಲಿ ನಿಂತು ವಿಷ್ಣುವಿನ ಗುಣಗಾನವನ್ನು ಮಾಡತೊಡಗಿದನು. ಆಗ ವಿಷ್ಣುವು ದೇವತೆಗಳ ಸ್ತೋತ್ರದಿಂದ ಸಂತೋಷಭರಿತನಾಗಿ ಬ್ರಹ್ಮದೇವನಿಗೆ ನಮಸ್ಕರಿಸಿ ಸರ್ವದೇವತೆಗಳ ಆಗಮನದ ಕಾರಣವನ್ನು ಕೇಳಲು ಬ್ರಹ್ಮದೇವನು ಕೈ ಜೋಡಿಸಿಕೊಂಡು ಇಂದ್ರನಿಗೆ ದುರ್ವಾಸ ಋಷಿಯ ಶಾಪದಿಂದ ಒದಗಿದ ಕಷ್ಟ ವನ್ನೂ, ದೈತ್ಯರು ದೇವತೆಗಳ ಮೇಲೆ ದಂಡೆತ್ತಿ ಬಂದ ಸಂಗತಿಯನ್ನೂ ಸವಿ ಸ್ತಾರವಾಗಿ ಅರಿಕೆ ಮಾಡಿಕೊಂಡನು.

ಆಗ ದಯಾಮಯನಾದ ವಿಷ್ಣುವು ಗಂಭೀರ ವಾಣಿಯಿಂದ ಎಲೈ ದೇವತೆಗಳೇ ನಿಮ್ಮ ಸುಖಕ್ಕಾಗಿ ನಾನೊಂದು ಯುಕ್ತಿಯನ್ನು ತೋರಿಸುವೆನು. ಅದನ್ನು ಸಂಶಯ ರಹಿತರಾಗಿ ಆಚರಿಸಿ ಅಂದರೆ ನೀವು ಸುಖಿಗಳಾಗುವಿರಿ. ಈಗ ದೈತ್ಯ ವರ್ಗಕ್ಕೆ ಜಯದ ಕಾಲವಿರುವದು, ಆದ್ದರಿಂದ ನೀವು ಮಹತ್ಕಾರ್ಯವನ್ನು ಸಾಧಿಸಬೇಕಾದರೆ ಅವರೊಡನೆ ಪ್ರೇಮ ಬೆಳಿಸಿರಿ. ಆ ಮೇಲೆ ಅವರ ಸಹಾಯದಿಂದ ಮೃತರನ್ನು ಸಜೀವಗೊಳಿಸುವ ಅಮೃತವನ್ನು ಸಂಪಾದಿಸುವ ಪ್ರಯತ್ನವನ್ನು ಮಾಡಿರಿ. ಮೊದಲು ಕ್ಷೀರ ಸಮುದ್ರದಲ್ಲಿ ಹುಲ್ಲು, ಬಳ್ಳಿ ಮುಂತಾದ ವನಸ್ಪತಿಗಳನ್ನು ತಂದು ಹಾಕಿರಿ. ಆ ಮೇಲೆ ಮಂಥರ ಪರ್ವತವನ್ನು ಕಡಗೋಲನ್ನಾಗಿ ಮಾಡಿ ವಾಸುಕಿ ಸರ್ಪವನ್ನು ಹಗ್ಗವನ್ನಾಗಿ ಮಾಡಿ ದೇವತೆಗಳು ಒಂದು ಕಡೆಗೆ, ದಾನವರು (ದೈತ್ಯರು) ಮತ್ತೊಂದು ಕಡೆಗೆ ಹಿಡಿದುನಿಂತು ಮಂಥನ ಮಾಡಿರಿ. ಅಂದರೆ ನಿಮಗೆ ಕಾರ್ಯವು ಕೈಗೂಡುವದು. ಈ ಕಾಲದಲ್ಲಿ ದಾನವರು ಹೇಳಿದ ಹಾಗೆ ನೀವು ಕೇಳಿರಿ. ಅವರ ಮಾತನ್ನು ಒಂದೂಸಹ ತೆಗೆದುಹಾಕಬೇಡಿರಿ. ಅವರಿಗೆ ವಿರುದ್ಧವಾಗುವಂತೆ ಯಾವ ಮಾತನ್ನೂ ಆಡಬೇಡಿರಿ. ಸಮುದ್ರ ಮಂಥನ ಮಾಡುವಾಗ್ಗೆ ಎಷ್ಟೋ ಕಷ್ಟಗಳು ಒದಗಿದರೂ ಅವುಗಳಿಗೆ ಹೆದರಬೇಡಿರಿ ಅಂದರೆ ನಿಮ್ಮ ಮನೋರಥವು ಪರಿಪೂರ್ಣವಾಗುವದು" ಎಂದು ಹೇಳಿ ವಿಷ್ಣುವು ಅಂತರ್ಧಾನನಾದನು.

ಬಳಿಕ ದೇವತೆಗಳು ವಿಷ್ಣುವಿನ ಆಜ್ಞೆಯಂತೆ ನಿಃಶಸ್ತ್ರರಾಗಿ ದೈತ್ಯರಾಜನಾದ ಬಲಿಯ ಬಳಿಗೆ ಬಂದರು. ಆಗ ದೈತ್ಯರು ಅವರೊಡನೆ ಕಾಡಲು ಹೋದರು. ನೀತಿ ತತ್ವಜ್ಞನೂ ಬಹು ಉದಾರಿಯೂ ಆದ ಬಲಿಯು ತಮ್ಮವರನ್ನು ಅನೇಕ ನೀತಿವಾಕ್ಯಗಳಿಂದ ತಡೆದು ಇಂದ್ರಾದಿ ದೇವತೆಗಳನ್ನು ಬರಮಾಡಿಕೊಂಡನು. ಆಗ ಇಂದ್ರನು ವಿನಯದಿಂದಲೂ ಮಧುರ ಮಾತುಗಳಿಂದಲೂ ಬಲಿಯನ್ನು ಸಂತೋಷಪಡಿಸಿ ಅಮೃತ ಪ್ರಾಪ್ತಿಯ ಪ್ರಸಂಗವನ್ನು ದಾನವರ ಮುಂಪೆ ತೆಗೆದನು. ಈ ಮಾತು ಬಲಿ ಮೊದಲಾದ ದಾನವ ವೀರರಿಗೆ ಒಪ್ಪಿಗೆಯಾಯಿತು. ಆ ಮೇಲೆ ಅವರೆಲ್ಲರೂ ಕೂಡಿ ಮಂಥರ ಪರ್ವತ



ಭಗವಾನ್ ಶಂಕರ ( ಹಾಲಾಹಲ ವಿಷಪಾನ )

ವನ್ನು ಬಲಾತ್ಕಾರದಿಂದ ಹೊತ್ತುಕೊಂಡು ಹೋಗಿ ಕ್ಷೀರ ಸಮುದ್ರದಲ್ಲಿ ಇಳಿಸಿ ವಾಸುಕಿಯನ್ನು ಪರ್ವತಕ್ಕೆ ಸುತ್ತಿ ಸಮುದ್ರಮಂಥನ ಮಾಡಲು ಉದ್ಯುಕ್ತರಾದರು.

ದೈತ್ಯರು ತಾವು ಅಧಿಕರೆಂಬ ಅಭಿಮಾನದಿಂದ ವಾಸುಕಿಯ ಬಾಲದ ಕಡಿಗೆ ಹಿಡಿಯದೆ ತಲೆಯ (ಹೆಡೆ) ಕಡೆಗೆ ಹಿಡಿದರು. ದೇವತೆಗಳು ಬಾಲದ ಕಡೆಗೆ ಹಿಡಿದರು. ಸಮುದ್ರಮಂಥನ ಕಾರ್ಯವು ಭರದಿಂದ ಸಾಗಿತು. ಅದರ ಅಬ್ಬರಕ್ಕೆ ಜಲಚರ ಪ್ರಾಣಿಗಳು ದೆಶೆಗೆಟ್ಟವು. ವಾಸುಕಿಯ ಬಾಯಿ ಮತ್ತು ಕಣ್ಣುಗಳಿಂದ ವಿಷಜ್ವಾಲೆಗಳು ಹೊರಟವು. ಆದರಿಂದ ಕೆಲವು ದೈತ್ಯರು ಬೆಂದು ಬೆಂಡಾಗಿ ಮರಣವನ್ನೈದಿದರು. ಉಳಿದವರು ದುಸ್ಸಹವಾದ ತಾಪದಿಂದ ತಳಮಳಿಸುತ್ತ ತೇಜೋಹೀನರಾಗಿ ಹೌಹಾರಿದರು. ಇಷ್ಟು ಕಷ್ಟ ಪಟ್ಟು ಪ್ರಾಣಹಾನಿ ಮಾಡಿಕೊಂಡರೂ ಅಮೃತವು ಹೊರಡದೇ ಇದ್ದುದನ್ನು ನೋಡಿ ಉಭಯ ಪಂಗಡದವರೂ ಧೈರ್ಯವನ್ನು ಬಿಡಲಿಲ್ಲ. ಪುನಃ ದೇವ ದಾನವರು ತಮ್ಮ ತಮ್ಮ ಉತ್ಸಾಹಶಕ್ತಿಯನ್ನು ಬೆಳಿಸುತ್ತಾ ಸಮುದ್ರ ಮಂಥನ ಮಾಡತೊಡಗಿದರು. ಆಗ ಸಮುದ್ರವು ಅಲ್ಲೋಲ ಕಲ್ಲೋಲವಾಯಿತು. ಒಳಗಿನ ಜಲಚರಗಳಿಗೆ ಜೀವನದ ಆಶೆಯುು ನಾಶವಾಯಿತು. ಅಷ್ಟರಲ್ಲಿ ಸಮುದ್ರದೊಳಗಿಂದ "ಹಾಲಾಹಲ" ವೆಂಬ ಭಯಂಕರ ವಿಷವು ಉತ್ಪನ್ನವಾಯಿತು. ಆದರಿಂದ ಮೂರು ಲೋಕಗಳು ಸುಡತೊಡಗಿದವು. ಈ ಮಹಾ ದುಃಖವನ್ನು ದೂರ ಮಾಡುವವರು ಯಾರೂ ಇಲ್ಲದಾಯಿತು. ಆಗ ವಿಷ್ಣು, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳು ಕೈಲಾಸಕ್ಕೆ ಹೋಗಿ ಭಗವಾನ್ ಭವಾನೀಪತಿಯನ್ನು ಮೊರೆ ಹೊಕ್ಕು ನಮಸ್ಕರಿಸಿ ಪ್ರಾರ್ಥಿಸತೊಡಗಿದರು.

"ದೇವದೇವ ! ಮಹಾದೇವ ! ಭೂತಾತ್ಮನ್ ! ಭೂತಭಾವನ !!
ತ್ರಾಹಿ ನಃ ಶರಣಾಪನ್ನಾಂಸ್ತ್ರೈಲೋಕ್ಯ ದಹನಾದ್ವಿಷಾತ್ ॥
ತ್ವಮೇಕಃ ಸರ್ವಜಗತ ಈಶ್ವರೋ ಬಂಧಮೋಕ್ಷಯೋಃ ।
ತಂತ್ವಾಮರ್ಚಂತಿ ಕುಶಲಾಃ ಪ್ರಪನ್ನಾರ್ತಿಹರಂಗುರುಂ" ॥

( ಶ್ರೀಮದ್ಭಾಗವತ ೩. ೮-೭-೨೧-೨೨ )

ಹೇ ದಯಾನಿಧೇ ! ಶಂಕರಾ. ಈ ಜಗತ್ತಿನಲ್ಲಿರುವ ಚರಾಚರ ವಸ್ತುಗಳಲ್ಲಿ ನೀನೇ ವ್ಯಾಪಕನಾಗಿದ್ದು ಅವುಗಳ ರಕ್ಷಣೆಯನ್ನು ನೀನೇ ಮಾಡುತ್ತಿರುವೆ. ಈ ಜಗತ್ತಿನ ಉತ್ಪತ್ತಿ । ಸ್ಥಿತಿ–ಲಯಗಳನ್ನು ಮಾಡುವ ಇಚ್ಛೆಯಾದಾಗ ನೀನೇ ಬ್ರಹ್ಮ, ವಿಷ್ಣು, ಮಹೇಶ್ವರರ ರೂಪವನ್ನು ಧರಿಸುತ್ತಿ.

ಎಲೈ ಜಗದೀಶನೇ, ನಿನೇ ಅಖಂಡನು. ನಿನ್ನ ಈ ಬ್ರಹ್ಮರೂಪವನ್ನು ತಿಳಿಯಲು ಯಾವನೂ ಸಮರ್ಥನಲ್ಲವು. ವಿಷ್ಣುವು, ಬ್ರಹ್ಮದೇವನು, ಅಷ್ಟದಿಕ್ಪಾಲಕರು ಇವರೆಲ್ಲರೂ ನಿನ್ನ ವ್ಯಾಪಕ ರೂಪದ ವಿಚಾರ ಮಾಡಿ ವಿಸ್ಮಿತರಾಗುವರು. ಅಂಧಕಾಸುರ ಮೊದಲಾದ ದೈತ್ಯರಿಂದ ಲೋಕಕ್ಕೆ ಒದಗಿದ ಅನೇಕ ಕಂಟಕಗಳನ್ನು ನೀನು ಎಷ್ಟೋಸಾರೆ ನಾಶಮಾಡಿ ಲೋಕಪಾಲಕನೆಂದು ಜಗದ್ವಿಖ್ಯಾತನಾಗಿರುತ್ತಿ. ನಿನ್ನ ಯಥಾರ್ಥ ಜ್ಞಾನವನ್ನು ಪಡೆಯಲು ಬ್ರಹ್ಮಾದಿ ದೇವತೆಗಳೂ ಅಸಮರ್ಥರಾಗಿರುವಾಗ ನಮ್ಮ ಪಾಡೇನು. ನಮಗೆ ತಿಳಿದ ಮಟ್ಟಿಗೆ ನಾವು ನಿನ್ನ ಸ್ತೋತ್ರ ಮಾಡಿದೆವು. ಯಾಕಂದರೆ, ಈ ನಿನ್ನ ದೃಶ್ಯರೂಪವು ಮಾತ್ರ ನಮ್ಮ ಕಣ್ಣಿಗೆ ಕಾಣುತ್ತದೆ. ಸರ್ವಕಾರಣಭೂತವಾದ ನಿನ್ನ ಅತಿ ಸೂಕ್ಷ್ಮ ರೂಪವು ನಮಗೆ ಕಾಣುವದಿಲ್ಲ. ದೇವಾ, ನಾವು ನಿನ್ನ ದರ್ಶನದಿಂದ ಕೃತಾರ್ಥರಾಗಿರುವೆವು. ನಮ್ಮನ್ನು ರಕ್ಷಿಸು. ದೇವದಾನವರು ಕೂಡಿ ಅಮೃತದ ಆಶೆಯಿಂದ ಸಮುದ್ರ ಮಂಥನವನ್ನು ಆರಂಭಿಸಿದೆವು. ಅಮೃತ ಪ್ರಾಪ್ತಿಯು ಒತ್ತಟ್ಟಿಗಿರಲಿ. ಮೂರು ಲೋಕಗಳನ್ನೇ ಸುಡುವಂಥ ಹಾಲಾಹಲ ವಿಷವು ಉತ್ಪನ್ನವಾಗಿರುವದು. ಈ ಮಹಾ ದುಃಖವನ್ನು ದೂರ ಮಾಡಲು ನಿನ್ನಹೊರ್ತು ಯಾರೂ ಸಮರ್ಥರಿಲ್ಲವು. ನೀನು ಇಂಥಾ ಸಮರ್ಥನಾದ್ದರಿಂದಲೇ ನಾವು ನಿನ್ನ ಮೊರೆ ಬಿದ್ದಿರುವೆವು. ದೇವಾ ನಮ್ಮನ್ನು ರಕ್ಷಿಸು.

ಈ ಪ್ರಕಾರವಾದ ದೇವತೆಗಳ ಹಾಗೂ ದೈತ್ಯರ ಆರ್ತಸ್ವರಯುಕ್ತವಾದ ಸ್ತೋತ್ರವನ್ನು ಕೇಳಿ ದಯಾಮಯನಾದ ಶಂಕರನ ಮನಸ್ಸು ಕರಿಗಿತು. ಆಗ ಆತನು ಪಾರ್ವತಿಯನ್ನು ಕುರಿತು ಪ್ರಿಯೆ, ದೇವದಾನವರ ಈ ದೀನ ವಾಣಿಯನ್ನು ಕೇಳಿದಿಯಾ. ಇವರ ಸಂರಕ್ಷಣೆ ಮಾಡುವದು ನನ್ನ ಕರ್ತವ್ಯವಾಗಿರುವದು. ತಾವು ದುಃಖವನ್ನು ಸಹಿಸಿ ಎರಡನೇಯವರ ಕಲ್ಯಾಣವನ್ನು

ಅಪೇಕ್ಷಿಸುವದೇ ಸತ್ಪುರುಷರ ಲಕ್ಷಣವು. ನಾನು ಈ ಹಾಲಾಹಲ ವಿಷವನ್ನು ಪಾನಮಾಡುವುದರಿಂದ ಸರ್ವರೂ ಸುಖಿಗಳಾಗುವರು ಎಂದು ಹೇಳಲು ಶಿವನ ಸಾಮರ್ಥ್ಯವನ್ನು ಅರಿತವಳಾದ ಅಂಬಿಕೆಯು ಈ ಮಹತ್ಕಾರ್ಯಕ್ಕೆ ಒಪ್ಪಿಗೆ ಯನ್ನಿತ್ತಳು. ಕೂಡಲೇ ಭಗವಾನ್ ಶಂಕರನು ಆ ವಿಷವನ್ನು ಅಂಗೈಯಲ್ಲಿ ತೆಗೆದುಕೊಂಡು ಪಾನ ಮಾಡಲುದ್ಯುಕ್ತನಾದನು. ಹೃದಯದಲ್ಲಿದ್ದಂಥಾ ಈಶ್ವರನಿಗೂ ಆ ವಿಷದ ಸ್ಪರ್ಶವಾಗಬಾರದೆಂಬ ಉದ್ದೇಶದಿಂದ ದಯಾಮಯ ನಾದ ಶಂಕರನು ಆ ವಿಷವನ್ನು ತನ್ನ ಕಂಠದಲ್ಲಿಯೇ ತಡೆದನು.

ಆಗ ಶಿವನ ಕಂಠವು ಸುಟ್ಟು ನೀಲವರ್ಣವಾಗಲು ಲೋಕಕಲ್ಯಾಣ ಕಾರಕವಾದ ನೀಲಕಂಠನೆಂಬ ನಾಮವು ಶಂಕರನಿಗೆ ಅಲಂಕಾರಪ್ರಿಯ ವಾಯಿತು. ಈ ಅದ್ಭುತ ಕಾರ್ಯವನ್ನು ನೋಡಿ. ದೇವತೆಗಳೂ, ದೈತ್ಯರೂ ಶಂಕರನ ಸ್ತೋತ್ರವನ್ನು ಮಾಡತೊಡಗಿದರು. ನೀಲಕಂಠನು ವಿಷಪಾನ ಮಾಡುವಾಗ ಆತನ ಬೊಗಸಿಯೊಳಗಿಂದ ಜಾರಿ ಕೆಳಗೆ ಬಿದ್ದ ಕೆಲವು ವಿಷದ ಅಂಶವನ್ನು ಹಾವು-ಚೇಳು ಮತ್ತು ಕೆಲಕೆಲವು ವನಸ್ಪತಿಗಳೂ ಗ್ರಹಣ ಮಾಡಿ ದವು. ಇವುಗಳನ್ನು ನೋಡಿದರೆ ಆ ವಿಷವು ಎಷ್ಟು ಉಗ್ರವಿರಬಹುದೆಂಬು ವದು ಗೊತ್ತಾಗುತ್ತದೆ. ಈ ಪ್ರಕಾರವಾಗಿ ಭಗವಾನ್ ಶಂಕರನು ಚೈತ್ರಶುದ್ಧ ಪ್ರತಿಪದೆಯ ದಿವಸ ವಿಷಪಾನ ಮಾಡಿದ ಸ್ಮಾರಕವಾಗಿ ಈಗಲಾದರೂ ಆ ದಿವಸ ಎಲ್ಲರೂ ದೊಡ್ಡ ಹಬ್ಬವನ್ನಾಗಿ ಆಚರಿಸುತ್ತಾರೆ. ಆ ದಿವಸ ಸರ್ವರೂ ಉದಯ ಕಾಲದಲ್ಲಿಯೇ ಅಭ್ಯಂಗಸ್ನಾನ ಮಾಡಿ ಶಿವಪೂಜಾದಿ ಕ್ರಿಯೆಗಳನ್ನು ತೀರಿಸಿಕೊಂಡು ಆ ದಯಾನಿಧಿಯಾದ ಶಂಕರನು ಮಾಡಿದ ವಿಷಪಾನದ ಅದ್ಭುತ ಲೀಲೆಯ ಸ್ಮಾರಕವಾಗಿ ಬೇವಿನ ವಿಷವನ್ನು ಈಗಲೂ ಪಾನ ಮಾಡುವುದುಂಟು.

## ಶ್ರೀ ರಾಮನವಮಿ

ಭಗವಾನ್ ವಿಷ್ಣುವು ದುಷ್ಟನಿಗ್ರಹ ಶಿಷ್ಟಪರಿಪಾಲನಾರ್ಥವಾಗಿ ಮತ್ಸ್ಯ ಕೂರ್ಮ ಮೊದಲಾದ ದಶಾವತಾರಗಳನ್ನು ಧರಿಸಿರುವುದುಂಟು. ಅವನ ಅಂಥ ಅವತಾರಗಳಲ್ಲಿ ರಾಮಾವತಾರವೂ ಒಂದಾಗಿದೆ. ಪೂರ್ವಕಾಲದಲ್ಲಿ ವಿಶ್ವಾಮಿತ್ರ

ಮೊದಲಾದ ಋಷಿಪುಂಗರವರ ತಪಸ್ಸಿಗೆ ಕೆಲವು ದಾನವರು ವಿಘ್ನಕಾರಿಗಳಾಗಿದ್ದರು. ಅಂಥವರನ್ನು ಸಂಹರಿಸಿ ಲೋಕಕ್ಕೆ ಸುಖಶಾಂತಿಯನ್ನು ಬೀರಲು ಶ್ರೀರಾಮಚಂದ್ರನು ದಶರಥನ ಧರ್ಮಪತ್ನಿಯಾದ ಕೌಸಲ್ಯೆಯ ಉದರದಲ್ಲಿ ಜನಿಸಿದನು. ಅವನು ರಾವಣ, ಕುಂಭಕರ್ಣ ಮೊದಲಾದ ದೈತ್ಯರನ್ನು



( ಚೈತ್ರಶುದ್ಧ ನವಮಿ )

ಮರ್ದಿಸಿ ಧರ್ಮವನ್ನು ರಕ್ಷಿಸಿದನು. ಅವನಲ್ಲಿ ಪಿತೃವಾಕ್ಯಪರಿಪಾಲನೆ, ಕರ್ತವ್ಯದಕ್ಷತೆ, ಬಂಧುಪ್ರೇಮ, ಏಕಪತ್ನೀವ್ರತ ಇತ್ಯಾದ್ಯನೇಕ ಆದರ್ಶ ಗುಣಗಳಿದ್ದವು. ರಾಮರಾಜ್ಯದಲ್ಲಿ ಪ್ರಜರಿಗೆ ದುಃಖದುಮ್ಮಾನಗಳಿದ್ದಿಲ್ಲ, ಎಲ್ಲರೂ ನ್ಯಾಯನೀರಿಯಿಂದ ವರ್ತಿಸುತ್ತಿದ್ದರು.

ಶ್ರೀರಾಮಚಂದ್ರನ ಆದರ್ಶತ್ವವನ್ನು ಅಳವಡಿಸಿಕೊಂಡು ಜನತೆ ನಡೆಯಲೆಂಬ ಹೆಗ್ಗುರಿಯಿಂದ ಪ್ರತಿವರುಷ ಚೈತ್ರಶುದ್ಧ ನವಮಿಯಂದು ಅವನ ಹುಟ್ಟುಹಬ್ಬದ ಮಹೋತ್ಸವವನ್ನು ವಿಜೃಂಭಣೆಯಿಂದ ಆಚರಿಸುವ ಉದ್ದೇಶ.

ರಾಮನ ಚರಿತ್ರೆಯನ್ನು ಹೇಳುವ ಹಲವಾರು ಹೊತ್ತಿಗೆಗಳಿರುವವು. ಅವುಗಳಲ್ಲಿ ಪುರಾತನವಾದುದು ವಾಲ್ಮೀಕಿ ಬರೆದ ರಾಮಾಯಣ. ಅದರ ಸಂಕ್ಷಿಪ್ತ ವಿವರಣೆಯನ್ನು ಈ ಮುಂದೆ ವಿವರಿಸಿದ್ದೇವೆ.

ಭಾರತದಲ್ಲಿ ಆರ್ಯರ ಪ್ರಥಮ ಪ್ರವೇಶವಾದ ಕೆಲವು ಕಾಲದ ಮೇಲೆ ಅವರ ಒಂದು ಶಾಖೆಯ ತಂಡದವರು ಪಾಮೀರ ತಪ್ಪಲದಿಂದ ಹೊರಟು ಜಿಲ್ಜಿತ್–ಸತ್ಲಜಗಳ ಮಾರ್ಗವಾಗಿ ಹಿಂದುಸ್ತಾನವನ್ನು ಪ್ರವೇಶಿಸಿ, ಗಂಗಾ, ಯಮುನಾ ನದಿಗಳ ಬೈಲುಶೀಮೆಗಳಲ್ಲಿ ಬಂದು ಬೀಡುಬಿಟ್ಟರು. ಅಲ್ಲಿ ಅವರು ಮೂಲನಿವಾಸಿಗಳೊಡನೆ ಬೆರೆತು ತಮ್ಮ ರಾಜ್ಯವನ್ನು ವಿಸ್ತಾರಗೊಳಿಸಿದರು. ಹಿಮಾಲಯದಿಂದ ವಿಂಧ್ಯಾದ್ರಿಯವರೆಗೂ ಇರುವ ಪ್ರದೇಶವನ್ನು ಆ ಜನಾಂಗವು ತಮ್ಮ ಅಧೀನದಲ್ಲಿಟ್ಟುಕೊಂಡಿದ್ದರಿಂದ ಆ ಭೂಮಿಗೆ ಈಗಲೂ "ಆರ್ಯಾವರ್ತ"ವೆಂದು ಅನ್ನುವುದುಂಟು. ಆ ಭೂಮಿಯು ಈಗಲೂ ಫಲಭರಿತವಾಗಿಯೂ, ಸಕಲ ಸಂಪತ್ತಿನಿಂದ ಸುಶೋಭಿತವಾಗಿಯೂ ಇರುವುದರಿಂದ ಪುಣ್ಯಭೂಮಿಯೆಂದು ಹೆಸರಾಗಿದೆ. ಆ ಪ್ರದೇಶಾಂತರ್ಗತವಾದ ಗಂಗಾ ಮತ್ತು ಗಂಡಕೀ ನದಿಗಳ ಮಧ್ಯದಲ್ಲಿರುವ ಭಾಗಕ್ಕೆ ಕೋಸಲ ಎಂಬ ಹೆಸರು ಬಂದಿದೆ. ಅಲ್ಲಿರುವ ಕ್ಷತ್ರಿಯರು ಹಿಂದಕ್ಕೆ ಸೂರ್ಯವಂಶೀಯರೆಂದು ಪ್ರಖ್ಯಾತರಾದರು. ಆ ವಂಶದಲ್ಲಿ ಜನಿಸಿದ ದಶರಥ ರಾಜನು ಅಯೋಧ್ಯಾ ನಗರಕ್ಕೆ ಅರಸನಾಗಿ ಆಳಿಹೋದನು. ಅವನಿಗೆ ೩೬೫ ಜನ ಸತಿಯರಿದ್ದರು. ಅವರುಗಳಲ್ಲಿ ಕೌಸಲ್ಯಾ, ಕೈಕೇಯೀ, ಸುಮಿತ್ರಾ ಈ ಮೂವರು ಮಾತ್ರ ರಾಮಾಯಣದಲ್ಲಿ ಪ್ರಧಾನ ಪಾತ್ರ ವಹಿಸಿರುವರು. ದಶರಥ ರಾಜನು ಒಂದು ಸಾರೆ ಪುತ್ರಪ್ರಾಪ್ತಿಗಾಗಿ ಯಜ್ಞವನ್ನು ಆಚರಿಸಿದನು. ತತ್ಪರಿಣಾಮವಾಗಿ ಕೌಸಲ್ಯೆಯ ಉದರದಲ್ಲಿ ರಾಮ, ಕೈಕೇಯಿಯ ಉದರದಲ್ಲಿ ಭರತ, ಸುಮಿತ್ರೆಯ ಉದರದಲ್ಲಿ ಲಕ್ಷ್ಮಣ, ಶತೃಘ್ನರು ಜನಿಸಿದರು.

ಒಂದು ಸಾರೆ ವಿಶ್ವಾಮಿತ್ರನು ಗಂಗಾನದಿಯ ಪಶ್ಚಿಮ ಭಾಗದಲ್ಲಿರುವ ತನ್ನ ಸಿದ್ಧಾಶ್ರಮದಲ್ಲಿ ರಾಕ್ಷಸರ ಹಾವಳಿ ಹೆಚ್ಚಾದುದರಿಂದ ದಶರಥ ರಾಜನಲ್ಲಿಗೆ ಬಂದು ಆ ಸಂಗತಿಯನ್ನು ಅವನಿಗೆ ಅರುಹಿ ರಾಮ–ಲಕ್ಷ್ಮಣರನ್ನು ತನ್ನ ಆಶ್ರಮಕ್ಕೆ ಕರೆದೊಯ್ದು ಅವರಿಗೆ ಧನುರ್ವಿದ್ಯೆಯನ್ನು ಕಲಿಸಿದನು. ತರುವಾಯ ರಾಮನು ಅಲ್ಲಿ ವಿಘ್ನಕಾರಿಗಳಾದ ದಾನವರನ್ನು ಸಂಹರಿಸಿ ವಿಶ್ವಾಮಿತ್ರನ ಅನುಗ್ರಹವನ್ನು ಪಡೆದನು.

ಕೆಲವು ಕಾಲಗಳ ಮೇಲೆ ವಿದರ್ಭ ದೇಶದ ಒಡೆಯನಾದ ಜನಕರಾಜನು ಮಿಥಿಲಾ ಪಟ್ಟಣದಲ್ಲಿ ತನ್ನ ಮಗಳಾದ ಸೀತೆಯ ಸ್ವಯಂವರವನ್ನು ನಿಶ್ಚಯಿಸಿದನು. ಆ ಸ್ವಯಂವರದಲ್ಲಿ ಧನುಸ್ಸನ್ನು ಎತ್ತಿದವನಿಗೆ ಸೀತೆಯನ್ನು ಕೊಟ್ಟು ಮದುವೆ ಮಾಡುವುದಾಗಿ ಪ್ರಕಟಿಸಿ ದೇಶದ ರಾಜಾಧಿರಾಜರನ್ನು ತನ್ನಲ್ಲಿಗೆ ಬರಮಾಡಿಕೊಂಡನು. ಅತ್ಯಂತ ಭಾರವಾದ ಆ ಧನುಸ್ಸನ್ನು ಎತ್ತಲು ಸ್ವಯಂವರದಲ್ಲಿ ಯಾರೂ ಸಮರ್ಥರಾಗಲಿಲ್ಲ, ರಾಮನು ಮಾತ್ರ ಆ ಕಾರ್ಯದಲ್ಲಿ ನಿರಾಯಾಸವಾಗಿ ಯಶಸ್ವಿಯಾದನು. ಜನಕನು ತನ್ನ ಸಂಕಲ್ಪ ಸಿದ್ಧಿಯಾದುದರಿಂದ ಸಂತೋಷಭರಿತನಾಗಿ ಅಯೋಧ್ಯೆಯ ಅರಸನಾದ ದಶರಥನಿಗೆ ಈ ಸಂತಸದ ಸುದ್ದಿಯನ್ನು ದೂತನ ದ್ವಾರಾತಿಳಿಸಿ, ಅವನನ್ನು ತನ್ನಲ್ಲಿಗೆ ಗೌರವಾದರಗಳಿಂದ ಬರಮಾಡಿಕೊಂಡನು. ಅಲ್ಲದೇ ಆಪ್ತೇಷ್ಟರನ್ನೂ ಸಮಸ್ತ ಸಾಮಂತ ರಾಜರನ್ನೂ ಕರೆಯಿಸಿ ಶುಭಸಮಯದಲ್ಲಿ ಯಥಾವಿಧಿಯಾಗಿ ಸೀತೆಯನ್ನು ರಾಮನಿಗೆ ಕೊಟ್ಟು ಮಂಗಲ ಕಾರ್ಯವನ್ನು ನೆರವೇರಿಸಿದನು. ಕೆಲವು ಕಾಲದ ನಂತರ ದಶರಥರನು, ತನ್ನ ಸಕಲ ಪುತ್ರಮಿತ್ರಕಲತ್ರ ಸಮೇತನಾಗಿ ಮಿಥಿಲಾ ನಗರದಿಂದ ಮರಳಿ ಅಯೋಧ್ಯೆಗೆ ಆಗಮಿಸಿದನು. ಮುಂದೆ ದಶರಥನು ವಾರ್ಧಕ್ಯ ದಿಶೆಯಲ್ಲಿ ರಾಜ್ಯಭಾರವನ್ನು ಹೊರಲು ಅಸಮರ್ಥನಾಗಿ, ಜ್ಯೇಷ್ಠಪುತ್ರನಾದ ರಾಮನಿಗೆ ಪಟ್ಟಾಧಿಕಾರವನ್ನು ಮಾಡಲು ಇಚ್ಛೆಯುಳ್ಳವನಾದನು. ರಾಜನ ಸದಿಚ್ಛೆಗೆ ಸಕಲ ಬಂಧುಗಳೂ, ಪ್ರಜಗಳೂ ಸಂತೋಷಭರಿತರಾಗಿ ಸಮ್ಮತಿಯನ್ನಿತ್ತರು. ರಾಜ್ಯಾಭಿಷೇಕದ ಮುಹೂರ್ತವು ನಿಶ್ಚಯಿಸಲ್ಪಟ್ಟು, ತದಂಗಭೂತವಾದ ಕಾರ್ಯವು ಸುಸಜ್ಜಿತವಾಯಿತು. ಅದೇ ಸಮಯಕ್ಕೆ, ದಶರಥನ ಚಿಕ್ಕ ಅರಸಿಯಾದ ಕೈಕೇಯಿಯು, ತನ್ನ ದಾಸಿಯಾದ ಮಂಥರೆಯ ದುರುಪದೇಶಕ್ಕೆ ಒಳಪಟ್ಟಳು. ಕೈಕೇಯಿಯು ರಾಮನ ಸಿಂಹಾಸನಾರೋಹಣಕ್ಕೆ ಮೊದಲು ಯಾವ ಅಡ್ಡಿ ಒಡ್ಡಿರಲಿಲ್ಲ. ಮಂಥರೆ, ಈ ವಿಷಯದಲ್ಲಿ ತನ್ನ ಕೈಚಾಚಿ, ಕೈಕೇಯಿಯನ್ನು ಕುರಿತು – "ನಾವು ಕೊನೆಯ ವರೆಗೂ ಇಲ್ಲಿ ವಿಧೇಯರಾಗಿಯೇ ಉಳಿಯಬೇಕಾಗುವದು * ಇವರಲ್ಲಿ ನಾವು

* ಕೈಕೇಯಿಯು ಈ ದೇಶದವಳಲ್ಲ. ಬಾಹ್ಲೀಕ ದೇಶದ ಗಿರಿವ್ರಜಪುರದ ರಾಜನ ಮಗಳು. ಆ ಶಹರವು ಈಗ ಅಫಗಾನಿಸ್ತಾನದಲ್ಲಿ ಸೇರಿಕೊಂಡಿದೆ. ಮಂಥರೆ ಕೈಕೇಯಿಯ ತವರೂರಿಂದ ಬಂದ ದಾಸಿಯಾಗಿರುವಳು (ಅಶೋಕವನಂ)

ಬೆಳೆದು ಬಾಳಬೇಕಾದರೆ, ಈಗ ನಡೆದಿರುವ ರಾಮನ ರಾಜ್ಯಾಭಿಷೇಕವನ್ನು ಪ್ರತಿಭಟಿಸಿ, ಭರತನಿಗೆ ಪಟ್ಟಗಟ್ಟಬೇಕು. ಇಲ್ಲವಾದರೆ ಕಡೆತನಕ ಕೌಸಲ್ಯೆಯಲ್ಲಿ ಕೈಗೊಂಬೆಯಾಗಿ ಕುಣಿಯಬೇಕಾಗುವದು.

"ಹೃಷ್ಟಾಃಖಲು ಭವಿಷ್ಯಂತಿ ರಾಮಸ್ಯ ಪರಮಾಃಸ್ತ್ರಿಯಃ ।
ಅಪಹೃಷ್ಟಾಃ ಭವಿಷ್ಯಂತಿ ಸ್ನೂಷಾಸ್ತೇ ಭರತಕ್ಷಯೇ" ॥

ರಾಮನ ಮಡದಿ ಮಕ್ಕಳು ಸುಖದಿಂದಿರುವರು ಭರತನು ಇಲ್ಲವಾದರೆ, ನಿನ್ನ ಬಳಗವು ಪರಾಧೀನವಾಗುವದು. ಈ ಪ್ರಕಾರವಾದ ಮಂಥರೆಯ ಯುಕ್ತಿ ವಚನವು ಕೈಕೇಯಿಯ ಬಣ್ಣವನ್ನು ಬದಲಿಸಿತು. ಆಗ ಹಿಂದೊಮ್ಮೆ ದಶರಥನಿಗೆ ಯುದ್ಧದಲ್ಲಿ ಕೈಕೇಯಿಯು ನೆರವಾಗಿ ಅವನನ್ನು ವಚನಬದ್ಧನನ್ನಾಗಿ ಮಾಡಿಕೊಂಡಿದ್ದಳು. ಈಗ ಅವಳಿಗೆ ವರವನ್ನು ಪಡೆಯುವ ಸಮಯ ಸಿಕ್ಕಿತು. ಕೈಕೇಯಿಯು ರಾಮನ ಪಟ್ಟಾಭಿಷೇಕಕ್ಕೆ ಅಡ್ಡನಿಂತು ಭರತನಿಗೆ ಪಟ್ಟಗಟ್ಟಬೇಕೆಂತಲೂ, ರಾಮನನ್ನು ೧೪ ವರುಷ ವನವಾಸಕ್ಕಾಗಿ ಕಾಡಿಗೆ ಕಳುಹಿಸಬೇಕೆಂತಲೂ ದಶರಥರಾಜನಿಗೆ ಕೇಳಿಕೊಂಡಳು. ಈ ಮಾತನ್ನು ಕೇಳಿ ರಾಜನು, ಸಿಡಿಲು ಬಡಿದವನಂತೆ ಮೂರ್ಛಿತನಾದನು "ಇದು ಸರಿಯಲ್ಲವೆಂದು ಹಲವು ಬಗೆಯಾಗಿ ಹೇಳಿದರೂ, ಕೈಕೇಯಿ ಅದಕ್ಕೆ ಕಿವಿಗೊಡಲಿಲ್ಲ. "ಒಲಿದರೆ ನಾರಿ ಮುನಿದರೆ ಹೆಮ್ಮಾರಿ" ಎಂಬಂತೆ ಅವಳು ಹಿಡಿದ ಹಟವನ್ನು ಬಿಡಲೇ ಇಲ್ಲ. ದಶರಥನಿಗೆ ರಾಮನು ಎಷ್ಟೇ ಪ್ರಿತಿಪಾತ್ರನಾದರೂ ವಿದೇಶೀ ವಿದುಷೆಯಾದ ಕೈಕೇಯಿಯ ಕಣ್ಮುಂದೆ ದಶರಥನ ಆಟ ನಡೆಯಲಿಲ್ಲ. ಮೇಲಾಗಿ ಪೂರ್ವದಲ್ಲಿಯೇ ವಚನಬದ್ಧನಾದುದರಿಂದ ನಿರುಪಾಯನಾಗಿ ತಲೆ ತಗ್ಗಿಸಬೇಕಾಯಿತು. ರಾಜನ ಸ್ಥಿತಿಯೇ ಹೀಗಿರುವಾಗ ಮಂತ್ರಿಗಳ ಮಂತ್ರವೂ ಹುಸಿಹೋಯಿತು. ಕೇಳುವುದೇನು ! ಅಂತಃಪುರದಲ್ಲಿ ಗದ್ದಲವೇ ಗದ್ದಲ. ಈ ದುರ್ವಾರ್ತೆ, ಬಿರುಗಾಳಿಯಂತೆ ಪುರವನ್ನು ಪ್ರವೇಶಿಸಿ, ಸುಹೃದರ ಹೃದಯವನ್ನು ಕಂಪಿಸಿ, ಅಲ್ಲಲ್ಲಿ ಸುಳಿದಾಡುತ್ತ ಕೊನೆಗೆ ರಾಮನ ಕಿವಿಯಲ್ಲಿ ಹೊಕ್ಕಿತು. ಆಗ ರಾಮನು ತಂದೆಯ ಮುಂದೆ ಬಂದು "ಜನಕ ! ಇದಕ್ಕೆಕೇ ಚಿಂತೆ ಮಾಡುವೆ ? ನಿನ್ನ ವಚನವನ್ನು ಪರಿಪಾಲಿಸಲು ನಾನೀಗಲೇ ಅಡವಿಗೆ ಹೋಗುಲು ಸಿದ್ಧನಿರುವೆ. ಅಲ್ಲಿಯಾದರೂ ಸುಖಿಯಾಗಿರುವೆ. ಅಪ್ಪಣೆಯಾಗ

ಲೆ”ಂದು ಮಾತಾಪಿತೃಗಳಿಗೆ ಸಮಸ್ಕರಿಸಿ ರಾಜ ವೇಷಭೂಷಣಗಳನ್ನು ಬಿಟ್ಟು ನಾರಬಟ್ಟೆಯನ್ನುಟ್ಟು ಅಟ್ಟಹಾಸದಿಂದ ಅಡವಿಗೆ ಹೊರಟನು. ಶೀತೆಯಾದರೋ ರಾಮನನ್ನು ಅಗಲಿರಲಾರದೇ ಅವನೊಡನೆ ಹೊರಟಳು. ಅವರ ರಕ್ಷಣೆಗಾಗಿ ಲಕ್ಷ್ಮಣನೂ ಹೊರಟು ಹೋದನು. ಈ ಪ್ರಕಾರವಾಗಿ ಸೀತಾ, ರಾಮ, ಲಕ್ಷ್ಮಣರು ರಾಜ್ಯತ್ಯಾಗ ಮಾಡಿದ ಕೆಲವು ದಿವಸಗಳಲ್ಲಿಯೇ ದಶರಥನು ಪುತ್ರವಿಯೋಗವನ್ನು ಸಹಿಸದವನಾಗಿ, ಹಾಸಿಗೆ ಹಿಡಿದು ನರಳುತ್ತ ಕೃಶನಾಗಿ, ಕೊನೆಗೆ ಕಾಲಾಧೀನನಾದನು. ಆಗ ಭರತನು ತನ್ನ ಮಾವನ ಮನೆಯ (ನಂದಿಗ್ರಾಮದ) ಲ್ಲಿದ್ದನು, ಅವನು ತಂದೆ ತೀರಿದ ಸುದ್ದಿಯನ್ನು ದೂತನಿಂದ ತಿಳಿದು ಒಡನೆಯೇ ಅಯೋಧ್ಯೆಗೆ ಹೊರಟು ಬಂದನು. ಆಗ ಕೈಕೇಯಿಯು ತಾನು ಮಾಡಿದ ಶತಕ್ರತುವನ್ನು ಆಮೂಲಾಗ್ರವಾಗಿ ಭರತನಿಗೆ ತಿಳಿಸಿದಳು. ನ್ಯಾಯನಿಷ್ಠುರನಾದ ಭರತ ತಾಯಿಯ ಕುತಂತ್ರದ ಬಲೆಯಲ್ಲಿ ಬೀಳಲಿಲ್ಲ. ರಾಮನು ಆ ಸಮಯಕ್ಕೆ ಚಿತ್ರಕೂಟದಲ್ಲಿದ್ದನು. ಭರತ ಅಲ್ಲಿಗೆ ಹೋಗಿ ತಂದೆ ಸ್ವರ್ಗಸ್ಥನಾದುದನ್ನು ಅವನಿಗೆ ಅರುಹಿದನು. “ಈಗಲೇ ಅಯೋಧ್ಯೆಗೆ ಬಂದು ಸಿಂಹಾಸನನ್ನು ಸ್ವೀಕರಿಸಬೇಕೆ”ಂದು ರಾಮನಿಗೆ ಕೇಳಿಕೊಂಡನು. ಆ ಮಾತಿಗೆ ರಾಮ ಒಪ್ಪಲಿಲ್ಲ. ಭರತನಾದರೋ ರಾಮನನ್ನು ಕುರಿತು – “ವನವಾಸದ ಅವಧಿಯ ನಂತರ ಅಯೋಧ್ಯೆಗೆ ಬಂದು ರಾಜ್ಯವನ್ನು ಆಳಬೇಕೆ”ಂಬ ಅಭಿವಚನ ಪಡೆದು ಅವನ ಪಾದುಕೆಗಳನ್ನು ತನ್ನೊಡನೆ ತಂದು ಅಯೋಧ್ಯೆಯ ಸಿಂಹಾಸನದಲ್ಲಿರಿಸಿ ರಾಜ್ಯ ಕಾರಭಾರವನ್ನು ತಾನೇ ಮಾಡಹತ್ತಿದನು. ಅತ್ತ ರಾಮನು ಚಿತ್ರಕೂಟದಿಂದ ಗೋದಾವರಿಯನ್ನು ದಾಟಿ ಮುಂದೆ ಘನಘೋರವಾದ ದಂಡಕಾರಣ್ಯವನ್ನು ಪ್ರವೇಶಿಸಿದನು. ಅಲ್ಲಿ ಲಕ್ಷ್ಮಣನು ರಾವಣನ ತಂಗಿಯಾದ ಶೂರ್ಪನಖಿಯ ಮೊಲೆ–ಮೂಗನ್ನು ಅಣ್ಣನ ಆದೇಶದ ಮೇರೆಗೆ ಕೊಯ್ದನು. ಈ ಅಪಮಾನದ ಸೇಡು ತೀರಿಸಿಕೊಳ್ಳುವದಕ್ಕಾಗಿ, ರಾವಣನು ರಾಮನಿಲ್ಲದ ಸಮಯ ಸಾಧಿಸಿ ಸನ್ಯಾಸಿಯ ವೇಷದಿಂದ ಬಂದು ಸೀತೆಯನ್ನು ಕದ್ದೊಯ್ದನು. ಬೇಟೆಗಾಗಿ ಹೋದ ರಾಮ ಲಕ್ಷ್ಮಣರು ಪರ್ಣಕುಟೀರಕ್ಕೆ ತಿರುಗಿಬಂದು ನೋಡುವಷ್ಟರಲ್ಲಿ ಸೀತೆ ಇರಲಿಲ್ಲ. ಅವಳು ರಾವಣನಿಂದ ಅಪಹೃತಳಾದಳೆಂಬ ವಿಷಯ, ಅವರಿಗೆ ಜಟಾಯುವಿನ ಮೂಲಕ ತಿಳಿಯಿತು. ಆಗ ರಾಮನು ದು:ಖಾಕ್ರಾಂತನಾಗಿ, ಸೀತೆಯ

ಶೋಧದಲ್ಲಿ ತೊಡಗಿದವನಾಗಿ, ಸುಗ್ರೀವನೊಡನೆ ಸ್ನೇಹವನ್ನು ಬೆಳೆಸಿದನು. ಮತ್ತು ಅವನ ಸಹೋದರನಾದ ವಾಲಿಯನ್ನು ಯುದ್ಧದಲ್ಲಿ ಸಂಹರಿಸಿ, ಅವನಿಂದ ಅಪಹರಿಸಲ್ಪಟ್ಟ ತಾರಾದೇವಿಯನ್ನೂ, ರಾಜ್ಯವನ್ನೂ, ತಿರುಗಿ ಸುಗ್ರೀವನಿಗೆ ಅರ್ಪಿಸಿದನು. ಆಗ ಸುಗ್ರೀವನು ಸಂತೋಷಬಟ್ಟು, ರಾಮನಿಗೆ ಪ್ರತ್ಯುಪಕಾರ ಮಾಡಲು, ಸೀತೆಯನ್ನು ಹುಡುಕಲು ವಾನರ ಸೈನ್ಯವನ್ನು ಸಂಗ್ರಹಿಸಿದನು. ನಲ, ನೀಲ, ಜಾಂಬವಂತ, ಹನುಮಂತ ಮೊದಲಾದ ವಾನರ ವೀರರು ಸೀತೆಯ ಶೋಧಕ್ಕಾಗಿ, ನಡಕಟ್ಟಿಕೊಂಡು ನಿಂತರು. ಹನುಮಂತನು ಅಲ್ಲಿಲ್ಲಿ ಹುಡುಕುತ್ತ ಹುಡುಕುತ್ತ ಹತಾಶನಾಗಿ ಕೊನೆಗೆ ಲಂಕೆಗೆ ಜಿಗಿದು, ಅಶೋಕವನದಲ್ಲಿರುವ ಸೀತೆಯನ್ನು ಕಂಡು, ಅವಳಿಗೆ ರಾಮಾಂಕಿತ ಉಂಗುರ ತೋರಿಸಿ, ಗುರುತಿಗಾಗಿ ಅವಳಿಂದ ಚೂಡಾಮಣಿಯನ್ನು ಪಡೆದು, ಅದನ್ನು ರಾಮನಲ್ಲಿಗೆ ತಂದು ತೋರಿಸಿದನು. ಆಗ ರಾಮನು, ಸುಗ್ರೀವ ಮೊದಲಾದ ವಾನರ ವೀರರ ಸೈನ್ಯ ಸಹಾಯದಿಂದ ದುರ್ಧರವಾದ ಸಮುದ್ರಕ್ಕೆ ಸೇತುವೆ ಕಟ್ಟಿ, ಲಂಕೆಯನ್ನು ಹೊಕ್ಕನು. ರಾವಣನೊಡನೆ ನಿಕರವಾದ ಕಾಳಗವನ್ನು ಹೂಡಿದನು. ಇಂದ್ರಜಿತ, ಕುಂಭಕರ್ಣ ಮೊದಲಾದ ರಾವಣನ ಅನುಯಾಯಿಗಳು, ರಾಮನ ತೀಕ್ಷ್ಣ ಶರ ಸಂಘಾತಕ್ಕೆ ಆಹುತಿಯಾದರಲ್ಲದೆ ಕೊನೆಗೆ ರಾವಣನೂ ಯುದ್ಧದಲ್ಲಿ ಮೃತನಾದನು. ಆನಂತರ ರಾಮನು ಒಂದು ವರುಷ ರಾವಣನಲ್ಲಿ ವಾಸವಾಗಿದ್ದ ಸೀತೆಯ ವರ್ತನೆಯ ಬಗೆಗೆ ಸಂಶಯಗ್ರಸ್ತನಾಗಿ ಅವಳನ್ನು ಅಗ್ನಿಪರೀಕ್ಷಾ ಪುರಸ್ಸರವಾಗಿ ಪುನಃ ಪರಿಗ್ರಹಿಸಿದನು. ಅಷ್ಟರಕ್ಕೆ ವನವಾಸದ ಅವಧಿಯು ಪರಿಸಮಾಪ್ತಿಯಾದುದರಿಂದ ಭರತನ ಪ್ರಾರ್ಥನೆಯ ಮೇರೆಗೆ ಲಕ್ಷ್ಮಣ, ಸುಗ್ರೀವ, ವಿಭೀಷಣ ಮೊದಲಾದವರೊಡನೆ ರಾಮನು ಅಯೋಧ್ಯೆಗೆ ಬಂದು ರಾಜ್ಯಸೂತ್ರವನ್ನು ಕೈಯಲ್ಲಿ ತೆಗೆದುಕೊಂಡು, ಕೆಲವು ಕಾಲ ಸುಖದಿಂದ ರಾಜ್ಯವನ್ನಾಳಿದನು. ಒಂದು ದಿವಸ ಅಯೋಧ್ಯೆಯ ಅಗಸನೋರ್ವನು ತನ್ನ ಹೆಂಡತಿಯೊಡನೆ ಕಲಹವಾಡುತ್ತಿರುವಾಗ, ಸೀತೆಯು ರಾವಣನಲ್ಲಿದ್ದುದರ ಬಗೆಗೆ ಪಿಸುನುಡಿಯಾಡುತ್ತಿರುವುದನ್ನು ದುರ್ಮುಖ ಎಂಬ ಸೇನಿಕನು ಕೇಳಿ, ಅದನ್ನು ರಾಮನಿಗೆ ತಿಳಿಸಿದನು, ಆಗ ರಾಮನು ಅಷ್ಟಕ್ಕೇನೇ ಪೂರ್ಣ ಗರ್ಭವತಿಯಾದ ಸೀತೆಯನ್ನು ವಿಹಾರದ ನೆಪದಿಂದ, ಲಕ್ಷ್ಮಣನ ಮೂಲಕ ಅರಣ್ಯಕ್ಕೆ ಕಳುಹಿಸಿ, ಅವಳನ್ನು ಪರಿತ್ಯಾಗ

ಮಾಡಿದನು. ಸೀತೆಯು ಓರ್ವಳೇ ಅರಣ್ಯದಲ್ಲಿ ಬಿದ್ದು ಮೂರ್ಛಿತಳಾಗಿ, ಸ್ವಲ್ಪ ರಪಿ ಎದ್ದು ದಿಗ್ಭ್ರಾಂತಳಾಗಿ, ಬಿಕ್ಕಿಬಿಕ್ಕಿ ಅಳಹತ್ತಿರುವುದನ್ನು ವಾಲ್ಮೀಕಿಯು ಕಂಡು, ಅವಳನ್ನು ಸಂತೈಸಿ ತನ್ನ ಆಶ್ರಮಕ್ಕೆ ಕರೆದೊಯ್ದನು. ಕೆಲವು ದಿವಸ ಗಳನಂತರ ಸೀತೆಯು ಅಲ್ಲಿ ಕುಶ-ಲವರಿಗೆ ಜನ್ಮನಿತ್ತಳು. ಈ ಅವಳಿ ಮಕ್ಕಳ ರಾಮನಂತೆಯೇ ಸುಂದರ ಸದೃಢ ಶರೀರವುಳ್ಳವರಾಗಿರುವರು. ಅವರು ಶೈಶವಾ ವಸ್ಥೆಯನ್ನು ಮೀರಿ, ದಿನೇ ದಿನೇ ರಾಕಾಚಂದ್ರನಂತೆ ಬೆಳೆಯುತ್ತ, ಹನ್ನೆರಡು ವರುಷದ ಬಾಲಕರಾಗಿರುವಾಗ, ವಾಲ್ಮೀಕಿಯು ತಾನು ರಚಿಸಿದ ರಾಮಾಯಣ ವನ್ನು ಅವರಿಗೆ ಕಂಠ ಪಾಠ ಮಾಡಿಸಿದನು. ವಾಲ್ಮೀಕಿಯು ಒಂದು ದಿವಸ ಕುಶ-ಲವರನ್ನು ರಾಮನ ಸಭೆಯಲ್ಲಿ ಕರೆತಂದು, ಆ ತನ್ನ ರಾಮಾಯಣವನ್ನು ಹೇಳಿಸಿದನು. ಆದರಿಂದ ರಾಮನು ಮುಗ್ಧನಾಗಿ, ತನ್ನ ಮಕ್ಕಳನ್ನು ಗುರ್ತಿಸಿ ಮಮತೆಯಿಂದ ಎತ್ತಿಕೊಂಡು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಹಾಗೂ ಸೀತೆಯನ್ನು ಪುನಃ ಸ್ವೀಕರಿಸುವದಾಗಿ ನಿರ್ಧರಿಸಿ, ವಾಲ್ಮೀಕಿ ಆಶ್ರ ಮದಿಂದ ಅವಳನ್ನು ತನ್ನಲ್ಲಿಗೆ ಕರೆಯಿಸಿಕೊಂಡನು. ಸೀತೆಯು ರಾಮನ ಸಭೆಗೆ ಬಂದು ರಾವಣನಲ್ಲಿ ತನ್ನ ಆಚರಣೆಯು ಪವಿತ್ರವಾಗಿರುವುದೆಂಬುದನ್ನು ಪ್ರಜೆಗಳಿಗೆ ಖಾತ್ರಿ ಮಾಡಿಕೊಡುವುದಕ್ಕೋಸ್ಕರ ಭೂದೇವಿಯನ್ನುಕುರಿತು ಹೇಳಿದುದೇನೆಂದರೆ:—“ ಅಮ್ಮಾ ನಾನು ಕಾಯ, ವಾಕ್, ಮನಸಾ ನಿಜವಾ ಗಿಯೂ ಪವಿತ್ರಳಾಗಿರುವೆ; ಹಾಗಿದ್ದಲ್ಲಿ ನೀನು ನನ್ನನ್ನು ಒಡಲಲ್ಲಿ ಬರಮಾಡಿ ಕೊಳ್ಳುವವಳಾಗು” ಎಂದು ನುಡಿಯುವಷ್ಟರಲ್ಲಿಯೇ ಭೂಮಿಯು ಬಿರಿದು ಇಬ್ಭಾಗವಾಯಿತು. ದಿವ್ಯ ಜ್ಯೋತಿಸ್ವರೂಪಳಾದ ಭೂದೇವಿಯು ಸೀತೆಯನ್ನು ತನ್ನಲ್ಲಿ ಬರಮಾಡಿಕೊಂಡಳು. ಇದೆಲ್ಲವನ್ನೂ ರಾಮನು ಕಣ್ಣಾರೆ ಕಂಡು ಸಖೇದಾಶ್ಚರ್ಯವುಳ್ಳವನಾಗಿ, ನಿರಾಶೆ ಹೊಂದಿದನು.

ಒಂದು ದಿವಸ ಓರ್ವ ಯೋಗಿಯು, ರಾಮನಲ್ಲಿಗೆ ಬಂದು, ರಹಸ್ಯವಾಗಿ ಮಾತನಾಡುತ್ತಿದ್ದನು. ಆಜ್ಞಾಪಾಲಕನಾದ ಲಕ್ಷ್ಮಣನು ಆಗ ದ್ವಾರಪಾಲಕ ನಾಗಿ ನಿಂತಿದ್ದನು. ಅಷ್ಟರಲ್ಲಿಯೇ ದೂರ್ವಾಸ ಋಷಿಯು ರಾಮನಲ್ಲಿಗೆ ಭೆಟ್ಟಿಗಾಗಿ ಬಂದನು. ಲಕ್ಷ್ಮಣನು ಭಯದಿಂದ ಅವನನ್ನು ತಡೆಯಲು ಅಸಮರ್ಥನಾಗಿ ಹಿಂದೆ ಸರಿದನು. ದೂರ್ವಾಸನು ಒಳಗೆ ಪ್ರವೇಶ ಮಾಡಿ ಬಿಟ್ಟನು. ಆಗ ಅಲ್ಲಿದ್ದ ಯೋಗಿಯು ಹೊರಗೆ ಹೊರಟು ಹೋದನು.

ಲಕ್ಷ್ಮಣನು ತನ್ನ ಆಜ್ಞಾ ಉಲ್ಲಂಘನೆ ಮಾಡಿದುದು ರಾಮನಿಗೆ ಅಸಂತೋಷ ವಾಯಿತು. ಈ ಅಪರಾಧದ ಬಗ್ಗೆ ಲಕ್ಷ್ಮಣನು ಅಯೋಧ್ಯೆಯನ್ನು ಬಿಟ್ಟು ಹೋಗಲು ವಸಿಷ್ಠನು ಅಭಿಪ್ರಾಯವನ್ನಿತ್ತನು. ಆ ಪ್ರಕಾರವಾಗಿ ಲಕ್ಷ್ಮಣನು ಹೊರಟು ಹೋಗಿ ಸರಯೂ ನದಿಯಲ್ಲಿ ಪ್ರವೇಶಿಸಿ ಸ್ವರ್ಗಸ್ಥನಾದನು. ಹೀಗೆ ಲಕ್ಷ್ಮಣನು ಪರಲೋಕವಾಸಿಯಾದ ನಂತರ ರಾಮಚಂದ್ರನು ಕುಶ-ಲವರಿಗೆ ರಾಜ್ಯಸೂತ್ರವನ್ನು ವಹಿಸಿಕೊಟ್ಟನು. ಸುಗ್ರೀವನು ಕಿಷ್ಕಿಂಧಾ ರಾಜ್ಯಾಧಿಕಾರ ವನ್ನು ತನ್ನ ಮಗನಾದ ಅಂಗದನಿಗೆ ಒಪ್ಪಿಸಿದನು. ಆ ನಂತರ ರಾಮ, ಶತ್ರುಘ್ನ, ಸುಗ್ರೀವ ಇವರೆಲ್ಲರೂ ಸರಯೂ ನದಿಯನ್ನು ಪ್ರವೇಶಿಸಿ ಜಲ ಸಮಾಧಿಯನ್ನು ಹೊಂದಿದರು.

## ಮಹಾವೀರ ಜಯಂತಿ

### ಚೈತ್ರ ಶುದ್ಧ ೧೩

ಭಾರತ ದೇಶವು ಧರ್ಮಪ್ರಧಾನ ದೇಶವಾಗಿದೆ. ಈ ಪುಣ್ಯ ಭೂಮಿ ಯಲ್ಲಿ ಅನೇಕ ಜನ ಮಹಾತ್ಮರು ಆಗಿಹೋಗಿರುವರು. ಈಗ್ಗೆ ಸುಮಾರು ೨೫೦೦ ವರುಷಗಳ ಹಿಂದೆ ನಮ್ಮ ದೇಶವು ಬಹು ಹೀನಾವಸ್ಥೆಯಲ್ಲಿತ್ತು. ಪುಂಡ, ಪೋಕ, ಡಾಂಭಿಕ, ದುರ್ವ್ಯಸನಿಗಳು ಸ್ವೇಚ್ಛಾಚಾರಿಗಳಾಗಿ ತಂಡೋಪ ತಂಡವಾಗಿ ಅಲೆದಾಡುತ್ತಿದ್ದರು. ದೀನಹೀನರು ಬಾಳಿಬದುಕುವಂತಿರಲಿಲ್ಲ. ಅನ್ಯಾಯ ಅತ್ಯಾಚಾರಗಳಿಂದ ಸಜ್ಜನರು ನೊಂದು ಬೆಂದು ಬೆಂಡಾಗಿದ್ದರು. ಅಭಕ್ಷಭಕ್ಷಣ ಅಗಮ್ಯಗಮನ ಮೊದಲಾದ ಭೋಗವಿಲಾಸವು ಮಾನವನಲ್ಲಿ ಮೇರೆ ಮೀರಿ ಮೆರೆಯುತ್ತಿದ್ದಿತು. ಜಿಹ್ವಾಚಾಪಲ್ಯದ ನಿಮಿತ್ತವಾಗಿ ಆಚರಿಸು ತ್ತಿರುವ ಪಶುಯಜ್ಞದಿಂದ ಭಾರತ ಭೂಮಿ ರಕ್ತರಂಜಿತವಾಗಿತ್ತು. ಇಂಥ ಸಂಕಷ್ಟ ಸಮಯದಲ್ಲಿ ಮಾನವನ ಸುಖಶಾಂತಿಗಾಗಿ ಮಹಾಮಹಿಮನಾದ ಮಹಾವೀರಸ್ವಾಮಿಯ ಅವತಾರವಾಯಿತು. ಇಂದಿಗೆ ಸುಮಾರು ೨೫೬೪ ವರ್ಷಗಳ ಹಿಂದೆ ಬಿಹಾರ ಪ್ರಾಂತದಲ್ಲಿ ಕ್ಷತ್ರಿಯ ಕುಂಡವೆಂಬ ನಗರದಲ್ಲಿ ಸಿದ್ಧಾರ್ಥರಾಜನ ಧರ್ಮಪತ್ನಿಯಾದ ತ್ರಿಶಲಾದೇವಿಯ ಗರ್ಭದಲ್ಲಿ ಮಹಾ ವೀರನು ಚೈತ್ರಶುದ್ಧ ೧೩ ನೆಯ ಸೋಮವಾರ ದಿವಸ ಜನ್ಮವೆತ್ತಿದನು.

ಸಿದ್ಧಾರ್ಥರಾಜನು ಕ್ಷತ್ರಿಯನಾಗಿದ್ದು ಇಕ್ಷ್ವಾಕು ವಂಶದಲ್ಲಿ ಅಂತರ್ಗ
ವಾದ ಜ್ಞಾತವಂಶದವನಾಗಿರುವನಲ್ಲದೇ ಸತ್ಕುಲೀನನೂ, ಸದಾಚಾರಿಯ



ಆಗಿದ್ದನು. ತ್ರಿಶಲಾದೇವಿಯು ಸುಪ್ರಸಿದ್ಧವಾದ ವೈಶಾಲಿಯ ಸಾಮ್ರಾ
ಚೇಟಕರಾಜನ ಪುತ್ರಿಯು. ಮಹಾವೀರನು ತಾಯಿಯ ಗರ್ಭದಲ್ಲಿರು

ಸಿದ್ಧಾರ್ಥರಾಜನ ಮನೆಯಲ್ಲಿ ಧನಕನಕಾದಿ ಐಶ್ವರ್ಯವು ಉತ್ತರೋತ್ತರ ವಾಗಿ ಅಭಿವೃದ್ಧಿಯಾಗತೊಡಗಿತು. ಆದ್ದರಿಂದ ಮಾತಾಪಿತೃಗಳು ಆ ಶಿಶು ವಿಗೆ "ವರ್ಧಮಾನ" ಎಂಬ ನಾಮಕರಣ ಮಾಡಿದರು. ಅವನು ಜನ್ಮತಃ ಮಹಾಜ್ಞಾನಿಯೂ, ಅಲೌಕಿಕ ಶಕ್ತಿಸಂಪನ್ನನೂ ಆಗಿರುವನಲ್ಲದೇ ಸುಂದ ರನೂ, ಸದೃಢಶರೀರ ಉಳ್ಳವನೂ ಆಗಿದ್ದನು. ಅವನ ಬಾಲ್ಯಾವಸ್ಥೆಯು, ವಿವಿಧ ವಿನೋದಗಳಲ್ಲಿಯೂ ಗತಿಸಿತು. ಮಹಾವೀರನು ಚಿಕ್ಕವನಿರುವಾಗ ಒಂದು ಸಾರೆ ತನ್ನ ಸ್ನೇಹಿತರೊಡನೆ ಮರವನ್ನೇರಿ ಆಟವಾಡುತ್ತಿದ್ದನು. ಆಗ ಇಂದ್ರಲೋಕವಾಸಿಯಾದ 'ಸಂಗಮ' ಎಂಬ ಸುರನು ಅವನನ್ನು ಪರೀ ಕ್ಷಿಸುವದಕ್ಕಾಗಿ ಆ ಮರದಲ್ಲಿ ಭೀಕರ ಕೃಷ್ಣ ಸರ್ಪವಾಗಿ ಭುಸ್ ಎಂದು ಭೋರ್ಗರೆಯಹತ್ತಿದನು. ಬಾಲಕರೆಲ್ಲರೂ ಹೆದರಿ ಹೌಹಾರಿ ಟೊಂಗೆಯಿಂದ ಟೊಂಗೆಗೆ ಹಾರಿ ಕೆಳಗೆ ಬಿದ್ದರು. ವರ್ಧಮಾನನು ನಿಶ್ಚಂಣಿಕೆಯಿಂದ ಇಳಿ ಯುವವನಂತೆ ಹೆದರದೇ ಹೆಡೆಯ ಮೇಲೆ ಅಡಿಯಿಟ್ಟು ಗಿಡದಿಂದ ಕೆಳಗೆ ಇಳಿ ದನು. ಆಗ ಸಂಗಮನು ಆಶ್ಚರ್ಯಸ್ಥಗಿತನಾಗಿ ಬಾಲಕನನ್ನು ಬಾಯಿತುಂಬ ಹೊಗಳಿ ಹೊರಟುಹೋದನು. ಅಂದಿನಿಂದ ವರ್ಧಮಾನನಿಗೆ ಮಹಾವೀರ ನೆಂದು ಕರೆಯಲಾಯಿತು. ಹೀಗೆ ಅವನು ಲೀಲಾಜಾಲದಲ್ಲಿ ಬಾಲ್ಯಾವಸ್ಥೆ ಮೀರಿ ಯೌವನಾವಸ್ಥೆಯಲ್ಲಿ ಕಾಲಿರಿಸಿದನು. ಸಕಲ ವಿದ್ಯೆಗಳನ್ನು ಆಳವಾಗಿ ಆಯಾಸವಿಲ್ಲದೆ ಅಭ್ಯಾಸ ಮಾಡಿದನು. ಕ್ಷತ್ರಿಯಕುಲೋಚಿತವಾದ ಕಲೆಯ ಲ್ಲಿಯೂ ಕುಶಲನಾದನು. ಆಗ ಭಾರತದ ಸಾಮಾಜಿಕ, ಧಾರ್ಮಿಕ ದುಃಸ್ಥಿತಿ ಯನ್ನು ಕಂಡು ಅವನು ಮರಮರನೇ ಮರುಗಿದನು. ದುಃಖಿಗಳ ಸಂಕಷ್ಟ ಗಳನ್ನು ದೂರ ಮಾಡಲು ಪ್ರತಿ ಕ್ಷಣದಲ್ಲಿಯೂ ವಿಚಾರಿಸ ಹತ್ತಿದನು. ವಿದ್ಯೆ ಯಿಂದ ಹದವಾದ ಅವನ ಹೃದಯವು ದಯಾದಾಕ್ಷಿಣ್ಯಾದಿ ಸದ್ಗುಣಗಣಕ್ಕೆ ಮಾತೃಭೂಮಿಯಾಗಿತ್ತು. ಅತಏವ ಅವನು ಆಮರಣ ಪರ್ಯಂತ ಅಖಂಡ ಬ್ರಹ್ಮಚರ್ಯದಿಂದಿರಲು ವಿಚಾರಿಸುತ್ತಿದ್ದನು. ಆದರೆ ತಾಯಿಯ ಆಗ್ರಹದ ಮೇರೆಗೆ ಮಹಾವೀರನು 'ಸಮರ ವೀರ' ಎಂಬುವ ರಾಜನ ಮಗಳಾದ 'ಯಶೋಧಾದೇವಿ' ಯೊಡನೆ ವಿವಾಹಿತನಾಗಿ ಸರಸವಾಗಿ ಸಂಸಾರಸಾಗಿಸುತ್ತಿ ರಲು ಅವನಿಗೆ 'ಪ್ರಿಯದರ್ಶನಾ' ಎಂಬ ಮಗಳು ಜನಿಸಿದಳು. ಅವಳನ್ನು 'ಜಮಾಲೀ' ಎಂಬುವ ರಾಜಪುತ್ರನಿಗೆ ಮದುವೆ ಮಾಡಿಕೊಟ್ಟನು. ಆ ಜಮಾ

ಲೀರಾಜನು ಭಗವಾನ್ ಮಹಾವೀರನಿಂದ ದೀಕ್ಷೆಹೊಂದಿ ಕೆಲವು ಕಾಲಗಳ ಮೇಲೆ ಅವನಿಗೆ ವಿರೋಧಿಯಾಗಿ ಒಂದು ಹೊಸ ಧರ್ಮವನ್ನು ಸ್ಥಾಪಿಸಿದನು. ಮಹಾವೀರನು ೨೮ ನೇ ವಯಸ್ಸಿನವನಿರುವಾಗ ಅವನ ಮಾತಾ ಪಿತೃಗಳು ಸ್ವರ್ಗಸ್ಥರಾದರು. ಆಗ ಅವನು ಜಗತ್ತಿನ ಕಲ್ಯಾಣಕಾರ್ಯಕ್ಕಾಗಿ 'ನಿರ್ಗ್ರಂಥ ಮುನಿ' ಯಾಗುವ ವಿಚಾರದಲ್ಲಿದ್ದನು. ಆದರೆ ತನ್ನ ಸಹೋದರನಾದ 'ನಂದಿ ವರ್ಧನ'ನ ಆಗ್ರಹದ ಮೇರೆಗೆ ಎರಡು ವರುಷಗಳವರೆಗೆ ಗ್ರಹಸ್ಥಾಶ್ರಮದಲ್ಲಿ ಉಳಿದನು. ಆದರೂ ಮನೆಯಲ್ಲಿಯೇ ಇದ್ದುಕೊಂಡು ಸಾಧುಗಳ ನಿಯಮ ದಂತೆ ಕಾಲ ಕಳೆಯುತ್ತಿದ್ದನು. ಅವನಲ್ಲಿ ವಿಪುಲವಾದ ಧನರಾಶಿಯಿತ್ತು. ಅದು ನಶ್ವರವೆಂದು ಭಾವಿಸಿ ದೀನದಲಿತರಿಗೆ ದಾನಮಾಡತೊಡಗಿದನು. ಅವನಲ್ಲಿಗೆ ಬಂದ ಯಾವ ಯಾಚಕನೂ ಬರಿಗೈಯಿಂದ ಹಿಂತಿರುಗಿ ಹೋಗುತ್ತಿರಲಿಲ್ಲ. ಅವನ ತ್ಯಾಗ ಗುಣವು ಸರ್ವತ್ರ ಹಬ್ಬಿತು. ದೇಶ ದೇಶಗಳಿಂದ ಯಾಚಕರು ಅವನಲ್ಲಿಗೆ ಬರಹತ್ತಿದರು. ಭಿಕ್ಷುಕರು ಬೇಡಿದಷ್ಟು ಧನವನ್ನು ದಾನ ಮಾಡಿ ದನು. ಅವನಿಂದ ಸಾವಿರಾರು ಬಡಬಗ್ಗರು ಸಂಪತ್‌ಶಾಲಿಗಳಾದರು. ಭಗ-ವಾನ್ ಮಹಾವೀರನು ಪ್ರತಿ ದಿವಸ ಒಂದುಕೋಟಿ ಎಂಟುಲಕ್ಷ ಸುವರ್ಣ ನಾಣ್ಯಗಳನ್ನು ದಾನ ಮಾಡುತ್ತಿದ್ದನು. ಹೀಗೆಯೇ ಒಂದು ವರುಷದವರೆಗೆ ಎಡೆಬಿಡದೇ ದಾನಕರ್ಮವನ್ನು ಆಚರಿಸಿದನು. ಒಟ್ಟಾರೆ ಮೂರು ಖರವ-ಎಂಟುಕೋಟಿ, ಎಂಭತ್ತುಲಕ್ಷ ಸುವರ್ಣ ಮುದ್ರೆಗಳನ್ನು ಯಾಚಕರಿಗೆ ದಾನ ವಾಗಿಕೊಟ್ಟನು.

ಮಹಾವೀರನು ಮೂವತ್ತು ವರ್ಷದವನಿರುವಾಗ ಮಾರ್ಗಶೀರ್ಷ ವದ್ಯ ೧೦ ನೆಯ ದಿವಸ ತನ್ನಕುಟುಂಬ ಪರಿವಾರದ ಬಂಧನದಿಂದಲೂ. ಅಗಣಿತ ರಾಜ ವೈಭವದಿಂದಲೂ ಬಿಡುಗಡೆಯಾಗಿ ದೀಕ್ಷೆಯನ್ನು ಪರಿಗ್ರಹಿಸಿದನು. ದೀಕ್ಷೆ ಯನ್ನು ಹೊಂದುತ್ತಲೇ ಅವನಿಗೆ "ಮನಃ ಪರ್ಯಾಯ ಜ್ಞಾನವು" ಅರ್ಥಾತ್ ಪ್ರತಿಯೊಂದು ಪ್ರಾಣಿಯ ಮನೋಗತ ಭಾವವನ್ನು ತಿಳಿಯುವ ಶಕ್ತಿಸಾಮ ರ್ಥ್ಯವು ಉತ್ಪನ್ನವಾಯಿತು. "ಎಲ್ಲಿಯ ವರೆಗೆ ಆತ್ಮನ ಪೂರ್ಣತೆ ಪ್ರಕಟವಾ ಗುವದಿಲ್ಲವೋ, ಇಂದ್ರಿಯಗಳ ವಿಕಾರವನ್ನು ಜಯಿಸುವದಿಲ್ಲವೋ ಅಲ್ಲಿಯ ವರೆಗೆ ತನ್ನ ಹಾಗೂ ಪರರ ಉದ್ಧಾರವಾಗಲಾರದೆಂದು" ಮಹಾವೀರನು ವಿಚಾರಿಸಿದನು. ಅಲ್ಲದೇ ಪ್ರಪ್ರಥಮವಾಗಿ ವೀತರಾಗ, ಸರ್ವಜ್ಞನಾಗಲು

ಇಚ್ಛಿಸಿದನು. ಹೀಗೆ ಅವನು ತನ್ನ ದೃಢಸಂಕಲ್ಪದ ಮೇರೆಗೆ ೧೨॥ ವರುಷ ಪ್ರಚಂಡವಾದ ತಪಸ್ಸನ್ನಾಚರಿಸಿದನು. ಹಸಿವೆ, ತೃಷೆಗಳನ್ನು ತ್ಯಜಿಸಿ, ನಿದ್ರೆಯನ್ನು ನೀಗಿ ನಿಂತಲ್ಲಿಯೇ ನಿಂತುಕೊಂಡು ತಪಸ್ಸನ್ನಾಚರಿಸುವಾಗ, ಕೇವಲ ೩೦ ದಿವಸ ಒಂದೇ ಹೊತ್ತು ಅಶನವನ್ನು ಸ್ವೀಕರಿಸಿದ್ದನು. ಉಳಿದ ೧೧॥ ವರುಷಗಳನ್ನು ಉಪವಾಸದಲ್ಲಿಯೇ ಕಳೆದನು. ಈ ಸಾಧನೆಯಲ್ಲಿ ಅನೇಕ ಅಸಹ್ಯ ಕಷ್ಟಗಳು ಬಂದೊದಗಿದವು. ಅರಣ್ಯ ನಿವಾಸಿಗಳು ಅವನ ಕಾಲಿಗೆ ಬೆಂಕಿಯನ್ನು ಹಚ್ಚಿದರು. ಕಿವಿಯಲ್ಲಿ ಕಬ್ಬಿಣದ ಕೀಲವನ್ನು ಜಡಿದರು. ಹೀಗೆ ತಮ್ಮ ಮನಬಂದಂತೆ ಅಪಮಾನ ಮಾಡಿದರು. ಅಷ್ಟೇ ಅಲ್ಲ ಕ್ರೂರಮೃಗಗಳೂ ಕೂಡ ಹಲವು ವಿಧವಾಗಿ ಹಿಂಸಿಸಿದವು. ಆದರೂ ಮಹಾವೀರನು ಮೇರುಗಿರಿಯಂತೆ ಅಚಲಚಿತ್ತನಾಗಿದ್ದನು. ಜಗತ್ಕಲ್ಯಾಣಕಾರ್ಯದಲ್ಲಿ ಮನವನ್ನಿರಿಸಿದವನಾದುದರಿಂದ ತನಗಾಗುವ ಸಂಕಷ್ಟಗಳನ್ನು ಆನಂದದೊಡನೆ ಅನುಭವಿಸಿದನು. ಪ್ರಚಂಡವಾದ ತಪಃಪ್ರಭಾವದಿಂದ ಅವನು ಇಂದ್ರಿಯಜನ್ಯ ದೋಷಗಳನ್ನಳಿದು ಅನೇಕ ಸಿದ್ಧಿಗಳನ್ನು ಕೈವಶ ಮಾಡಿಕೊಂಡು ವೀತರಾಗ ಸರ್ವಜ್ಞನಾದನು. ಮಹಾವೀರನು ಮತ್ತು ಆತ್ಮೋನ್ನತಿಯನ್ನು ಪಡೆದುಕೊಂಡನಂತರ ಧರ್ಮೋಪದೇಶಕನಾದನು. ಧರ್ಮಪ್ರಚಾರಕ್ಕಾಗಿ ದೇಶದ ಮೂಲೆ ಮೂಲೆಯಲ್ಲಿ ಸಂಚರಿಸಿದನು. ಧರ್ಮದ ಹೆಸರಿನಲ್ಲಿ ನಿರಪರಾಧಿಗಳಾದ ಮೂಕ ಪ್ರಾಣಿಗಳ ವಧೆಯಾಗುತ್ತಿರುವುದನ್ನು ಮೊದಲು ನಿಲ್ಲಿಸಿದನು. ಅಸತ್ಯವನ್ನು ಅತ್ಯಂತವಾಗಿ ಖಂಡಿಸಿದನು. ಸರ್ವತ್ರ ಸದಾಚಾರ, ಸನ್ಮಾರ್ಗವನ್ನು ರಚಿಸಿ, ಸರ್ವ ಪ್ರಾಣಿಗಳಲ್ಲಿ ಸಮತ್ವವನ್ನು ಸಾರಿದನು. ಚತುರ್ವರ್ಣದವರನ್ನು ಒಂದುಗೂಡಿಸಿ ಅವರನ್ನು ಶಿಷ್ಯರನ್ನಾಗಿ ಮಾಡಿಕೊಂಡನು. ಬ್ರಾಹ್ಮಣ ಧರ್ಮದವನಾದ ಇಂದ್ರಭೂತಿ, ಸುಧರ್ಮ, ಕ್ಷತ್ರಿಯಕುಲದವನಾದ ಕುಮಾರ, ವೈಶ್ಯನಾದ ಶಾಲಿಭದ್ರ, ಶೂದ್ರನಾದ ಮೈತಾರ್ಯ, ಹರಿಕೇಶಿ ಇವರೆಲ್ಲರನ್ನು ಮಹಾವೀರನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡನು. ಹಾಗೂ ಢಂಗ, ಗೌಭದ್ರ, ಶ್ರೇಣಿಕ, ಅಂಬಡ ಇವರು ಅನುಕ್ರಮವಾಗಿ ಶೂದ್ರ, ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಜಾತಿಯವರಿದ್ದು ಗೃಹಸ್ಥರಾಗಿರುವರು. ಇವರೆಲ್ಲರನ್ನು ತನ್ನ ಶಿಷ್ಯರನ್ನಾಗಿ ಮಾಡಿಕೊಂಡನು. ಅನೇಕ ಜನ ರಾಜರು ಅತುಲವಾದ ವೈಭವವನ್ನು ತೊರೆದು ಮಹಾವೀರನಿಗೆ ಶಿಷ್ಯರಾಗಿ ಸಾಧುಗಳಾದರು. ಅವನು ಪುರುಷರಂತೆ

ಸ್ತ್ರೀಯರಿಗೂ ಧರ್ಮಾಧಿಕಾರವನ್ನು ಕೊಟ್ಟನು. ತನ್ನ ಉಪದೇಶದಲ್ಲಿ ಅಹಿಸಾ, ತ್ಯಾಗ, ಸಂಯಮ ಇತ್ಯಾದಿಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟು ೩೦ ವರ್ಷ ಗಳವರೆಗೆ ಅಖಂಡವಾಗಿ ಉಪದೇಶ ಕಾರ್ಯವನ್ನು ನೆರವೇರಿಸಿದನು.

ರಾಜನಾದ ಶ್ರೇಣಿಕ (ಬಿಂಬಿಸಾರ), ನಂದಿವರ್ಧನ, ಚೇಟಕ, ಚಂಡಪ್ರದ್ಯೋತನ, ಪ್ರಸನ್ನಚಂದ್ರ, ಉದಾಯನ, ಅದೀನಶತ್ರು ಈ ಎಲ್ಲ ರಾಜರು ಅವನಿಗೆ ಪರಮಶಿಷ್ಯರಾದರು. ಮಗಧ, ಬಂಗಾಲ, ಬಿಹಾರ ಮೊದ ಲಾದ ಪ್ರಾಂತ ನಿವಾಸಿಗಳು ಮಹಾವೀರನಲ್ಲಿ ಅಚಲಭಕ್ತಿಯುಳ್ಳವರಾದರು.

ಜೈನಧರ್ಮದಲ್ಲಿ ವಂದ್ಯರಾದ ೨೪ ಜನ ತೀರ್ಥಂಕರರಲ್ಲಿ ಭಗವಾನ್ ಮಹಾವೀರನು ಒಬ್ಬನಾಗಿರುವನು. ಸೃಷ್ಟಿಯು ಅನಾದಿಯಾದದ್ದೆಂದು ಜೈನರು ಹೇಳುತ್ತಾರೆ. ಪಾತಾಳ, ಭೂಲೋಕ, ಆಕಾಶ ಎಂಬುದಾಗಿ ಸೃಷ್ಟಿ ಯಲ್ಲಿ ಮುಖ್ಯ ಮೂರು ಭೇದಗಳುಂಟು. ಪಾತಾಳದಲ್ಲಿ ಅಧೋಗತಿ, ನರಕ, ಪಾವನಲೋಕ ಎಂಬುದಾಗಿ ಮೂರುಲೋಕಗಳಿವೆ. ಅಧೋಗತಿಗೆ ಹೋದ ಮಾನವನು ಅಲ್ಲಿಂದ ಎಂದೂ ಬಿಡುಗಡೆ ಹೊಂದುವದಿಲ್ಲ. ಚಿರಕಾಲ ಅಲ್ಲಿಯೇ ಕ್ಲೇಶಪಡುತ್ತಿರುವನು. ನರಕಕ್ಕೆ ಹೋದವನು, ತಾನು ಮಾಡಿದ ಪಾಪ ಕರ್ಮವನ್ನು ಭೋಗಿಸಿ ಅಲ್ಲಿಂದ ಬಿಡುಗಡೆ ಹೊಂದಿ ಪುನರ್ಜನ್ಮಕ್ಕೆ ಬರುವನು. ಪುಣ್ಯವಂತರು ಸ್ವಲ್ಪ ಪಾಪ ಮಾಡಿದ್ದರೆ, ಅವರು ಪಾವನ ಲೋಕಕ್ಕೆ ಹೋಗಿ ಅಲ್ಲಿ ಪಾಪವನ್ನು ಕಳೆದುಕೊಂಡು ಪವಿತ್ರರಾಗಿ ಸ್ವರ್ಗಕ್ಕೆ ಹೋಗುವರು. ಭೂಲೋಕದಲ್ಲಿ ಸಮುದ್ರದಿಂದ ಹಲವಾರು ದ್ವೀಪಗಳಾಗಿವೆ. ಭಿನ್ನ ಭಿನ್ನ ಪ್ರಕಾರದ ಪ್ರಾಣಿಗಳು ವಾಸಿಸುತ್ತವೆ. ಆಕಾಶದಲ್ಲಿ ಕೆಲವು ಲೋಕಗಳಿರುತ್ತವೆ. ಎಲ್ಲಕ್ಕೂ ಕೆಳಗೆ ಅಂದರೆ ಭೂಲೋಕಕ್ಕೆ ಅತಿನಿಕಟವಾಗಿ ಮಂತ್ರ ಲೋಕವಿದೆ. ಅದರಲ್ಲಿ ಭೂತಾದಿಗಳು ವಾಸಿಸುತ್ತಿವೆ, ಅದರ ಮೇಲೆ ವಿದ್ಯಾಧರ ಲೋಕವಿದೆ. ಅಲ್ಲಿ ವಿದ್ಯಾಧರರೆಂಬ ಜನರು ವಾಸಿಸುತ್ತಾರೆ. ಅದರ ಮೇಲೆ ದೇವಲೋಕವಿದೆ. ಈ ದೇವಲೋಕದ ಮೇಲೆ ಮೋಕ್ಷ ಲೋಕವಿದೆ. ಅಲ್ಲಿ ಅರ್ಹತ್ ಅಥವಾ ಜಿನೇ ಶ್ವರನೆಂಬ ಈಶ್ವರನು ಇರುತ್ತಾನೆ. ಅವನಿಗೆ ೧೦೦೮ ನಾಮಗಳುಂಟು. ಅವನು ತ್ರಿಲೋಕವಂದ್ಯನು, ಸರ್ವಜ್ಞನು, ಸರ್ವವ್ಯಾಪಿಯು, ಸರ್ವಶಕ್ತಿಯುಕ್ತನು ಆಗಿರುವನು. ಆದರೆ ಜಿನೇಶ್ವರನು ಸೃಷ್ಟಿಯನ್ನು ರಚಿಸುವುದಿಲ್ಲ. ಜೀವಿಗಳಲ್ಲಿ

ದಯೆ ಇಡುತ್ತಾನೆ. ಪ್ರಾಣಿಗಳ ಸುಖಕ್ಕಾಗಿ ಅವನು ಹನ್ನೆರಡು ವೇದಗಳನ್ನು ಪ್ರಕಟಿಸಿರುವನು. ಈ ವೇದಗಳು ಜಗತ್ತು, ಕಾಲ, ಆತ್ಮ, ಧರ್ಮ, ಪುಣ್ಯ ಇವುಗಳೆಲ್ಲ ಆದಿ ಅಂತ್ಯ ಇಲ್ಲದವುಗಳೆಂದು ಜಿನೇಶ್ವರನು ಹೇಳಿದ್ದಾನೆ. ಜಿನೇಶ್ವರನಿಗೆ ನಾಲ್ಕು ಮುಖಗಳುಂಟು ಅವನು ಅಶೋಕವೃಕ್ಷದ ಕೆಳಗೆ ವಾಸಿಸುವನು ಅವನಿಗೆ ಮೂರು ಗಾಲಿಯ ರಥವು ವಾಹನವಾಗಿದೆ. ತ್ರಿಪುಟಗಳುಳ್ಳ ಛತ್ರವುಂಟು ಈ ಮೋಕ್ಷಲೋಕದಲ್ಲಿಯೇ ೭೨ ಜನ ತೀರ್ಥಂಕರರು ಜಿನೇಶ್ವರನ ಆಶ್ರಯದಿಂದ ವಾಸಿಸುತ್ತಾರೆ. ಅವರಲ್ಲಿ ೨೪ಜನ ಹಿಂದಿನ ಯುಗದವರು. ೨೪ಜನ ಈಗ ನಡೆಯುವ ಯುಗದವರು, ೨೪ ಜನ ಮುಂದೆ ಬರುವ ಯುಗದವರು, ನಡಿಯುವಯುಗ ೨೪ ಜನರಲ್ಲಿ ಋಷಭದೇವನು ಬೆಂಬಲಿಗನಾಗಿರುವನು. ಮಹಾವೀರನು ಕಡೆಯವನು ಈ ೨೪ ಜನರಲ್ಲಿ ಇಬ್ಬಿಬ್ಬರು ಬಿಳುಪು, ಕೆಂಪು, ಹಳದಿ, ನೀಲ, ಕಪ್ಪು ಈ ಐದು ಬಣ್ಣಗಳುಳ್ಳವರು. ಉಳಿದ ೧೪ ಜನರು ಸುವರ್ಣ ವರ್ಣವುಳ್ಳವರು. ಋಷಭ ದೇವನು ೫೦೦ ತಾಲ ಪ್ರಮಾಣನಾಗಿ, ೮೪೦೦೦೦೦ ವರುಷ ಬದುಕಿದನಂತೆ ಮುಂದಿನ ತೀರ್ಥಂಕರರ ನಿಲುವಿಕೆ ಮತ್ತು ಆಯುಷ್ಯವು ಬರುಬರುತ್ತ ಕಡಿಮೆಯಾಗಿ ಕಡೆಯವನಾದ ಮಹಾವೀರನು ಸಾಧಾರಣ ಮನುಷ್ಯನಷ್ಟು ಎತ್ತರವಾಗಿ ಬೆಳೆದು ೭೨ ವರುಷ ಬಾಳಿದನು. ಅವನು ಕಾರ್ತಿಕ ಬಹುಳ ಅಮವಾಸ್ಯೆಯ ದಿವಸ ಸೂರ್ಯೋದಯ ಸಮಯಕ್ಕೆ 'ಪಾಲಾಪುರಿಯಲ್ಲಿ' ಸಕಲ ಕರ್ಮಬಂಧನಗಳನ್ನು ನಾಶಮಾಡಿ, ಪುನರ್ಜನ್ಮರಹಿತವಾದ ಪರಂಧಾಮವನ್ನ ಹೊಂದಿದನು. (ಮಹಾವೀರನು ತನ್ನ ೪೦ ನೆಯ ವಯಸ್ಸಿನಲ್ಲಿ ದೇಹ ಬಿಟ್ಟನೆಂದು ಸನ್ ೧೮೮೩ ರಲ್ಲಿ ಪ್ರಕಟವಾದ ಮುಂಬಯಿ ಕರ್ನಾಟಕ ಗ್ಯಾಝೆಟಿಯರದಲ್ಲಿ ಉಲ್ಲೇಖಿಸಲ್ಪಟ್ಟದೆ.

ಭಗವಾನ್ ಮಹಾವೀರಸ್ವಾಮಿಯ ಅವತಾರವು ಮಾನವಕೋಟಿಗೆ ಅಷ್ಟೇ ಅಲ್ಲ, ಸಕಲ ಜೀವಿಗಳಿಗೂ ಸುಖಶಾಂತಿಯನ್ನುಂಟು ಮಾಡಿರುವದು ಅವನು ಜಗತ್ತಿಗೆ ಕೋಟಿಯು ಅಮೂಲ್ಯವಾಗಿದೆ. ಇಂಥ ಜಗದ್ವಿಖ್ಯಾತ ವಿಭೂತಿಪುರುಷನ ಜಯಂತಿಯನ್ನು ಚೈತ್ರ ಶುದ್ಧ ೧೩ ರಲ್ಲಿ ಸಂಭ್ರಮದೊಡನೆ ಆಚರಿಸುವದು ಮಾನವನ ಆದ್ಯ ಕರ್ತವ್ಯವಾಗಿದೆ.

## —: ಹನುಮಾನ್ ಜಯಂತಿ :—



### ಚೈತ್ರ ಶುದ್ಧ ಪೌರ್ಣಿಮಾ (ದವನದ ಹುಣ್ಣಿವೆ)

ಹನುಮಂತನು ರಾಮನಿಗೆ ಪರಮ ಭಕ್ತನೆಂಬುವುದು ಪ್ರಸಿದ್ಧವಿ‍. ರಾಮಾಯಣದಲ್ಲಿ ಇವನ ಪಾತ್ರವು ಪ್ರಾಧಾನ್ಯವಾಗಿದೆ. 'ಕಿಂಕರನು ಶಂಕ‍ನಾಗುವನೆಂಬ' ನಾಣ್ಣುಡಿಯಂತೆ ಹನುಮಂತನು ಸ್ವಾಮಿ ಸೇವೆಯಿಂದ‍ ಜಗದ್ವಂದ್ಯನಾದುದನ್ನು ಗ್ರಾಮಗ್ರಾಮಗಳಲ್ಲಿರುವ ಅವನ ಮನೋಹ‍ ಮಂದಿರಗಳೇ ಹೇಳುತ್ತಲಿವೆ. ಅವನು ನೈಷ್ಠಿಕ ಬ್ರಹ್ಮಚಾರಿಯಾಗಿರುವನಲ್ಲದೆ‍ ಪರಮಜ್ಞಾನಿಯೂ, ಮಹಿಮಾತಿಶಯ ಸಂಪನ್ನನೂ, ಅಸದೃಶ ಸಾಮರ್ಥ್ಯ‍ವುಳ್ಳವನೂ ಆಗಿರುವನು. ಒಂದುಸಾರಿ ಲಕ್ಷ್ಮಣನು ಯುದ್ಧದಲ್ಲಿ ಶತ್ರು‍ ಸಂಘಾತದಿಂದ ಮೂರ್ಛಿತನಾಗಿ ಮಲಗಿರುವಾಗ ಅವನನ್ನು ಎಚ್ಚರಿಸ‍ ಸಂಜೀವನೀ ವನಸ್ಪತಿಯ ಆವಶ್ಯಕತೆಯನ್ನು ವೈದ್ಯರು ಉಸುರಿದರು. ಆಗ ಹನುಮಂತನು ಸಂಜೀವನೀ ಇರುವ ಪರ್ವತವನ್ನು ಕ್ಷಣಾರ್ಧದಲ್ಲಿಯ‍ ಹೊತ್ತು ತಂದು ವೈದ್ಯರ ಎದುರು ಇರಿಸಿದನೆಂದು ರಾಮಾಯಣ ಹೇಳುತ್ತಿ‍

ಲೋಕಕಲ್ಯಾಣಕಾರ್ಯ ಕೈಕೊಂಡ ರಾಮನಿಗೆ ಹಲವು ವಿಧವಾಗಿ ಸೇವೆ ಸಲ್ಲಿಸಿ ವಿಶ್ವಶಾಂತಿಯನ್ನು ಬೀರಿದನು. ಆ ಮಹಾನುಭಾವನ ಪುಣ್ಯ ಚರಿತೆಯು ಮುಂದಿನಂತಿದೆ.

## ಹನುಮಂತನ ಜನನ

ದಶರಥರಾಜನು ಪುತ್ರಪ್ರಾಪ್ತಿಗಾಗಿ ಯಜ್ಞವನ್ನು ಆಚರಿಸಿದನು. ಆಗ ಅಗ್ನಿದೇವನು ದಶರಥ ರಾಜನಿಗೆ ಮೂರು ಪಿಂಡಗಳನ್ನು ಅನುಗ್ರಹಿಸಿ ಅದೃಶ್ಯನಾದನು. ಅವುಗಳನ್ನು ರಾಜನು ತನ್ನ ಮೂರು ಜನ ಮಡದಿಯರಿಗೆ ಸೇವಿಸಲು ಕೊಟ್ಟನು. ಅವರಲ್ಲಿ ಓರ್ವರಾಣಿಯು ಅನಾದರ ಸ್ವಭಾವದಿಂದ ತನ್ನ ಭಾಗದ ಪಿಂಡವನ್ನು ಎಲ್ಲಿಯೋ ಚಲ್ಲಿದಳು. ಅದನ್ನು ಒಂದು ಗೃಧ್ರವು (ಹದ್ದು) ತೆಗೆದುಕೊಂಡು ಅಂಜನಾದೇವಿಯು ಕುಳಿತಿದ್ದ ಸ್ಥಾನದಲ್ಲಿ ಒಯ್ದು ಚಲ್ಲಿತು. ಆವಳು ತನ್ನ ಪತಿಯಾದ ಕೇಸರಿಯ ಅಪ್ಪಣೆಯ ಮೇರೆಗೆ ಅದನ್ನು ಸ್ವೀಕರಿಸಿದಳು. ಅವಳು ಗರ್ಭವತಿಯಾಗಿ ಕೆಲವು ಕಾಲಗಳ ಮೇಲೆ ಹನುಮಂತನಿಗೆ ಜನ್ಮವಿತ್ತಳು. ಈ ಪ್ರಕಾರವಾಗಿ ದಶರಥ ರಾಜನ ಯಜ್ಞಪ್ರಭಾವದಿಂದ ಉಪಲಬ್ಧವಾದ ಪಿಂಡದ ಸೇವನೆಯಿಂದ ಜನಿಸಿದವನಾದ ಆಂಜನೇಯನು ಮುಂದೆ ರಾಮನಿಗೆ ಅನುಚರನಾಗಿ ಕಾಯವಾಕ್ ಮನಸಾ ಸೇವೆಸಲ್ಲಿಸಿದನು. ಅವನ ಕೀರ್ತಿಯು ರಾಮಾಯಣಾದಿ ಗ್ರಂಥಗಳಲ್ಲಿ ವಿಶದವಾಗಿ ವರ್ಣಿಸಲ್ಪಟ್ಟಿದೆ.

ರಾಮನು ರಾವಣನನ್ನು ಸಂಹರಿಸಿ ಪುನಃ ಅಯೋಧ್ಯೆಗೆ ಬಂದ ನಂತರ ಒಂದು ದಿವಸ ಅವನು ಹನುಮಂತನನ್ನು ಕುರಿತು:— "ಯುದ್ಧದಲ್ಲಿ ನೀನು ನನಗೆ ನಾನಾವಿಧವಾಗಿ ಉಪಕಾರ ಮಾಡಿರುವೆ. ಆದ್ದರಿಂದ ವಿಹಿತವಾದ ವರವನ್ನು ಬೇಡಿಕೋ" ಎಂದು ನುಡಿದನು. ಅದಕ್ಕೆ ಮಾರುತಿಯು:— "ಸ್ವಾಮೀ! ಜಗತ್ತಿನಲ್ಲಿ ನನಗೆ ಅನಿತ್ಯವಾದುದು ಯಾವುದೂ ಬೇಡ, ತಮ್ಮ ಕೃಪೆಯನ್ನಲ್ಲದೇ ನಾನು ಯಾವುದನ್ನೂ ಇಚ್ಛಿಸಲಾರೆ ಎಂದು ನುಡಿದನು. ಮಾರುತಿಯು ರಾಜನಿಷ್ಠನೂ, ಕರ್ತವ್ಯದಕ್ಷನೂ, ಯುದ್ಧದಲ್ಲಿ ಸದಾ ಜಯಶಾಲಿಯೂ, ಸ್ವಾಮಿ ಸೇವಾತತ್ಪರನೂ ಆಗಿರುವನು. ಹೇಗೆ ಶಿವಾಲಯಗಳಲ್ಲಿ

ಶಿವನೊಡನೆ ನಂದಿಯು ಅಗಲದೇ ಇರುವನೋ! ಹಾಗೆ ರಾಮ ಮಂದಿರಗಳಲ್ಲಿ ಹನುಮಂತನು ರಾಮನೊಡನೆ ಅಗಲದೇ ಇರುವನು.

ಹನುಮಂತನ ಜನನದ ಬಗೆಗೆ ಭಿನ್ನಭಿನ್ನ ಅಭಿಪ್ರಾಯಗಳಿರುವುದು ಹಲುವು ಗ್ರಂಥಗಳಿಂದ ತಿಳಿದು ಬರುವುದು.

ಹನುಮಂತನು ದಕ್ಷಿಣ ದೇಶದಲ್ಲಿ ಸುಪ್ರಸಿದ್ಧವಾದ ವಾನರ ಕುಲದಲ್ಲಿ ಜನಿಸಿದವನಾಗಿರುವನು. ವಾನರ ಕುಲವು ಆರ್ಯ ಜಾತಿಗೆ ಸೇರಿದುದಲ್ಲ ವಾದರೂ ದಾಕ್ಷಿಣಾತ್ಯರು ಪ್ರಾಚೀನ ಕಾಲದಿಂದಲೂ ಯಜ್ಞಯಾಗಾದಿ ಗಳನ್ನೂ, ತಪಸ್ಸನ್ನೂ ಆಚರಿಸುತ್ತ ಬಂದಿರುವರು. ಮತ್ತು ಪುರುಷರಂತೆ ಸ್ತ್ರೀಯರಾದರೂ ತಪಸ್ಸನ್ನಾಚರಿಸುತ್ತಿದ್ದರು. ವಾನರ ಕುಲದಲ್ಲಿ ಜನಿಸಿದ ಕೇಸರಿಯ ಪತ್ನಿಯಾದ ಅಂಜನಾ ದೇವಿಯು ಮಕ್ಕಳಿಲ್ಲದೇ ಮಹಾದೇವನಿಗೆ ಮೊರೆಹೊಕ್ಕು ಹಲವಾರು ವರುಷ ಉಗ್ರವಾದ ತಪಸ್ಸನ್ನಾಚರಿಸಿದಳು. ಇವಳ ಕಠಿಣತರ ತಪಸ್ಸಿಗೆ ಶಂಕರನು ಮೆಚ್ಚಿ "ಎಲೈ ಮಗಳೇ ನಿನ್ನೀಸಾಹಸಕ್ಕೆ ನಾನೊಲಿದೆನು. ನಿನ್ನ ಅಭಿಲಾಷೆ ಏನಿದೆ" ಎಂದು ನುಡಿದನು. ಆಗ ಅಂಜನಾ ದೇವಿಯು ಹರ್ಷಭರಿತಳಾಗಿ ಶಂಕರನಿಗೆ ಅಭಿವಂದಿಸಿ "ಪ್ರಭುವೇ ನಿನ್ನ ದರ್ಶನದಿಂದ ಧನ್ಯಳಾದೆನು. ನಾನು ಪುತ್ರಪ್ರಾಪ್ತಿಗಾಗಿಯೇ ನಿನ್ನನ್ನು ಕುರಿತು ತಪಸ್ಸನ್ನಾಚರಿಸಿದೆಯಾದ್ದರಿಂದ ಬ್ರಹ್ಮಚಾರಿಯೂ, ವಜ್ರದೇಹಿಯೂ, ಚಿರಂ ಜೀವಿಯೂ ಆದ ಸತ್ಪುತ್ರನನ್ನು ಅನುಗ್ರಹಿಸುವುದಾಗಬೇಕೆಂದು ನಮ್ರತೆ ಯಿಂದ ಬೇಡಿಕೊಂಡಳು. ಆಗ ಭಗವಾನ್ ಶಂಕರನು 'ತಥಾಸ್ತು' ಎಂದು ಉಚ್ಚರಿಸಿ ಅಂತರ್ಧಾನನಾದನು. ಕೆಲವು ದಿವಸಗಳು ಗತಿಸಲಾಗಿ ಶಿವನ ವರವೇ ಸಾಕಾರವಾಗಿರುವಂತೆ ಅಂಜನಾ ದೇವಿಯ ಗರ್ಭದಲ್ಲಿ ಆಂಜನೇಯನು ಚೈತ್ರ ಶುದ್ಧ ಪೌರ್ಣಿಮೆಯ ದಿವಸ ಅರುಣೋದಯ ಸಮಯಕ್ಕೆ ಜನಿಸಿದನು. ಅವನು ಜನಿಸುತ್ತಲೇ ಆಗ ತಾನೆ ಉದಯಿಸುತ್ತಿರುವ ಸೂರ್ಯನನ್ನು ನೋಡಿ, ಹಣ್ಣೆಂದು ಹಿಡಿಯಲು ಆಕಾಶಕ್ಕೆ ಜಿಗಿದನಂತೆ. ಚೈತ್ರ ಶುದ್ಧ ಪೌರ್ಣಿಮೆಯ ದಿವಸ ಹನುಮಂತನ ಜನನವಾದುದರಿಂದ ಅಂದು ಆತನ ಜಯಂತಿಯನ್ನು ಆಚರಿಸುವರು. ಅವನು ರುದ್ರನ ಅನುಗ್ರಹದಿಂದ ಜನಿಸಿದವನಾದುದರಿಂದ ಭಯಂಕರ ರೂಪವುಳ್ಳವನಾಗಿರುವನು. ಭೂತಗ್ರಹಸ್ತರು ಅವನನ್ನು ಭಕ್ತಿಯಿಂದ

ಪೂಜಿಸಿದರೆ ಸುಖಿಯಾಗುವರು. ಅವನ ಸುಂದರವಾದ ವಿಗ್ರಹವನ್ನು ಕಟೆದು ತಮ್ಮ ಮನೆಯ ಜಗುಲಿಯಲ್ಲಿರಿಸಿ ಪೂಜಿಸುವರು. ಗೋಶಾಲೆಯಲ್ಲಿಯೂ ಚತುಷ್ಪಥದಲ್ಲಿಯೂ, ತೋಟದಲ್ಲಿಯೂ, ಅರಣ್ಯದಲ್ಲಿಯೂ, ಹೊಲಗಳ ಲ್ಲಿಯೂ ಮಾರುತಿಯ ಮೂರ್ತಿಯನ್ನು ಸ್ಥಾಪಿಸಿ ಈಗಲೂ ಪೂಜಿಸುತ್ತಿರು ವರು. ಪ್ರತಿಯೊಂದು ಗ್ರಾಮಗಳಲ್ಲಿಯೂ ಮಾರುತಿಯ ಸುಂದರವಾದ ಮಂದಿರಗಳು ಕಂಗೊಳಿಸುತ್ತವೆ. ಹನುಮಪ್ಪನಿಲ್ಲದ ಹಳ್ಳಿ ಸಿಗುವುದೇ ವಿರಲ. ವ್ಯಾಯಾಮ ಶಾಲೆ (ಗರಡೀಮನೆ)ಗಳಲ್ಲಿ ಇವನ ಮೂರ್ತಿಯನ್ನಿರಿಸಿ ಪೈಲ ವಾನರು ತಾಲೀಮ ಮಾಡುವುದು ರೂಢಿಯಲ್ಲಿದೆ. ಪೈಲವಾನರು ಬೆಳ್ಳಿ ಅಥವಾ ಬಂಗಾರದ ತಗಡಿನಲ್ಲಿ ಕೆತ್ತಿ ತಯಾರಿಸಿದ ಹನುಮಂತನ ತಾವೀಜ (ತಾಯತ) ವನ್ನು ಸದಾ ಕೊರಳಲ್ಲಿ ಕಟ್ಟಿಕೊಳ್ಳುತ್ತಿರುವರು. ಪ್ರಾಚೀನ ಕಾಲದಲ್ಲಿ ರಕ್ಷಣೆ ಗಾಗಿ ಕೋಟೆಕೊತ್ತಲುಗಳನ್ನು ಕಟ್ಟಿಸಿ ಅಗಸೀ ಬಾಗಿಲುಗಳನ್ನಿರಿಸಿರುವುದು ಸರಿಯಷ್ಟೇ! ಅಂಥ ಅಗಸೀ ಬಾಗಿಲಗಳ ಎಡಬಲ ಗೋಡೆಗಳಲ್ಲಿ ಗದಾ ಪಾಣಿ ಯಾದ ಬಲಭೀಮ ಹನುಮಂತನ ಶಿಲಾವಿಗ್ರಹಗಳು ಈಗಲೂ ವಿರಾಜಿಸುತ್ತ ಲಿವೆ. ಅವನು ಹಿಂದುಗಳಿಗೆ ಪೂಜ್ಯನಾಗಿರುವನು ಅಷ್ಟೇ ಅಲ್ಲ ಪೂನಾ, ಮುಂಬೈ ಮೊದಲಾದ ಶಹರಗಳಲ್ಲಿ ಫಾರ್ಸಿ ಮೊದಲಾದ ವಿದೇಶೀಯರೂ ಕೂಡ ಶನಿವಾರ ದಿವಸ ಹನುಮಂತನಿಗೆ ಸಿಂದೂರ, ತೈಲ ಮೊದಲಾದವು ಗಳನ್ನು ಲೇಪಿಸಿ ಪೂಜಿಸುತ್ತಿರುವರು.

## ಹನುಮಂತನು ವೀರಶೈವನು

ಅನೇಕ ಕವಿಗಳು ಹನುಮಂತನು ರಾಮ ಭಕ್ತನೆಂದು ನಾನಾ ವಿಧ ವಾಗಿ ಹೊಗಳಿರುವುದು ಸರಿಯಷ್ಟೇ! ಆದರೆ ಕೊನೆಗೆ ಅವನು ಶಿವಪೂಜಾ ದುರಂಧರನೆಂದು ಪ್ರಖ್ಯಾತಿ ಪಡೆದನು. ಕೆಲವು ಸುಹೃದರು 'ಇದು ಏನೋ ಹೊಸ, ಬಿಸಿ ಸಮಾಚಾರವೆಂದು' ಗುನುಗುಟ್ಟಬಹುದು. ಹನುಮಂತನು ಲಿಂಗಧಾರಿಯಾದ ವಿಷಯವು ಪುರಾಣೇತಿಹಾಸ ಪ್ರಸಿದ್ಧವಾಗಿದೆ. ಸರ್ವರೂ ಶಾಸ್ತ್ರಾಧಾರದ ಚೌಕಟ್ಟಿಗೆ ಒಳಪಡಬೇಕಲ್ಲವೇ ! ಕೆಲವು ಗ್ರಾಮಗಳಲ್ಲಿ ಮಾರುತಿ ಮಂದಿರದ ಅರ್ಚಕರು ಪ್ರಾಚೀನ ಕಾಲದಿಂದಲೂ ವೀರಶೈವರೇ ಆಗಿರುವರು. ಹೀಗಿರುವಾಗ ಹನುಮಂತನು ನಿಸ್ಸಂದೇಹವಾಗಿ ವೀರಶೈವನೇ

ಆಗಿರುವನೆಂದು ಸಿದ್ಧವಾಗುವುದು, ಈ ವಿಷಯವನ್ನು ನಾವು ಕೆಳಗೆ ಸಪ್ರಮಾಣವಾಗಿ ಉಲ್ಲೇಖಿಸಿದ್ದೇವೆ. ಸುಹೃದರು ವಿಶಾಲ ಭಾವನೆಯಿಂದ ಅವಲೋಕಿಸಬೇಕೆಂದು ಬಯಸುತ್ತೇವೆ.

"ಹರಿಕಾರ್ಯನ್ ಪ್ರತಿಷ್ಠಾಪ್ಯ ಹನುಮಾನ್ ಗುಣಪುಂಗವಃ,
ಸರ್ವಾಂಗ ಲಿಂಗವೀರೇಶ ಶಿಷ್ಯೋऽಭೂತ್ತದನಂತರಂ"||
(ಆದಿತ್ಯ ಪುರಾಣ— ಪರವಾದಿ ಗಜಾಂಕುಶ ತಾರಾವಳಿ)

ಅರ್ಥಾತ್- ಹನುಮಂತನು ಹರಿಕಾರ್ಯಗಳನ್ನೆಲ್ಲ ಪೂರ್ಣಗೊಳಿಸಿ ಲಿಂಗ ಮೂರ್ತಿಯಾದ ವೀರಭದ್ರನಿಗೆ ಶಿಷ್ಯನಾದನೆಂದು ಆದಿತ್ಯ ಪುರಾಣವು ಹೇಳುತ್ತಿದೆ.

ಮಾರುತಿಯು ವೀರಭದ್ರನಿಂದ ಶಿವದೀಕ್ಷೆಯನ್ನು ಹೊಂದಿ ಇಷ್ಟಲಿಂಗವನ್ನು ಪಡೆದು ಸದಾ ಅದನ್ನು ದೇಹದಲ್ಲಿ ಧರಿಸಿಕೊಂಡು ಗುರುವಿನ ಆಜ್ಞೆಯಂತೆ ನಿತ್ಯದಲ್ಲಿಯೂ ಭಕ್ತಿಯುಕ್ತನಾಗಿ ಪೂಜಿಸುತ್ತಿದ್ದನು. ದಿನಗಳುರುಳಿದಂತೆ ಶಿವಲಿಂಗಾನುಷ್ಠಾನವು ಬಲಿತು, ಅವನಿಗೆ ಶಿವಸಾಯುಜ್ಯ ಹೊಂದುವ ಸಮಯ ಸಮೀಪಿಸಿತು. ಆಗ ಒಂದು ದಿವಸ ಶಿವನು ಪರೀಕ್ಷಿಸಲೋಸುಗ ಹನುಮಂತನ ಹೃತ್ಕಮಲದಲ್ಲಿರುವ ಶಿವಲಿಂಗವನ್ನು ಅವನಿಗೆ ತಿಳಿಯದಂತೆ ಅಪಹರಿಸಿಕೊಂಡನು. ಎಂದಿನಂತೆ ಮಾರುತಿಯು ಉದಯ ಕಾಲದಲ್ಲೆದ್ದು ಶೌಚಾಚಮನಾದಿ ಕಾರ್ಯದಿಂದ ನಿವೃತ್ತನಾಗಿ ಸ್ನಾನವಂ ಮಾಡಿ ಶುದ್ಧಮನದಿಂದ ಪದ್ಮಾಸನಸ್ಥನಾಗಿ ಹೃತ್ಕಮಲದಲ್ಲಿರುವ ಆ ಇಷ್ಟಲಿಂಗವನ್ನು ನೋಡುವಷ್ಟರಲ್ಲಿ ಅದು ಅದೃಶ್ಯವಾಗಿತ್ತು. ಆಗ ಹನುಮಂತನು-"ಯಾವನೋ ಓರ್ವ ಮಾಯಾವಿಯಾದ ರಾಕ್ಷಸನು ತನ್ನ ವ್ರತವನ್ನು ಭಗ್ನಗೊಳಿಸಲು ಈ ತರಹದ ಚೇಷ್ಟೆಯನ್ನೆಸಗಿರಬೇಕೆಂದು" ಆಲೋಚಿಸಿ ತನ್ನ ಗುರುವಾದ ವೀರಭದ್ರನನ್ನು ಸ್ಮರಿಸಿದನು. ಕ್ಷಣ ಕಾಲದಲ್ಲಿಯೇ ಕಾಲರುದ್ರನಂತೆ ವೀರಭದ್ರನು ಪ್ರಾದುರ್ಭವಿಸಿ, ಮ್ಲಾನವಾದ ಮಾರುತಿಯ ಮುಖ ಕಮಲವನ್ನು ನೋಡಿ, ಅವನನ್ನು ಸಂತೈಸಿದನು. ಮತ್ತು ತನ್ನನ್ನು ಪ್ರಾರ್ಥಿಸಿದ ಕಾರಣವೇನೆಂಬುದಾಗಿ ಕೇಳಿದನು. ಹನುಮಂತನು ತನಗೆ ಒದಗಿದ ನಿಜವೃತ್ತಾಂತವನ್ನು ಅರಿಕೆ ಮಾಡಿಕೊಂಡನು ಆಗ ವೀರಭದ್ರನು ಆಂಜನೇಯನಿಗೆ:—

ಅಂಜಬೇಡವೆಂದು ಅಭಯ ಹಸ್ತವನ್ನಿತ್ತು ಕಾಲರುದ್ರನಂತೆ ಗರ್ಜಿಸುವವನಾಗಿ ಅಗ್ನಿನೇತ್ರವನ್ನು ತೆರೆದು, ಅಸಹೃತವಾದ ಶಿವಲಿಂಗವನ್ನು ಹುಡುಕಿ ತರಲು ಅಗ್ನಿ ದೇವನಿಗೆ ಅಪ್ಪಣೆಯನ್ನಿತ್ತನು. ಆಕ್ಷಣವೇ ಅಗ್ನಿ ದೇವನು ಪ್ರಖರ ಜ್ವಾಲೆಗಳನ್ನುಗುಳುತ್ತ ಪ್ರಲಯಾಗ್ನಿಯಂತೆ ಮೂರು ಲೋಕವನ್ನೇ ದಹಿಸುತ್ತ ದಹಿಸುತ್ತ ಲಿಂಗವನ್ನು ಹುಡುಕಹತ್ತಿದ್ದನು. ಅವನ ದಾಹಜ್ವಾಲೆಗೆ ಸಿಕ್ಕ ದೇವ, ದಾನವರು ಮಹಾದೇವನ ಮೊರೆಹೊಕ್ಕು ತಮ್ಮನ್ನು ರಕ್ಷಿಸಬೇಕೆಂದು ದೈನ್ಯ ಸ್ವರದಿಂದ ಬೇಡಿಕೊಳ್ಳುವಷ್ಟರಲ್ಲಿ ಸಿಡಿಲಿನಂತೆ ಗರ್ಜಿಸುತ್ತಿರುವ ಅಗ್ನಿ ದೇವನು ಶಿವನ ಸಾಮಿಪ್ಯವನ್ನು ಹೊಂದಿದನು. ಆಗ ಶಂಕರನು ಅವರೆಲ್ಲರನ್ನೂ ಕೃಪಾ ಕಟಾಕ್ಷದಿಂದ ಸಂತೈಸಿ ಅವರೊಡನೆ ಹನುಮಂತನಿದ್ದಲ್ಲಿಗೆ ಬಂದು, "ನಿನ್ನೀ ಅತುಲವಾದ ಶಿವಭಕ್ತಿಗೆ ನಾನು ಮೆಚ್ಚಿದೆ" ಎಂದು ಅವನನ್ನು ಮೈದಡವಿ ಆ ಇಷ್ಟಲಿಂಗವನ್ನು ಪುನಃ ಅವನಿಗೆ ಕೊಟ್ಟು ಗಣಪದವಿಯನ್ನಿತ್ತನು.

ಕೆಲವು ಪ್ರಾಚೀನ ಗುಡಿಗಳಲ್ಲಿಯೂ, ಗಿರಿಗವಿಗಳಲ್ಲಿಯೂ ಲಿಂಗ ಪೂಜಾ ನಿರತನಾಗಿರುವ ಮಾರುತಿಯ ಶಿಲಾವಿಗ್ರಹಗಳು ಈಗಲೂ ದೊರೆಯುತ್ತವೆ. *

ಭಾರತದಲ್ಲಿ ವೀರಶೈವರು ರಾಮಮೂರ್ತಿಯನ್ನಾಗಲೀ, ವಿಷ್ಣುಮೂರ್ತಿಯನ್ನಾಗಲೀ ಎಲ್ಲಿಯೂ ಪೂಜಿಸುವದಿಲ್ಲ. ಹಾಗೆಯೇ ಅವರು ಹರಿಮಂದಿರದ ಅರ್ಚಕರಾಗಿರವುದೂ ಕೂಡ ಎಲ್ಲಿಯೂ ಕಂಡುಬರುವದಿಲ್ಲ. ಆದರೆ ಹನುಮಂತನು ಲಿಂಗಧಾರಿಯಾದುದರಿಂದಲೇ ವೀರಶೈವರು ಅವನನ್ನು ಈಗಲೂ ಪೂಜಿಸುತ್ತಿರುವರು. ಶಿವಭಕ್ತಶಿಖಾಮಣಿಯಾದ ಹನುಮಂತನ ಸ್ಮರಣಾರ್ಥವಾಗಿ ಕೆಲವು ಕಡೆ ವೀರಶೈವರು ತಮ್ಮ ಮಕ್ಕಳಿಗೆ ಹನುಮಂತನ ಹೆಸರು ಇಡುವುದು ಬಹುದಿವಸಗಳಿಂದಲೂ ರೂಢಿಯಾಗಿದೆ. ಕೆಲವು ಗ್ರಾಮ

---

* ( ಬಾಗಲಕೋಟೆಯ ಪೂರ್ವಭಾಗದಲ್ಲಿ ಎಂಟು ಮೈಲು ಸನಿಹದಲ್ಲಿರುವ ಕಬ್ಬಿನಶಿರೂರು ಗ್ರಾಮದ ಗುಡ್ಡದ ಮೇಲೆ ಒಂದು ಮಾರುತಿಯ ವಿಗ್ರಹವು ಸ್ಥಾಪಿಸಲ್ಪಟ್ಟಿದೆ. ಆ ಮಾರುತಿಯು ಎಡಗೈಯಲ್ಲಿ ಇಷ್ಟಲಿಂಗವನ್ನೂ, ಬಲಗೈಯಲ್ಲಿ ಅಕ್ಷಮಾಲಿಕೆಯನ್ನೂ ಹಿಡಿದು ಶಿವಪೂಜಾಸಕ್ತನಾಗಿರುವ ಹನುಮಂತನ ಸ್ಮಾರಕವಾಗಿಯೇ ಪ್ರಾಚೀನ ಕಾಲದಲ್ಲಿ ಸ್ಥಾಪಿತವಾದುದಾಗಿದೆ. )

ಗಳಲ್ಲಿ ಹನುಮಂತ ದೇವರ ಗುಡಿಯಲ್ಲಿ ಅರ್ಚಕರು ವೀರಶೈವರೇ ಇರುವರು. ಇವರಿಗೆ ಹೂಗಾರರು ಅಥವಾ ಜೀರರು ಎಂದು ಅನ್ನುವ ಸಾಂಪ್ರದಾಯವಿದೆ. ಕೆಲವು ಕಡೆಗೆ ಮಾರುತಿಯ ಮಂದಿರಗಳಲ್ಲಿಯ ಹನುಮಂತ ದೇವರ ಪ್ರತಿಷ್ಠಾ ಕಾರ್ಯವನ್ನು ವೀರಶೈವರಲ್ಲಿ ಆಚಾರ್ಯರಾದ ಪಟ್ಟಚರಾಧಿಕಾರಿಗಳೇ ಆಚ ರಿಸಿದ್ದುಂಟು. ವೀರಶೈವರ ವಶದಲ್ಲಿರುವ ಮಾರುತಿ ಮಂದಿರಗಳ ಜೀರ್ಣೋದ್ಧಾರ ವನ್ನಾಗಲೀ ಮೂರ್ತಿ ಪ್ರತಿಷ್ಠಾಪನ ಕಾರ್ಯವನ್ನಾಗಲೀ ಇನ್ನು ಮುಂದ ವೀರಶೈವರುಗಳಿಂದಲೇ ನೆರವೇರಿಸುವುದು ಶಾಸ್ತ್ರಸಮ್ಮತವಾದುದೆಂದು ನಾವು ಸೂಚಿಸದಿರಲಾರೆವು.

## ಗೋಳಗೇರಿ ಜಾತ್ರೆ. ಚೈತ್ರ ಬ—೧

ಬಿಜಾಪುರ ಜಿಲ್ಲಾ ಸಿಂದಿಗಿಯ ಆಗ್ನೇಯ ದಿಕ್ಕಿಗೆ ೧೦ ಮೈಲಿನ ಮೇಲೆ ಈ ಗ್ರಾಮವಿರುತ್ತದೆ. ಪೂರ್ವದಲ್ಲಿ ಓರ್ವ ಕುರುಬನು ಶ್ರೀಶೈಲ ಜಾತ್ರೆಗೆ ಹೋಗುವ ಜನರಿಗೆ " ಶ್ರೀಶೈಲದಿಂದ ನೀವು ಹಿಂದಿರುಗಿ ಬರುವಾಗ್ಗೆ ಅಲ್ಲಿಂದ ನನಗೆ ಒಂದು ಲಿಂಗವನ್ನು ತಂದುಕೊಡಿ"ರೆಂದು ಕೇಳಿಕೊಂಡನು. ಅದಕ್ಕೆ ಆ ಜನರು ಚೇಷ್ಟೆಗಾಗಿ ಒಂದು ಕುರಿಯ ಹಿಕ್ಕಿಯನ್ನು ತಂದುಕೊಟ್ಟರಂತೆ. ಆಗ ಕುರುಬನು ಆ ಕುರಿಯ ಹಿಕ್ಕಿಯನ್ನು ಲಿಂಗವೆಂದು ಭಾವಿಸಿ ತನ್ನ ಕುರಿಯದಡ್ಡಿಯಲ್ಲಿ ಸ್ಥಾಪಿಸಿ ಬಹುಭಕ್ತಿಯಿಂದ ಪೂಜಿಸುತ್ತಿರಲಾಗಿ ಹಿಕ್ಕಿಯು ನಿಜವಾದ ಲಿಂಗವೇ ಆಯಿತು. ಆ ಲಿಂಗಕ್ಕೆ ಗೊಳಲೀಶ್ವರನೆಂದು ಹೆಸರು ಬಂತು. ಅಲ್ಲಿ ಆ ಕುರುಬನು ಕ್ರಿ. ಶ. ೧೪ ರಲ್ಲಿ ದೇವಸ್ಥಾನವನ್ನೂ ಗ್ರಾಮವನ್ನೂ ಸ್ಥಾಪಿಸಿದನು. ಆದಕ್ಕೆ ಗೋಳಗೇರಿ ಎಂಬ ಹೆಸರು ಬಂತು. ಗೊಳಲೀಶ್ವರ ಲಿಂಗಕ್ಕೆ ಎಲ್ಲ ಹಿಂದು ಜಾತಿಯ ಜನರು ಭಕ್ತಿಯಿಂದ ನಡೆ ಕೊಳ್ಳುತ್ತಾರೆ. ಪ್ರತಿ ವರುಷ ಚೈತ್ರ ಬಹುಳ ಪ್ರತಿಪದೆಯಲ್ಲಿ ಈ ದೇವರ ಜಾತ್ರೆಯು ವೈಭವದೊಡನೆ ನೆರವೇರುತ್ತದೆ.

## ಧನತ್ರಯೋದಶಿ ( ಚೈತ್ರವದ್ಯ ೧೩ )

ಮಾನವನನ್ನು ವಶಪಡಿಸಿಕೊಳ್ಳುವ ಹಲವಾರು ವಿಷಯಗಳಲ್ಲಿ ಆಶೆಯೂ ಒಂದು ವಿಷಮ ವಿಷಯವಾಗಿದೆ. ಆಶೆ ಹೆಚ್ಚಿದರೆ ಮನುಷ್ಯನು

ಇಹದಲ್ಲಿ ಅಪಕೀರ್ತಿಯನ್ನೂ, ಪರದಲ್ಲಿ ದುರ್ಗತಿಯನ್ನೂ ಹೊಂದುತ್ತಾನೆ. ಇದು ಪ್ರಾಣಿಗಳು ಹುಟ್ಟುತ್ತಲೇ ಹೃದಯಕ್ಕೆ ಅಂಟಿಕೊಂಡು ಜೀವನ ದುದ್ದಕ್ಕೂ ಜೊತೆಯಲ್ಲಿಯೇ ಇರುವುದಾಗಿದೆ; ಅಷ್ಟೇ ಅಲ್ಲ ಜನ್ಮಜನ್ಮಾಂತರ ಗಳಲ್ಲಿಯೂ ಬೆನ್ನಟ್ಟಿ ಬರುವುದು. ಅಂತೇ ನೀತಿಕಾರರು:—

" ವಲಿಭಿರ್ಮುಖಮಾಕ್ರಾಂತಂ ಪಲಿತೈರಂಕಿತಂಶಿರಃ ।
ಗಾತ್ರಾಣಿಶಿಥಿಲಾಯಂತೇ ತೃಷ್ಣಿಕಾ ತರುಣಾಯತೇ ॥"

ವಾರ್ಧಕ್ಯದಿಂದ ಮುಖವು ಮುದುಡಿಕೊಳ್ಳುತ್ತದೆ; ತಲೆಯು ಬೆಳ್ಳ ಗಾಗುತ್ತದೆ; ಅವಯವಗಳು ಶಿಥಿಲವಾಗುತ್ತವೆ; ಆದರೂ ಅವನಲ್ಲಿರುವ ಆಶಾದೇವಿಯು ತರುಣಿಯಾಗಿಯೇ ಇರುತ್ತಾಳೆ. ಅರ್ಥಾತ್ ಎಷ್ಟು ಮುದಕ ನಾದರೂ ಆಶೆ ಅಳಿಯುವದಿಲ್ಲವೆಂದು ಹೇಳಿದ್ದಾರೆ. ಇದೇ ವಿಷಯದ ಬಗ್ಗೆ ಓರ್ವ ಪ್ರಸಿದ್ಧ ಕನ್ನಡ ಕವಿಯು—

"ಪರಧನಕಾಶೆಗೈಯದಿನಿಸುಂ .... .... .... ....॥"

ಎಂಬುದಾಗಿ ಹೇಳಿದ್ದಾನೆ.

ಆಶೆಯು ಹಲವಾರು ವಿಷಯಗಳತ್ತ ಮನುಷ್ಯನನ್ನು ಎಳೆದೊಯ್ಯುತ್ತದೆ. ಆದರ ಸೆಳವಿಗೆ ಸಿಕ್ಕು ಯಾವುದರ ಕಡೆಗೆ ಹೊರಳುವನೋ ಅಂಥ ಅಪವಾದ ಹೊರುತ್ತಾನೆ. ಉದಾಹರಣೆಗಾಗಿ, ಪರಧನಕ್ಕಾಶೆಪಟ್ಟವನು ಕಳ್ಳನೆನಿಸಿ ಕೊಳ್ಳುವನು. ಸಾಮಾನ್ಯರಾದ ಹಲವರು ದುರಾಶೆಯಿಂದಲೇ ಅಧಿಕ ಸುಖ, ಶಿರಿ; ಸೌಭಾಗ್ಯ ಸಿಗುವುದೆಂದು ಭ್ರಮಿಸಿ, ಮನಬಂದಂತೆ ನಡೆಯುವುದುಂಟು. ಅಂಥವರು ಧರ್ಮದೃಷ್ಟಿಯಲ್ಲಿ ತಪ್ಪುಗಾರರಾಗುವರು; ಆದಕ್ಕೆ ತನ್ನ ಕಹಿ ಫಲವನ್ನು ಹೊಂದಲೇಬೇಕಾಗುವುದು.

ಈ ಬಗ್ಗೆ ಜನಸಾಮಾನ್ಯರ ಮಾತು ಹೇಗೆ ಇರಲಿ,

" ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥"

ಎಂಥ ಪಂಡಿತನಾದರೂ ಇಂದ್ರಿಯ ಚಾಪಲ್ಯಕ್ಕೊಳ್ಳಗಾಗಿ ಒಮ್ಮೊಮ್ಮೆ ಪ್ರಮಾದವೆಸಗುವುದುಂಟು. ಅಷ್ಟೇ ಏಕೆ ದೇವತೆಗಳೂ ಕೂಡ ತಪ್ಪು ಗಾರರಾಗಿ ಪ್ರಾಯಶ್ಚಿತ್ತ ಪಟ್ಟುದೂ ಉಂಟು.

ಒಮ್ಮೆ ಶಿವನು "ಜಗನ್ಮೋಹಕವಾದ ಸುವರ್ಣವನ್ನು ನಿರ್ಮಿಸಿ, ತರ ಬೇಕೆ"ಂದು ಬ್ರಹ್ಮನಿಗೆ ಅಪ್ಪಣೆಯನ್ನಿತ್ತನು. ಆ ಪ್ರಕಾರವಾಗಿ ಬ್ರಹ್ಮನು ಬಂಗಾರವನ್ನು ನಿರ್ಮಿಸಿ, ಅದಕ್ಕೆ ತಾನು ಮೋಹಿಸಿ, ತನ್ನ ಹೊಟ್ಟೆಯಲ್ಲಿ ಹುದುಗಿಸಿಕೊಂಡನಂತೆ, ಆ ಕಾರಣದಿಂದ ಆವನು 'ಹಿರಣ್ಯ ಗರ್ಭ' ಎಂಬ ಹೆಸರು ಹೊತ್ತನು. ಹೀಗೆಯೇ ಹಲವಾರು ದೇವಾನುದೇವತೆಗಳು ವಿಷಯ ಗಳಿಗೆ ಆಶಿಸಿ ಗಾಸಿಯಾದುದುಂಟು. ಇದೇ ವಿಷಯವನ್ನನುಲಕ್ಷಿಸಿ ಈ ಕೆಳಗೆ ಥನತ್ರಯೋದಶಿ ಹಬ್ಬವನ್ನು ಉಲ್ಲೇಖಿಸಿದ್ದೇವೆ.

ಒಂದುಸಾರೆ ಭಗವಾನ್ ವಿಷ್ಣುದೇವನು, ಮಾನವಲೋಕದ ಸೌಂದರ್ಯ ವನ್ನು ನೋಡಲಿಕ್ಕೆ ಬರುವವನಾದನು. ಅವನೊಡನೆ ಲಕ್ಷ್ಮೀ ದೇವಿಯು ತಾನೂ ಬರುವುದಾಗಿ ಕೇಳಿಕೊಂಡಳು. ಭಗವಂತನು ಅವಳನ್ನು ಕುರಿತು— " ನನ್ನ ಅಪ್ಪಣೆಯಂತೆ ನೀನು ನಡೆದುಕೊಳ್ಳುವದಾದರೆ, ನನ್ನೊಡನೆ ಬರಬಹುದೆಂದು" ಹೇಳಿದನು. ಆ ಮಾತಿಗೆ ಲಕ್ಷ್ಮಿ ಒಪ್ಪಿಕೊಂಡಳು.

ವಿಷ್ಣುದೇವನು ತನ್ನ ಸತಿಯೊಡನೆ ಭೂಲೋಕದಲ್ಲಿ ಒಂದು ರಮ್ಯ ವಾದ ಸ್ಥಳಕ್ಕೆ ಬಂದನು.

ಅಲ್ಲಿ ಲಕ್ಷ್ಮಿದೇವಿಯನ್ನು ಬಿಟ್ಟು ತಾನೊಬ್ಬನೇ ಮುಂದಕ್ಕೆ ಹೊರಟು ಹೋದನು. ಅವನು ಹೊರಡುವ ಮುನ್ನ ಲಕ್ಷ್ಮಿದೇವಿಯನ್ನು ಕುರಿತು— "ದಕ್ಷಿಣ ದಿಕ್ಕಿನ ಕಡೆಗೆ ನೋಡಬೇಡವೆಂದು" ಹೇಳಿದ್ದನು. ಆ ಮಾತು ಅವಳ ಕುತೂಹಲವನ್ನು ಕೆರಳಿಸಿತು; ಅತ್ತ ನೋಡಬೇಕೆಂಬ ಲವಲವಿಕೆ ಹೆಚ್ಚಾ ಯಿತು. ಅವಳು ತನ್ನ ಪತಿಯು ಹೇಳಿದುದನ್ನು ಲಕ್ಷಕ್ಕೆ ತಾರದೇ ದಕ್ಷಿಣ ದಿಕ್ಕಿನ ಕಡೆಗೆ ನೋಡೇಬಿಟ್ಟಳು. ಅಲ್ಲಿ ಸ್ವಲ್ಪದೂರದಲ್ಲಿಯೇ ಸುಂದರವಾಗಿ ಅರಳಿದ ಸಾಸ್ವಿ ಹೂವುಗಳಿಂದ ಪರಿಶೋಭಿಸುವ ಒಂದು ಹೊಲವು ಅವಳ ಕಣ್ಣಿಗೆ ಕಾಣಿಸಿತು. ಲಕ್ಷ್ಮೀದೇವಿಯು ಅಲ್ಲಿಗೆ ಹೋಗಿ, ಸಾಸ್ವಿ ಹೂವಿನ ಗುಚ್ಛಗಳನ್ನು ಕೊಯ್ದು ತಂದು, ಅವುಗಳಿಂದ ತನ್ನ ಹೆರಳನ್ನು ಶೃಂಗರಿಸಿ ಕೊಂಡು ಕೂತಿರುವಷ್ಟರಲ್ಲಿ ಅಲ್ಲಿಗೆ ಶ್ರೀ ವಿಷ್ಣುದೇವನು ಮರಳಿ ಬಂದನು. ಅವನು ಸಾಸ್ವಿ ಹೂವುಗಳಿಂದ ಅಲಂಕೃತಳಾದ ದೇವಿಯನ್ನು ನೋಡಿದನು.

ಹಾಗೂ ಅವಳು ಹೊಲದ ಒಡೆಯನನ್ನು ಕೇಳದೇ ಸಾಸ್ವಿ ಹೂವುಗಳನ್ನು ತಂದಿರುವಳೆಂಬುದನ್ನು ಕೂಡ ಅರಿತುಕೊಂಡನು.

ಶ್ರೀ ವಿಷ್ಣುವು ತನ್ನ ಸತಿಯನ್ನು ಕುರಿತು :—
"ಪರವಸ್ತುವನ್ನು ಯಾರಾದರೂ ಅಪಹರಿಸಿದರೆ, ಆ ವಸ್ತುವಿನ ಒಡೆಯನ ಮನೆಯಲ್ಲಿ ಅಪರಾಧಿಯು ಹನ್ನೆರಡು ವರುಷ ಸೇವೆ ಮಾಡಬೇಕೆಂಬುದಾಗಿ ಈ ದೇಶದಲ್ಲಿ ರಾಜಶಾಸನವಿದೆ, ಆದುದರಿಂದ ನೀನು ಈ ಹೊಲದ ಯಜಮಾನನಲ್ಲಿ ಹನ್ನೆರಡು ವರುಷ ಸೇವೆಮಾಡಲು ಸಿದ್ಧಳಾಗಬೇಕೆ"ಂದು ನುಡಿದನು.

ಆ ಹೊಲದ ಯಜಮಾನ ಓರ್ವ ಧರ್ಮಿಷ್ಠ ಬ್ರಾಹ್ಮಣನಾಗಿದ್ದನು. ವಿಷ್ಣುದೇವನು ಬ್ರಾಹ್ಮಣನಾಗಿಯೂ, ಶ್ರೀದೇವಿಯು ಬ್ರಾಹ್ಮಣಿಯಾಗಿಯೂ ರೂಪಾಂತರಹೊಂದಿ, ಆ ಯಜಮಾನನಲ್ಲಿಗೆ ಹೋದನು. ವಿಷ್ಣುದೇವನು ಹೊಲದೊಡೆಯನನ್ನು ಕುರಿತು :— ಸ್ವಾಮೀ! ಈ ನನ್ನ ಹೆಂಡತಿಯು ನಿನ್ನ ಅಪ್ಪಣೆಯಿಲ್ಲದೇ ನಿನ್ನ ಹೊಲದಲ್ಲಿಯ ಸಾಸ್ವಿ ಹೂವುಗಳನ್ನು ತೆಗೆದುಕೊಂಡಿರುವಳು; ಆದುದರಿಂದ ಇವಳನ್ನು ನಿನ್ನ ಮನೆಯಲ್ಲಿ ಹನ್ನೆರಡು ವರುಷ ಸೇವೆಗಾಗಿ ಇರಿಸುತ್ತೇನೆ. ಆ ದಿನಗಳೆದ ನಂತರ ನಾನು ಪುನಃ ಇಲ್ಲಿಗೆ ಬಂದು ನನ್ನ ಸತಿಯನ್ನು ಪುನಃ ಕರೆದುಕೊಂಡು ಹೋಗುವೆ; ನೀನು ಇವಳನ್ನು ನಿನ್ನ ಮಗಳಂತೆ ರಕ್ಷಿಸುತ್ತಿರು" ಎಂದು ಹೇಳಿ, ಅಲ್ಲಿ ಲಕ್ಷ್ಮೀದೇವಿಯನ್ನು ಬಿಟ್ಟು ಹೊರಟು ಹೋದನು.

ಹೊಲದ ಮಾಲಕನು ಕಡು ಬಡತನದಿಂದ ಬಳಲುವ ವೃದ್ಧ ಬ್ರಾಹ್ಮಣನು. ದಾಸಿಯಾಗಿ ಬಂದ ಬ್ರಾಹ್ಮಣಿಗೆ ಹೊಟ್ಟೆತುಂಬ ಅನ್ನ ನೀರಿವೆ ಕೊಡುವುದೊಂದು ಆತನಿಗೆ ದೊಡ್ಡ ಸಮಸ್ಯೆಯಾಯಿತು. ಇವನ ಮುರುಕ ಮನೆಯಲ್ಲಿ ಶ್ರೀದೇವಿ ದಾಸಿಯಾಗಿ ದುಡಿಯಹತ್ತಿದಳು. ಬ್ರಾಹ್ಮಣನು ದರಿದ್ರನೆಂಬುವುದನ್ನು ಶ್ರೀದೇವಿ ಅರಿತವಳಾಗಿ ಆವನ ಹಿರಿಯ ಸೊಸೆಯನ್ನು ಕರೆದು:—
"ಅಮ್ಮಾ ನೀನು ಸ್ನಾನಮಾಡಿ, ದೇವರ ಮನೆಯಲ್ಲಿ ಹೋಗಿ, ದೇವಿಯ ಮೂರ್ತಿಯನ್ನು ಭಕ್ತಿಯಿಂದ ಪೂಜಿಸಿ, ಅಡಿಗೆ ತಯಾರಿಸು" ಎಂದಳು. ಆ ಪ್ರಕಾರವಾಗಿ ಬ್ರಾಹ್ಮಣನ ಸೊಸೆ, ದೇವಿಯನ್ನು ಆರಾಧಿಸಿ, ಅಡಿಗೆಯ

ಮನೆಯಲ್ಲಿ ಪ್ರವೇಶಿಸಿ ನೋಡುವಷ್ಟರಲ್ಲಿ ಅಲ್ಲಿ ವಿಧವಿಧದ ಭಕ್ಷ್ಯ, ಭೋಜ್ಯ, ಚೂಷ್ಯ, ಪೇಯಾದಿ ಪದಾರ್ಥಗಳು ಸಿದ್ಧವಾಗಿದ್ದವು.

ಮನೆಯವರೆಲ್ಲರೂ ಈ ಆಶ್ಚರ್ಯವನ್ನು ಕಂಡು ಮಂತ್ರಮುಗ್ಧರಾದರು. ಆ ದಾಸಿ ದೇವತೆಯೆಂದು ಭಾವಿಸಿದರಲ್ಲದೆ, ಅವಳಲ್ಲಿ ಭಕ್ತಿ ಗೌರವವುಳ್ಳವರಾದರು.

ಹೀಗೆ ಲಕ್ಷ್ಮೀದೇವಿಯ ಅಪ್ಪಣೆಯಂತೆ ಆ ಮನೆಯವರೆಲ್ಲರೂ ನಡೆಯುತ್ತಿದ್ದರು. ಕೆಲವುಕಾಲ ಗತಿಸಲಾಗಿ ಆ ಬಡ ಬ್ರಾಹ್ಮಣ ದೊಡ್ಡ ಧನಿಕನಾದ. ಧನಕನಕಾದಿ ಸಕಲ ಸಂಪತ್ತು ಮನೆತುಂಬಿ, ಹೊರಗಿನ ಬಂಧುಬಳಗದಲ್ಲಿಯೂ ಹರಿಯಹತ್ತಿತ್ತು. ಸಂಪತ್ತಿಗೆ ತಕ್ಕಂತೆ ಆ ಮನೆಯಲ್ಲಿ ದಾನ ಧರ್ಮಾದಿ ಸಕಲ ಸತ್ಕರ್ಮಗಳು ನಿರಂತರ ನಡೆಯುತ್ತಿದ್ದವು. ಇದೆಲ್ಲವು ಆ ದಾಸಿಯ ಪ್ರಭಾವವೆಂದು ಎಲ್ಲರೂ ಅರಿತುಕೊಂಡರು. ಅಷ್ಟೇ ಅಲ್ಲ ಅವಳು ದೇವಲೋಕದಿಂದ ಇಳಿದು ಬಂದ ಶ್ರೀದೇವಿಯೆಂದು ಭಾವಿಸಿ ಅವಳಿಂದ ಸೇವೆ ತೆಗೆದುಕೊಳ್ಳಬಾರದೆಂದು ನಿರ್ಧರಿಸಿದರು. ಆದರೆ ದಾಸಿಯಾದ ಲಕ್ಷ್ಮೀದೇವಿ ತಾನು ಮಾಡಿದ ಅಪರಾಧಕ್ಕಾಗಿ ಪತಿಯ ಆಜ್ಞೆಯಂತೆ ಆ ಬ್ರಾಹ್ಮಣನಲ್ಲಿ ಎಡಬಿಡದೆ ಗೃಹಕೃತ್ಯವನ್ನು ದಕ್ಷತೆಯಿಂದ ನೆರವೇರಿಸುತ್ತಿದ್ದಳು.

ಶ್ರೀದೇವಿ ಆ ಮನೆಗೆ ಬಂದುದು ಚೈತ್ರವದ್ಯತ್ರಯೋದಶಿ. ಅಂದಿನ ದಿವವು ಲಕ್ಷ್ಮಿಯ ದಿನವೆಂದು ಆ ಮನೆಯವರೆಲ್ಲರೂ ಅವಳನ್ನು ಆರಾಧಿಸಿ ಸತ್ಕರಿಸುತ್ತಿದ್ದರಲ್ಲದೆ ಅನುದಿನವೂ ಅವಳಿಗೆ ಗೌರವಾದರಗಳನ್ನು ಅರ್ಪಿಸುತ್ತಿದ್ದರು. ಹೀಗಿರುವಲ್ಲಿ ಆ ಮನೆಯೊಳಗಿನ ಚಿಕ್ಕ ಸೊಸೆಯೊಬ್ಬಳು ಲಕ್ಷ್ಮಿಗೆ ಬಹಳ ತೊಂದರೆಕೊಡುತ್ತಿದ್ದಳು; ಅವಳು ದಾಸಿಯೆಂದು ಉದಾಸೀನತೆಯಿಂದ ತಿಂಬುಂಬುವ ಪದಾರ್ಥಗಳನ್ನು ಕೊಡುತ್ತಿದ್ದಳು. ಅವಳು ಕೊಟ್ಟದ್ದನ್ನು ಲಕ್ಷ್ಮಿಯು ತಿನ್ನುತ್ತಿದ್ದಿಲ್ಲ. ಒಂದು ದಾಳಿಂಬರ ವೃಕ್ಷದ ಅಡಿಯಲ್ಲಿ ಅದನ್ನು ಹೂಳಿ ಬಿಡುತ್ತಿದ್ದಳು.

ಒಂದುದಿನ ಚೈತ್ರವದ್ಯತ್ರಯೋದಶಿ ಬಂತು. ಅಂದು ಪಾರಣೀ ಇತ್ತು ಮನೆಯ ಯಜಮಾನಿ ಕುಟುಂಬ ಪರಿವಾರದೊಡನೆ ಗಂಗಾ ಸ್ನಾನಕ್ಕೆ ಹೋ

ಟಳು. ಲಕ್ಷ್ಮಿ ಮನೆಯಲ್ಲಿಯೇ ಉಳಿದಳು ಅವಳು ದೊಡ್ಡ ಸೊಸೆಯ ಕೈಯಲ್ಲಿ ನಾಲ್ಕು ಕವಡಿಗಳನ್ನು ಕೊಟ್ಟು- "ಇವುಗಳನ್ನು ಗಂಗೆಗೆ ಅರ್ಪಿಸೆ"ಂದು ಹೇಳಿದಳು. ಎಲ್ಲರೂ ಗಂಗಾನದಿಗೆ ಹೋಗಿ ಸ್ನಾನ ಮಾಡಿದರು. ದೊಡ್ಡ ಸೊಸೆ ದಾಸಿಕೊಟ್ಟ ನಾಲ್ಕು ಕವಡಿಗಳನ್ನು ಗಂಗೆಯಲ್ಲಿ ಬಿಟ್ಟಳು; ತತ್‌ಕ್ಷಣವೇ ನೀರೊಳಗಿಂದ ಒಂದು ದಿವ್ಯ ಜ್ಯೋತಿ ನಾಲ್ಕು ಕೈಗಳನ್ನು ಮುಂದೆ ಚಾಚಿ ಆ ಕವಡಿಗಳನ್ನು ತೆಗೆದುಕೊಂಡು ಮಾಯವಾಯಿತು. ಇದನ್ನು ಎಲ್ಲರೂ ನೋಡಿ, ಮನೆಯಲ್ಲಿರುವವಳು ದಾಸಿಯಲ್ಲ ಸಾಕ್ಷಾತ್ ಲಕ್ಷ್ಮಿಯಾಗಿರುವಳು ಎಂದು ದೃಢವಾಗಿ ನಂಬಿದರು. ಅವಳ ಗುಣಗಾನ ಮಾಡುತ್ತಲೇ ಮನೆಗೆ ಬಂದರು.

ಅಂದಿಗೆ ಹನ್ನೆರಡು ವರುಷಗಳು ತುಂಬಿದವು. ಭಗವಾನ್ ವಿಷ್ಣು ದೇವನು ಬ್ರಾಹ್ಮಣ ರೂಪದಿಂದ ಬಂದು, ಮನೆಯ ಯಜಮಾನನ ಅಪ್ಪಣೆ ಪಡೆದು, ತನ್ನ ಹೆಂಡತಿಯನ್ನು ತಿರುಗಿ ಕರೆದುಕೊಂಡು ಹೋಗಲು ಸಿದ್ಧನಾದನು. ಅಂದು ಲಕ್ಷ್ಮಿಯು ಸೇವಾವೃತ್ತಿಯಿಂದ ಮುಕ್ತಳಾದಳು. ಮತ್ತು ತನ್ನ ನಿಜರೂಪವನ್ನು ತೋರಿಸಿದಳು. ಅವಳು ತಿರುಗಿ ಪತಿದೇವನೊಡನೆ ಹೋಗುವಾಗ್ಗೆ ಹಿರಿಯ ಸೊಸೆಯನ್ನು ಕರೆದು ಹಿತ್ತಲದಲ್ಲಿರುವ ದಾಳಿಂಬರದ ಗಿಡದಬುಡದಲ್ಲಿ ಅಗಿದುನೋಡುವದಾಗಿ ತಿಳಿಸಿದ್ದಳು. ಆ ಸಾಧ್ವಿಯು ಲಕ್ಷ್ಮಿದೇವಿಯು ಅಪ್ಪಣೆಯಂತೆ ದಾಳಿಂಬರದ ವೃಕ್ಷದ ಅಡಿಯಲ್ಲಿ ಅಗಿದು ನೋಡಲಾಗಿ ರತ್ನಖಚಿತವಾದ ಚಿನ್ನದ ಸರಗಳೂ, ಮುತ್ತುರತ್ನಗಳೂ ದೊರೆತವು. ಅವನ್ನು ಕಂಡು ಚಿಕ್ಕಸೊಸೆಯು ತಾನೂ ಅಗಿದು ನೋಡುವಷ್ಟರಲ್ಲಿ ಭೀಕರವಾದ ಕಾಳೋರಗವು ಅಲ್ಲಿಂದ ಹೊರಟುಬಂದು ಅವಳ ಬೆರಳು ಕಚ್ಚಿತು. ಅವಳು ಚೀತ್ಕರಿಸುತ್ತ ಮೃತಳಾದಳು. ಈ ಕಥೆಯ ಸತ್ಯಾಸತ್ಯದ ವಿಷಯವೇನೇ ಇರಲಿ. ಅನ್ಯಾಯ-ಅಧರ್ಮವು ಹೆಚ್ಚಿದಾಗ ದೇವರು ಅವತಾರವೆತ್ತಿ ಬರುವುದನ್ನು ಎಲ್ಲರೂ ಒಪ್ಪಬೇಕಾಗಿದೆ. ಲಕ್ಷ್ಮೀ ದೇವಿಯು ಜಗದ ಜನರನ್ನು ಜಾಗ್ರತಗೊಳಿಸಲು ಚೈತ್ರವದ್ಯ ತ್ರಯೋದಶಿಯಲ್ಲಿ ಅವತಾರವೆತ್ತಿದಳು. ಆ ಸ್ಮಾರಕವಾಗಿ 'ಧನತ್ರಯೋದಶಿ'ಯೆಂದು ಬಂಗಾಲದಲ್ಲಿ ದೊಡ್ಡ ಹಬ್ಬವನ್ನಾಚರಿಸುವುದುಂಟು.

## ವೈಶಾಖ ಮಾಸ

ಈ ತಿಂಗಳು ಪೌರ್ಣಿಮೆಯಲ್ಲಿ ವಿಶಾಖಾ ನಕ್ಷತ್ರವಿರುವುದರಿಂದ ವೈಶಾಖ ಮಾಸವೆಂದು ಹೆಸರು. ವಾತಾವರಣವು ಸಾಮಾನ್ಯವಾಗಿ ಚೈತ್ರಮಾಸದಂತೆಯೇ ಇರುತ್ತದೆ. ಕೃಷ್ಣಪಕ್ಷದ ಹದಿನೈದು ದಿವಸಗಳಲ್ಲಿ ವಸಂತಋತುವಿನ ನಿರ್ಗಮನವೂ, ಗ್ರೀಷ್ಮಋತುವಿನ ಆಗಮನವೂ ಇರುತ್ತದೆ. ಈ ಋತು ಸಂಧಿ ಕಾಲದಲ್ಲಿ ಕೆಲವು ರೋಗರುಜಿನಗಳು ಹುಟ್ಟುವುದುಂಟು ಸೂರ್ಯನ ಪ್ರಖರವಾದ ಕಿರಣಗಳಿಂದ ಮಾನವ ಶಕ್ತಿಯು ಹ್ರಾಸವಾಗುವದು. ಅದಕ್ಕನುಗುಣವಾದ ಆಹಾರ-ವಿಹಾರವು ಈ ತಿಂಗಳಲ್ಲಿ ಬರುವ ಹಬ್ಬಗಳಿಗೆ ಹೊಂದಿಕೊಂಡು ಇರುವುದಾಗಿದೆ. ಹೋದ ತಿಂಗಳಲ್ಲಿ ಮಹಾತ್ಮರ ಜಯಂತಿ ದಿನಗಳು ಇರುವಂತೆ ಈ ತಿಂಗಳಲ್ಲಿಯೂ ಅನೇಕ ಮಹಾತ್ಮರ ಜಯಂತಿಗಳು, ಹಬ್ಬಗಳು ಇರುವುದುಂಟು; ಅವುಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ವೈಶಾಖ ಶುದ್ಧ ೨ ರಂದು ಶ್ರೀ ಪರಶುರಾಮ ಜಯಂತಿ. ಶುದ್ಧ ೩ ರಲ್ಲಿ ವೀರಶೈವ ಮತಸ್ಥಾಪಕರಾದ ಜ! ಏಕೋರಾಮಾರಾಧ್ಯರ ಜಯಂತಿ, ಶ್ರೀ ಛತ್ರಪತಿ ಶಿವಾಜಿ ಜಯಂತಿ. ಅಂದು ಅಕ್ಷಯತೃತೀಯಾ; ಇದು ಸಾಡೇತೀನ ಶುಭಮುಹೂರ್ತಗಳಲ್ಲಿ ಒಂದಾಗಿದೆ. ಇದು ಕಲ್ಯಾಣ ಶ್ರೀ ಬಸವಣ್ಣ ಹುಟ್ಟಿದ ದಿನ. ವೈಶಾಖ ಶು॥ ೫ ವೀರಶೈವ ಮತಸ್ಥಾಪಕರಾದ ಜ! ದಾರುಕಾಚಾರ್ಯರ ಜಯಂತಿ. ಶ್ರೀ ಜ! ಶಂಕರಾಚಾರ್ಯರ ಜಯಂತಿ ವೈಶಾಖ ಶು! ೧೩ ರಲ್ಲಿ ಶ್ರೀ ನೃಸಿಂಹ ಜಯಂತಿ. ವೈಶಾಖ ಶು! ೧೫ ಅಗೀಹುಣ್ಣಿವೆ. ಈ ಹುಣ್ಣಿವೆಯಲ್ಲಿ ಕೆಲವು ಸಸಿಗಳನ್ನು ನೆಡವುದು ಬಹುಕಾಲದಿಂದ ಬಂದಿದೆಯಾದ್ದರಿಂದ ಈ ಹುಣ್ಣಿವಿಗೆ ಅಗಿ (ಆಗಿ)ಹುಣ್ಣಿವೆಯೆಂದು ಹೆಸರು. ಈ ದಿವಸ ಬೌದ್ಧ ಜಯಂತಿ. ಶ್ರೀ ಮಹಾಕೂಟೇಶ್ವರ ರಥ. ಶಿರಹಟ್ಟಿ ಶ್ರೀ ಫಕೀರೇಶ್ವರ ಜಾತ್ರೆ. ವೈಶಾಖ ಬ! ಬಾದಾಮಿ ಅಮಾವಾಸ್ಯೆ. ಈ ಮೇಲೆ ವಿವರಿಸಿದ ಜಯಂತಿಗಳಲ್ಲಿ ಪ್ರಾಮುಖ್ಯತೆ ಹೊಂದಿದ ಕೆಲವು ಹಬ್ಬಗಳನ್ನು ಕೆಳಗೆ ಉಲ್ಲೇಖಿಸಿದ್ದೇನೆ.

## ಅಕ್ಷಯ ತೃತೀಯಾ

ವೈಶಾಖ ಶುದ್ಧ ತೃತೀಯಾ ಮಿತಿಗೆ ಅಕ್ಷಯ ತೃತೀಯಾ ಎಂದು ಅನ್ನುತ್ತಾರೆ. ಇದು ಪರಶುರಾಮನ ಜನ್ಮದಿನವಾಗಿದೆ. ಮತ್ತು ತ್ರೇತಾಯುಗವು ಈ

ದಿವಸದಿಂದಲೇ ಪ್ರಾರಂಭವಾಗಿರುತ್ತದೆ. ಇಂದು ಪಿತೃ ದೇವತೆಗಳಿಗೆ ಎಳ್ಳುಗಳಿಂದ ಶ್ರಾದ್ಧಕರ್ಮವನ್ನಾಚರಿಸುವರು. ಈ ದಿವಸ ಬ್ರಾಹ್ಮಣರಿಗೆ ಒಂದು ಕೊಡ ನೀರು, ಬೀಸಣಿಕೆ, ಒಂದು ಜತಿ ಪಾದರಕ್ಷೆ ಇವುಗಳನ್ನು ದಾನ ಮಾಡುವುದುಂಟು. ಯಾಕಂದರೆ ಬ್ರಾಹ್ಮಣರಿಗೆ ಅರ್ಪಿಸಲ್ಪಟ್ಟ ಈ ವಸ್ತುಗಳು ಬೇಸಿಗೆ ಕಾಲದಲ್ಲಿ ಸ್ವರ್ಗವಾಸಿಗಳಿಗೆ ಮುಟ್ಟುತ್ತವೆಂದು ಜನರ ತಿಳುವಳಿಕೆ ಇದೆ. ಬೇಸಿಗೆಯು ಈ ದಿನದಿಂದಲೇ ಪ್ರಾರಂಭವಾಗುತ್ತದೆ. ಕೆಲವು ಕಡೆ ಇಂದು ಮುತ್ತೈದೆಯರು, ಕನ್ನಿಕೆಯರು ಗೌರೀ ಪೂಜೆಯನ್ನು ಆಚರಿಸುವರು. ವೃಷ್ಟಾನ್ನ, ಹಣ್ಣು, ನೆನೆಹಾಕಿದ ಕಡಲಿ ಇವುಗಳನ್ನು ಹಂಚುತ್ತಾರೆ.

ಮಹೋದಯನೆಂಬ ವೈಶ್ಯನು ಒಂದು ದಿನ ಒಬ್ಬ ಪಂಡಿತನ ಮುಖದಿಂದ ಅಕ್ಷಯತೃತೀಯಾ ಮಹಾತ್ಮ್ಯೆಯನ್ನು ಕೇಳಿದನು. "ಈ ತದಿಗಿ ತಿಥಿಯು ಬುಧವಾರ ದಿವಸ ರೋಹಿಣೀ ನಕ್ಷತ್ರ ಯುಕ್ತವಾದರೆ ಅತ್ಯಂತ ಫಲದಾಯಕವಾಗುತ್ತದೆಂದು" ಆ ಪಂಡಿತನು ಪುರಾಣದಲ್ಲಿ ಹೇಳಿದನು. ಮಹೋದಯ ವೈಶ್ಯನು ಇದನ್ನು ಕೇಳಿದವನಾಗಿ ಗಂಗೆಯಲ್ಲಿ ಸ್ನಾನಮಾಡಿದನು. ಪಿತೃದೇವತೆಗಳಿಗೆ ತರ್ಪಣಕೊಟ್ಟನು. ಮನೆಗೆ ಬಂದು ಅನ್ನೋದಕ ಯುಕ್ತವಾದ ಪಾತ್ರೆಗಳನ್ನೂ, ಬೀಸಣಿಕೆ, ಅನ್ನ, ವ್ಯಂಜನ, ಛತ್ರ, ಕಲಶ ಮೊದಲಾದವುಗಳನ್ನು ದಾನವಾಗಿ ಕೊಟ್ಟನು. ಮತ್ತು ಜವೆಗೋದಿ, ಸೈಂಧಲವಣ, ಸತ್ತು, ದಧ್ಯೋದನ ಬೆಲ್ಲದಿಂದ ತಯಾರಿಸಿದ ವೃಷ್ಟಾನ್ನವನ್ನು ಸುವರ್ಣ ಸಹಿತವಾಗಿ ದಾನ ಮಾಡಿದನು. ಹೀಗಿದ್ದು ಆ ವೈಶ್ಯನು ಕೆಲವು ದಿನಗಳಮೇಲೆ ಸ್ವರ್ಗಸ್ಥನಾದನು. ಆ ದಾನದ ಪ್ರಭಾವದಿಂದ ವೈಶ್ಯನು ಕುಶಾವತಿ ಎಂಬ ಪಟ್ಟಣದಲ್ಲಿ ರಾಜನಾಗಿ ಜನ್ಮವೆತ್ತಿದನು. ಅವನಿಗೆ ಅಕ್ಷಯ ಸಂಪತ್ತು ಲಭಿಸಿತು. ಆದ್ದರಿಂದ ಈ ಪರ್ವಕ್ಕೆ ಅಕ್ಷಯ ತೃತೀಯಾ ಎಂದು ಹೆಸರು ಬಂದಿದೆ ಎಂಬುದಾಗಿ ವ್ರತರಾಜದಲ್ಲಿ ಉಲ್ಲೇಖವಿದೆ.

## ಶ್ರೀ ಜಗದ್ಗುರು ಏಕೋರಾಮಾರಾಧ್ಯರ ಜಯಂತಿ

### ವೈಶಾಖ ಶು॥ ೩ (ಅಕ್ಷಯ ತೃತೀಯಾ)

ಶ್ರೀ ಜ। ಏಕೋರಾಮಾರಾಧ್ಯರು, ವೀರಶೈವ ಮತಸ್ಥಾಪಕರಾದ ಜಗದ್ಗುರು ರೇಣುಕಾದಿ ಪಂಚಾಚಾರ್ಯರಲ್ಲಿ ಒಬ್ಬರಾಗಿರುವರು. ಈ ಮಹಾನು

ಭಾವರು ಜಗದ ಜನರಂತೆ ಯೋನಿಜರಾಗದೆ ಶಿವಲಿಂಗದಿಂದ ಪ್ರಾದುರ್ಭ ವಿಸಿದರೆಂದು ಶಿವಾಗಮುಗಳು ಸಾರುತ್ತವೆ. ಹೀಗೆಯೇ ಉಳಿದ ಜ। ರೇಣು ಕಾದಿ ಚತುರಾಚಾರ್ಯರೂ ಕೂಡ ಶಿವಲಿಂಗದಿಂದ ಉದ್ಭವಿಸಿದರೆಂದು ಅತ್ಯಂತ ಪ್ರಾಚೀನಗಳಾದ ಶಿವಾಗಮುಗಳಲ್ಲಿಯೂ, ಉಪನಿಷತ್ತುಗಳಲ್ಲಿಯೂ ಉಕ್ತವಾಗಿದೆ. ಹಲವರು ಶ್ರೀ ಮದಾಚಾರ್ಯರು ಲಿಂಗೋದ್ಭವರಲ್ಲವೆಂದು ಸಂಶಯಪಡುವದುಂಟು. ಈ ವಿಷಯವು ಆಶ್ಚರ್ಯಕರವೇನಲ್ಲ. ಸರ್ವಾಂ ತರ್ಯಾಮಿಯಾದ ಭಗವಂತನು ತನ್ನ ಇಚ್ಛೆಯಂತೆ ತನ್ನದೇ ಆದ ಜಗತ್ತಿನಲ್ಲಿ ಎಲ್ಲಿ ಬೇಕಲ್ಲಿ ಉದ್ಭವಿಸಬಹುದೆಂಬ ಬಗ್ಗೆ ಸಾಕಷ್ಟು ಉದಾಹರಣೆಗಳು ಉಪಲಬ್ಧವಾಗುತ್ತವೆ. * ಹಿರಣ್ಯಕಸ್ಯಪನನ್ನು ಕೊಲ್ಲಲೋಸುಗ ನೃಸಿಂಹ ದೇವನು ಕಲ್ಲಿನ ಕಂಭದಿಂದ ಪುಟಿದೆದ್ದುದನ್ನು ಶಾಸ್ತ್ರ ಸಾರುತ್ತದೆ. ಹೀಗಿದ್ದು ಕೆಲವರು :— "ಭೂಮಿಯ ಲಿಂಗದಿಂದ ಈಗ ಯಾರೂ ಹುಟ್ಟುವುದಿಲ್ಲ ವಾದ್ದರಿಂದ ಹಾಗೆ ಹಿಂದೆ ಹುಟ್ಟಿದರೆಂದು ನಂಬಲಿಕ್ಕಾಗದಿಂತೆಂದು ವಿಜ್ಞಾನಿ ಗಳು ಹೇಳುತ್ತಿರುವರೆಂದು" ಗುನುಗುಟ್ಟುವುದುಂಟು. ಇದು ಸರಿಯೆನಿಸ ಲಾರದು. ಯಾಕಂದರೆ ವಿಜ್ಞಾನಿಯು ಸರ್ವಜ್ಞನಲ್ಲ; ಈ ವಿಶಾಲವಾದ ಜಗತ್ತಿ ನಲ್ಲಿ ವಿಜ್ಞಾನಿಯ ಬುದ್ಧಿಗೆ ಎಷ್ಟೋ ಮಹತ್ವದ ವಿಷಯಗಳು ಅಗೋಚರ ವಾಗಿ ಉಳಿದಿವೆ. ಅಂಥ ಅಗೋಚರವಾದ ವಿಷಯುಗಳಲ್ಲಿ ಯೋಗಶಾಸ್ತ್ರವೂ ಕೂಡ ವಿಜ್ಞಾನಿಯ ಬುದ್ಧಿಗೆ ನಿಲುಕದಾಗಿ ಉಳಿದಿದೆ. ಆ ಯೋಗಸಾಧನೆ ಯಿಂದ ಮಾನವನು ಸಕಲ ಸಿದ್ಧಿಯನ್ನು ಪಡೆದುಕೊಳ್ಳುವನು. ವಿಜ್ಞಾನಿಗಿಂತ

---

* ಶ್ರೀ ಶಂಕರಾಚಾರ್ಯರು ಸಾವಿರಾರು ಶಿಷ್ಯರೊಡಗೂಡಿ ಸುಧನ್ವರಾಜನ ಬೆಂಬಲದೊಡನೆ ದಿಗ್ವಿಜಯ ಹೊರಟರು. ಕೇರಳ ದೇಶದಿಂದ ಮಧ್ಯಾರ್ಜುನಕ್ಕೆ ಬಂದರು. ಅಲ್ಲಿ ಮಧ್ಯಾರ್ಜುನನನ್ನು ಕುರಿತು "ಸ್ವಾಮಿನ್ ಮಧ್ಯಾರ್ಜುನ! ಸರ್ವೋಪನಿಷತ್ತುಗಳಿಂದ ನೀನು ಪ್ರತಿಪಾದ್ಯನಾಗಿರುವೆ; ಆದುದರಿಂದ ನೀನು ದ್ವೈತವು ಸತ್ಯವೋ, ಅದ್ವೈತವು ಸತ್ಯವೋ ಎಂಬುದನ್ನು ಎಲ್ಲರಿಗೆ ಪ್ರತ್ಯಕ್ಷವಾಗಿ ಬೋಧಿಸು'' ಎಂದು ಪ್ರಾರ್ಥಿಸಿದರು. ಮಧ್ಯಾರ್ಜುನ ಲಿಂಗಿದಿಂದ ಪರಮೇಶ್ವರನು ಪ್ರಾದುರ್ಭವಿಸಿ, "ಸತ್ಯಮದ್ವೈತಂ, ಸತ್ಯಮದ್ವೈತಂ, ಸತ್ಯಮದ್ವೈತಂ'' ಎಂದು ಮೂರುಸಾರೆ ಹೇಳಿ ಲಿಂಗದಲ್ಲಿ ಐಕ್ಯವಾದನು. ಎಂಬ ವಿಷಯವು ಕ್ರಿ. ಶ. ೧೯೫೫ ಶಂಕರ ಭಾರತಿ ಮಾಸಪತ್ರಿಕೆ ಸಂ. ೧ ಸಂಚಿಕೆ ೫ ಪು. ೪೫ ರಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಯೋಗಸಿದ್ಧನು ಎಷ್ಟೋ ಪಟ್ಟು ಶ್ರೇಷ್ಠನಾಗಿರುವನು. ಮಹಾಲಿಂಗದ ಸ್ವರೂಪವನ್ನು ಯೋಗಿಯು ಅರಿತಂತೆ ವಿಜ್ಞಾನಿಯು ಅರಿಯಲಾರನು.



ವಿಜ್ಞಾನಿಯು 'ಲಿಂಗ'ವೆಂದರೆ ಭೂಮಿಯ ಕಲ್ಲೆಂದು ನಂಬುತ್ತಾನೆ. ಅದು ಕಲ್ಲು ಆಗಿದ್ದರೆ ಅದಕ್ಕೆ ಲಿಂಗವೆಂಬ ಹೆಸರು ಬರುತ್ತಿರಲಿಲ್ಲ. ಕಲ್ಲಿನ ಸ್ವರೂಪವೇ ಬೇರೆ; ಅದರ ಬೆಲೆಯೇ ಬೇರೆ, ಆದರೆ ಲಿಂಗದ ಸ್ವರೂಪ ಲಿಂಗದ ಕಾರ್ಯ, ಆ ಬಗ್ಗೆ ಇರುವ ಮಾನವನ ಮಹದ್ಭಾವನೆ ಇತ್ಯಾದಿಗಳು ಕಲ್ಲಿನಕ್ಕಿಂತ ಭಿನ್ನವಾಗಿರುತ್ತವೆ. ಖಡ್ಗವು ಉಕ್ಕು ಎಂಬುದನ್ನು ಎಲ್ಲರೂ ಬಲ್ಲರು; ಉಕ್ಕು ವಿಶಿಷ್ಟವಾದ ಸಂಸ್ಕಾರವನ್ನು ಹೊಂದಿ ಖಡ್ಗವಾಗಿ ರಾಜನ ಬಗಲಿಗೆ ಬಿದ್ದು ರಿಪುಕುಲವನ್ನು ಸಂಹರಿಸುತ್ತದೆ. ರಾಜ್ಯಕ್ಕೆ ವೈರಿಗಳು ಮುತ್ತಿಗೆ ಹಾಕಿದಾಗ ರಾಜನು ತನ್ನ ಸೈನ್ಯಕ್ಕೆ-"ಖಡ್ಗವನ್ನು ತೆಗೆದುಕೊಳ್ಳಿರಿ" ಎಂದು ಅನ್ನುವನಲ್ಲದೆ "ಉಕ್ಕನ್ನು ತೆಗೆದುಕೊಳ್ಳಿರಿ" ಎಂದು ಅನ್ನಲಾರನು. ಹೀಗೆಯೇ ಜೋಳವನ್ನು ಹಸನು ಮಾಡಿ, ಹಿಟ್ಟು ಮಾಡುವರು; ಆ ಹಿಟ್ಟು ರೊಟ್ಟಿಯಾಗುವದು. ಊಟಕ್ಕೆ ಕುಳಿತಾಗ "ಇನ್ನಷ್ಟು ರೊಟ್ಟಿ ತಾ" ಎಂದು ಅನ್ನುವರಲ್ಲದೆ 'ಜೋಳಾ ತಾ' ಎಂದು ಅನ್ನಲಾರರು.

ವಿಷ್ಣು–ಬ್ರಹ್ಮರು, ನಾನು ಹೆಚ್ಚು, ನಾನು ಹೆಚ್ಚು ಎಂದು ಅಹಂಕಾ ಗಳಾಗಿ ಮೇರೆ ಮೀರಿ ಹೋರಾಡುತ್ತಿರುವಾಗ ಭಗವಾನ್ ಶಂಕರನು, ಉಭ ಯರ ಮಧ್ಯದಲ್ಲಿ ಜ್ಯೋತಿರ್ಮಯ ಮಹಾಲಿಂಗವಾಗಿ ಆವಿರ್ಭವಿಸಿ, ಅವ ಗರ್ವಹರಣ ಮಾಡಿದುದು ಶಾಸ್ತ್ರ ಸಮ್ಮತವಿದೆ.

ಚರಾಚರಾತ್ಮಕವಾದೀ ಜಗತ್ತು ಯಾವುದರಿಂದ ಉದ್ಭೂತವಾಗು ವದೋ, ಕಾಲಾಂತರದಲ್ಲಿ ಪುನಃ ಅದರಲ್ಲಿಯೇ ಲೀನವಾಗುವುದೋ, ಅದು ಲಿಂಗವು; ಈ ಮಹಾಲಿಂಗವು, ವಿಷ್ಣು–ಬ್ರಹ್ಮಾದಿ ದೇವತೆಗಳಿಂದಲೂ, ವೇದ, ಆಗಮ, ಉಪನಿಷದಾದಿಗಳಿಂದಲೂ ಹಲವು ಬಗೆಯಿಂದ ಹೊಗಳಿಸಿಕೊಳ್ಳಲ್ಪ ಡುವುದಾಗಿದೆ. ಇಂಥ ಲಿಂಗದಿಂದ ಶಿವಸ್ವರೂಪಿಗಳಾದ ಜ। ಏಕೋರಾಮಾ ರಾಧ್ಯರು, ಹಾಗೂ ಜ। ರೇಣುಕಾದಿ ಚತುರಾಚಾರ್ಯರು ಉದ್ಭವಿಸಿದ ಬಗ್ಗೆ ಎಳ್ಳನಿತು ಸಂದೇಹಪಡಲಾಗದು. ಶ್ರೀಮದಾಚಾರ್ಯರು ಕೇವಲ ಶಿವಾವತಾ ರಿಗಳಾಗಿರುವರಲ್ಲದೆ, ಶಿವಯೋಗಸಿದ್ಧರೂ ಅತಏವ ಅಣಿಮಾದ್ಯಷ್ಟ ಸಿದ್ಧಿ ಸಂಪನ್ನರೂ ಆಗಿದ್ದರು. ಸಾಧಾರಣರಿಗೆ ಯಾವುದು ಅಸಾಧ್ಯವೋ ಅದನ್ನು ಅಸಾಧಾರಣರಾದ ಯೋಗಿಗಳು ಸಾಧ್ಯವನ್ನಾಗಿ ಮಾಡುತ್ತಾರೆ. ಇದನ್ನ ಯೋಗ ಶಾಸ್ತ್ರವು:—

"ಅಚಿಂತ್ಯ ಮಹಿಮಾನಃ ಖಲುಯೋಗಿನಃ"।

ಯೋಗಸಿದ್ಧರು ಊಹೆಯನ್ನು ಮೀರಿದ ಮಹಿಮಾಶಾಲಿಗಳಾಗಿರುವರು ಎಂಬುದಾಗಿ ಬೋಧಿಸುತ್ತಿರುವದು.

"ಪರಮಾಣುತ್ವಂ ಪ್ರಾಪ್ತೋವಜ್ರಾದೀನಾಮಪ್ಯಂತಃ ಪ್ರವಿಶತಿ"॥

ಪರಮಾಣುತ್ವ * ಸಿದ್ಧಿಯನ್ನು ಹೊಂದಿದ ಯೋಗಿಯು ಅತ್ಯಂತ ಕಠಿಣವೆನಿಸಿದ ವಜ್ರಾದಿ ಪದಾರ್ಥಗಳಲ್ಲಿಯೂ ಸಹ ಪ್ರವೇಶಿಸುವನು."

---

* ಪರಮಾಣುವೆಂದರೆ– ಮನೆಯ ಒಳಭಾಗದಲ್ಲಿ, ಬೆಳಕಿಂಡಿಯೊಳಗಿಂದ ಸೂರ್ಯನ ಕಿರಣವು ಬಿದ್ದಿರುತ್ತದೆ. ಅದರಲ್ಲಿ ಸಣ್ಣಸಣ್ಣ ಸೂಕ್ಷ್ಮಕಣಗಳು ಕಾಣುತ್ತವೆ ಆ ಒಂದು ಕಣದೊಳಗಿನ ಅರನೆಯ (ಒಂದು) ಭಾಗಕ್ಕೆ 'ಪರಮಾಣು' ಎಂದು ನೈಯಾಯಿಕರ ಮತವಿದೆ.

"ಜಾಲ ಸೂರ್ಯಮರೀಚಿಸ್ಥ ಸೂಕ್ಷ್ಮಂ ಯದ್ದೃಶ್ಯತೇರಜಃ |
ತಸ್ಯಷಷ್ಠ ತಮೋಭಾಗಃ ಪರಮಾಣುರಿತಿ ಕಥ್ಯತೇ" ||

ಎಂಬುದಾಗಿ ಯೋಗ ಶಾಸ್ತ್ರವು ಘಂಟಾಘೋಷವಾಗಿ ಸಾರುತ್ತಿದೆ. ಆದುದರಿಂದ ಆ ಮಹಾಚಾರ್ಯರು ತಮ್ಮ ಯೋಗಬಲದಿಂದ ಲಿಂಗೋದ್ಭವರಾದರೆಂಬುದಾಗಿ ದೃಢವಾಗಿ ಹೇಳಬಲ್ಲೆವು.

ಶ್ರೀ ಜಗುದ್ಗುರು ಏಕೋ ರಾಮಾರಾಧ್ಯ ಭಗವತ್ಪಾದರು ಆಂಧ್ರ ಪ್ರದೇಶದಲ್ಲಿ ಕಾಕಿನಾಡ ಜಿಲ್ಲೆಯಲ್ಲಿರುವ ದ್ರಾಕ್ಷಾರಾಮ ಕ್ಷೇತ್ರದಲ್ಲಿ ವಿರಾಜಮಾನವಾದ ಶ್ರೀ ಭೀಮನಾಥಲಿಂಗ ಗರ್ಭದಿಂದ ವೈಶಾಖ ಶುದ್ಧ ತೃತೀಯಾ (ಅಕ್ಷಯ ತೃತೀಯಾ)ದಿವಸ ಆವಿರ್ಭವಿಸಿ ವೀರಶೈವ ಮತವನ್ನು ಸ್ಥಾಪಿಸಿದರು. ಈ ಮತದ ಪ್ರಚಾರಕ್ಕಾಗಿ, ತಮ್ಮ ಯೋಗಬಲದಿಂದ ಆಕಾಶ ಮಾರ್ಗವಾಗಿ ಭಾರತದ ಮೂಲೆ ಮೂಲೆಯಲ್ಲಿ ಸಂಚರಿಸಿದರಲ್ಲದೇ ತಮ್ಮ ಉಪದೇಶ ಪ್ರಭಾವದಿಂದ ಅನೇಕ ಋಷಿ ಪುಂಗವರನ್ನೂ, ರಾಜಾಧಿರಾಜರನ್ನೂ ಶಿಷ್ಯರನ್ನಾಗಿ ಮಾಡಿಕೊಂಡರು. ಸ್ವಮತ ಸಿದ್ಧಾಂತವು ಸರ್ವರಿಗೂ ತಿಳಿಯಲೆಂಬ ಉದ್ದೇಶದಿಂದ ಶಿವಸೂತ್ರ, ಬ್ರಹ್ಮಸೂತ್ರ, ಉಪನಿಷದಾದಿಗಳ ಮೇಲೆ ಭಾಷ್ಯಗಳನ್ನು ರಚಿಸಿದರು.

ಶ್ರೀಪತಿ ಪಂಡಿತರು ಬ್ರಹ್ಮಸೂತ್ರಗಳ ಮೇಲೆ ರಚಿಸಿರುವ ಶ್ರೀಕರ ಭಾಷ್ಯವು ಸುಪ್ರಸಿದ್ಧವಾಗಿದೆ. ಶ್ರೀಪತಿ ಪಂಡಿತರು "ಅಥಾತೋಬ್ರಹ್ಮ ಜಿಜ್ಞಾಸಾ" ಎಂಬ ಸೂತ್ರಕ್ಕೆ ಭಾಷ್ಯವನ್ನು ಬರೆಯುವ ಸಂದರ್ಭದಲ್ಲಿ, "ಸಮನ್ವಯ ಸೂತ್ರೇ ಏಕೋರಾಮ ಸಿದ್ಧ ಭಗವತ್ಪಾದಾಚಾರ್ಯೈಃ ಶ್ರೋತವ್ಯ ಇತ್ಯತ್ರ ಆತ್ಮಜ್ಞಾನ ವಿಧಿರ್ನಿರಾಕೃತಃ" ಎಂದು ಉಲ್ಲೇಖಿಸಿ, ಶ್ರೀ ಜಗದ್ಗುರು ಏಕೋರಾಮ ಭಗವತ್ಪಾದರಿಂದ ರಚಿಸಲ್ಪಟ್ಟಿರುವ 'ತತ್ತು ಸಮನ್ವಯಾತ್' ಎಂಬ ಬ್ರಹ್ಮಸೂತ್ರ ಭಾಷ್ಯದ ಅಭಿಪ್ರಾಯವನ್ನು ತೋರಿಸಿರುವುದರಿಂದ ಶ್ರೀ (ಜ) ಏಕೋರಾಮ ಶಿವಾಚಾರ್ಯರು ಬ್ರಹ್ಮಸೂತ್ರಗಳ ಮೇಲೆ ಭಾಷ್ಯವನ್ನು ಬರೆದಿರುವರೆಂದು ವೀರಶೈವರತ್ನದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಈ ಭಗವತ್ಪಾದರು ಪರಮ ತಪೋಸಿಧಿಗಳೂ, ಯೋಗಸಿದ್ಧರೂ ಆಗಿದ್ದರು. ಇವರು ಅತ್ಯುನ್ನತ ಪರ್ವತವಾದ ಹಿಮವತ್ಕೇದಾರದಲ್ಲಿ ವೈರಾಗ್ಯ ಸಿಂಹಾಸನವನ್ನು

ಸ್ಥಾಪಿಸಿದರು. ಅದು ಈಗಲೂ ಕೇದಾರ ಪೀಠವೆಂದು ಪ್ರಖ್ಯಾತವಾಗಿದೆ. ಬಾಣಾಸುರನ ಮಗಳಾದ, ಅನಿರುದ್ಧನ ಪತ್ನಿಯಾದ ಉಷಾದೇವಿಯು ಈ ಪೀಠವನ್ನು ಭದ್ರವಾಗಿ ಕಟ್ಟಿಸಿದಳು. ಅಂದಿನಿಂದ ಅವಳ ಭಕ್ತಿಯ ನಿದರ್ಶನ ವಾಗಿ ಈ ಮಠಕ್ಕೆ "ಉಖಾ" ಮಠವೆಂಬ ನಾಮವು ಸಂದಾಯವಾಯಿತು. ಗಢವಾಲೀ ಭಾಷೆಯಲ್ಲಿ 'ಷ' ಕಾರಕ್ಕೆ 'ಖ' ಅನ್ನುವ ರೂಢಿ ಇರುವರಿಂದ "ಉಖಾ" ಮಠವೆಂನು ವಾಡಿಕೆಯಾಗಿದೆ. ಇದು ಹಿಮಾಲಯ ಪ್ರಾಂತದಲ್ಲಿ ಗಢವಾಲ ಜಿಲ್ಲೆಗೆ ಸೇರಿದುದಾಗಿದೆ.

ಈಗ್ಗೆ ಸುಮಾರು ೫ ಸಾವಿರ ವರುಷಗಳ ಹಿಂದೆ ಜನಮೇಜಯ ಭೂಪಾ ಲನು, ತನ್ನ ಕಾಲದಲ್ಲಿ ಹಿಮತ್ಕೇದಾರ ಪೀಠಾಧಿಪತಿಗಳಾಗಿದ್ದ ಶ್ರೀ ಜ| ಆನಂ ದಲಿಂಗ ಜಂಗಮರೆಂಬ ಶಿವಯೋಗಿಗಳಿಗೆ ಕೇದಾರ ಕ್ಷೇತ್ರವನ್ನು ದಾನವಾಗಿ ಸಲ್ಲಿಸಿದನು. ಈ ಭೂಮಿಯಲ್ಲಿ ಸಾವಿರದವರೆಗೆ ಗ್ರಾಮಗಳಿದ್ದವು. ಈಗ್ಗೆ ಸುಮಾರು ೭೦—೮೦ ವರ್ಷಗಳ ಹಿಂದೆ ಶ್ರೀ ಜ| ಗಣೇಶಲಿಂಗ ಜಂಗಮ ಸ್ವಾಮಿಗಳವರ ಕಾಲದಲ್ಲಿ ಬ್ರಿಟಿಶ್ ಸರಕಾರದವರು ಹೆಚ್ಚಿನ ಗ್ರಾಮಗಳನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ನೂರಾರು ಗ್ರಾಮಗಳನ್ನು ಮಾತ್ರ ಪೀಠಾ ಧೀಶ್ವರ ಸ್ವಾಧೀನಕ್ಕೆ ಬಿಟ್ಟುಕೊಟ್ಟಿರುತ್ತಾರೆ. ಕೇದಾರನಾಥ ದೇವಾಲಯದ ಸರ್ವಾಧಿಕಾರವು ಪೂರ್ವಕಾಲದಿಂದ ಪೀಠಾಧಿಪತಿಗಳ ಸ್ವಾಧೀನದಲ್ಲಿಯೇ ಇರುವದಾಗಿದೆ. ಇದಲ್ಲದೇ ಗುಪ್ತಕಾಶಿ, ಮಧ್ಯಮೇಶ್ವರ, ಕಾಲೀಮಠ, ಗೌರೀ ಕುಂಡ, ಸೋಮದ್ವಾರ ಮುಂತಾದ ಇಪ್ಪತ್ತೆರಡು ಕ್ಷೇತ್ರಗಳ ಸರ್ವಾಧಿಪತ್ಯವು ಇವರ ಸ್ವಾಧೀನವಾಗಿಯೇ ಇರುವದು. ಹಿಮಾಲಯ ಪ್ರಾಂತದಲ್ಲಿ ಸುಪ್ರಸಿದ್ಧ ರಾಗಿರುವ ಟಿಹರೀ ಮಹಾರಾಜರು ಈ ವೈರಾಗ್ಯ ಸಿಂಹಾಸನದ ಪ್ರಮುಖ ಶಿಷ್ಯರಾಗಿರುವರು. ಹಾಗೂ ಉದಯಪುರ, ಕಾಶ್ಮೀರ, ನೇಪಾಳ ಮೊದಲಾದ ೧೩ ಜನ ಉತ್ತರ ಪ್ರದೇಶದ ಮಹಾರಾಜರು ಪ್ರತಿ ವರುಷ ಈ ಪೀಠಕ್ಕೆ ಕಾಣಿಕೆಯನ್ನು ಅರ್ಪಿಸುತ್ತಾರೆ. ಉತ್ತರ ಭಾರತದಲ್ಲಿ ಕೇದಾರನಾಥ, ಬದರಿ ನಾಥ ಮಠಾಧಿಪತಿಗಳಿಗೆ ಉಚ್ಚ ಗೌರವವಿದೆ. ಈ ಮಠಾಧಿಪತಿಗಳಿಗೆ ಬ್ರಿಟಿಶ್ ಸರಕಾರದಿಂದ "ರಾವಲ್" ಎಂಬ ಪದವಿಯು ದೊರೆತಿದ್ದಿತು. ಕೇದಾರಪೀಠಕ್ಕೆ ದಕ್ಷಿಣ ದೇಶದ ಜಂಗಮ ಬ್ರಹ್ಮಚಾರಿಗಳೇ ಅಧಿಕಾರಿಗಳಾಗ ಬೇಕೆಂಬ ಸರಕಾರದ ನಿರ್ಣಯವಿದೆ.

ಈ ಮಹಾ ಪೀಠದ ಗುರು ಪರಂಪರೆಯಲ್ಲಿ ಅನೇಕ ಜನ ಯೋಗ ಸಿದ್ಧರು ಆಗಿಹೋಗಿದ್ದಾರೆ. ಅಂಥ ಮಹಾನುಭಾವರಲ್ಲಿ ಶ್ರೀ ಜಗದ್ಗುರು ಭೂಕುಂಡಲಿಂಗ ಶಿವಚಾರ್ಯರೂ ಸಹ ಮಹಿಮಾಶಾಲಿಗಳಾಗಿದ್ದಾರೆ. ಈ ಮಹನೀಯರು ದಕ್ಷಿಣ ದೇಶದ ವೀರಮಾಹೇಶ್ವರ ಬ್ರಾಹ್ಮಣ ವಂಶದಲ್ಲಿ ಜನ್ಮವೆತ್ತಿದರು. ಬಾಲ್ಯದಲ್ಲಿಯೇ ಸಕಲ ಶಾಸ್ತ್ರಗಳನ್ನು ಅಭ್ಯಾಸಮಾಡಿ ಪರವಾದಿಗಳನ್ನು ಜಯಿಸುತ್ತ ಎಲ್ಲೆಡೆಯಲ್ಲಿಯೂ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಉಪದೇಶಿಸ ಹತ್ತಿದರು. ಹೀಗೆ ದಿಗ್ವಿಜಯವನ್ನು ಮಾಡುತ್ತಮಾಡುತ್ತ ಶಿಷ್ಯ ಸಮೂಹದೊಡನೆ ಕಾಶೀ ಕ್ಷೇತ್ರಕ್ಕೆ ಆಗಮಿಸಿ, ಶ್ರೀ ಜಗದ್ಗುರು ವಿಶ್ವಾರಾಧ್ಯ ಪೀಠದಲ್ಲಿ ವಾಸಿಸಹತ್ತಿದರು. ಕಾಶೀ ಕ್ಷೇತ್ರ ನಿವಾಸಿಗಳಾದ ಮಹಾ ಮಹಾ ಪಂಡಿತರು ಈ ಭಗವತ್ಪಾದರಲ್ಲಿದ್ದ ಅದ್ಭುತ ಪಾಂಡಿತ್ಯವನ್ನೂ, ಶಿವ ಯೋಗ ಪ್ರಭಾವವನ್ನೂ ಕಂಡು ಚಕಿತರಾಗಿ ಶಿಷ್ಯವೃತ್ತಿಯನ್ನವಲಂಬಿಸಿ, ಶಿವಾದ್ವೈತ ಸಿದ್ಧಾಂತ ಜ್ಞಾನವನ್ನು ಪಡೆದು ಧನ್ಯರಾದರು. ಒಂದಾನೊಂದು ದಿವಸ ಈ ಮಹಾತ್ಮರಿಗೆ ಶ್ರೀ ಕೇದಾರ ಕ್ಷೇತ್ರವನ್ನು ಕಣ್ಣಾರೆ ಕಾಣಬೇಕೆಂಬ ಆಶೆಯುಂಟಾಯಿತು. ಆಗ್ಗೆ ತಮ್ಮ ಸಂಗಡ ಇರುವ ಶಿಷ್ಯರನ್ನೆಲ್ಲ ಕಾಶೀ ಪೀಠ ದಲ್ಲಿಯೇ ಬಿಟ್ಟು ಕೇದಾರ ಕ್ಷೇತ್ರಕ್ಕೆ ಪ್ರಯಾಣ ಮಾಡಿ, ಶ್ರೀ ಜಗದ್ಗುರು ಕೇದಾರ ಪೀಠದಲ್ಲಿ ವಾಸಮಾಡಿದರು. ಅಲ್ಲಿರುವ ಸಿಂಹಾಸನಾಧಿಪತಿಗಳು ಈ ಮಹನೀಯರ ದಿವ್ಯತೇಜಸ್ಸನ್ನು ಕಂಡು ಪ್ರಸನ್ನರಾಗಿ ತಮ್ಮಪೀಠಾಧಿಕಾರ ವನ್ನು ಶ್ರೀ ಜ. ಭೂಕುಂಡಲಿಂಗ ಶಿವಾಚಾರ್ಯರಿಗೆ ಕರುಣಿಸಿದರು. ಇತ್ತ ಕಾಶೀ ಕ್ಷೇತ್ರದಲ್ಲಿದ್ದ ಶಿಷ್ಯ ಮಂಡಳಿಯು ನಿತ್ಯವೂ ಈ ಮಹಾತ್ಮರ ಧ್ಯಾನದ ಲ್ಲಿಯೇ ತನ್ಮಯವಾಗಿತ್ತು. ಸರ್ವಜ್ಞ ಚಿತ್ತರಾದ ಈ ಮಹಾತ್ಮರು ಶಿಷ್ಯ ಮಂಡ ಳಿಯನ್ನು ಸಂತೋಷಪಡಿಸುವದಕ್ಕಾಗಿ ಪ್ರತಿದಿನವೂ ಕೇದಾರ ಕ್ಷೇತ್ರದಿಂದ ಆಕಾಶ ಗಾಮಿಗಳಾಗಿ ಕಾಶಿಗೆ ಆಗಮಿಸಿ ಸಕಲ ಶಿಷ್ಯರಿಗೂ ಶಿವಯೋಗಾಮೃತ ವನ್ನು ಪಾನಮಾಡಿಸುತ್ತಿದ್ದರು. ಈ ರೀತಿಯಾಗಿ ಕೆಲವು ದಿನಗಳು ಕಳೆಯಲು ಒಂದು ದಿವಸ ಈ ಗುರುವರ್ಯರು ಎಲೈ ಶಿಷ್ಯರೇ! ಇನ್ನು ಮುಂದೆ ನೀವೆ ಲ್ಲರೂ ಶ್ರೀ ಕೇದಾರ ಕ್ಷೇತ್ರಕ್ಕೆ ಬಂದು ಅಲ್ಲಿಯೇ ಇರುವವರಾಗಬೇಕೆಂದು ಅಪ್ಪಣೆ ಮಾಡಿದರು. ಆ ಪ್ರಕಾರ ಸರ್ವ ಶಿಷ್ಯರೂ ಅಲ್ಲಿಗೆ ಬಂದು ಜಗದ್ಗುರು ಪೀಠದಲ್ಲಿ ವಾಸಿಸಹತ್ತಿದರು. ಈ ಶಿವಯೋಗಿಶ್ವರರು, ಈಗ್ಗೆ ಸುಮಾರು

೪೧೦೦ ವರುಷಗಳ ಪೂರ್ವದಲ್ಲಿದ್ದರೆಂದು ಟೆಹರಿ ಗಢವಾಲರಿಯಾಸತ್ ವಜೀರ ಪಂಡಿತ ಹರಿಕೃಷ್ಣರ ತೋಡಿ ಸಾಹೇಬರು ತಾವು ಬರೆದಿರುವ "ಗಢವಾಲಕಾ ಇತಿಹಾಸ" ವೆಂಬ ಗ್ರಂಥದಲ್ಲಿ ಅನೇಕ ಆಧಾರಗಳೊಡನೆ ಸಿದ್ಧಪಡಿಸಿರುವರು.

ಶ್ರೀ ಕೇದಾರ ಪೀಠಕ್ಕೆ ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ೨೯೩ ಜನ ಆಚಾರ್ಯರು ಅಧಿಕಾರ ವಹಿಸಿರುವರು. ಸದ್ಯ ರಾವಲರಾಗಿರುವ ವಿಶ್ವನಾಥ ಲಿಂಗರು ೨೯೪ ನೆಯವರಾಗಿದ್ದಾರೆ. ಇವರ ಗುರುಗಳಾದ ಕೈ। ಶ್ರೀ ಜಗದ್ಗುರು ನೀಲಕಂಠಲಿಂಗ ಶಿವಚಾರ್ಯ ಮಹಾಸ್ವಾಮಿಗಳು ಶ್ರೀ ಕೇದಾರ ಪೀಠದ ಸುಧಾರಣೆಗಾಗಿ ಬಹಳ ಶ್ರಮವಸಿದರು. ಕೆಲವುಕಾಲ ಪರಕೀಯರ ಹಸ್ತಗತವಾದ ಕೇದಾರ ಪೀಠವನ್ನು ಬಹು ಜಾಣತನದಿಂದ ಈ ಮಹಾತ್ಮರು ಸ್ವಾಧೀನಪಡಿಸಿಕೊಂಡ ಸಂಗತಿಯು ಸಾಹಸದ ಕಥೆಯಾಗಿದೆ. ಇವರ ಜನ್ಮಭೂಮಿಯು ಧಾರವಾಡ ಜಿಲ್ಲಾ ಕಲ್ಲೆದೇವರಪುರವಾಗಿದೆ. ೧೫–೧೬ ವಯಸ್ಸಿನವರಿರುವಾಗಲೇ ಇವರು ಕಾಶೀ ಕ್ಷೇತ್ರಕ್ಕೆ ಹೋಗಿ ಅಲ್ಲಿ ಶ್ರೀ ।ಜ। ಶಿವಲಿಂಗ ಶಿವಚಾರ್ಯ ಮಹಾಸ್ವಾಮಿಗಳವರ ಆಶ್ರಯದಲ್ಲಿದ್ದು ಅವರ ಅಪ್ಪಣೆಯ ಮೇರೆಗೆ ಕೇದಾರ ಪೀಠಕ್ಕೆ ತೆರಳಿದರು. ಶ್ರೀ ಕೇದಾರ ಜಗದ್ಗುರು ಪರಂಪರೆಯಲ್ಲಿ ೨೯೦ ನೆಯವರಾದ ಶ್ರೀ ವಿಶ್ವಲಿಂಗ ಶಿವಚಾರ್ಯರ ಕಾಲದಲ್ಲಿ ಕೇದಾರ ಪೀಠವು ಆರ್ಥಿಕ ಅಡಚಣೆಗೀಡಾಗಿ ಸುಮಾರು ೮೦ ಸಾವಿರ ರೂಪಾಯಿಗಳ ಸಾಲದೊಳಗಾಯಿತು. ಆಗ ಸ್ವಾಮಿಗಳು ಉಜ್ಜಯಿನಿಜ। ಸಿದ್ಧಲಿಂಗ ಶಿವಚಾರ್ಯ ಮಹಾಸ್ವಾಮಿಗಳ ಸಲಹೆ ಸೂಚನೆಗಳ ಮೇರೆಗೆ ದಕ್ಷಿಣ ಭಾರತದಲ್ಲಿಯ ಉಜ್ಜಯಿನಿಗೆ ದಯಮಾಡಿಸಿ ೧೯೧೯ ನೆಯ ಡಿಸೆಂಬರ ತಿಂಗಳದಲ್ಲಿ ಜರುಗಿದ ಬಿರೂರಿನ ವೀರಶೈವ ಮಹಾಸಭೆಯ ಕಾರ್ಯವನ್ನು ನೆರವೇರಿಸಿ, ಮುಂದೆ ಆ ಪ್ರಾಂತದಲ್ಲಿ ಸಂಚರಿಸುತ್ತಿರಲು ತಾ. ೧೫—೭—೧೯೨೧ ನೆಯ ದಿವಸ ಉಜ್ಜಯಿನಿಯ ಶ್ರೀ ಪೀಠದಲ್ಲಿ ಶಿವೈಕ್ಯರಾದರು. ಈ ಸ್ವಾಮಿಗಳಿಂದ ಅಂತ್ಯಕಾಲದಲ್ಲಿ ಬರೆಯಲ್ಪಟ್ಟ ವಿಲ್ ಪ್ರಕಾರ ೨೯೧ನೆಯವರಾದ ಜ। ನೀಲಕಂಠ ಲಿಂಗಶಿವಾಚಾರ್ಯರು ತಾ. ೧—೧೦—೧೯೨೧ ನೆಯ ದಿವಸ ಶ್ರೀ ಕೇದಾರ ಪೀಠದ ಪಟ್ಟಾಧಿಕಾರಿಗಳಾದರು. ಇವರು ಕನ್ನಡ ಇಂಗ್ಲೀಷ, ಹಿಂದೀ, ಮಹಾರಾಷ್ಟ್ರ, ಪಹಾಡೀ ಇತ್ಯಾದಿ ಭಾಷೆಗಳನ್ನು ಅರಿತವರೂ, ವ್ಯವಹಾರ

ಕುಶಲರೂ, ಆಯುರ್ವಿದ್ಯಾ ವಿಶಾರದರೂ ಆಗಿದ್ದರು ಇವರು ತಮ್ಮ ಸಕಲ ಸಿಬ್ಬಂದಿ ಪರಿವಾರದೊಡನೆ ಕರ್ನಾಟಕದಲ್ಲಿ ಸಂಚರಿಸಿ ಕೆಲವು ದಿವಸಗಳಲ್ಲಿಯೇ ಧನವನ್ನು ವಿಪುಲವಾಗಿ ಸಂಗ್ರಹಿಸಿ, ತಮ್ಮ ಮಠಕ್ಕಿರುವ ಎಂಭತ್ತು ಸಾವಿರ ರೂಪಾಯಿಗಳ ಸಾಲವನ್ನು ತೀರಿಸಿದ್ದಲ್ಲದೇ ಸುವರ್ಣ, ರಜತ, ರತ್ನಾಭರಣಾಧಿಗಳನ್ನು ಹೇರಳವಾಗಿ ಸಂಗ್ರಹಿಸಿದರು. ಇವರು ದೇಶ ಸಂಚಾರದ ಕಾಲದಲ್ಲಿ ಅಲ್ಲಲ್ಲಿ ಸಂಸ್ಕೃತ ವಿದ್ಯಾಲಯಗಳನ್ನು ಸ್ಥಾಪಿಸಿದರು. ಹಾಗೂ ತಮ್ಮ ಉಖಾ ಮಠದಲ್ಲಿ ಆಯುರ್ವೇದ ವಿದ್ಯಾಲಯವನ್ನೂ, ಹಾಯ್‌ಸ್ಕೂಲನ್ನೂ ಸ್ಥಾಪಿಸಿದರು. ಅನೇಕ ಜನ ಪಂಡಿತರಿಗೆ ಆಶ್ರಯಕೊಟ್ಟು ದಾರಿದ್ರ್ಯವನ್ನು ದೂರಮಾಡಿದರು. ಇವರು ತಮ್ಮ ಆಡಳಿತದ ಸುರಕ್ಷತೆಯ ಸಲುವಾಗಿ ಧಾರವಾಡ ಜಿಲ್ಲಾ ತಿಮ್ಮಾಪುರ ಗ್ರಾಮದ ಹಿರೇಮಠದ ಸದ್ವಂಶೀಯರಾದ ಪಂ। ಶ್ರೀ ಶಿವಮೂರ್ತಿಶಾಸ್ತ್ರಿಗಳನ್ನು ಚರಪಟ್ಟಾಧಿಕಾರಿಗಳನ್ನಾಗಿ ನೇಮಿಸಿಕೊಂಡರು. ಅವರು ಚಿದ್ಘನ ಶಿವಾಚಾರ್ಯರೆಂದು ಪ್ರಖ್ಯಾತರಾದರು. ಈ ಸ್ವಾಮಿಗಳು ೩೨೨ ನೆಯವರಾಗಿದ್ದಾರೆ. ಇವರು ಕೆಲವುಕಾಲ ತಮ್ಮ ಸಕಲ ಬಿರುದಾವಳಿಗಳೊಡನೆ ಕರ್ನಾಟಕದಲ್ಲಿ ಸಂಚರಿಸಿ ಧರ್ಮ ಪ್ರಚಾರ, ವಿದ್ಯಾ ಪ್ರಚಾರ ಕಾರ್ಯವನ್ನು ಮಾಡಿದರು. ಕೆಲವು ವರ್ಷಗಳ ಮೇಲೆ ಕೇದಾರದಲ್ಲಿ ( ಮಧ್ಯಮೇಶ್ವರದಲ್ಲಿ ) ತಾ. ೧೬—೨—೧೯೪೩ ರಲ್ಲಿ ಲಿಂಗೈಕ್ಯರಾದರು. ಆ ನಂತರ ಶ್ರೀ ಜ। ನೀಲಕಂಠಲಿಂಗ ಶಿವಚಾರ್ಯರು ಕೆಲವುಕಾಲ ಪೀಠದ ಅಧಿಕಾರವನ್ನು ನಡೆಯಿಸುತ್ತಿರಲು ಇವರು ಕೂಡಾ ತಾ. ೨೩—೪—೧೯೪೭ ನೆಯ ದಿವಸ ಕೈಲಾಸವಾಸಿಗಳಾದರು. ಇವರ ತರುವಾಯ ಶ್ರೀ ಕೇದಾರ ಪೀಠದಲ್ಲಿ ಶ್ರೀ ವಿಶ್ವನಾಥಲಿಂಗರು ೩೨೩ ನೆಯ ರಾವಲರಾಗಿರುವರು. ಶ್ರೀ ಕೇದಾರ ಪೀಠವು ಜಾಗೃತ ಸ್ಥಾನವಾಗಿದೆ. ಇದಕ್ಕೆಲ್ಲ ಶ್ರೀ ಜಗದ್ಗುರು ಏಕೋರಾಮಾರಾಧ್ಯ ಶಿವಾಚಾರ್ಯರ ಕೃಪೆಯೇ ಮೂಲ ಕಾರಣವಾಗಿದೆ. ಈ ಮಹಾ ಗುರುಗಳವರ ಜಯಂತಿಯನ್ನು ವೈಶಾಖ ಶುದ್ಧ ಅಕ್ಷಯ ತೃತೀಯಾ ದಿವಸ ವೈಭವ ಪೂರ್ಣವಾಗಿ ಸಕಲರೂ ಆಚರಿಸಿ ಧನ್ಯರಾಗಬೇಕು.

## ಬಸವ ಜಯಂತಿ

ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರಿಂದ ಸ್ಥಾಪಿತವಾಗಿ, ಯುಗ ಯುಗಾಂತರಗಳಿಂದ ಬಂದ ವೀರಶೈವ ಧರ್ಮವನ್ನು ಅನೇಕ ಶಿವಶರ

ಣರು ಪ್ರಾಚೀನ ಕಾಲದಿಂದಲೂ ಪ್ರಸಾರ ಮಾಡುತ್ತಲೇ ಬಂದಿರುವರು. ಅಂಥ ವರಲ್ಲಿ ದೇವರ ದಾಸಿಮಾರ್ಯ (ಕ್ರಿ. ಶ. ೧೦೨೦) ಕೊಂಡಗುಳಿ ಕೇಶಿರಾಜ, (ಕ್ರಿ. ಶ. ೧೦೭೬) ಶ್ರೀಪತಿ ಪಂಡಿತ, (ಕ್ರಿ. ಶ. ೧೦೭೨) ಸೋಲಾಪುರದ ಸಿದ್ಧರಾಮೇಶ್ವರ, (ಕ್ರಿ. ಶ. ೧೦೬೮) ಇತ್ಯಾದ್ಯನೇಕ ಮಹಾನುಭಾವರು ಲೋಕವಿಖ್ಯಾತರಾಗಿರುವರು.



(ವೈಶಾಖ ಶು। ತದಿಗಿ)

ಅವರಂತೆಯೇ ಕ್ರಿ. ಶ. ೧೧೨೬ ರಲ್ಲಿ ಜನ್ಮವೆತ್ತಿದ ಕಲ್ಯಾಣದ ಶ್ರೀ ಬಸವಣ್ಣನಾದರೂ ವೀರಶೈವ ಮತಪ್ರಸಾರಕನಾಗಿರುವನು. ಅವನು ಜಗದಾಚಾರ್ಯರು ಬೋಧಿಸಿದ ಹಳೇ ತತ್ವಗಳನ್ನು ಒಳ್ಳೆ ವಚನಗಳನ್ನಾಗಿ ಮಾಡಿ, ಜನತೆಗೆ ಹೇಳಿ, ಕೀರ್ತಿಕಾಯನಾದನು.

'ಬಸವ' ಯಾರೆಂದು ಕೇಳಿದರೆ, ತಮ್ಮ ಮನೆಯಲ್ಲಿರುವ ಎತ್ತು ಎಂದು ಬಹಳ ಜನರು ಉತ್ತರಿಸುವರು; ಎತ್ತು ಏನೆಂದು ಕೇಳಿದರೆ ಶಿವನ ವಾಹನವೆಂದು ಹೇಳುವರು. ಈ ತಿಳುವಳಿಕೆಯಿಂದಲೇ ಎಷ್ಟೋ ಜನರು ವೈಶಾಖ ಶು।

ತದಿಗೆಯ ದಿವಸ ತಮ್ಮ ತಮ್ಮ ಮನೆಯಲ್ಲಿರುವ ಎತ್ತುಗಳನ್ನು ಶೃಂಗರಿಸಿ. ಸಡಗರದಿಂದ 'ಬಸವ ಜಯಂತಿ' ಎಂದು ಮೈತೊಳೆದು ಮೆರೆಸುವುದುಂಟು.

ಈ ಜಯಂತಿಗೆ ಕಾರಣನಾದ ಬಸವನು ಶಿವನ ವೃಷಭನಿಗಿಂತ, ರೈತನ ಎತ್ತಿಗಿಂತ ಬೇರೆಯುವನಾಗಿರುವನು. ಇದನ್ನು ಎಲ್ಲರೂ ಅರಿಯಲೆಂಬ ಆಶೆಯಿಂದ ಶ್ರೀ ಬಸವನ ಚರಿತ್ರಾಂಶವನ್ನು ಇಲ್ಲಿ ವಿವರಿಸಿದ್ದೇವೆ.

ಬಿಜಾಪುರ ನೈರುತ್ಯದಲ್ಲಿ ಸುಮಾರು ನಾಲ್ವತ್ತು ಮೈಲುಗಳ ಮೇಲೆ ಇರುವ ಬಾಗೇವಾಡಿಯು ಎಂಟುನೂರು ವರ್ಷಗಳ ಹಿಂದೆ ಪರಗಣಿ ವತನಿ ದೇಶಪಾಂಡೆಯವರ ಸ್ವಾಧೀನದಲ್ಲಿತ್ತು. ಅಲ್ಲಿ ವತನಿ ಲೆಕ್ಕ ಪತ್ರದ ವ್ಯವಸ್ಥೆಗಾಗಿ (ಕುಲಕರ್ಣಿಯೂ)ಗಿ ಮಾದಿರಾಯನೆಂಬ ಶೈವ ಬ್ರಾಹ್ಮಣನಿದ್ದನು. ಅವನು ಸದಾಚಾರ ಸಂಪನ್ನನೂ, ಸಾತ್ವಿಕನೂ, ಸಮಾಜ ಕಾರ್ಯನಿರತನೂ ಆಗಿದ್ದನು.

ಬಾಗೇವಾಡಿಗೆ ಐದು ಮೈಲುಗಳ ಅಂತರದಲ್ಲಿರುವ ಇಂಗಳೇಶ್ವರವೆಂಬ ಗ್ರಾಮದ * ಕುಲಕರ್ಣಿಯ ಮಗಳಾದ ಮಹದಾಂಬೆಯು ಆ ಮಾದಿರಾಯನಿಗೆ ತಕ್ಕ ಸತಿಯಾಗಿದ್ದಳು. ಅವಳ ತಂದೆ ತಾಯಿಗಳು ಸಂಗಮದ ಸಾರಂಗಪಾಣಿ ಮಠದ ಸಂಗಮೇಶ್ವರ ಪಟ್ಟದಸ್ವಾಮಿಗಳಲ್ಲಿ ಅರ್ಥಾತ್ ಜಾತವೇದ ಮುನಿಗಳಲ್ಲಿ ಭಕ್ತಿ ವಿಶ್ವಾಸವುಳ್ಳವರಾಗಿದ್ದರು. ಆ ಗುರುಗಳಾದರೋ ವಿದ್ವಾಂಸರೂ, ವಿಶಾಲ ಹೃದಯರೂ, ಜ್ಞಾನಸಂಪನ್ನರೂ, ತಪೋನಿಷ್ಠರೂ ಆಗಿದ್ದರು.

ಮಾದಿರಾಯ, ಮಹದಾಂಬೆಯರು ಶಿವಭಕ್ತಿ ಸಂಪನ್ನರಾಗಿಯೂ, ಸತ್ಕರ್ಮನಿರತರಾಗಿಯೂ, ತಮ್ಮ ಸಂಸಾರವನ್ನು ಸರಸವಾಗಿ ಸಾಗಿಸುತ್ತಿರಲು, ಹನ್ನೆರಡು ವರುಷಗಳು ಉರುಳಿದವು. ಅವರಿಗೆ ಸಂತಾನವಂದನ್ನುಳಿದು ಯಾವುದಕ್ಕೂ ಕೊರತೆಯಾಗಿರಲಿಲ್ಲ. "ಅಪುತ್ರಸ್ಯ ಗತಿರ್ನಾಸ್ತಿ" ಮಕ್ಕಳಿಲ್ಲದವನಿಗೆ ಮೋಕ್ಷವಿಲ್ಲ. ಎಂಬ ಶಾಸ್ತ್ರದ ಮಾತು ಸದಾ ಅವರ ಹೃದಯವನ್ನು ಕೊರೆಯುತ್ತಲಿತ್ತು. ಒಮ್ಮೆ ಆದಿತ್ಯವಾರ ಅಮಾವಾಸ್ಯಾ ಬಂದಾಗ ಅವರೀರ್ವರು ಸಂಗಮಕ್ಷೇತ್ರಕ್ಕೆ ಹೋಗಿ, ಗುರುಗಳ ದರ್ಶನ ಪಡೆದು, ತಾವು ಅಪುತ್ರರಾಗಿರುವುದನ್ನು ಅರಿಕೆ ಮಾಡಿಕೊಂಡರು.

* ಇದಕ್ಕೆ ಮೊದಲು 'ತಿಂಗಳೇಶ್ವರ' ಎಂದು ಅನ್ನುತ್ತಿದ್ದರು.

ಗುರುಗಳು ದಂಪತಿಗಳೀರ್ವರನ್ನು ಕರುಣಿಸಿ ಕರೆದು, ದರ್ಭಾಸನದಲ್ಲಿ ಕುಳ್ಳಿರಿಸಿ, ಅವರ ಅಭೀಷ್ಟವನ್ನು ಅರಿತವರಾಗಿ:- "ನಂದೀಶ್ವರನ ಆರಾಧನೆಯಿಂದ ಪುತ್ರಪ್ರಾಪ್ತಿಯಾಗುವುದೆಂದು" ಆಶೀರ್ವದಿಸಿದರು. ಗುರುಗಳ ಅಮೃತವಾಣಿಯಿಂದ ಆನಂದಭರಿತರಾದ ದಂಪತಿಗಳು, ತಮಗೆ ಪುತ್ರಪ್ರಾಪ್ತಿಯಾದರೆ, ಅಲ್ಲಿ ಶ್ರೀ ರೇವಣಸಿದ್ಧೇಶ್ವರ ಮಂದಿರವನ್ನು ಕಟ್ಟಿಸುವುದಾಗಿ ವಾಗ್ದಾನಮಾಡಿ, ಒಂದು ಸಹಸ್ರ ರೂಪಾಯಿಗಳನ್ನು ಅಕ್ಷತೆಯೊಂದಿಗೆ ಹರಕೆ ಗಂಟು ಕಟ್ಟಿ ಮುಡುಪಾಗಿಟ್ಟರು.

ಶ್ರೀ ಗುರುಗಳ ಅಪ್ಪಣೆಯಂತೆ ಮಹದಾಂಬೆಯು ಕೆಲವು ದಿವಸ ವೃಷಭೇಶ್ವರನ ಆರಾಧನೆಯಲ್ಲಿ ಆನಂದದಿಂದಿರಲು ಅವಳಿಗೆ ಗರ್ಭಚಿನ್ಹಗಳು ತೋರಹತ್ತಿದವು. ಮುಂದೆ ಆ ತಾಯಿಗೆ, ನವಮಾಸ ನವದಿವಸಗಳು ಪರಿಪೂರ್ಣವಾಗಲು, ವಸಂತ ಋತು ವೈಶಾಖ ಮಾಸ ಅಕ್ಷಯತೃತೀಯಾ ಸೂರ್ಯನುದಯಿಸುವ ಕಾಲಕ್ಕೆ ಸುಮಾರು ಕ್ರಿ. ಶ. ೧೧೩೦ರಲ್ಲಿ ಪುತ್ರರತ್ನವೊಂದು ಜನಿಸಿತು. ಆಗ ದಂಪತಿಗಳೀರ್ವರು:-

"ಆಹೂಯ ಭಕ್ತಾನ್ ಲಿಂಗಾಂಕಾನ್ ವೀರಶೈವಾನ್ ಮಹಾಗಣಾನ್।
ಜಂಗಮಾನೇವತತ್ಕಾಲೇ ದಂಪತೀ ತೌ ಪವಂದತುಃ ॥ ೩ ॥
ತದಾಸಿಂಹಾಸನಾನ್ಯೇಷಾಂದತ್ವಾ ಪ್ರಕ್ಷಾಲ್ಯ ತತ್ಪದಂ ।
ಭಕ್ತಹಸ್ತಾರ್ಪಿತಂ ತೇಷಾಂ ಭೂತಿದಾನಪುರಸ್ಸರಂ ॥ ೪ ॥
ಪಾದೋದಕಂ ಗೃಹೀತ್ವಾ ತೌ ಗಣಾನಾಮೇವದಂಪತೀ ।
ಕ್ಷಾಲಯತ್ವಾ ಶಿಶೋರ್ಗಾತ್ರಂ ದದೌಭಸ್ಮ ವಿಲೇಪತುಃ* ॥ ೫ ॥

(ಸಂಸ್ಕೃತ ಬಸವಪುರಾಣ)

ಇಂಗಳೇಶ್ವರದಲ್ಲಿ ಬಸವನ ಜನ್ಮವಾದ ನಂತರ ಮಾದಿರಾಯ ಮಹದಾಂಬೆಯರು, ಲಿಂಗಧಾರಿಗಳಾದ ಭಕ್ತರನ್ನೂ, ಮಾಹೇಶ್ವರರನ್ನೂ, ಜಂಗಮರನ್ನೂ ಕರೆದು ಅವರಿಗೆ ನಮಸ್ಕರಿಸಿ, ಸಿಂಹಾಸನದಲ್ಲಿ ಕುಳ್ಳಿರಿಸಿ ಶಿಶುವಿನ ಮೈ ತೊಳೆದು ಹಣೆಯಲ್ಲಿ ಭಸ್ಮಲೇಪನ ಮಾಡಿಸಿದರು. ಅನಂತರ

---

* ಈ ಆಧಾರದಿಂದ ವೀರಶೈವ ಧರ್ಮವು ಬಸವನಿಗಿಂತ ಪೂರ್ವದಲ್ಲಿದ್ದುದೆಂದು ವಿದಿತವಾಗುವುದು.

"ದಿವ್ಯಂ ಬಸವನಾಮಾಖ್ಯಂ ಚಕ್ರತುಸ್ತೌ ಗಣಾಜ್ಞಯಾ"॥

ಅಂದರೆ ಜಂಗಮರ ಅಪ್ಪಣೆಯ ಮೇರೆಗೆ 'ಬಸವ' ‡ ಎಂಬ ನಾಮಕರಣವನ್ನು ಮಂಗಲಕಾರ್ಯಗಳೊಡನೆ ವೈಭವಪೂರ್ಣವಾಗಿ ನೆರವೇರಿಸಿದರು.

ಹೀಗೆ ಮಾದಿರಾಯನು ವೀರಶೈವ ಸಂಸ್ಕೃತಿಯಲ್ಲಿಯೇ ಹಲವು ಕಾಲ ಹೊಂದಿಕೊಂಡು ಹೋಗುತ್ತಿರಲು, ಬಸವಣ್ಣನು ಎಂಟನೇ ವರುಷದಲ್ಲಿ ಕಾಲಿಟ್ಟನು. ಆಗ ಕ್ಷೋಭೆಗೊಂಡ ಅವನ ಬಾಂಧವರು ತಮ್ಮ ಸಮಾಜದ ಹಿರಿಯರನ್ನು ಕೂಡಿಸಿ, ಬಸವಣ್ಣವನ್ನು ಕುರಿತು:— "ನಮ್ಮ ಧರ್ಮ ಪದ್ಧತಿಗನುಸರಿಸಿ ಉಪನಯನ ಹೊಂದಬೇಕೆಂತಲೂ, ಇಲ್ಲವಾದರೆ ಮುಂದೆ ಹಲವು ವಿಧ ತೊಂದರೆಗಳನ್ನು ಅನುಭವಿಸಬೇಕಾಗುವುದೆಂತಲೂ ಬೆದರಿಸತೊಡಗಿದರು; ಈ ಮಾತಿಗೆ ಬಸವಣ್ಣನು ಒಪ್ಪದೇ ಸ್ವಸಮಾಜದ ಸಭೆಯಿಂದ ಎದ್ದು ಹೋದನು.

"ಬಸವೇಶೋ ಮಹಾತೇಜಾ ವಿನಿರ್ಗತ್ಯಸಭಾಂತರಾತ್।
ಫಣಿಹಾರಿ ಮಹಾಭಕ್ತ ಭವನಂವೃಷಭಧ್ವಜಂ ॥೫॥
ದೃಷ್ಟ್ವಾಪ್ರವಿವೇಶ ಭಕ್ತೇನ ತೇನಾರ್ಚಿತ ಪದದ್ವಯಃ।
ವೀರಮಾಹೇಶ್ವರಾನ್ನತ್ವಾ ತತ್ರಾಸ ಬಸವೇಶ್ವರಃ ॥೬॥

(ಸಂಸ್ಕೃತ ಬಸವ ಪುರಾಣ ೩—೬)

ಅಂದರೆ ಬಸವಣ್ಣನು ಸ್ವಸಮಾಜದ ಸಭೆಯಿಂದ ಎದ್ದು ಹೊರಟು ಹೋಗಿ, ವೃಷಭಧ್ವಜ ಚಿಹ್ನವುಳ್ಳ ವೀರಶೈವರ ಮನೆಯಲ್ಲಿ ಪ್ರವೇಶಿಸಿ, ಜಂಗಮರಿಗೆ ನಮಸ್ಕರಿಸಿ, ಅಲ್ಲಿಯೇ ವಾಸಮಾಡಿದನು. ಮುಂದೆ ತನ್ನ ಆಪ್ತೇಷ್ಟ ಬಂಧುಗಳೊಂದಿಗೆ ಸಂಗಮಕ್ಕೆ ತೆರಳಿ ಅಲ್ಲಿ ಸಂಗಮೇಶ್ವರ ಪಟ್ಟದ ಮಹಾ

‡ "ಬಸವನೆನೆ ಗೊಂಡಿಯೆನೆ ನಂದಿ" ಎಂಬ ಶಬ್ದಮಂಜರಿಯ ಉಕ್ತಿಯಂತೆ, ನಂದಿಗೆ ಕನ್ನಡದಲ್ಲಿ 'ಬಸವ' ಎಂದು ಅನ್ನುವದುಂಟು. ಮಾದಿರಾಯ, ಮಹದಾಂಬೆಯರು ಬಸವನ ಆರಾಧನೆಯಿಂದ ಪುತ್ರನನ್ನು ಪಡೆದರು. ಆದುದರಿಂದ ತಮ್ಮ ಮಗುವಿಗೆ ಬಸವನೆಂದು ನಾಮಕರಣ ಮಾಡಿದರು. ಕೆಲವರು- ಕಲ್ಯಾಣದ ಬಸವ ಹುಟ್ಟಿದ ಮೇಲೆಯೇ ನಂದಿಗೆ ಬಸವ ಎಂಬ ಹೆಸರು ಬಂದಿತೆಂತಲೂ, ಬಸವ ಶಬ್ದವು ಸಂಸ್ಕೃತವೆಂತಲೂ ಅನ್ನುವದುಂಟು. ಅವರ ಅಭಿಪ್ರಾಯಕ್ಕೆ ಆಧಾರವಿಲ್ಲ.

ಸ್ವಾಮಿ (ಜಾತವೇದ ಮುನಿ)ಗಳಿಂದ ಸುಮಾರು ಕ್ರಿ. ಶ. ೧೧೩೪ ರಲ್ಲಿ ಲಿಂಗ ಧಾರಣವನ್ನೂ, ಶಿವದೀಕ್ಷೆಯನ್ನೂ ಪಡೆದನು ಅಲ್ಲದೆ ಹಲವುಕಾಲ ಗುರುಗಳ ಶುಶ್ರೂಷೆಯಲ್ಲಿದ್ದು ವಿದ್ಯಾರ್ಜನೆಯನ್ನು ಮಾಡಿ ಕನ್ನಡ ಶಾಸ್ತ್ರದಲ್ಲಿ ಕೋವಿದ ನೆಂದು ಪ್ರಖ್ಯಾತಿಪಡೆದನು. ಆರು ಸ್ಥಲಗಳ ಅರ್ಥ ಅವನ್ನು ಅರಿತು, ಅಷ್ಟಾ ವರಣಗಳ ಮರ್ಮವನ್ನು ಮನನಮಾಡಿ, ಗುರುಕೃಪೆಗೆ ಪಾತ್ರನಾದನು. ಹೀಗೆ ಬಸವಣ್ಣನು ವಿದ್ಯಾವಿನಯ ಪರಿಪೂರ್ಣನಾಗಿರುವುದನ್ನು ಕಂಡು ಗುರುಗಳು: "ಎಲೈ ಬಸವ! ನೀನಿನ್ನು ಸಮಾಜ ಸೇವೆಯಲ್ಲಿ ನಿರತನಾಗೆ"ಂದು ಅವನನ್ನು ಗುರು ಕುಲದಿಂದ ನಿವೃತ್ತನನ್ನಾಗಿ ಮಾಡಿದರು.

ಬಸವಣ್ಣನ ಬಗ್ಗೆ ಮುಂಬೈ ಇಲಾಖೆಯ ೧೮೮೩ರ ಗ್ಯಾಝೇಟೀಯರ ದಲ್ಲಿ (Gazeteer of the Bombay Karnatak) ಹೇಳುವುದೇನೆಂದರೆ:

ಬಸವಣ್ಣನು ಅಕ್ಕ ನಾಗಮ್ಮನೊಡನೆ ಕಲ್ಯಾಣಪುರಕ್ಕೆ ಬಂದು ಸುಮಾರು ಕ್ರಿ. ಶ. ೧೧೪೬ ರಲ್ಲಿ ಕಲಚೂರ್ಯಕುಲದ ಬಿಜ್ಜಳ ರಾಜನಲ್ಲಿ ಬಲದೇವನ ಸಹಾಯದಿಂದ ಕರ್ಣಿಕನಾದನು. ಮುಂದೆ ಒಂದು ವರುಷ ಸಂದಿಸಲು ಬಸವಣ್ಣನು ಬಲದೇವ ಮಂತ್ರಿಯ ಮಗಳಾದ ಗಂಗಾಂಬಿಕೆ ಯೊಡನೆ ಸುಮಾರು ಕ್ರಿ. ಶ. ೧೧೪೭ ರಲ್ಲಿ ವಿವಾಹಿತನಾದನು. ಮುಂದೆ ಒಂದು ವರುಷ ಗತಿಸಲಾಗಿ ಸಿದ್ದಣ್ಣ ಮಂತ್ರಿಯ ಮಗಳಾದ ನೀಲಾಂಬಿಕೆ ಯೊಡನೆ ಎರಡನೇ ಲಗ್ನವಾದನು.

ಬಸವನ ಮಾವನಾದ ಬಲದೇವ ಮಂತ್ರಿಯು ತೀರಿದ ನಂತರ ಬಿಜ್ಜ ಳನು ಬಸವನನ್ನು ಮುಖ್ಯಮಂತ್ರಿಯನ್ನಾಗಿಯೂ, ಸೇನಾನಾಯಕನನ್ನಾ ಗಿಯೂ ನೇಮಿಸಿದನು. ಬಸವಣ್ಣನು ಅಧಿಕಾರ ಪಡೆದ ನಂತರ ಯಾವುದೇ ಒಂದು ಕಾರ್ಯಸಾಧನೆಗಾಗಿ ಹಳೇ ಉದ್ಯೋಗಸ್ಥರನ್ನೆಲ್ಲ ತೆಗೆದು ಹಾಕಿ ಅವರಿಗೆ ಬದಲಾಗಿ ತನಗೆ ಬೇಕಾದ ಜನರನ್ನು ನೇಮಿಸಿಕೊಂಡನು. ಅವನು ಮನಸಿಗೆ ಬಂದಂತೆ ದಾನಧರ್ಮವನ್ನು ಮಾಡಿ, ಬಹಳ ಜನರನ್ನು ಒಲಿಸಿ ಕೊಂಡನು. ಅವನ ಅಧಿಕಾರವು ನೆಲೆಗೊಂಡ ಬಳಿಕ ಕೆಲವು ಮತಗಳಿಗೆ ವಿರುದ್ಧವಾಗಿ ವೀರಶೈವ ಧರ್ಮವನ್ನು ಬೋಧಿಸಹತ್ತಿದನು. ಕಡೆಗೆ ಬಿಜ್ಜಳನು ಬಸವನ ವರ್ತನವನ್ನು ಕಂಡು ಸಿಟ್ಟಾದ್ದರಿಂದಲೂ, ಪರಧರ್ಮದವರು ಹು

ದುಂಬಿಸಿದ್ದರಿಂದಲೂ ಅವನನ್ನು ಹಿಡಿಯಬೇಕೆಂದು ಯತ್ನೈಸಿದನು, ಆದರೆ ಬಸವನು ಓಡಿಹೋಗಿ ದೊಡ್ಡ ಸೈನ್ಯವನ್ನು ಕೂಡಿಸಿ ಬಂಡಾಯವನ್ನು ಹೂಡಲು, ಬಿಜ್ಜಳನು ಬಸವನ ಬಂಡಾಯವನ್ನು ಮುರಿಯಲಿಕ್ಕೆ ಮುಂದ ರಿದು ಬಸವನಿಂದ ಅಪಜಯಪಟ್ಟನು. ತರುವಾಯ ಬಸವನು ಬಿಜ್ಜಳನಿಂದ ತನ್ನ ಮಂತ್ರಿ ಕೆಲಸವನ್ನು ಬಲಾತ್ಕಾರದಿಂದ ಪುನಃ ಸಂಪಾದಿಸಿದನು. ಮುಂದೆ ಬಸವನು ಬಿಜ್ಜಳನನ್ನು ಕೊಲ್ಲಿಸಬೇಕೆಂದು ನಿಶ್ಚೈಸಿ ಭೀಮಾನದಿಯ ದಂಡೆಯ ಮೇಲೆ ಬಿಜ್ಜಳನಿಗೆ ವಿಷಪ್ರಯೋಗ ಮಾಡಿದನು, ಬಿಜ್ಜಳ ಸತ್ತನಂತರ ಬಿಜ್ಜಳನ ಮಗನಾದ ರಾಯಮುರಾರಿಯು ತನ್ನ ತಂದೆಯನ್ನು ಕೊಂದುದಕ್ಕೆ ಬಸವನ ಸೇಡು ತಕ್ಕೊಳ್ಳುವದಕ್ಕಾಗಿ ಅವನ ಮೇಲೆ ಸಾಗಿ ಹೋಗಲು, ಬಸವನು ಎದೆಗುಂದಿ, ಉತ್ತರ ಕಾನಡಾ ಜಿಲ್ಲೆಯಲ್ಲಿ ಉಳವಿಗೆ ಹೋಗಿ ಅಲ್ಲಿ ಶಿವೈಕ್ಯ ನಾದನೆ"ಂದು ಹೇಳಲಾಗಿದೆಯಲ್ಲದೆ "ಬಸವಣ್ಣನ ಅಂತಿಮ" ಚರಿತ್ರೆಯು ಐತಿಹಾಸಿಕವಾಗಿ ಈ ರೀತಿಯಾಗಿದ್ದರೆ, ಪುರಾಣ ರೂಪದಲ್ಲಿ ಕೆಳಗೆ ಕಂಡಂತೆ ಇರುತ್ತದೆ"ಂದು ಆ ಗೆಝೆಟಿಯರದಲ್ಲಿ ಬರೆಯಲಾಗಿದೆ.

"ಬಸವಣ್ಣನು ಬ್ರಾಹ್ಮಣನಾದ ಮಧುವಯ್ಯನ ಮಗಳಿಗೂ, ಅಸ್ಪೃಶ್ಯ ನಾದ ಹರಳಯ್ಯನ ಮಗನಿಗೂ ಶರೀರ ಸಂಬಂಧ ಮಾಡಿಸಿದ್ದರಿಂದ ಬಿಜ್ಜಳನು ಅವರಿಬ್ಬರ ಕಣ್ಣುಗಳನ್ನು ಕೀಳಿಸಿದನು. ಬಸವನು ಅರಸನ ಕ್ರೂರತನಕ್ಕೆ ಅವನನ್ನು ಶಿಕ್ಷಿಸುವ ಕೆಲಸವನ್ನು ತನ್ನ ಸ್ನೇಹಿತರಾದ 'ಜಗದೇವ' 'ಮಲ್ಲಿ ಬೊಮ್ಮ' ಇವರಿಗೆ ಬಿಟ್ಟುಕೊಟ್ಟು, ಕಲ್ಯಾಣವನ್ನು ಶಪಿಸಿ, ಕಪ್ಪಡಿ ಸಂಗ ಮಕ್ಕೆ ಹೊರಟು ಹೋಗಿ ಕ್ರಿ. ಶ. ೧೧೬೮ರಲ್ಲಿ ದೇಹ ಬಿಟ್ಟನೆ"ಂದು ಹೇಳುವ ದುಂಟು. ಬಸವೇಶ್ವರನು ಮಡಿದ ನಂತರ ೧೧೯೫ರಲ್ಲಿ ಪಾಲ್ಕುರಿಕೆ ಸೋಮ ನಾಥನು ಬಸವ ಪುರಾಣವನ್ನು ರಚಿಸಿ, ಅವನ ಚರಿತ್ರೆಯನ್ನು ವಿಸ್ತಾರಗೊಳಿ ಸಿದನು. ಬರಬರುತ್ತ ಬಸವಣ್ಣನ ಮೂಲ ಚರಿತ್ರೆಯು ಕೆಲವರಿಂದ ಇನ್ನಿಷ್ಟು ರೂಪಾಂತರಗೊಳಿಸಲ್ಪಟ್ಟಿತು. 'ಬಸವ' ಎಂಬ ಮೂರಕ್ಷರಗಳನ್ನು ಪವಿತ್ರವಾದ ಪಂಚಾಕ್ಷರಿ ಮಂತ್ರದಲ್ಲಿ ಸೇರಿಸಿ 'ಬಸವ ಮಂತ್ರವಿದೆ' ಎಂದು ಹೇಳಲಾರಂಭಿಸಿದರು. ಈ ವಾದದಲ್ಲಿ ಹುರುಳಿಲ್ಲ. ಶಿವ ಪಂಚಾಕ್ಷರಿ ಮಂತ್ರವು ವೇದ, ಆಗಮ, ಉಪನಿಷದಾದಿಗಳಲ್ಲಿ ಗೀರ್ವಾಣ ಭಾಷೆಯಲ್ಲಿ ವಿಶದವಾಗಿ

ವರ್ಣಿಸಲ್ಪಟ್ಟಿದೆ. ಆ ಪಂಚಾಕ್ಷರಿ ಮಂತ್ರದಲ್ಲಿ 'ಬಸವ'ಎಂಬ ಕನ್ನಡ ನಾಮವ್ನ ಕೂಡಿಕೊಂಡಿರುವುದು ಸಮಂಜಸ ವೆನಿಸಲಾರದು. ಬಸವನು ೧೨ನೆಯ ಶತ ಮಾನದಲ್ಲಿ ಹುಟ್ಟಿದವನಾಗಿರುವನು; ವೀರಶೈವರು ಆ ಪೂರ್ವದಲ್ಲಿಯೇ ಶಿವ ಪಂಚಾಕ್ಷರಿ ಮಂತ್ರೋಪಾಸಕರಾಗಿದ್ದರೆಂಬುವುದು ನಿರ್ವಿವಾದವಾದುದು. ಬಸವನ ಚರಿತ್ರೆಯು ಬಹು ತೊಡಗಿನದಾಗಿದೆ:— ಅದು ಏನೇ ಇರಲಿ ಒಟ್ಟಾರೆ ಅವನ ಚರಿತ್ರೆಯ ನಿಜಾಂಶವೇನಂದರೆ:– ಬಸವಣ್ಣನು ತನ್ನ ಲನೆಯ ವರುಷದಲ್ಲಿ ಶ್ರೀ ಸಂಗಮೇಶ್ವರ ಪಟ್ಟದ ಮಹಾಸ್ವಾಮಿಗಳಿಂದ ವೀರಶೈವ ದೀಕ್ಷೆ ಸ್ವೀಕರಿಸಿದನೆಂದು ಹಿಂದೆ ಹೇಳಿದೆಯಷ್ಟೇ ! ಅವನು ಗುರುವು ಕರುಣ ಸಿದ ಇಷ್ಟಲಿಂಗದಲ್ಲಿ ಮನವನ್ನಿರಿಸಿ, ಕಾಯಕವೇ ಕೈಲಾಸವೆಂದು ಸಾ ತಾನು ಶಿವನ ದಾಸರ ದಾಸನೆಂದು ನುಡಿದು ನಡೆದನು.

"ಎನಗಿಂತಲೂ ಕಿರಿಯರಿಲ್ಲ .... .... .... "||

" ಲೋಕದ ಮಾನವರಿಗೆ ಶಿವದೀಕ್ಷೆಯ ಕೊಟ್ಟರೆ, ಭಕ್ತನೆಂತಹನೋ ಗುರುವಾಗಬಲ್ಲನೆ " ಎಂಬೀ ವಚನಗಳು ಅವನ ಗುರುಭಕ್ತಿಯನ್ನು ತೋಪ ಡಿಸುತ್ತವೆ. ಗುರುಭಕ್ತಿ, ದಾಸವೃತ್ತಿ ಇವುಗಳಿಂದ ಅವನ ಬಾಳು ಬೆಳ ಯಿತು. ಅವನು ತನ್ನ ಎಲ್ಲ ವಚನಗಳ ಕೊನೆಯಲ್ಲಿ "ಕೂಡಲ ಸಂಗಮದೇವ ಎಂದು ಗುರುನಾಮವನ್ನಿಟ್ಟು ಹಗಲಿರುಳು ಹಾಡಿಹರಿಸಿದನು. ಅವನ ನು ಯಲ್ಲಿ ಸದಾ ಶ್ರೀ ಗುರು ನಾಮಸ್ಮರಣೆಯಿತ್ತು; ನಡೆಯಲ್ಲಿ ಕೈಂಕರ್ಯಭಾ ವಿತ್ತು; ಇದರಿಂದ ಅವನು ಆದರ್ಶಪುರುಷನಾದನು.

ಒಂದಾನೊಂದು ದಿವಸ ಬಸವಣ್ಣನು ಒಂದು ದೇವಾಲಯದ ಮು ಹಾಯ್ದುಹೋಗುತ್ತಿರುವಾಗ್ಗೆ ಆ ಗುಡಿಯ ಶಿಖರಕ್ಕೆ ಇಟ್ಟ ಭಂಗಾರದ ಕಲ ವನ್ನು ನೋಡಿದನು. ಅದು ಬಹಳ ಎತ್ತರಭಾಗದಲ್ಲಿರುವ ಕಾರಣ ಹಲವಾ ಹಕ್ಕಿಪಕ್ಕಿಗಳು ಅದರ ಮೇಲೇರಿ ಕುಳಿತು ಮಲವಿಸರ್ಜನೆ ಮಾಡುತ್ತಿದ್ದ ಅದುದರಿಂದ ಅದು ಮಲೀನವಾದ ಕಬ್ಬಿಣದಂತೆ ಕಪ್ಪಾಗಿ ಹೋಗಿತ್ತು. ಹೀ ರುವುದನ್ನು ನೋಡಿ ಬಸವಣ್ಣ "ಈ ಕಲಶವು ದೇವರಿಗಿಂತಲೂ ತಾನು ಮೇ ರುವನೆಂದು ಸೊಕ್ಕಿನಿಂದ ಸೆಟೆದು ಕುಳಿತಿದೆ; ಆದರೆ ಮಲದಿಂದ ಮಲಿನವಾ ತನ್ನ ದೇಹದ ಅರಿವು ತನಗಿರುವುದಿಲ್ಲ" ಎಂದು ನುಡಿದನಲ್ಲದೆ, "ಮೇಲ

ಕುಳಿತು ಮಲಿನತೆ ಪಡೆವುದಕಿಂತ ಶಿವಶರಣರ ಅಡಿದಾವರೆಗಳಲ್ಲಿ ಪಾದರಕ್ಷೆಯಾಗಿದ್ದು ಮುಕ್ತಿಹೊಂದುವುದು ಮೇಲೆ"ಂದು ನುಡಿದನು.

ಹೀಗೆ ಬಸವಣ್ಣನು ಜಂಗಮರಿಗಾಗಿ ತನು, ಮನ, ಧನಗಳನ್ನು ಸೂರೆ ಮಾಡಿದ್ದನೆಂಬುವುದನ್ನು ಬಸವ ಪುರಾಣದಲ್ಲಿ ನೋಡಬಹುದು.

"ಕದಾಚಿತ್‌ಸ ಸಭಾಮಧ್ಯೇ ಸಮಾಸೀನಃ ಶುಚಿಸ್ಮಿತಃ ।
ಭಕ್ತಪ್ರಿಯತರಂ ವಾಕ್ಯಮುವಾಚ ಬಸವೇಶ್ವರಃ ॥೨೦॥
ಯದ್ಯದಿಷ್ಟಂಹಿ ಭಕ್ತಾನಾಂ ಪ್ರಾರ್ಥಿತಂ ಶೈವಸತ್ತಮೈಃ ।
ದಾಸ್ಯಾಮಹಂ ತತ್ತದರ್ಥಂ ಲೋಭಮೋಹ ವಿವರ್ಜಿತಃ ॥೨೧॥
ನದಾಸ್ಯೇ ಯದಿಲೋಭೇನ ಭಕ್ತೈಃ ಸಂಪ್ರಾರ್ಥಿತಂ ಧನಂ ।
ಸಂಗಮೇಶ ಪದದ್ರೋಹಪಾಪೋಽಹಂ ಸ್ಯಾಂ ನಸಂಶಯಃ ॥೨೨॥

( ಸಂ। ಬಸವ ಪುರಾಣ )

ಒಂದಾನೊಂದು ದಿವಸ ಬಸವಣ್ಣನು ಸಭೆಯಲ್ಲಿ ಹಸನ್ಮುಖಿಯಾಗಿ ಕುಳಿತಾಗ :— "ಶಿವಭಕ್ತರು ನನ್ನಲ್ಲಿಗೆ ಬಂದು ಯಾವ ಯಾವ ವಸ್ತುವನ್ನು ಇಚ್ಛಿಸುರೋ ೬ ಪನ್ನು ಅವರಿಗೆ ಲೋಭ ಮೋಹ ವಿದೂರನಾಗಿ ದಾನ ಮಾಡುವೆನು; ಒಂದು ವೇಳೆ ಶಿವಭಕ್ತರು ಕೇಳಿದುದನ್ನು ಲೋಭವಶಾತ್ ನಾನು ಕೊಡದೇ ಇದ್ದರೆ ಸಂಗಮೇಶ್ವರನ ಪಾದದ್ರೋಹ ಮಾಡಿದ ಪಾಪವುಳ್ಳವನಾಗುವೆನು " ಎಂದು ನುಡಿದನು.

ಇತ್ಯಾದ್ಯನೇಕ ಉದಾಹರಣೆಗಳಿಂದ ಬಸವಣ್ಣ ತನ್ನ ಜೀವನದುದ್ದಕ್ಕೂ ಜಂಗಮಭಕ್ತನಾಗಿದ್ದನೆಂದು ಸ್ಫುಟವಾಗಿ ತೋರುವದು. ಅಷ್ಟೇ ಅಲ್ಲ, ಅವನು ತೋರಿಸಿಕೊಟ್ಟ ಹೆದ್ದಾರಿಯಿಂದಲೇ ಅವನ ವಂಶಸ್ಥರಾದರೂ ನಡೆದು ಹೋದರೆಂಬುವ ವಿಷಯವು, ಶಿವಾನುಭವ ತ್ರೈಮಾಸಿಕ ೯ ನೆಯ ಸಂಚಿಕೆಯಲ್ಲಿ ಪ್ರಕಟವಾದ ಶಿಲಾಲೇಖವೊಂದರಿಂದ ವ್ಯಕ್ತವಾಗುವುದು.

ಬಸವಣ್ಣನಿಗೆ ಬಾಲಸಂಗಯ್ಯನೆಂಬ ಮಗನಿದ್ದು, ಅವನು ಬಾಲ್ಯಾವಸ್ಥೆಯಲ್ಲಿಯೇ ಮೃತನಾದುದರಿಂದ ಬಸವವಂಶವಲ್ಲರಿಯು ಮುಂದೆ ಪಸರಿಸಲಿಲ್ಲವೆಂದು ಬಹು ಜನರು ಅರಿತಿರುವರು. ಸುಮಾರು ಕ್ರಿ. ಶ. ೧೨೪೨, ರಲ್ಲಿ ದೇವ

ಗಿರಿಯಲ್ಲಿ ಯಾದವವಂಶದ ಸಿಂಹಣನು ರಾಜ್ಯವಾಳಿದನು. ಅವನಿಗೆ ಕನ್ನರ ದೇವನೆಂಬ ಮಗನಿದ್ದನು. ಆ ಕನ್ನರ ದೇವನಿಗೆ ಬೀಚುಗಿ, ಮಲ್ಲ, ಎಂಬ ಹೆಸರಿನ ಇಬ್ಬರು ಪುತ್ರರಿದ್ದರು. ಅವರಲ್ಲಿ ಹಿರಿಯವನಾದ ಮಲ್ಲನಿಗೆ ಶೂರನೂ, ಉದಾರಿಯೂ, ಶಿವಭಕ್ತಿ ಸಂಪನ್ನನೂ ಆದ ಚಾವುಂಡನೆಂಬ ಮಗನಿದ್ದನು. ಆವನು ಸಕಲ ಶಾಸ್ತ್ರಗಳಲ್ಲಿ ಕೋವಿದನಾಗಿದ್ದನಲ್ಲದೇ ವೈರಿಗಳ ಕಾಳಗದಲ್ಲಿ ಕಾಲರುದ್ರನೆಂದು ಹೆಸರು ಪಡೆದವನಾಗಿ ಸುಖದಿಂದ ರಾಜ್ಯವಾಳಿದನು. ಆ ಚಾವುಂಡನಿಗೆ ವಿದ್ಯಾವಿನಯಯುಕ್ತನೂ, ಸಕಲ ಶಾಸ್ತ್ರಜ್ಞನೂ ಆದ 'ನಾಗರಾಜ'ನೆಂಬ ಪ್ರಧಾನಿಯಿದ್ದನು. ಅವನು ಶಾ. ಶಕೆ ೧೧೮೧ (ಕ್ರಿ. ಶ. ೧೨೬೦) ರಲ್ಲಿ ಸಿದ್ಧಾರ್ಥಿನಾಮ ಸಂವತ್ಸರದ ಚೈತ್ರವದ್ಯ ಆಮಾವಾಸ್ಯೆ ಸೋಮವಾರ ಸೂರ್ಯಗ್ರಹಣದಲ್ಲಿ ಪುಲಗೆರೆಯ (ಲಕ್ಷ್ಮೇಶ್ವರ) ಸೋಮನಾಥ ದೇವರ ಸನ್ನಿಧಿಯಲ್ಲಿ ಹಾಲಬಸವೀದೇವ ಎಂಬವನನ್ನು ಕರೆಯಿಸಿಕೊಂಡು ಕವಿಳಾಸಪುರವನ್ನು ದಾನವಾಗಿ ಕೊಟ್ಟನು. ಆ ಬಗೆಗೆ ಇರುವ ಶಿಲಾಲೇಖವು, ಅರ್ಜುನವಾಡದ ಹಾಲಶಂಕರ ಲಿಂಗನ ಗುಡಿಯ ಮುಂಗೋಡೆಗೆ ಮೂಡಲ ಮುಖವಾಗಿ ನಿಲ್ಲಿಸಲ್ಪಟ್ಟಿರುವುದು. ಇನ್ನು ಆ ಹಾಲಬಸವೀದೇವನು ಯಾರೆಂಬುದನ್ನು ವಿವೇಚಿಸುವಾ.

ಕವಿಳಾಸಪುರದ ಆ ಶಿಲಾಲೇಖದ ವರ್ಣನೆಯಲ್ಲಿ "ಬಾಲ ಸಂಗಯ್ಯನ ಅಗ್ರ ಜ" ಎಂಬುದಾಗಿ ಇದ್ದು, ವಿಶೇಷ್ಯ ಪದವಿರುವ (ಅಂದರೆ ನಾಮ ಪದವಿರುವ ಸ್ಥಾನದ) ಕಲ್ಲು ಒಡೆದು ಹೋಗಿದೆಯಾದ್ದರಿಂದ ಗುರ್ತಿಸಲು ಬಾರದಾಗಿದೆ. ಆದರೂ ಬಾಲ ಸಂಗಯ್ಯನಿಗೆ ಅಗ್ರಜ (ಅಣ್ಣ)ನಿದ್ದನೆಂಬ ಊಹೆಗೆ ಆಸ್ಪದವಿದೆ. ಆ ಬಾಲ ಸಂಗಯ್ಯನ ಅಣ್ಣನಿಗೆ ದೇವರಾಜನೆಂಬ ಮಗನಿದ್ದನೆಂತಲೂ ಅವನಿಗೆ ಕಲಿದೇವರಸು ಅಥವಾ ಕಲಿದೇವಮುನಿ ಎಂಬುವ ಮಗನಿದ್ದನೆಂತಲೂ, ಅವನಿಗೆ 'ಹಾಲ ಬಸವೀದೇವನೆ'ಂಬ ಸದಾಚಾರಿಯಾದ ಮಗನಿದ್ದನೆಂತಲೂ ಗೊತ್ತಾಗುತ್ತದೆ. ಆ ಹಾಲ ಬಸವೀದೇವನಿಗೆ ನಾಗರಾಜನು ಕವಿಳಾಸಪುರವನ್ನು ದಾನನಾಗಿ ಕೊಟ್ಟಿರುವನು. ಆ ಶಾಸನದಲ್ಲಿ ಬಸವಣ್ಣನ ಮಕ್ಕಳು, ಮೊಮ್ಮಕ್ಕಳು, ಮರಿ ಮಕ್ಕಳು ಮೊದಲಾದವರನ್ನು ಅನೇಕ ವಿಶೇಷಣ ಪದಗಳಿಂದ ಮನೋಹರವಾಗಿ ವರ್ಣಿಸಲಾಗಿದೆ. ಹಾಗೂ ಬಸವಣ್ಣನನ್ನು ಈ ಕೆಳಗೆ ಕಂಡಂತೆ ವರ್ಣಿಸಿದ್ದಾಗಿದೆ.

"ಶ್ರೀ ಮತ್ತರದವಾಡಿ ಮಧ್ಯಗ್ರಾಮ ಬಾಗಿವಾಡಿ ಪುರವರಾಧೀಶ್ವರ
ಮಾದಿರಾಜತನೂಜಂ ಬಸವರಾಜನ ಮಹಿಮೆ ಎಂತೆಂದೊಡೆ ||
ಮಂಗಳ ಕೀರ್ತಿ ಪುರಾತನ ಜಂಗಮ ಲಿಂಗೈಕ್ಯ ಭಕ್ತಿನಿರ್ಭರ
ಲೀಲಾ ಸಂಗಂ ಸಂಗನಬಸವಂ ಸಂಗತಿಯಂ ಮಾಳ್ಕೆ ಭಕ್ತಿಯೊಳು ||

ತದ್ದೇವಾಡಿಯ ಮಧ್ಯ ಗ್ರಾಮದ ಬಾಗೇವಾಡಿಗೆ ಒಡೆಯನಾದ ಮಾದಿರಾಜನ ಮಗನಾದ ಬಸವರಾಜನ ಮಹಿಮೆಯು ಎಂತೆಂದರೆ:— ಮಂಗಲವಾದ ಕೀರ್ತಿಯುಳ್ಳವನೂ, ಪುರಾತನ ಜಂಗಮರಲ್ಲಿ ಹಾಗೂ ಲಿಂಗದಲ್ಲಿ ಅಚಲವಾದ ಭಕ್ತಿಸಂಪನ್ನನೂ ಆದ ಸಂಗನ ಬಸವನು (ಬಸವಣ್ಣನು ಸಂಗಮೇಶ್ವರ ಪಟ್ಟದ ಸ್ವಾಮಿಗಳ ಶಿಷ್ಯನಾದುದರಿಂದ ಸಂಗನ ಬಸವನೆಂದು ಕೆಲವು ಕವಿಗಳು ಅನ್ನುವುದುಂಟು) ನಮಗೆ ಸದಾ ಭಕ್ತಿಯನ್ನುಂಟುಮಾಡಲಿ ಈ ಶಾಸನದಲ್ಲಿ ಬಸವಣ್ಣನು ಗುರು, ಲಿಂಗ, ಜಂಗಮರಲ್ಲಿ ಏಕೈಕ ಭಕ್ತಿಯುಳ್ಳವನಾಗಿರುವನೆಂದು ಸ್ವಭಾವೋಕ್ತಿಯಿಂದ ವರ್ಣಿಸಲಾಗಿದೆ. ಮತ್ತು

" ದೇವರಾಜನ ಮುನಿಪನ ತನಯಂ ಜಂಗಮ ಪರುಸಂ "

ಎಂಬುದಾಗಿ ಬಸವಣ್ಣನ ಮೊಮ್ಮಗನ ಮಗನಾದ ಕಲದೇವರಸನು "ಜಂಗಮ ಪುರುಷಂ" ಎಂದರೆ ಜಂಗಮರಿಗೆ ಪರುಷಮಣಿಯಾಗಿದ್ದನೆಂದು ಅರ್ಥಾತ್ ಜಂಗಮರಿಗೆ ಬೇಡಿದುದನ್ನು ಕೊಡುವವನಾಗಿದ್ದನೆಂದು ಹೇಳಲಾಗಿದೆ. ಈ ಶಿಲಾಲೇಖದ ಆಧಾರದಿಂದ ಬಸವಣ್ಣನ ವಂಶಜರು ಕೂಡ ಗುರುಲಿಂಗ ಜಂಗಮರಲ್ಲಿ ಭಕ್ತಿಯುಳ್ಳವರಾಗಿದ್ದರೆಂಬುವದು ತಿಳಿದುಬರುತ್ತದೆ. ಆ ಪ್ರಕಾರವಾದ ಅವರ ವೃತ್ತಿಗೆ ಬಸವಣ್ಣನೇ ಕಾರಣನಾದನು. ಅವನು ವೀರಶೈವ ಮತತತ್ವಗಳನ್ನು ಗುರುಮುಖದಿಂದ ಅರಿತು ಆ ತತ್ವಗಳನ್ನು ಕನ್ನಡದಲ್ಲಿ ವಚನ ರೂಪವಾಗಿ ಸುಲಭಶೈಲಿಯಲ್ಲಿ ರಚಿಸಿ ಕನ್ನಡಿಗರಿಗೆ ಬೋಧೆ ಮಾಡಿದ್ದರಿಂದ ಅವನ ವಿಷಯದಲ್ಲಿ ಅನೇಕ ಜನರ ಗೌರವಾದರಗಳು ಹೆಚ್ಚಿದವು. ಈ ಮೂಲಕವಾಗಿ ಕ್ರಿ. ಶ. ೧೯೩೦ ರ ಸುಮಾರಿನಲ್ಲಿ ಅವನ ಜನ್ಮದಿನವಾದ ವೈಶಾಖ ಶುದ್ಧ ತದಿಗಿಯ ದಿವಸ ಜಯಂತಿಯ ಆಚರಣೆಯು ಅಲ್ಲಲ್ಲಿ ಪ್ರಾರಂಭವಾಯಿತು.

# ಶ್ರೀ ಜಗದ್ಗುರು ದಾರುಕಾಚಾರ್ಯರ ಜಯಂತಿ

( ವೈಶಾಖ ಶುದ್ಧ ೫ )



ಶ್ರೀ ಜಗದ್ಗುರು ದಾರುಕಾಚಾರ್ಯರು ವಟಕ್ಷೇತ್ರದಲ್ಲಿ ಶೋಭಿಸುವ ಶ್ರೀ ಸಿದ್ಧೇಶ್ವರಲಿಂಗ ಗರ್ಭದಿಂದ ಆವಿರ್ಭೂತರಾಗಿ ಕ್ಷಿಪ್ರಾ ನದಿ ತೀರದಲ್ಲಿರುವ ಕಾಳಿಕಾ ಉಜ್ಜಯಿನಿಯಲ್ಲಿ ವೀರಶೈವ ಧರ್ಮ ಪಾಲನೆಗೋಸುಗ ಸದ್ಧರ್ಮ ಸಿಂಹಾಸನವನ್ನು ಪ್ರತಿಷ್ಠಿಸಿದರು. ೧೫ ಜನ ಮಹಾ ಗುರುಗಳವರು ಈ ಸಿಂಹಾಸನದಲ್ಲಿ ಅಭಿಷಿಕ್ತರಾಗಿ ಆಳಿ ಧರ್ಮ ಪ್ರಸಾರ ಮಾಡಿದರು. ೧೬ ನೆಯ ಪೀಠಾಧಿಪತಿಗಳಾದವರು ಶ್ರೀ ಜಗದ್ಗುರು ಮರುಳ ಸಿದ್ಧೇಶ್ವರರು. ಇವರು ಪರಧರ್ಮೀಯರ ಕಾಟವನ್ನು ಸಹಿಸಲಾರದೇ ಬಳ್ಳಾರಿ ಜಿಲ್ಲೆಯಲ್ಲಿರುವ ಕೊಟ್ಟೂರಿನ ಹತ್ತರ ಪ್ರತ್ಯೇಕ ಉಜ್ಜಯಿನಿಯನ್ನು ನಿರ್ಮಿಸಿ ತಮ್ಮ ಸದ್ಧರ್ಮ ಸಿಂಹಾಸನವನ್ನು ಕಟ್ಟಿದರು. ಕ್ರಿ. ಶ. ೧೦೪೦ ರಿಂದ ತನ್ನ ರಾಜ್ಯಭಾರವನ್ನು ಪ್ರಾರಂಭಿಸಿದ ಕಲ್ಯಾಣದ ಸೋಮೇಶ್ವರ(ಭುವನೈಕಮಲ್ಲ)ನು ಈ ಗುರು ಕಾರ್ಯವು ಯಶಸ್ವಿಯಾಗುವಂತೆ ಅತುಲವಾದ ಸೇವೆಯನ್ನು ಸಲ್ಲಿಸಿದನು.

ಒಟ್ಟಿಗೆ ಈ ಉಜ್ಜಯಿನಿ ಕ್ಷೇತ್ರವು ೧೬ ಮೈಲು ವಿಸ್ತಾರವಾದ ಭೂಮಿಯನ್ನು ವ್ಯಾಪಿಸಿರುವದು. ಇದರ ಮಧ್ಯದಲ್ಲಿ ಶ್ರೀ ಮರುಳಸಿದ್ಧೇಶ್ವರ ನಾಮಕ ಭವ್ಯ ಕಲಾಪೂರ್ಣವಾದ ದೇವಾಲಯವು ವಿರಾಜಮಾನವಾಗಿದೆ. ಈ ದೇವಾಲಯದ ರಂಗಮಂಟಪದ ಮೇಲ್ಭಾಗದಲ್ಲಿ ಕೊರೆದ ದಿವ್ಯಕಮಲವು ಅತ್ಯಂತ ದರ್ಶನೀಯವಾಗಿದೆ. ಈ ಕ್ಷೇತ್ರದ ಒಂದೊಂದು ಪ್ರದೇಶವು ಬೇರೆ ಬೇರೆ ಹೆಸರಿನಿಂದ ಒಂಭತ್ತು ಭಾಗವಾಗಿ ಪ್ರಸಿದ್ಧಿಗೊಂಡಿದೆ.

ಚತುಷ್ಪಾದಗಳನ್ನೂರಿ ನಿಂತಿರುವ ಸದ್ಧರ್ಮ ರೂಪಿಯಾದ ನಂದೀಶ್ವರನು ಮರುಸಿದ್ಧೇಶ್ವರ ದೇವಾಲಯದ ಶಿಖರದ ಗುಮ್ಮಟದಲ್ಲಿ ಪ್ರತಿಮಾ ರೂಪದಿಂದ ಸ್ಥಾಪಿಸಲ್ಪಟ್ಟಿರುವನು. ಈ ನಂದಿರೂಪ ಧರ್ಮವು ಕ್ರಿಯಾಪಾದ, ಜ್ಞಾನಪಾದ,–ಯೋಗಪಾದ,–ಚರ್ಯಾಪಾದಗಳೆಂದು ನಾಲ್ಕು ತೆರನಾಗಿ ಶಿವಾಗಮಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಧರ್ಮವು ಚತುಷ್ಪಾದ ನಂದೀಶ್ವರನ ಆಕಾರವನ್ನು ತಳೆದು ಪರಶಿವನ ವಾಹನವಾಗಿದೆಯೆಂದೂ ಕೃತ ಯುಗದಲ್ಲಿ ಧರ್ಮವು ನಾಲ್ಕುಪಾದಗಳನ್ನೂರಿ ನಿಂತಿರುವದೆಂದೂ ಆಗಮಗಳಲ್ಲಿ ಹೇಳಲಾಗಿದೆ. ಶ್ರೀ ಜಗದ್ಗುರು ದಾರುಕರಿಗೆ ಶಿವಾಗಮಗಳಲ್ಲಿ ನಂದಿಗೋತ್ರ ನಾಥನೆಂದು ಸ್ತವನವಿದೆ. ಈ ಪೀಠದ ಮಹಾಗುರು ಪರಂಪರೆಯಲ್ಲಿ ಶ್ರೀ ಜಗದ್ಗುರು ಗುರುಸಿದ್ಧಸ್ವಾಮಿಗಳೆಂಬವರು ಮಹಾತ್ಮರಾಗಿ ದೇಶಸಂಚಾರ ಮಾಡಿರುವರು. ಇವರ ಸಮಾಧಿ ಮಂದಿರವು ಕೊಟ್ಟೂರಿನಲ್ಲಿ ಪೀಠದ ಶಾಖಾ ಮಠದಲ್ಲಿದೆ.

೧೯೩೬ನೆಯ ಜನವರಿ ೧೨ನೆಯ ತಾರೀಖಿನ ದಿವಸ ಲಿಂಗೈಕ್ಯರಾದ ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಗಳವರು ಮಹಾ ಶಿವ ಯೋಗಿಗಳೂ, ಸಮಾಜಕಲ್ಯಾಣಪರರೂ ಆಗಿದ್ದರು. ಈ ಮಹಾತ್ಮರು ೧೮೯೦ ನೆಯ ಇಸ್ವಿಯಲ್ಲಿ ಚಿತ್ರದುರ್ಗ ಡಿಸ್ಟ್ರಿಕ್ಟಿನ ಬಂಗಾರನಾಯಕನಹಳ್ಳಿ ಎಂಬ ಗ್ರಾಮದಲ್ಲಿ ಗುರುಸ್ಥಲ ಮಠಾಧಿಕಾರಿಗಳ ವಂಶದಲ್ಲಿ ಜನ್ಮವೆತ್ತಿದರು. ಬಾಲ್ಯದಲ್ಲಿಯೇ ಇವರ ಮುಖದ ಮೇಲೆ ಅದ್ಭುತವಾದ ಶಿವಕಳೆಯು ಪ್ರಜ್ವಲಿಸುತ್ತಿತ್ತು. ಇವರು ೧೩ ವರುಷ ವಯಸ್ಸಿನವರಿದ್ದಾಗ ಅಕಸ್ಮಾತ್ ಶ್ರೀ ಜಗದ್ಗುರು ಮರುಳಸಿದ್ಧೇಶ್ವರ ಮಹಾಸ್ವಾಮಿಗಳ ದೃಷ್ಟಿಗೆ ಬಿದ್ದರು. ಆಗ್ಗೆ

ಆ ಪೀಠಾಧಿಪತಿಗಳು ಈ ಗುರುವಂಶೀಯ ಬಾಲನ ಮುಖದಲ್ಲೊಪ್ಪುತ್ತಿದ್ದ ದಿವ್ಯ ತೇಜಸ್ಸನ್ನು ಕಂಡು ವಿಸ್ಮಿತರಾಗಿ ಈತನಿಂದ ನಮ್ಮ ಪೀಠವು ವಿಖ್ಯಾತ ವಾಗುವದೆಂದು ಯೋಚಿಸಿ ಈ ಬಾಲಕನ ತಂದೆಯನ್ನು ಕರೆಯಿಸಿ ಅವರಿಗೆ ನಿಮ್ಮ ಮಗನನ್ನು ನಮ್ಮ ಪೀಠಕ್ಕೆ ಒಪ್ಪಿಸಬೇಕೆಂದು ನಿರೂಪಿಸಿದರು. ಅವರು ತಥಾಸ್ತು ಎಂದು ಒಪ್ಪಿಕೊಂಡು ತಮ್ಮ ಮುದ್ದು ಮಗನನ್ನು ಸನ್ನಿಧಿಯಲ್ಲಿ ಒಪ್ಪಿಸಿದರು. ಆ ಮೇಲೆ ೧೯೦೩ ನೆಯ ಇಸ್ವಿಯಲ್ಲಿ ಶ್ರೀ ಮರುಳಸಿದ್ಧ ಜಗದ್ಗುರುಗಳವರು ಸದ್ಧರ್ಮ ಪೀಠಕ್ಕೆ ಅಧಿಕಾರಿಯನ್ನಾಗಿ ಮಾಡಿದರು. ಜಗದ್ಗುರು ಪೀಠವನ್ನು ಅಲಂಕರಿಸಿದ ಮೇಲೆ ಪಂಡಿತರನ್ನು ಇಟ್ಟುಕೊಂಡು ಈ ಮಹಾತ್ಮರು ಸಂಸ್ಕೃತ ಶಿಕ್ಷಣವನ್ನು ಆರಂಭಿಸಿ ಜನ್ಮಾಂತರ ಸಂಸ್ಕಾರ ವಿಶೇಷದಿಂದ ನಾಲ್ಕಾರು ವರುಷಗಳಲ್ಲಿಯೇ ವಿಶೇಷ ಪಾಂಡಿತ್ಯವನ್ನು ಸಂಪಾದಿಸಿಕೊಂಡರು. ಆ ಮೇಲೆ ಸದ್ಧರ್ಮಪೀಠದ ಪದ್ಧತಿಯಂತೆ ಸರ್ವ ವೈಭವದೊಡನೆ ದೇಶಮಧ್ಯದಲ್ಲಿ ಶಿಷ್ಯೋದ್ಧಾರಕ್ಕಾಗಿ ಸಂಚರಿಸಹತ್ತಿದರು. ಸ್ವಲ್ಪ ದಿವಸಗಳಲ್ಲಿಯೇ ಸದ್ಧರ್ಮ ಸಿಂಹಾಸನದ ಕೀರ್ತಿಯು ಸರ್ವತ್ರ ಪಸರಿಸುವಂತೆ ಮಾಡಿದರು. ಜಗದ್ಗುರು ಪೀಠವನ್ನಲಂಕರಿಸಿದ್ದರೂ ಆ ಸಂಪತ್ತನ್ನು ಹುಲ್ಲಿಗಿಂತಲೂ ಕಡೆಯಾಗಿ ಬಗೆದಿದ್ದರು. ಇವರಿಗೆ ಜನಶೂನ್ಯ ವಾದ ಅರಣ್ಯ ಗಿರಿಗುಹೆಗಳಲ್ಲಿರುವದು ಅತ್ಯಂತ ಪ್ರಿಯಕರವಾಗಿದ್ದಿತು. ಅನುಷ್ಠಾನದಲ್ಲಿ ಕುಳಿತರೆ ಒಂದೊಂದು ಸಲ ೩-೪ ದಿವಸಗಳಾದರೂ ಹೊರಗೆ ಬರುತ್ತಿರಲಿಲ್ಲ. ಈ ಮಹನೀಯರಲ್ಲಿ ದಯಾಭಾವವಂತೂ ಮನೆಮಾಡಿ ಕೊಂಡಿತ್ತು. ದುಃಖಿಗಳಾದ ಜನರಿಗೆ ದುಃಖ ಪರಿಹಾರಕ್ಕೋಸ್ಕರ ಭಸ್ಮ ವನ್ನು ಆಶೀರ್ವದಿಸುತ್ತಿದ್ದರು. ಆ ಭಸ್ಮದ ಪ್ರಭಾವದಿಂದಲೇ ದುಃಖಿತರ ಸಂಕಟಗಳು ಪರಿಹಾರವಾಗುತ್ತಿದ್ದವು. ಜನ್ಮಸಿದ್ಧವಾಗಿ ಪರಸ್ಪರ ವಿರೋಧ ಭಾವವುಳ್ಳ ಸರ್ಪ ಮುಂಗಲಿ ಮೊದಲಾದ ಪ್ರಾಣಿಗಳೂ ಸಹ ಈ ಮಹಾತ್ಮರ ದರ್ಶನಮಾತ್ರದಿಂದಲೇ ತಮ್ಮ ಪರಸ್ಪರ ಕಲಹವನ್ನು ನಿಲ್ಲಿಸಿ ಮೈತ್ರಿಯಿಂದ ವರ್ತಿಸಿದವು. ಇದು ಮಹಾರಾಷ್ಟ್ರ ದೇಶಾಂತರ್ಗವಾದ ಬಾರ್ಶಿ ನಗರದಲ್ಲಿ ನಡೆದ ಪ್ರತ್ಯಕ್ಷ ನಿದರ್ಶನದಿಂದ ಜಗತ್ತಿಗೆ ತಿಳಿದುದೇ ಆಗಿದೆ. ಅನೇಕ ಕವಿಗಳು ಈ ಮಹನೀಯರ ಲೀಲೆಗಳನ್ನು ಪುರಾಣ ರೂಪವಾಗಿ ರಚಿಸಿದ್ದಾರೆ. ಬಳ್ಳಾರಿ ಯಲ್ಲಿ ವೀರಶೈವ ವಿದ್ಯಾವರ್ಧಕ ಸಂಘವನ್ನೂ ಸ್ಥಾಪಿಸಿದರು. ಆ ಸಂಘವು ಈಗ

ವೀರಶೈವ ಕಾಲೇಜನ್ನೂ ಮತ್ತು ಹೈಸ್ಕೂಲುಗಳನ್ನೂ ನಡೆಸುತ್ತಲಿದೆ. ರಂಭಾಪುರಿ ಹಿಮವತ್ಕೇದಾರ ಪೀಠಗಳು ಇವರ ಶುಭಾಶೀರ್ವಾದಗಳಿಂದಲೇ ವಿಶೇಷ ಪ್ರಕಾಶಕ್ಕೆ ಬಂದವು. ಸದ್ಯಃ ಈ ಪೀಠದಲ್ಲಿ ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ವಿರಾಜಮಾನರಾಗಿದ್ದಾರೆ. ಈ ಪೀಠದ ಪ್ರಥಮಾಚಾರ್ಯರಾದ ಶ್ರೀ ಜಗದ್ಗುರು ದಾರುಕ ಭಗವತ್ಪಾದರ ಜಯಂತಿಯನ್ನೂ ಸಕಲ ವೀರಶೈವರೂ ಆಚರಿಸಿ ಪವಿತ್ರರಾಗಬೇಕು.

## ಶ್ರೀ ಜ. ಶಂಕರಾಚಾರ್ಯರ ಜಯಂತಿ

( ವೈಶಾಖ ಶುದ್ಧ ಪಂಚಮಿ )



ಈಗ್ಗೆ ಸುಮಾರು ೨೫೦೦ ವರುಷಗಳ ಹಿಂದೆ ಈ ಭಾರತ ಭೂಮಿಯಲ್ಲಿ ವೇದ ವಿರೋಧಿಗಳಾದ ಕೆಲವು ಧರ್ಮಗಳು ತಲೆ ಎತ್ತಿ ವೈದಿಕ ಧರ್ಮವನ್ನು ನಾಶ ಮಾಡುತ್ತಿರಲು ಜನರಲ್ಲಿ ಕರ್ಮ, ಜ್ಞಾನ, ಭಕ್ತಿ ಉಪಾಸನೆಗಳು ಮಾಯವಾಗಿ ನಾಸ್ತಿಕ ಪಂಥವು ಪ್ರಬಲವಾಗಿ ಬೆಳೆಯಹತ್ತಿತು. ಇಂಥ ದುಃಸ್ಥಿ

ತಿಯಲ್ಲಿ ಶ್ರೀ ಶಂಕರಾಚಾರ್ಯರು ಉದಯಿಸಿ ದುರ್ವಾದಿಗಳನ್ನು ಖಂಡಿಸಿ ಆಸ್ತಿಕ್ಯವನ್ನು ಸ್ಥಿರಪಡಿಸಿದರು. ಅವರ ದರ್ಶನ ಉಪದೇಶಗಳಿಂದ ಅನೇಕರು ಮಾನವತೆಯನ್ನು ಕಂಡುಕೊಂಡರು. ಶ್ರೀ ಆಚಾರ್ಯರು ಭಾರತದ ಮೂಲೆ ಮೂಲೆಯಲ್ಲಿ ಸಂಚರಿಸಿ ರಾಜಾಧಿರಾಜರನ್ನು ಶಿಷ್ಯರನ್ನಾಗಿ ಮಾಡಿಕೊಂಡು ಮನೋಹರವಾದ ಅನೇಕ ಮಠ ಮಂದಿರಗಳನ್ನು ಕಟ್ಟಿಸಿ ಶಿಷ್ಯಕೋಟಿಯನ್ನು ದೇವಭಕ್ತಿಯತ್ತ ಹೊರಳಿಸಿದರು. ಅವರು ಸಕಲ ಶಾಸ್ತ್ರಗಳಲ್ಲಿ ನೈಪುಣ್ಯ ಪಡೆದು ಪರವಾದಿ ಭಯಂಕರರಾಗಿ ದಿಗ್ವಿಜಯಹೊಂದಿದರು; ಅಷ್ಟೇ ಅಲ್ಲ, ಸಂಸ್ಕೃತದಲ್ಲಿ ಅನೇಕ ಧಾರ್ಮಿಕ ಗ್ರಂಥಗಳನ್ನು ರಚಿಸಿದರು. ಅವರ ಗ್ರಂಥ ರಚನಾ ಶೈಲಿಯು ಕಾಳಿದಾಸನ ಕೃತಿಯಂತೆ ಸರಲವಾಗಿದ್ದು ಪಂಡಿತ ಪಾಮ ರರಿಗೆ ತಿಳಿಯಲನುಕೂಲವಾಗಿದೆ. ಭಾರತದ ಸಕಲಸಿದ್ಧಾಂತಗಳಲ್ಲಿ ಶ್ರೀ ಶಂಕ ರಾಚಾರ್ಯರ ಅದ್ವೈತ ಸಿದ್ಧಾಂತವು ಮುಮುಕ್ಷುಗಳಿಗೆ ದಾರಿದೀಪವಾಗಿದೆ.

ಶ್ರೀ ಆಚಾರ್ಯರು ವೈಶಾಖ ಶುದ್ಧ ಪಂಚಮಿಯಂದು ಜನ್ಮವೆತ್ತಿದರು. ಆ ಪವಿತ್ರ ದಿವಸದಲ್ಲಿ ಅವರ ಜಯಂತಿಯನ್ನು ಸಂಭ್ರಮದೊಡನೆ ಆಚರಿಸು ವದು ಮಾನವನ ಕರ್ತವ್ಯ. ಅವರ ಜೀವನ ಚರಿತ್ರೆಯು ಕೆಳಗೆ ಉಲ್ಲೇಖಿಸಿ ದಂತಿದೆ.

ಭಾರತದ ದಕ್ಷಿಣದಲ್ಲಿ ಕೇರಳ ದೇಶವು ಸುಪ್ರಸಿದ್ಧವಾಗಿದೆ. ಅಲ್ಲಿ ರಾಜ ಶೇಖರನೆಂಬ ನರಪತಿಯು ಧರ್ಮನಿರತನಾಗಿ ರಾಜ್ಯವಾಳುತ್ತಿದ್ದನು. ಪೂರ್ಣಾ ನದಿಯ ಪುಣ್ಯ ತಟದಲ್ಲಿ ಪರಿಶೋಭಿಸುವ ವೃಷಾದ್ರಿಯೆಂಬ ಪರ್ವತದಲ್ಲಿ ಸ್ವಯಂಭುಲಿಂಗವಿದೆ. ರಾಜಶೇಖರನು ಆ ಲಿಂಗದ ವೈಭವವನ್ನು ಕನಸಿನಲ್ಲಿ ಕಂಡು ಅದಕ್ಕೊಂದು ಭವ್ಯ ಮಂದಿರವನ್ನು ಕಟ್ಟಿಸಿದನು. ಆ ದೇವಾಲಯದ ನಿಕಟವರ್ತಿಯಾದ 'ಕಾಲಟಿ' ಎಂಬ ಗ್ರಾಮದಲ್ಲಿ ವಿದ್ಯಾಧಿ ರಾಜನೆಂಬ ಘನ ವಿದ್ವಾಂಸನಿದ್ದನು. ಅವನಿಗೆ 'ಶಿವಗುರು'ನೆಂಬ ಪುತ್ರನಿದ್ದನು. ಅವನಿಗೆ ಪತಿವ್ರ ತೆಯಾದ 'ಆರ್ಯಾಂಬೆ' ಎಂಬ ಧರ್ಮಪತ್ನಿಯಿದ್ದಳು. ಆ ದಂಪತಿಗಳಿಗೆ ಮಕ್ಕಳಿರಲಿಲ್ಲ. ಸಂತಾನದ ಚಿಂತೆಯಲ್ಲಿಯೇ ಅವರಿಗೆ ಹಲವಾರು ವರುಷ ಗಳು ಒಂದರ ಮೇಲೊಂದು ಉರುಳಿಹೋದವು. ದಂಪತಿಗಳೀರ್ವರು ಇಳಿ ವಯಸ್ಸಿನತ್ತ ಹೊರಳಿದಾಗ ಹರನಿಗೆ ಮೊರೆಹೊಕ್ಕು ಪುತ್ರನನ್ನು ಪಡೆವುದಾಗಿ

ಮನಸ್ಸು ಮಾಡಿದರು. ಆಗ ಅವರು ಕಂದ ಮೂಲಾದಿಗಳನ್ನು ಸೇವಿಸುತ್ತ ಶಿವಾರಾಧನೆಯಲ್ಲಿ ಲೀನರಾಗಿ ಹಲಕಾಲ ಕಳೆಯಲಾಗಿ ಶಿವನ ಕೃಪೆಯಾಗದಿರುವುದನ್ನು ಕಂಡು ಅವರು ಅನಶನವ್ರತದಿಂದ ಘನಘೋರವಾದ ತಪಸ್ಸನ್ನಾಚರಿಸ ಹತ್ತಿದರು. ಭಕ್ತವತ್ಸಲನಾದ ಭಗವಾನ್ ಭವಾನೀ ಪತಿಯು ಒಂದು ದಿವಸ ಶಿವಗುರುವಿನ ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ "ವತ್ಸ! ನಿನ್ನೀತರಹದ ತಪಸ್ಸಿಗೆ ನಾನು ಮೆಚ್ಚಿದೆ. ನಿನಗೆ ಸದ್ಗುಣ ಸಂಪನ್ನನೂ, ಸರ್ವಜ್ಞನೂ ಆದ ಅಲ್ಪಾಯುಷ್ಯವುಳ್ಳ ಓರ್ವ ಪುತ್ರನು ಬೇಕೋ! ಅಥವಾ ಮೂರ್ಖರೂ, ದೀರ್ಘಾಯುಷಿಗಳೂ ಆದ ಬಹುಪುತ್ರರುಬೇಕೋ ?" ಎಂಬುದಾಗಿ ಪ್ರಶ್ನಿಸಲು ಶಿವಗುರುವು- ದೇವ! ಸದ್ಗುಣ ಸುಶೋಭಿತನಾಗಿ ಅಲ್ಪಾಯುಷಿಯಾದರೂ ಅಡ್ಡಿ ಇಲ್ಲ ಅಂಥ ಓರ್ವ ಸತ್ಪುತ್ರನನ್ನು ಅನುಗ್ರಹಿಸುವುದಾಗಬೇಕೆಂದು ಕರ ಜೋಡಿಸಿ ಬೇಡಿಕೊಂಡನು. ಆಗ ಶಿವನು 'ತಥಾಸ್ತು' ಎಂದು ಉಚ್ಚರಿಸಿ ಅಂತರ್ಗತನಾದನು. ಶುಭಸ್ವಪ್ನ ಸಂದರ್ಶನದಿಂದ ದಂಪತಿಗಳು:— ತಪಃ ಫಲವು ಲಭಿಸಿತೆಂದು ಸಂತುಷ್ಟರಾಗಿ ಪೂಜ್ಯ ಗುರುಹಿರಿಯರನ್ನು ಕರೆದು ಆರಾಧಿಸಿ ಆಶೀರ್ವಾದ ಪಡೆದರು. ಅಂದು ಭೋಜನಕಾಲದಲ್ಲಿ ಶಿವಗುರುವಿಗೆ ಅನ್ನದಲ್ಲಿ ಶಿವತೇಜಸ್ಸಿನ ಸಮಾವೇಶವಾಯಿತು. ಉಳಿದ ಅನ್ನವನ್ನು ಆರ್ಯಾಂಬೆ ಸೇವಿಸಿದಳು. ಮುಂದೆ ಕೆಲವು ದಿವಸಗಳಲ್ಲಿಯೇ ಆ ಸಾಧ್ವಿಗೆ ದೌಹೃದ ಚಿನ್ಹಗಳು ತೋರಿದವು. ಗರ್ಭವು ದಿನೇದಿನೇ ಚಂದ್ರನಂತೆ ಪರಿವರ್ಧನೆಯಾಗಿ ನವಮಾಸ ನವದಿನಗಳು ತುಂಬಿ, ಒಂದುದಿನ ಶುಭಸಮಯದಲ್ಲಿ ಆರ್ಯಾಂಬೆಯು ಪುತ್ರನನ್ನು ಪಡೆದಳು. ಶಿಶುವು ಶಿವನ ವರಪ್ರಸಾದದಿಂದ ಉದಯಿಸಿದ ಕಾರಣ ಸರ್ವಶುಭಲಕ್ಷಣಗಳಿಂದ ಸುಶೋಭಿತನಾಗಿದ್ದನು. ಮತ್ತು ಸಂದರ್ಶನದಿಂದ ಸರ್ವರಿಗೂ ಸುಖಕರನಾದುದರಿಂದ ಆ ಶಿಶುವಿಗೆ ಶಂಕರ'ನೆಂದು ನಾಮಕರಣ ಮಾಡಿದರು.* ಶಂಕರನು ಶೈಶವಾವಸ್ಥೆಯಲ್ಲಿರುವಾಗಲೇ

---

* ಶಂಕರನ ಜನನ ಕಾಲದ ವಿಷಯದಲ್ಲಿ ಬಹಳ ಮತಭೇದವಿದೆ. ಕ್ರಿಸ್ತಪೂರ್ವ, ಕ್ರಿಸ್ತ ನಂತರ ಹೀಗೆ ಮುಖ್ಯ ಎರಡು ಮತಭೇದಗಳಿವೆ. ಕ್ರಿಸ್ತ ನಂತರ ಎನ್ನುವವರಲ್ಲಿಯೂ ಭಿನ್ನ ಭಿನ್ನ ಅಭಿಪ್ರಾಯವಿರುವದು. ಆರ್. ಜಿ. ಭಂಡಾರಕರರು ಶ್ರೀ ಶಂಕರರ ಜನನವು ಕ್ರಿ. ಶ. ೪ ನೆಯ ಶತಮಾನವೆಂದು ಅಭಿಪ್ರಾಯಪಟ್ಟಿರುವರು. ಡಾ! ಫ್ಲೀಟರು ೭ ನೆಯ ಶತಮಾನದ ಅಂತ್ಯ ಭಾಗವೆಂದು

ಅಭಿಪ್ರಾಯಪಟ್ಟಿರುವರು. ಪ್ರೋಫೇಸರ್ ವಿಲ್ಸನ್‌ರು (professor wilson) ಕ್ರಿ. ಶ. ೮ ನೆಯ ಶತಮಾನವೆಂದು ಹೇಳಿರುತ್ತಾರೆ. ಆದರೆ ವಿಲ್ಸನ್‌ರು ನಿಶ್ಚಯಿಸಿರುವ ೭೮೮ ಆದ್ಯ ಶಂಕರರ ಕಾಲವಾಗಿರದೆ ಅದು ಅಭಿನವ ಶಂಕರರ ಕಾಲವೆಂದು ಕೆಲವು ಪಂಡಿತರ ಅಭಿಪ್ರಾಯವಿದೆ. ಅಭಿನವ ಶಂಕರರು ಆದಿಶಂಕರರಿಂದ ೩೬ ನೆಯವರಾಗು ವರೆಂದು ತಿಳಿದುಬರುವದು. ಯಾಕಂದರೆ ಅವರು ಪರಾಶಕ್ತಿಯಲ್ಲಿ ಸ್ತೋತ್ರಮಾಡು ವಾಗ್ಗೆ ತಮಗೆ ಎಂಭತ್ತು ವರುಷಗಳು ಕಳೆದರೂ ಮಾಯಾ ಮೋಹಗಳು ತೊಲಗ ಲಿಲ್ಲವೆಂದು ಸಂತಾಪಗೊಂಡಿರುವರು. ಬ್ರಹ್ಮಸೂತ್ರಗಳಿಗೆ ಭಾಷ್ಯ ರಚಿಸಿದ ಅದ್ಯ ಶಂಕ ರಾಚಾರ್ಯರಿಗೆ ಮೂವತ್ತೆರಡು ವರುಷ ಆಯುಷ್ಯವೆಂದು ಐತಿಹ್ಯವಿದೆ. ಆಧುನಿಕ ಇತಿಹಾಸ ವೇತ್ತರು ಶ್ರೀ ಶಂಕರರ ಕಾಲವು ಕ್ರಿಸ್ತ ಪೂರ್ವವೆಂದು ಆಧುನಿಕ ಇತಿಹಾಸ ವೇತ್ತರು ನಿಧಾನವಾಗಿ ತೋರಿಸಿರುವುದುಂಟು. ಕಲ್ಯಾಣಭಾಗ ೧೧,ರ ೮ ನೆಯ ಅಂಕ ದಲ್ಲಿ ಜೋತಿಷ ಮತ್ತು ಇತಿಹಾಸದ ವಿದ್ವಾಂಸನೊಬ್ಬನು ಆಚಾರ್ಯರ ಜನ್ಮವು ಕ್ರಿಸ್ತ ಪೂರ್ವವೆಂದು ಸಿದ್ಧಮಾಡಿರುವನು. "ಶ್ರೀ ಶಂಕರಾಚಾರ್ಯರ ಮಠಗಳ ಪರಂಪರೆ ಯಿಂದ ಇದೇ ವಿಷಯವು ಸಿದ್ಧಮಾಡಲ್ಪಡುತ್ತದೆ" ಎಂದು ಸಂತ ಅಂಕ ಪು. ೪೩ ರಲ್ಲಿ ಉಲ್ಲೇಖವಿದೆ. ಹಾಗೂ "ಶಿವಾಂಕ"ದ ೭೭೩ ನೆಯ ಪುಟದಲ್ಲಿ "ಶ್ರೀ ಶಂಕರಾ ಚಾರ್ಯರ ಮಠಗಳ ಪರಂಪರೆಯ ಮೇಲಿಂದ ಅವರ ಜನ್ಮವು ಕ್ರಿ. ಪೂರ್ವ ೪ ನೆಯ ಶತಾಬ್ದಿಯಾಗಿದೆ. ಅವರ ಜನ್ಮವು ಯುಧಿಷ್ಠರ ಸಂವತ್ ೨೬೩೧ ವೈಶಾಖ ಶುದ್ಧ ಪಂಚಮಿ" ಎಂದು ಉಲ್ಲೇಖಿಸಲ್ಪಟ್ಟಿದೆ. ವಾಸಾಚಲೀಯ ಶಂಕರ ವಿಜಯದಲ್ಲಿ— ಯುಧಿಷ್ಠಿರಶಕೆ ೨೬೩೧ನೆಯ ನಂದನನಾಮ ಸಂವತ್ಸರ ವೈಶಾಖ ಶುದ್ಧ ಪಂಚಮಿ ರವಿ ವಾರ ಪುನರ್ವಸು ನಕ್ಷತ್ರ ಅಭಿಜಿನ್ಮುಹೂರ್ತದಲ್ಲಿ ಕರ್ಕಾಟಕ ಲಗ್ನದಲ್ಲಿ ರವಿ ಕುಜ ಗುರು ಶನಿಗಳು ಉಚ್ಚಸ್ಥರಾಗಿ ಕೇಂದ್ರದಲ್ಲಿರಲು, ಶುಕ್ರನು ಉಚ್ಚಸ್ಥಾನದಲ್ಲಿದ್ದು ಬುಧ ರವಿಯೊಡನೆ ಸೇರಿರಲು ಈ ಶುಭಮುಹೂರ್ತದಲ್ಲಿ ಆರ್ಯಾಂಬೆಯು ಪುತ್ರ ನನ್ನು ಪಡೆದಳು" ಎಂದು ಉದಾಹರಿಸಲಾಗಿದೆ. ಮತ್ತು ಸುಪ್ರಸಿದ್ಧ ತತ್ವವೇತ್ತ ರಾದ ಟಿ. ಎಸ್. ನಾರಾಯಣ ಶಾಸ್ತ್ರಿಗಳು ಬೃಹಚ್ಛಂಕರ ವಿಜಯ ಮೊದಲಾದ ವುಗಳ ಆಧಾರದಿಂದ ಕ್ರಿ. ಶ. ಪೂರ್ವ ೫೦೯ ರಲ್ಲಿ ಶಂಕರ ಜನ್ಮವೆಂದು ಹೇಳಿರುವರು (The Age at Shankar) ಎನ್. ಕೆ. ವೆಂಕಟೇಶ ಪಂತಲು ಇವರು:— "ಗೋವರ್ಧನ, ದ್ವಾರಕಾ, ಕಾಂಚಿ ಈ ಮಠಗಳ ಗುರುಪರಂಪರೆಯವರ ಕಾಲವನ್ನು ವಿಮರ್ಶಿಸಿದರೆ ಶಂಕರರ ಜನ್ಮವು ೫೦೯ ಸರಿಯಾಗುವುದು" ಎಂಬುದಾಗಿ ಹೇಳಿರು ವರು. ಕೆ. ಎಸ್. ರಾಮಸ್ವಾಮಿ ಶಾಸ್ತ್ರಿಗಳು "ವೃಷಸೇನ ಕಥೆಯ ಆಧಾರದಿಂದ ಕ್ರಿ. ಪೂ. ೫೦೯ ರಲ್ಲಿ ಶಂಕರರ ಜನ್ಮ"ವೆಂದು ಹೇಳಿದ್ದಾರೆ.

ಹೀಗೆ ಆಚಾರ್ಯರ ಜನ್ಮವು ಅನೇಕ ಜನ ವಿದ್ವಾಂಸರ ಅಭಿಪ್ರಾಯದ ಮೇಲೆ ಕ್ರಿ. ಪೂ. ೫ ರಲ್ಲಿ ಎಂದು ಸಿದ್ಧವಾಗುವುದು.

ವಿಲಕ್ಷಣ ಬುದ್ಧಿಚಾತುರ್ಯವುಳ್ಳವನಾಗಿದ್ದನು. ೧ನೆಯ ವರ್ಷದಲ್ಲಿಯೇ ಮಾತೃಭಾಷೆಯನ್ನು ಎಲ್ಲ ಅಕ್ಷರಗಳ ಜ್ಞಾನ ಪಡೆದನು. ೨ನೆಯ ವರುಷದಲ್ಲಿರುವಾಗ ತಾಯಿಯಿಂದ ಪುರಾಣಾದಿಗಳ ಕಥೆಗಳನ್ನು ಕೇಳಿ ಕಂಠಪಾಠ ಮಾಡಿದನು ಹಾಗೂ ತರ್ಕವ್ಯಾಕರಣಾದಿ ಶಾಸ್ತ್ರಗಳನ್ನು ಸಹಜವಾಗಿ ತಿಳಿದುಕೊಂಡನು. ಶಿವಗುರುವು, ೩ ನೆಯ ವರುಷದಲ್ಲಿ ಶಂಕರನ ಬಾಲಕರ್ಮವನ್ನು ನೆರವೇರಿಸಿ ಕೈಲಾಸವಾಸಿಯಾದನು. ಮುಂದೆ ಆರ್ಯಾಂಬೆ ಐದನೆಯ ವರುಷದಲ್ಲಿ ತನ್ನ ಮಗುವಿನ ಉಪನಯನ ಕರ್ಮವನ್ನು ನೆರವೇರಿಸಿ ವೇದಾಧ್ಯಯನಕ್ಕಾಗಿ ಗುರು ಕುಲಕ್ಕೆ ಕಳುಹಿಸಿದಳು.

ಶಂಕರನು ಗುರುಕುಲದಲ್ಲಿ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜೋತಿಷ, ಕಲ್ಪ ಈ ಆರು ಅಂಗಗಳೊಡನೆ ಚತುರ್ವೇದಗಳನ್ನು ಅಲ್ಪಕಾಲದಲ್ಲಿಯೇ ಅನಾಯಾಸವಾಗಿ ಅಭ್ಯಾಸಮಾಡಿ ಗುರುವಿನ ಸಮಾನ ವಿದ್ಯಾವಂತನಾದನು. ಒಂದು ದಿವಸ ವಟುವಾದ ಶಂಕರನು ತನ್ನ ಸಹಪಾಠಿಗಳೊಡನೆ ಓರ್ವ ಬಡ ಬ್ರಾಹ್ಮಣನ ಮನೆಗೆ ಭಿಕ್ಷುವಾಗಿ ತೆರಳಿದನು. ಆ ಮನೆಯ ಯಜಮಾನಿಯು:— "ಶ್ರೀಮಂತರು ನಿಮ್ಮಂಥವರನ್ನು ಆದರದಿಂದ ಆರಾಧಿಸಿ ಭಿಕ್ಷೆ ನೀಡುವರು. ನಾವು ದುರ್ಭಾಗ್ಯರು ನಿಮಗೆ ಕೊಡಲು ನಮ್ಮಲ್ಲಿ ಏನೂಇಲ್ಲ. ನಾವು ಕಡುಬಡವರಾದುದರಿಂದ ಮನದಲ್ಲಿ ನಮ್ಮೀ ಹೀನ ಜನ್ಮವನ್ನು ಧಿಃಕರಿಸಿ ಕೊಳ್ಳುವಂತಾಗಿದೆ" ಎಂದು ನುಡಿಯುತ್ತ ಒಳಗೆಹೋಗಿ ಒಂದು ನೆಲ್ಲೀಕಾಯಿಯನ್ನು ತಂದು ನೀಡಿದಳು. ಅವಳ ದೀನವಾಣಿಯನ್ನು ಕೇಳಿ ಶಂಕರನ ಮೃದುವಾದ ಮನಕರಿಗಿ ನೀರಾಯಿತು. ತತ್‌ಕ್ಷಣವೇ ಅವನು ಲಕ್ಷ್ಮಿಯನ್ನು ಅನೇಕಾರ್ಥ ಗುಂಪಿತವಾದ "ಕನಕಧಾರಾ ಸ್ತೋತ್ರ"ದಿಂದ ಪ್ರಾರ್ಥಿಸಿದನು. ಆಗ ಮಹಾಲಕ್ಷ್ಮಿಯು ಪ್ರಸನ್ನಳಾಗಿ ಶಂಕರನ ಅಭೀಷ್ಟದಂತೆ ಆ ಬಡ ಬ್ರಾಹ್ಮಣನ ಮನೆಯ ಸುತ್ತಲೂ ಭಂಗಾರದ ನೆಲ್ಲಿಯಕಾಯಿಗಳನ್ನು ವರ್ಷಿಸಿ ಅಂತರ್ಹಿತಳಾದಳು. ಹೀಗೆ ಶಂಕರನು ಬ್ರಾಹ್ಮಣನನ್ನು ಸಂಪದ್ಭರಿತನನ್ನಾಗಿ ಮಾಡಿ, ಗುರುಕುಲದಲ್ಲಿ ಅಧ್ಯಯನವನ್ನು ಮುಗಿಸಿಕೊಂಡು ಎಂಟನೆಯ ವಯಸ್ಸಿನಲ್ಲಿ ತನ್ನ ಮನೆಗೆ ಹಿಂತುರುಗಿದನು. ಶಂಕರನು ಗುರುಕುಲದಿಂದ ನಿವೃತ್ತನಾಗಿ ಮನೆಗೆಬಂದ ನಂತರ ಸನ್ಯಾಸಿ ಸ್ವೀಕರಿಸಲು ಅಪೇಕ್ಷಿಸಿದನು. ಆದರೆ ಆರ್ಯಾಂಬೆ ಒಪ್ಪಲಿಲ್ಲ. ಅವನು ಮಾತೆಯಲ್ಲಿ ಭಕ್ತಿಯುಳ್ಳವನಾದುದರಿಂದ

ತಾಯಿಗೆ ತಾಪ ಕೊಡಲು ಇಚ್ಛಿಸಲಿಲ್ಲ. ಒಂದು ದಿವಸ ಶಂಕರನು ತಾಯಿಯೊಡನೆ ಪೂರ್ಣಾನದಿಯಲ್ಲಿ ಸ್ನಾನ ಮಾಡುತ್ತಿರಲು ಒಂದು ಮೊಸಳೆ ಅವನ ಕಾಲನ್ನು ಹಿಡಿಯಿತು. ಅವನು ಸಂಕಟಪಡುತ್ತಿರುವುದನ್ನು ನೋಡಿ ತಾಯಿಗೆ ಮೂರ್ಛೆಬಂತು. ಅವಳು ಪುನಃ ಎಚ್ಚತ್ತು ಚೀರಲಾಂಭಿಸಿದಳು. ಆಗ ಶಂಕರನು "ಅಮ್ಮ ಚಿಂತಿಸಬೇಡ. ನನಗೆ ಸನ್ಯಾಸ ಸ್ವೀಕರಿಸಲು ನೀನು ಅಪ್ಪಣೆ ಕೊಡುವುದಾದರೆ, ಈ ಮೊಸಳೆ ನನ್ನನ್ನು ಬಿಡುವದು" ಎನ್ನಲು, ಆರ್ಯಾಂಬೆ ಅನಿವಾರ್ಯವಾಗಿ 'ತಥಾಸ್ತು' ಎಂದು ನುಡಿದಳು. ಆಗ ಮೊಸಳೆ ಅವನನ್ನು ಮುಕ್ತನನ್ನಾಗಿ ಮಾಡಿತು. ಹೀಗೆ ಶಂಕರನು ತಾಯಿಯಿಂದ ಸನ್ಯಾಸಕ್ಕಾಗಿ ಅಪ್ಪಣೆ ಪಡೆದು ಎಂಟನೆಯ ವರ್ಷದಲ್ಲಿ ಮನೆಯಿಂದ ಹೊರಹೊರಟನು. ಅವನು ಹೊರಡುವ ಮುನ್ನ ಆರ್ಯಾಂಬೆ:— ತನ್ನ ಮರಣ ಕಾಲಕ್ಕೆ ಬರಬೇಕೆಂದು ಕೇಳಿಕೊಂಡಳು. ಅದಕ್ಕೆ ಶಂಕರರು ಒಪ್ಪಿಗೆಕೊಟ್ಟು ಮನೆಯಿಂದ ಹೊರಟು ನರ್ಮದಾತೀರದಲ್ಲಿರುವ ಗೋವಿಂದ ಭಗವತ್ಪಾದರ ಆಶ್ರಮಕ್ಕೆ ಬಂದನು. ಅಲ್ಲಿ ಗೋವಿಂದ ಭಗವತ್ಪಾದರಿಂದ ದಿಕ್ಷೆಯನ್ನು ಹೊಂದಿ ಗುರೂಪದಿಷ್ಟವಾದ ಯೋಗ ಸಾಧನೆ ಮಾಡುವವನಾಗಿ ಕೆಲವು ದಿನಸಗಳಲ್ಲಿಯೇ ಮಹಾಯೋಗ ಸಿದ್ಧನಾದನು. ಆಗ ಗುರುಗಳು ಶಂಕರನಿಗೆ ಕಾಶಿಗೆ ಹೋಗಲು ಅಪ್ಪಣೆ ಕೊಟ್ಟು, ವೇದಾಂತ ಸೂತ್ರಕ್ಕೆ ಭಾಷ್ಯ ಬರೆಯುವದಾಗಿ ಹೇಳಿದರು. ಶಂಕರನು ಕಾಶಿಗೆ ಬಂದ ಅಲ್ಪಕಾಲದಲ್ಲಿಯೇ ಪ್ರಖ್ಯಾತಿಯನ್ನು ಪಡೆದನಲ್ಲದೇ ಅನೇಕ ಜನ ಪಂಡಿತರನ್ನು ಶಿಷ್ಯರನ್ನಾಗಿ ಮಾಡಿಕೊಂಡನು. ಆ ಶಿಷ್ಯಸಮುದಾಯದಲ್ಲಿ ಸನಂದನನು ಪ್ರಥಮ ಶಿಷ್ಯನಾಗಿರುವನು. ಅವನ ಹಿಂದಿನಿಂದ ಪದ್ಮಪಾದಾಚಾರ್ಯನೆಂದು ಪ್ರಖ್ಯಾತನಾದನು. ಶಂಕರನು ತನ್ನ ಶಿಷ್ಯರಿಗೆ ವಿದ್ಯಾದಾನ ಮಾಡುವುದರ ಜೊತೆಯಲ್ಲಿ ಗ್ರಂಥಗಳನ್ನು ಸಹ ರಚಿಸುತ್ತಿದ್ದನು.

ಒಂದು ದಿವಸ ಕಾಶಿಯಲ್ಲಿ ಭಗವಾನ್ ವಿಶ್ವನಾಥನು ಆಚಾರ್ಯರಿಗೆ ಪ್ರತ್ಯಕ್ಷನಾಗಿ "ಬ್ರಹ್ಮಸೂತ್ರಗಳ ಮೇಲೆ ಭಾಷ್ಯವನ್ನು ರಚಿಸಬೇಕೆಂತಲೂ, ಮಾನವ ಕಲ್ಯಾಣಕ್ಕಾಗಿ ಧರ್ಮೋಪದೇಶ" ಮಾಡಬೇಕೆಂತಲೂ ಅಪ್ಪಣೆಯನ್ನಿತ್ತನು. ಆ ಪ್ರಕಾರವಾಗಿ ಅವರು, ಕುರುಕ್ಷೇತ್ರ, ಬದರಿಕಾಶ್ರಮ ಮೊದಲಾದ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿ ಅದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡುವವರಾಗಿ, ದುರ್ವಾದಿಗಳನ್ನು ಶಾಸ್ತ್ರಾರ್ಥದಲ್ಲಿ ಸೋಲಿಸಿದ್ದಲ್ಲದೆ, ಪ್ರಯಾಗಕ್ಕೆ

ಬಂದು ಅಂತಿಮಾವಸ್ಥೆಯಲ್ಲಿರುವ ಕುಮಾರಿಲ ಭಟ್ಟನ ಭೆಟ್ಟಿಯಾದರು. ಅವನ ಅಪೇಕ್ಷೆಯ ಮೇರೆಗೆ ಮಾಹಿಷ್ಮತಿ ನಗರಕ್ಕೆ ಬಂದು ಅಲ್ಲಿರುವ ಮಂಡನ ಮಿಶ್ರನೆಂಬ ಉದ್ದಾಮ ಪಂಡಿತನೊಡನೆ ಶಾಸ್ತ್ರವಾದವನ್ನು ಮಾಡಿದರು. ಈ ಉಭಯರವಾದದಲ್ಲಿ ಮಂಡನನ ಹೆಂಡತಿಯಾದ ಭಾರತಿಯು ಮಧ್ಯಸ್ಥಿಕೆ ವಹಿಸಿದಳು. ಕೆಲವು ದಿನ ವಾದವು ನಡೆಯಲಾಗಿ ಮಂಡನನು ಸೋತು, ಶಂಕರ ರಿಗೆ ಶಿಷ್ಯನಾಗಿ ಸನ್ಯಾಸ ಸ್ವೀಕರಿಸಿ, ಸುರೇಶ್ವರಾಚಾರ್ಯನೆಂದು ಪ್ರಸಿದ್ಧಿಗೆ ಬಂದನು. ಹೀಗೇಯೇ ಆಚಾರ್ಯರು ಭಿನ್ನ ಭಿನ್ನ ಪ್ರಾಂತಗಳಲ್ಲಿ ಸಂಚರಿಸಿ ಅನೇಕ ಜನ ವಿದ್ವಾಂಸರನ್ನೂ ರಾಜಾಧಿರಾಜರನ್ನೂ ಶಿಷ್ಯರನ್ನಾಗಿ ಮಾಡಿಕೊಳ್ಳುವುದಲ್ಲದೇ, ಅಲ್ಲಲ್ಲಿ ಅನೇಕ ಮಠಗಳನ್ನು ಸ್ಥಾಪಿಸಿದರು. ಆ ಮಠಗಳಿಗೆ ಒಬ್ಬೊಬ್ಬ ಆಚಾರ್ಯರನ್ನು ನೇಮಿಸಿ, ಅವರಿಗೆ ಅದ್ವೈತ ಸಿದ್ಧಾಂತ ಪ್ರಚಾರ ಮಾಡುವುದಾಗಿ ಅಪ್ಪಣೆಯನ್ನಿತ್ತರು.

ಒಂದು ಸಾರೆ ಆಚಾರ್ಯರು ಏಕಾಂತದಲ್ಲಿದ್ದಾಗ್ಗೆ ಓರ್ವ ಕಾಪಾಲಿಕನು ಬಂದು ಪ್ರಾರ್ಥಿಸಿಕೊಂಡನು. “ತಾವು ತತ್ವಜ್ಞಾನಿಗಳು ಶರೀರದ ಮೇಲಿನ ಮೋಹವನ್ನಳಿದವರಾಗಿರುವಿರಿ; ನಾನೊಂದು ಸಿದ್ಧಿಯನ್ನು ಪಡೆಯಲು ಅಪೇಕ್ಷೆಯುಳ್ಳುವನಾಗಿರುವೆನು, ಆ ಕಾರ್ಯದಲ್ಲಿ ತಮ್ಮಂಥ ತತ್ವಜ್ಞಾನಿಗಳ ಶಿರಸ್ಸಿನ ಅವಶ್ಯಕತೆ ಇದೆ. ದಯವಿಟ್ಟು ತಾವು ತಮ್ಮ ಶಿರಸ್ಸನ್ನು ನನಗೆ ಅರ್ಪಿಸಿದುದಾದರೆ ನನ್ನ ಮನೋರಥವು ಸಿದ್ಧವಾಗುವುದು” ಎಂದುನುಡಿದನು. ಆಗ ಆಚಾರ್ಯರು:—“ನಿನ್ನ ಇಚ್ಛೆಯಂತೆ ಆಗಲಿ ಆದರೆ ಈ ವಿಷಯ ಯಾರಿಗೂ ತಿಳಿಯಬಾರದು. ನಾನು ಈಗಲೇ ಸಮಾಧಿಸ್ಥನಾಗುವೆ; ನನ್ನ ಶಿರಸ್ಸನ್ನು ಕತ್ತರಿಸಿಕೊಂಡು ಹೋಗಬಹುದೆಂ”ದು ಹೇಳಿ ಸಮಾಧಿಸ್ಥರಾದರು. ಕಾಪಾಲಿಕನು ಆಚಾರ್ಯರ ಶಿರಸ್ಸನ್ನು ಕತ್ತರಿಸುವಷ್ಟರಲ್ಲಿ ಪದ್ಮಪಾದಾಚಾರ್ಯನು ನೃಸಿಂಹನ ಅನುಗ್ರಹದಿಂದ ಅವನ ಕುಟಿಲ ಕೃತಿಯನ್ನು ಸೂಕ್ಷ್ಮದೃಷ್ಟಿಯಿಂದ ತಿಳಿದು ಆವೇಶಭರಿತನಾಗಿ ಅಲ್ಲಿಗೆ ಧಾವಿಸಿ ಆ ದುರ್ಮಾರ್ಗಿಯನ್ನು ಸಂಹರಿಸಿದನು.

ಸುರೇಶ್ವರಾಚಾರ್ಯ, ಪದ್ಮಪಾದಾಚಾರ್ಯ, ಹಸ್ತಾಮಲಕಾಚಾರ್ಯ, ಲೋಟಕಾಚಾರ್ಯ, ನಾಲ್ಕು ಜನ ಶಿಷ್ಯರೊಡನೆ ಆಚಾರ್ಯರು ಕಾಶ್ಮೀರಕ್ಕೆ ತೆರಳಿದರು.ಅಲ್ಲಿಯ ಶಾರದಾ ಪೀಠವನ್ನು ದಕ್ಷಿಣದ್ವಾರದಿಂದ ಅವರು ಪ್ರವೇಶಿಸು

ವಾಗ ಶಾಸ್ತ್ರಾರ್ಥಕ್ಕಾಗಿ ಸರಸ್ವತಿಯ ಆಕಾಶವಾಣಿಯಿಂದ ಆಮಂತ್ರಿಸಲ್ಪಟ್ಟರು. ಉಭಯರಿಗೂ ಸಕಲ ಶಾಸ್ತ್ರಗಳಲ್ಲಿ ವಾದವು ಮುಗಿದನಂತರ ಸರಸ್ವತಿಯಿಂದ ಆಚಾರ್ಯರು ಶಾಸ್ತ್ರದ ಬಗೆಗೆ ಪ್ರಶ್ನಿಸಲ್ಪಟ್ಟರು. ಆಗ ಶಂಕರರು ಪ್ರಶ್ನೆಗೆ ಉತ್ತರವೀಯಲು ಕೆಲವು ಅವಧಿಯನ್ನು ಕೇಳಿಕೊಂಡು ಅಮರುಕರಾಜನಮೃತ ದೇಹದಲ್ಲಿ ಪ್ರವೇಶಿಸಿ, ತದ್ವಾರಾಕಾಮಶಾಸ್ತ್ರದಲ್ಲಿಯೂ ಕೂಡ ಅನುಭವ ಪಡೆ ದರು. ಆಗ ಶಾರದೆ ಇವರ ಪಾಂಡಿತ್ಯಕ್ಕೆ ಮೆಚ್ಚಿದವಳಾಗಿ ವರವೊಂದನ್ನು ಕೇಳಲು ಅವರಿಗೆ ಆಜ್ಞಾಪಿಸಿದಳು. ಆಚಾರ್ಯರು, ತಮ್ಮೊಡನೆ ತುಂಗಭದ್ರಾ ತೀರಕ್ಕೆ ಹಿಂಬಾಲಿಸಿ ಬರಬೇಕೆಂದು ಸರಸ್ವತಿಯನ್ನು ಪ್ರಾರ್ಥಿಸಿಕೊಂಡರು ಮತ್ತು ನಿರಂತರವಾಗಿ ಶೃಂಗೇರಿ ಪೀಠದಲ್ಲಿಯೇ ಇರಲು ಶಾರದೆಯನ್ನು ಸ್ಥಾಪಿಸಿ, ತಾವು ಕೆಲವು ಕಾಲಪೀಠದಲ್ಲಿ ಇದ್ದು ಮುಂದೆ ಪುನಃ ದೇಶ ಸಂಚಾ ರಕ್ಕೆ ಹೊರಡಲು ಅಪೇಕ್ಷೆಯುಳ್ಳವರಾಗಿ ಸುರೇಶ್ವರಾಚಾರ್ಯನಿಗೆ ಪಟ್ಟಗಟ್ಟಿ ದರು. ಮತ್ತು ಶ್ರೀ ರೇವಣಸಿದ್ಧ ಮಹಾಯೋಗಿಯಿಂದ ಪಡೆದುಕೊಂಡಂಥ ಚಂದ್ರ ಮೌಲೀಶ್ವರಲಿಂಗವನ್ನೂ, ರತ್ನಗರ್ಭ ಗಣಪತಿಯನ್ನೂ ಸುರೇಶ್ವರಾ ಚಾರ್ಯನಿಗೆ ಕೊಟ್ಟು, "ಚಿರಕಾಲದವರೆಗೂ ಸರಸ್ವತೀದೇವಿಯ ಪೂಜೆಯನ್ನು ಮಾಡುತ್ತ ಇಲ್ಲಿಯೇ ಇರಬೇಕೆಂ"ದು ಹೇಳಿ ತಾವು ಸಮಸ್ತ ಶಿಷ್ಯರೊಡನೆ ಕಾಂಚಿಗೆ ತೆರಳಿದರು.

ಅಲ್ಲಿ ಶಿವಕಾಂಚಿ, ವಿಷ್ಣುಕಾಂಚಿಗಳೆರಡನ್ನೂ ಸ್ಥಾಪಿಸಿದರು. ಹಾಗೂ ಕಾಮಾಕ್ಷಿ ದೇವಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿ, ಬದರೀವನಕ್ಕೆ ತೆರಳಿ ದರು. ಅಲ್ಲಿ ಅಲಕಾನಂದದಲ್ಲಿ ಮುಳುಗಿದ ನಾರಾಯಣ ಮೂರ್ತಿಯನ್ನು ಹೊರತೆಗೆದು ಪ್ರಸ್ಥಾಪಿಸಿ, ಶಿಷ್ಯ ಪದ್ಮಪಾದನಿಗೆ ಆ ಗುಡಿಯ ಕಟ್ಟುವಿಕೆ ಯನ್ನು ನೋಡಿಕೊಳ್ಳಲು ಆಜ್ಞಾಪಿಸಿದರು.

ಆ ಮೇಲೆ ಶಂಕರಾಚಾರ್ಯರು ಕಾಶಿಗೆ ತೆರಳಿದರು. ಅತ್ತ ಪದ್ಮ ಪಾದನು ಬದ್ರಿ ಗುಡಿಯ ನಿರ್ಮಾಣಕಾರ್ಯವನ್ನು ಸಂಪೂರ್ಣ ಮುಗಿಸಿ, ಅದನ್ನು ನೋಡಲು ಶ್ರೀ ಶಂಕರಾಚಾರ್ಯರನ್ನು ಅಲ್ಲಿಗೆ ಆಮಂತ್ರಿಸಿದರು. ಆಗ ಅವರು ಮರಳಿ ಬದ್ರಿಗೆಹೋಗಿ ಗುಡಿಯನ್ನು ನಿರೀಕ್ಷಿಸಿ; ಅಲ್ಲಿಂದ ಮುಂದೆ ಕಾಶ್ಮೀರಕ್ಕೆ ತೆರಳಿ ಅಲ್ಲಿಯ ರಾಜನ ಭಕ್ತಿಗೆ ಸಂತುಷ್ಟರಾಗಿ, ಶ್ರೀನಗರವನ್ನು

ಸ್ಥಾಪಿಸಿದರು. ಹಾಗೂ ಪದ್ಮಪಾದರನ್ನು ಉತ್ತರ ಜಗನ್ನಾಥದ ಕಡೆಗೆ ಕಳುಹಿಸಿ, ಅಲ್ಲಿಯ ಮಠದ ಅಧಿಕಾರವನ್ನು ಸ್ವೀಕರಿಸಲು ಅಪ್ಪಣೆ ಮಾಡಿದರು. ಹಸ್ತಾಮಲಕನನ್ನು ಪಶ್ಚಿಮದಲ್ಲಿರುವ ದ್ವಾರಕಾಮಠಕ್ಕೆ, ತೋಟಕನನ್ನು ಬದರೀ ಸಮೀಪಕ್ಕೆ ಇರುವ ಜ್ಯೋತಿರ್ಮಠಕ್ಕೆ ಹೋಗಲು ಆಜ್ಞಾಪಿಸಿದರು. ಈಪ್ರಕಾರವಾಗಿ ತಮ್ಮ ನಾಲ್ಕುಜನ ಶಿಷ್ಯರನ್ನು ಬೇರೆ ಬೇರೆ ದಿಕ್ಕುಗಳಿಗೆ ಕಳುಹಿಸಿ, ತಾವು ನೇಪಾಳದಲ್ಲಿರುವ ಸಿದ್ಧೇಶ್ವರಿಯ ದರ್ಶನ ತೆಗೆದುಕೊಂಡರು. ಅಲ್ಲಿ ಕೆಲವು ಪವಾಡಗಳನ್ನುಮಾಡಿ ಬ್ರಹ್ಮೀಭೂತರಾದರು.

ಶ್ರೀ ಆಚಾರ್ಯರ ಜನ್ಮಸ್ಥಾನವು ಕೇರಳ (ಕಾಲಟಿ) ಎಂಬುವದರಲ್ಲಿ ವ್ಯಾಸಾಚಲೀಯ, ಚಿದ್ವಿಲಾಸೀಯ, ಮಾಧವೀಯ ಮೊದಲಾದ ಶಂಕರ ದಿಗ್ವಿಜಯಗಳ ಒಮ್ಮತವಿದೆ. ಆದರೆ ಅವರು ಬ್ರಹ್ಮೀಭೂತರಾದ ಬಗೆಗೆ ಭಿನ್ನ ಭಿನ್ನ ಅಭಿಪ್ರಾಯಗಳಿರುವುದು ಕಂಡುಬರುವುದು. ಒಟ್ಟಾರೆ ಹೇಳಬೇಕೆಂದರೆ ಶ್ರೀ ಶಂಕರರು ಎಲ್ಲಿ ಯಾವ ಪ್ರಕಾರವಾಗಿ ಇಹಲೋಕಯಾತ್ರೆ ಮುಗಿಸಿದರೆಂಬುದು ಯಾರಿಗೂ ತಿಳಿಯದು ಈ ವಿಷಯಕ್ಕೆ ಕಲ್ಪಿತ ಕಥೆಗಳಿಗೇನೂ ಕೊರತೆ ಇಲ್ಲ. ಅವುಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ವಿವರಿಸಿದ್ದೇವೆ.

ಶ್ರೀ ಆಚಾರ್ಯರು ಬೌದ್ಧರೊಡನೆ ವಾದಮಾಡುವ ಪೂರ್ವದಲ್ಲಿ ಕೊಪ್ಪರಿಗೆಯಲ್ಲಿ ಎಣ್ಣೆಯನ್ನು ಕಾಯಿಸುತ್ತಿದ್ದರಂತೆ. ಸೋತರೆ ಅವರನ್ನು ಎಣ್ಣೆಯಲ್ಲಿ ಹಾಕಿ ಕೊಲ್ಲುತ್ತಿದ್ದರಂತೆ. ಒಮ್ಮೆ ಅವರು ತಿಬೇತ್‌ದಲ್ಲಿ ತಾಂತ್ರಿಕರಾದ ಬೌದ್ಧರನ್ನು ವಾದದಲ್ಲಿ ಗೆದ್ದಮೇಲೆ ಶಿಷ್ಯನಾದ ಆನಂದಗಿರಿಯು ಪೂಜ್ಯರೇ! ಈ ಜಗತ್ತು ನಿರವಧಿಕವಾಗಿದೆ; ಎಲ್ಲಿಯವರೆಗೆ ಹೀಗೆ ವಾದಮಾಡುತ್ತ ಇರುವುದಕ್ಕಾದೀತು! ಎನ್ನಲು ಆಚಾರ್ಯರು ಶಿಷ್ಯನ ಮಾತಿಗೆ ಒಪ್ಪಿ ಆ ಕೊಪ್ಪರಿಗೆಯನ್ನು ಅಲ್ಲಿಯೇ ತಿರುವಿ:ಹಾಕಿದರಂತೆ. ಆ ಸ್ಥಾನಕ್ಕೆ "ಶಂಕರ ಕಟಾಹ"ಎಂದು ಈಗಲೂ ಅನ್ನುತ್ತಿರುವರಂತೆ.

ಓರ್ವ ಬೌದ್ಧ ಸನ್ಯಾಸಿಯು ಶ್ರೀ ಶಂಕರಾಚಾರ್ಯರನ್ನು ವಾದದಲ್ಲಿ ಸೋಲಿಸಿದನು. ಅವರು ಮೊದಲೇ ಗೊತ್ತುಪಡಿಸಿದಂತೆ ಕಾದ ಎಣ್ಣೆಯಲ್ಲಿ ಬಿದ್ದು ಮೃತರಾದರಂತೆ.

ತಿಬೇತ್‌ದಲ್ಲಿ ಒಬ್ಬ ಲಾಮಾನು ಆಚಾರ್ಯರನ್ನು ತಾಂತ್ರಿಕ ಪ್ರಯೋಗ ದಿಂದ ಅಲ್ಲಿಯೇ ಕೊಂದು ಹಾಕಿದನು. (ಸಂ-ಭ-ವೃ-ಸಾ-ಸರ್ವಸ್ವ)

ತಮ್ಮ ಜೀವನದ ಗುರಿಯು ನೇರವೇರಿದುದನ್ನು ಕಂಡು ತಮ್ಮಲ್ಲಿರುವ ದಂಡಕಮಂಡಲಗಳನ್ನು ತ್ಯಜಿಸಿದರು. ಅವು ಮುಂದೆ ಅನುಕ್ರಮವಾಗಿ ಗಿಡ, ಮತ್ತು ನದಿಯಾಗಿ ಮಾರ್ಪಟ್ಟವು. ಇಲ್ಲಿಗೆ ಶ್ರೀ ಶಂಕರಾಚಾರ್ಯರು ದತ್ತಾತ್ರೇಯ ವಾಸಿಯಾದರು. (ಗುರುವಂಶಕಾವ್ಯ)

ಅವರು ಯಾವ ರೀತಿಯಿಂದಲೇ ದೇಹ ಬಿಟ್ಟರಲಿ ೩೨ ನೆಯ ವಯಸ್ಸಿಗೆ ಪರಂಧಾಮ ಹೊಂದಿದ ಬಗ್ಗೆ ಮಾತ್ರ ಒಮ್ಮತವಿದೆ.

## ನೃಸಿಂಹ ಜಯಂತಿ

### ವೈಶಾಖ ಶುದ್ಧ ೧೪

ಪೂರ್ವ ಕಾಲದಲ್ಲಿ ಹಿರಣ್ಯಕಶ್ಯಪ, ಹಿರಣ್ಯಾಕ್ಷರೆಂಬ ಇಬ್ಬರು ಸಹೋದ ರರಾದ ರಾಕ್ಷಸರು ತಮ್ಮ ಕ್ರೂರ ಕೃತ್ಯಗಳಿಂದ ಎಲ್ಲೆಡೆಯಲ್ಲಿಯೂ ದುಃಖ ವನ್ನುಂಟು ಮಾಡುತ್ತ ಹಾ ಹಾ ಕಾರವನ್ನೆಬ್ಬಿಸಿದ್ದರು. ಶ್ರೀ ವಿಷ್ಣುವು ವರಾಹ ಅವತಾರದಿಂದ ಹಿರಣ್ಯಾಕ್ಷನನ್ನು ಕೊಂದು ಲೋಕಕ್ಕೆ ಶಾಂತಿಯನ್ನುಂಟು ಮಾಡಿದನು. ದೇವದಾನವರಿಗೆ ಮೊದಲೇ ದ್ವೇಷವಷ್ಟೇ! ಅದರಲ್ಲಿ ಸಹೋದ ರನು ಸತ್ತು ಹೋದುದರಿಂದ ಹಿರಣ್ಯಕಶ್ಯಪನ ಕ್ರೋಧಾಗ್ನಿಯು ಮೇಲೆ ಎಣ್ಣೆ ಎರಚಿದಂತಾಯಿತು.ಆಗ ಸಂತಪ್ತನಾದ ಹಿರಣ್ಯಕಶ್ಯಪನು ಸುರರನ್ನು ಸಮೂಲ ವಾಗಿ ಸಂಹರಿಸುವೆನೆಂದು ವೀರಪ್ರತಿಜ್ಞೆಯನ್ನು ಮಾಡಿದನು. ಅದರಲ್ಲಿ ತನ್ನ ಸಹೋದರನನ್ನು ಕೊಂದು ವಿಷ್ಣುವಿನ ಸೇಡು ತೀರಿಸಿಕೊಳ್ಳಬೇಕೆಂದು ಆತುರ ವುಳ್ಳವನಾದನು. ಈ ಕಾರ್ಯವು ಕೈಗೂಡಬೇಕಾದರೆ ಮೊದಲು ತಾನು ಬ್ರಹ್ಮ ದೇವನಿಂದ ವರವನ್ನು ಪಡೆದು ಅಮರನಾಗಬೇಕೆಂದು ನಿರ್ಧರಿಸಿ, ತಪಸ್ಸನ್ನಾ ಚರಿಸಹತ್ತಿದನು. ಹಿರಣ್ಯ ಕಶ್ಯಪನು ಅಚಲ ಭಕ್ತಿಯಿಂದಲೂ, ಏಕನಿಷ್ಠೆ ಯಿಂದಲೂ ತನ್ನ ಶರೀರದ ಮೇಲೆ ಪರಿವೆ ಇಲ್ಲದವನಾಗಿ ಬ್ರಹ್ಮನ ಆರಾಧನೆ ಯಲ್ಲಿ ಲೀನನಾದನು.

ದೇವರಾಜನಾದ ಇಂದ್ರನು ಈ ಸುಸಂಧಿಯನ್ನು ಸಾಧಿಸಿ, ಸೈನ್ಯ ಸನ್ನದ್ಧನಾಗಿ, ದಾನವರ ಮೇಲೆ ದಂಡೆತ್ತಿಹೋದನು; ಆ ದಿನಗಳಲ್ಲಿ ಪ್ರಲ್ಹಾದನು ಇನ್ನೂ ಗರ್ಭದಲ್ಲಿದ್ದನು. ಇಂದ್ರನು ರಾಕ್ಷಸರನ್ನು ಹೊಡೆದೋಡಿಸಿ, ಅವರ ಪಟ್ಟಣಗಳಲ್ಲಿರುವ ಸಕಲ ಸಂಪತ್ತನ್ನು ಲೂಟಿಮಾಡಿ, ಪ್ರಲ್ಹಾದನ ತಾಯಿಯನ್ನು ಸೆರೆಹಿಡಿದು ತನ್ನ ರಾಜಧಾನಿಯತ್ತ ಹಿಂತಿರುಗಿ ಬರಹತ್ತಿದನು. ಪಾಪ! ಗರ್ಭವತಿಯಾದ ಆ ಅಬಲೆಯು ಬೆದರಿದ ಚಿಗರಿಯಂತೆ ಗಾಬರಿಗೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ದಯಾಳುವಾದ ದೇವರ್ಷಿ ನಾರದನು, ಮಾರ್ಗ ಮಧ್ಯದಲ್ಲಿ ಎದುರಾಗಿ ದೇವೇಂದ್ರನನ್ನು ಕುರಿತು:— "ಇವಳನ್ನೇಕೆ ಸೆರೆಹಿಡಿದಿರುವೆ?" ಎಂದು ಪ್ರಶ್ನಿಸಲು ಇಂದ್ರನು "ನಾರದರೇ ನಾನು ಸ್ತ್ರೀವಧೆಯನ್ನು ಮಾಡುವುದಿಲ್ಲ; ಇವಳ ಗರ್ಭದಲ್ಲಿ ಹಿರಣ್ಯಕಶಿಪುವಿನ ಶಿಶುವಿದೆ. ಅದು ಜನಿಸಿದ ನಂತರ ಅದನ್ನು ಹೊಡೆದು ಇವಳನ್ನು ಬಿಡುತ್ತೇನೆ" ಎಂದನು. ನಾರದ ಮಹರ್ಷಿಯು ದಿವ್ಯದೃಷ್ಟಿಯಿಂದ ನೋಡಿ, "ಸುರೇಂದ್ರ! ಇವಳ ಗರ್ಭದಲ್ಲಿ ಪರಮ ಭಗವದ್ಭಕ್ತನಿರುವನು. ಇವನಿಂದ ನಿನಗೆ ಯಾವ ಭಯವಿಲ್ಲ. ಇವಳನ್ನು ಈಗಲೇ ಬಿಟ್ಟುಬಿಡು" ಎಂದು ನುಡಿದನು. ಇಂದ್ರನು ನಾರದನ ಮಾತಿನಲ್ಲಿ ನಂಬಿಗೆಯುಳ್ಳವನಾಗಿ ಅವಳನ್ನು ಸೆರೆಯಿಂದ ಮುಕ್ತಳನ್ನಾಗಿ ಮಾಡಿದನು. ನಾರದನು ಅವಳನ್ನು ತನ್ನ ಆಶ್ರಮಕ್ಕೆ ಕರೆದೊಯ್ದು, ಸಂತೈಸಿ, ಅವಳ ಮನಸ್ಸಿಗೆ ಪರಿಣಾಮವನ್ನುಂಟುಮಾಡುವ ಭಗವಂತನ ಚರಿತ್ರೆಯನ್ನು ಹೇಳಹತ್ತಿದನು. ಗರ್ಭಾವಸ್ಥೆಯಲ್ಲಿರುವ ಪ್ರಲ್ಹಾದನು ತಾಯಿಯ ಗರ್ಭದಲ್ಲಿಯೇ ಇದ್ದುಕೊಂಡು ಭಗವದ್ಭಕ್ತಿಯುಳ್ಳವನಾಗಿ ಸಮಸ್ತ ಜ್ಞಾನವನ್ನು ಸಂಪಾದಿಸಿಕೊಂಡನು.

ಹಿರಣ್ಯಕಶ್ಯಪನು ತನ್ನ ಅತುಲ ತಪಃ ಪ್ರಭಾವದಿಂದ ಬ್ರಹ್ಮದೇವನನ್ನು ತೃಪ್ತಿಪಡಿಸಿ, ಅವನಿಂದ ತನ್ನ ಇಷ್ಟದಂತೆ ವರವನ್ನು ಪಡೆದು ಹಿಂತಿರುಗಿ ಮನೆಗೆ ಬಂದನು. ಆಗ ನಾರದನು ಪ್ರಲ್ಹಾದನ ತಾಯಿಯನ್ನು ಅವನಲ್ಲಿಗೆ ಕಳುಹಿಸಿಕೊಟ್ಟನು. ಅವಳು ಮುಂದೆ ಸ್ವಲ್ಪ ದಿನಗಳಲ್ಲಿಯೇ ಸಕಲರಿಗೂ ಅತ್ಯಂತ ಅಲ್ಹಾದವನ್ನುಂಟು ಮಾಡುವ ಪ್ರಲ್ಹಾದನಿಗೆ ಜನ್ಮವಿತ್ತಳು. ಶಿಶುವು ದಿನೇ ದಿನೇ ಚಂದ್ರನಂತೆ ಬೆಳೆದು ದೊಡ್ಡವನಾಗುತ್ತ ಐದನೆಯ ವರುಷದಲ್ಲಿ

ಆಡಿ ಇಟ್ಟಾಗ ತಂದೆಯು ಅವನನ್ನು ಗುರುಪುತ್ರರಾದ ಷಂಡ-ಅಮರ್ಕ ಇವರಲ್ಲಿ ವಿದ್ಯಾಭ್ಯಾಸಕ್ಕಾಗಿ ಇರಿಸಿದನು. ಪ್ರಲ್ಹಾದನು ತಾಯಿಯ ಗರ್ಭದಲ್ಲಿದ್ದಾಗಲೇ ಸಮಸ್ತ ಶಾಸ್ತ್ರವನ್ನು ಶ್ರವಣ ಮಾಡಿದವನಾಗಿದ್ದರಿಂದ ಅವನು ಚಿಕ್ಕಮಕ್ಕಳೊಡನೆ ಆಟವಾಡುತ್ತಿರುವಾಗ ಮಾತುಮಾತಿಗೆ ಭಗವದ್ಭಕ್ತಿಯನ್ನೇ ಎತ್ತುತ್ತಿದ್ದನು. ಸ್ವಯಂ ಭಗವನ್ನಾಮ ಸಂಕೀರ್ತನೆ ಮಾಡುತ್ತಿದ್ದನು. ಶಾಲೆಯಲ್ಲಿ ಗುರುಗಳು ಬಂದು ಕಲಿಸಿದರೆ, ಅವನು ಪ್ರಭು ಪ್ರೇಮದ ಪಾಠಪಠಿಸುತ್ತಿದ್ದನು. ಹಿರಣ್ಯ ಕಶಿಪುವು ಒಂದು ದಿನ ಪ್ರಲ್ಹಾದನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು "ಮಗು ನೀನು ಶಾಲೆಯಲ್ಲಿ ಎಲ್ಲರಿಗಿಂತ ಹೆಚ್ಚಿನದನ್ನು ಏನಾದರೂ ಕಲಿತಿದ್ದರೆ ಹೇಳು ನೋಡುವಾ" ಎನ್ನಲು, ಪ್ರಲ್ಹಾದನು—"ಎಲ್ಲ ಪ್ರಪಂಚವನ್ನೂ ತ್ಯಾಗ ಮಾಡಿ ಭಗವದ್ಭಕ್ತಿಯಲ್ಲಿ ಶೀಘ್ರವಾಗಿ ಲೀನನಾಗಬೇಕೆಂದಿರುವೆ, ಇದಕ್ಕಿಂತ ಹೆಚ್ಚಿನದು ಯಾವುದೂ ಇಲ್ಲ" ಎಂದು ನುಡಿದನು. ಮಗನ ಮುಖದಿಂದ "ಭಗವದ್ಭಕ್ತಿ" ಎಂಬ ಶಬ್ದವನ್ನು ಕೇಳಿದೊಡನೆ ಹಿರಣ್ಯ ಕಶಿಪುವಿಗೆ ಕೋಪಾತಿರೇಕವಾಗಿ, ಪಿತ್ತ ನೆತ್ತಿಗೇರಿ ಕಣ್ಣು ಕೆಂಪಾದವು. ಅವನು ಕೆಂಗಿಡಿಯನ್ನು ಕಾರುವವನಾಗಿ ಪ್ರಲ್ಹಾದನನ್ನು ಕೊಲ್ಲಲುದ್ಯುಕ್ತನಾದನು. ಆಗ ಅಲ್ಲಿ ನೆರೆದ ಜನರು:— "ಸ್ವಾಮಿ ಚಿಕ್ಕ ಮಗುವಿನ ಮಾತಿಗೆ ಹೀಗೆ ಸಿಟ್ಟಿಗೇಳಬೇಕೇ!" ಎಂದು ಹಿರಣ್ಯ ಕಶಿಪುವಿಗೆ ದೈನ್ಯೋಕ್ತಿಗಳಿಂದ ಬೇಡಿಕೊಂಡರು. ಆದರೂ ಕ್ರೂರನಾದ ಹಿರಣ್ಯ ಕಶಿಪುವು ತನ್ನ ಮಗನಿಗೆ— "ಎಲಾ ಅಧಮಾ! ಇಂದಿನಿಂದ ನನ್ನಮುಂದೆ ಆ ವಿಷ್ಣುವಿನ ಹೆಸರನ್ನು ಎತ್ತಿದರೆ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲ" ಎಂದು ಬೆದರಿಸಿ ಅವನನ್ನು ಅಲ್ಲಿಂದ ದೂಡಿದನು.

ಪ್ರಲ್ಹಾದನು ತಂದೆಯ ಸಿಟ್ಟಿಗೆ ಹೆದರಲಿಲ್ಲ. ಶಾಲೆಯ ಮಕ್ಕಳು ತಮ್ಮ ತಮ್ಮ ಅಭ್ಯಾಸದಲ್ಲಿ ತೊಡಗಿದ್ದಾರೆ. ಪ್ರಲ್ಹಾದನ ಅಭ್ಯಾಸವೆ ಬೇರೆಯಾಗಿತ್ತು. "ಭಗವನ್ನಾಮಸಂಕೀರ್ತನೆಯೇ ಸತ್ಯವಾದ ಅಭ್ಯಾಸವು; ಸಾಂಸಾರಿಕ ಪದಾರ್ಥಗಳ ಜ್ಞಾನಕ್ಕಾಗಿ ಮಾನವನು ಅಭ್ಯಾಸ ಮಾಡುವುದಾದರೆ ಅವನು ಅಜ್ಞಾನದತ್ತ ಹೊರಳುವನು" ಇವೇ ಮೊದಲಾದ ಅಲೌಕಿಕಮಾತುಗಳನ್ನು ಪ್ರಲ್ಹಾದನು ಶಾಲೆಯಲ್ಲಿ ತನ್ನ ಸಹ ಪಾಠಿಗಳಿಗೆ ಬೋಧಿಸುತ್ತಿದ್ದನು. ಯಾವಾಗ ನೋಡಿ

ದರೂ ಎಲ್ಲರಿಗೂ ಇದೇ ಮಾತನ್ನೇ ಹೇಳುತ್ತಿದ್ದನು. ಇದೊಂದೇ ಅವನ ಉದ್ಯೋಗವಾಗಿತ್ತು. ಹೀಗೆ ಪ್ರಲ್ಹಾದನು ವಿಶಾಲವಾದ ಭಕ್ತಿ ಮಾರ್ಗದಲ್ಲಿ ಕ್ರಮಿಸಹತ್ತಿದನು, ಹಿರಣ್ಯಕಶಿಪನಿಗೆ ಮಗನ ನಡೆ-ನುಡಿಗಳು, ಅತ್ಯಂತ ಕಟುಕಹಿಯಾಗಿ ಪರಿಣಮಿಸಿದವಾದ್ದರಿಂದ ಅವನು ತನ್ನ ಮಗನನ್ನು ಕಡು ವೈರಿಯೆಂದು ಭಾವಿಸಿದನು; ಅವನನ್ನು ಹಲವಾರು ಸಾರೆ ಕೊಲ್ಲಲು ಬಹುವಾಗಿ ಪ್ರಯತ್ನಿಸಿದನು.

ಒಂದು ಸಾರೆ ಹಿರಣ್ಯಕಶ್ಯಪನು ಪ್ರಲ್ಹಾದನನ್ನು ಚಾಂಡಾಲರ ಕೈಯಿಂದ ಉರ್ಲು ಹಾಕಿಸಿದನು. ಭಗವದ್ಭಕ್ತಿಯ ಪ್ರಭಾವದಿಂದ ಅದು ಪ್ರಲ್ಹಾದನಿಗೆ ಕೊರಳಲ್ಲಿ ಹೂಮಾಲೆಯಾಯಿತು. ಮತ್ತೊಂದು ಸಾರೆ ಅವನನ್ನು ಆನೆಯ ಕಾಲಲ್ಲಿ ಹಾಕಿ ತುಳಿಸಿದನು. ಆಗ ಆನೆ ಭಗವದ್ಭಕ್ತನನ್ನು ಎತ್ತಿಕೊಂಡು ತನ್ನ ಬೆನ್ನುಮೇಲೆ ಕುಳ್ಳಿರಿಸಿಕೊಂಡಿತು. ಒಂದು ದಿನ ಪ್ರಲ್ಹಾದನಿಗೆ ಕೊರಳಲ್ಲಿ ಕಲ್ಲುಕಟ್ಟಿ ಕುದಿಯುವ ನೀರಿನಲ್ಲಿ ಚಲ್ಲಿಸಿದನು. ಆಗ ಪ್ರಲ್ಹಾದನು ನೀರಿನ ಮೇಲೆ ತೇಲಾಡಹತ್ತಿದನು. ಮತ್ತೊಮ್ಮೆ ಪ್ರಜ್ವಲಿಸುವ ಉರಿಯಲ್ಲಿ ಚಲ್ಲಿಸಿದನು. ಆಗ ಅಗ್ನಿಯು ನೀರಿನಂತೆ ತಣ್ಣಗಾಯಿತು. ಇನ್ನೊಮ್ಮೆ ಒಂದು ಬಟ್ಟಲಲ್ಲಿ ಭೀಕರ ವಿಷಹಾಕಿ ಕುಡಿಯಲು ಕೊಟ್ಟನು ಆ ವಿಷವು ಪ್ರಲ್ಹಾದನ ಹಸ್ತಸ್ಪರ್ಶದಿಂದ ಅಮೃತವಾಯಿತು. ಒಂದು ದಿನ ಪರ್ವತದ ಶಿಖರದಿಂದ ಕೆಳಗೆ ಸಮುದ್ರದಲ್ಲಿ ನೂಕಿದನು. ಆಗ ಪ್ರಲ್ಹಾದನು ಹಸನ್ಮುಖಿಯಾಗಿ ಕೆಳಗಿಳಿದು ನೀರಿನಲ್ಲಿ ತೇಲಹತ್ತಿದನು. ಒಟ್ಟನಲ್ಲಿ ತಂದೆಯು ಕೊಟ್ಟ ಯಾತನೆಯಿಂದ ಪ್ರಲ್ಹಾದನ ಒಂದು ಕೂದಲು ಸಹ ಕೊಂಕಲಿಲ್ಲ.

ಹಿರಣ್ಯಕಶ್ಯಪನು ಪುನಃ ಗುರುಗಳನ್ನು ಕರೆದು "ಈ ಉದ್ಧಟನಾದ ಹುಡುಗನಿಗೆ ಬುದ್ಧಿಗಲಿಸಿ, ಅಭ್ಯಾಸಮಾಡಿಸಬೇಕೆಂದು" ಹೇಳಿ ಶಾಲೆಗೆ ಕಳುಹಿಸಿದನು. ಪ್ರಲ್ಹಾದನು ಶಾಲೆಗೆ ಹೋಗಿ ಸಹಪಾಠಿಗಳಿಗೆ ತನ್ನ ಮೊದಲಿನ ಪಾಠವನ್ನೇ ಜೋರಾಗಿ ಸುರುವು ಮಾಡಿದನು. ಅವನ ಉಪದೇಶದ ಪ್ರಭಾವದಿಂದ ಶಾಲೆಯಲ್ಲಿ ಎಲ್ಲ ಹುಡುಗರೂ ಭಗವದ್ಭಕ್ತರಾದರು. ಇದರಿಂದ ಸಿಟ್ಟಿಗೆದ್ದ ಷಂಡ ಅಮರ್ಕರು ತಮ್ಮ ಮಾಯಾಜಾಲದಿಂದ 'ಕೃತ್ಯಾ' ಎಂಬ ಪಿಶಾಚಿನಿಯನ್ನು ನಿರ್ಮಿಸಿ, ಪ್ರಲ್ಹಾದನನ್ನು ಕೊಲ್ಲಲು ಅವಳಿಗೆ ಆಜ್ಞಾಪಿಸಿದರು.

ಕರಾಲ ಆಕೃತಿಯ ಆ ಪಿಶಾಚಿನಿಯು, ಭೀಕರವಾದ ಶೂಲದಿಂದ ಪ್ರಲ್ಹಾದನ ಎದೆಗೆ ಇರಿಯಲಾಗಿ ಭಗವಂತನ ಕೃಪೆಯಿಂದ ಅವನಿಗೆ ಏನೂ ಅಪಾಯ ವಾಗಲಿಲ್ಲ. ಶೂಲೆಯು ಮುರಿದು ಚೂರುಚೂರಾಯಿತು. ಪರಾಸ್ತಗಳಾದ ಪಿಶಾಚಿನಿಯು ತಿರುಗಿಬಂದು ಷಂಡ ಅರ್ಮಕ ಇವರೀರ್ವರನ್ನೂ ಕೊಂದು ತಾನು ಅದೃಶ್ಯಳಾದಳು. ಆಗ ಪ್ರಲ್ಹಾದನು ತನ್ನ ಸಲುವಾಗಿ ಮರಣಹೊಂದಿದ ಉಭಯಗುರುಗಳ ದುರ್ದಶೆಯನ್ನು ಕಂಡು, ಮರ ಮರನೇ ಮರುಗಿ ದೀನ ವಾಣಿಯಿಂದ ದೇವರಿಗೆ ನಾನಾ ರೀತಿಯಾಗಿ ಪ್ರಾರ್ಥಿಸಿದನು.

"ದೇವನನ್ನು ಬೆಂಕಿಯಲ್ಲಿ ಚಲ್ಲಿದವರೂ, ಗುಡ್ಡದ ತುದಿಯಿಂದ ನೂಕಿದ ವನೂ ಇನ್ನೂ ಹಲವು ವಿಧವಾಗಿ ಯಾತನೆ ಕೊಟ್ಟವರೆಲ್ಲರೂ ನನ್ನ ಆತ್ಮೀಯ ರಾಗಿರುವರು. ಯಾರಿಗೂ ಕೇಡು ಬಗೆಯುವ ಇಚ್ಛೆ ನನಗಿಲ್ಲ. ನನಗಾಗಿ ಪ್ರಾಣ ನೀಗಿದ ಈ ಉಭಯ ಗುರುಗಳಿಗೆ ಜೀವದಾನ ಮಾಡಬೇಕೆಂದು" ಅನನ್ಯ ಭಕ್ತಿಯಿಂದ ಭಗವಂತನಿಗೆ ಬೇಡಿಕೊಂಡನು. ಪ್ರಲ್ಹಾದನ ಪ್ರಾರ್ಥನೆ ಮೇರೆಗೆ ಷಂಡ-ಅರ್ಮಕ, ಇವರಿಬ್ಬರೂ ನಿದ್ರೆಯಿಂದ ಎಚ್ಚತ್ತವರಂತೆ ಎದ್ದು ಸಂತೋಷಭರಿತರಾಗಿ ಪ್ರಲ್ಹಾದನಿಗೆ ಆಶೀರ್ವದಿಸಿದರು.

ಇದನ್ನು ನೋಡಿ ಹಿರಣ್ಯಕಶಿಪುವಿಗೆ ಸಿಡಿಲು ಬಡಿದಂತಾಯಿತು. ಅತಿ ಸಂತಾಪದಿಂದ ಖಡ್ಗಧಾರಿಯಾಗಿ ಸೇಡು ತೀರಿಸಿಕೊಳ್ಳುವೆನೆಂದು ಗರ್ಜಿಸುತ್ತ ಪ್ರಲ್ಹಾದನನ್ನು ಒಂದು ಕಂಭಕ್ಕೆ ಕಟ್ಟಿ "ಪ್ರಲ್ಹಾದಾ ಕುಲಾಧಮಾ ನನ್ನನ್ನು ಗೆಲ್ಲುವವರೂ, ಕೊಲ್ಲುವವರೂ ಲೋಕದಲ್ಲಿ ಯಾರೂ ಇಲ್ಲ. ಬಲ್ಲಿಯಾ! ನಿನ್ನನ್ನೂ ನಿನ್ನ ಭಗವಂತನನ್ನೂ ಈಗಲೇ ಯಮಪುರಿಗಟ್ಟುವೆ. ತೋರಿಸು ಎಲ್ಲಿದ್ದಾನೆ ಆ ನಿನ್ನ ವಿಷ್ಣು " ಎಂದೊಡನೆ ಪ್ರಲ್ಹಾದನು ತಂದೆಯ ಅರ್ಭಟಕ್ಕೆ ಬೆದರಲಿಲ್ಲ. 'ಸರ್ವತ್ರ ಇದ್ದಾನೆ. 'ನಿನ್ನಲ್ಲಿ, ನನ್ನಲ್ಲಿ, ಖಡ್ಗದಲ್ಲಿ, ಕಂಭದಲ್ಲಿ ಎಲ್ಲೆಡೆಯಲ್ಲಿ ಶ್ರೀಹರಿಯು ವ್ಯಾಪ್ತನಾಗಿದ್ದಾನೆ" ಎಂದನು. ಅತಿ ಸಂತಾಪ ಯುಕ್ತನಾದ ಹಿರಣ್ಯಕಶ್ಯಪನು "ಈ ಕಂಭದಲ್ಲಿದ್ದಾನೋ?" ಎಂದು ಕೇಳಲು "ಅಹುದು" ಎಂದು ಉತ್ತರ ಬಂದೊಡನೆ ಹಿರಣ್ಯಕಶ್ಯಪನು ಖಡ್ಗವನ್ನು ಮೇಲಕ್ಕೆತ್ತಿ ಸಿಟ್ಟನಿಂದ ಕಂಭಕ್ಕೆ ಹೊಡೆದೊಡನೆಯೇ ಶ್ರೀ ವಿಷ್ಣುವು ನೃಸಿಂಹಾವತಾರವನ್ನು ತಾಳಿ, ಸಿಂಹಗರ್ಜನೆಯೊಂದಿಗೆ ಕಂಭದಿಂದ-ಹೊರ

ಹೊರಟು, ವೈಶಾಖಶುದ್ಧ ತ್ರಯೋದಶಿಯ ಸಂಧಿಕಾಲದಲ್ಲಿ ಹೊಸ್ತಿಲಮೇಲೆ ಹಿರಣ್ಯಕಶ್ಯಪನ ಹೊಟ್ಟೆಯನ್ನು ಉಗುರುಗಳಿಂದ ಹರಿದು, ಅವನನ್ನು ಕೊಂದು ಲೋಕಕ್ಕೆ ಶಾಂತಿಯನ್ನುಂಟುಮಾಡಿದನು. ಅಲ್ಲದೇ ತನ್ನ ಸದ್ಭಕ್ತನಾದ ಪ್ರಲ್ಹಾದನನ್ನು ಸಂರಕ್ಷಿಸಿದನು.

## ಶಿರಹಟ್ಟಿ ಶ್ರೀ ಫಕೀರೇಶ್ವರ ಜಾತ್ರೆ

### –ವೈಶಾಖ ಶುದ್ಧ ಅಗಿಹುಣ್ಣಿವೆ–

ಗದಗಿನ ದಕ್ಷಿಣ ದಿಕ್ಕಿಗೆ ಹನ್ನೆರಡು ಮೈಲುಗಳ ಮೇಲೆ ಶಿರಹಟ್ಟಿಯು ತಾಲೂಕಿನ ಸ್ಥಳವಾಗಿದೆ. ಇದು ಬ್ರಿಟಿಶ್‌ರ ಆಳಿಕೆಯಲ್ಲಿ ಸಾಂಗಲಿ ಸಂಸ್ಥಾನಕ್ಕೆ ಸೇರಿತ್ತು. ಇಲ್ಲಿ ಶಾಲೆಗಳೂ, ಆಸ್ಪತ್ರೆಯೂ, ಮುನಸಿಪಾಲಿಟಿಯೂ ಉಂಟು. ಮೊದಲು ಇಲ್ಲಿ ಉರಟು ಬಟ್ಟೆ ಹಾಗೂ ಕಂಬಳಿಗಳು ಹುಟ್ಟುತ್ತಿದ್ದವು. ಇಲ್ಲಿ ನೀರು ಸಮೃದ್ಧಿಯಾಗಿದ್ದು ಹವೆಯು ಆರೋಗ್ಯಕರವಾಗಿದೆ. ಕೋಟೆಯು ಊರಿಗೆ ಹೊಂದಿರುತ್ತದೆ. ಸುಮಾರು ೩೦೦ ವರುಷಗಳ ಹಿಂದೆ 'ಅವ್ವಲಿಂಗವ್ವ' ಎಂಬ ಹೆಸರಿನ ವೀರಶೈವ ಧರ್ಮದ ಹೆಣ್ಣುಮಗಳು ಒಂದು ಭವ್ಯವಾದ ಕಲ್ಲಿನ ಮಠವನ್ನು ಕಟ್ಟಿದ್ದಾಳೆಂದು ಇತಿಹಾಸದಿಂದ ತಿಳಿದುಬರುವದು. ಅದಕ್ಕೆ ಅವ್ವಲಿಂಗವ್ವನ ಮಠವೆಂದು ಈಗಲೂ ಅನ್ನುವದುಂಟು. ಕಲ್ಲಿನ ಕಂಬಗಳಲ್ಲಿಯೂ, ಗೋಡೆಗಳಲ್ಲಿಯೂ ಕೆತ್ತಿದ ಚಿತ್ರಗಳು ನೋಡತಕ್ಕಂತವುಗಳಿರುತ್ತವೆ. ಇಮಾರತಿನ ಕೆಲಸವು ಪೂರ್ಣ ಮುಗಿದಿಲ್ಲ. ಅದು ಈಗ ನಷ್ಟಪ್ರಾಯವಾಗಿದೆ.

ಅವ್ವಲಿಂಗವ್ವನ ಮಠದ ವಾಯುವ್ಯ ದಿಕ್ಕಿಗೆ ಶ್ರೀ ಫಕೀರಸ್ವಾಮಿಯ ಮಠವಿದೆ. ಆವಾರವು ದೊಡ್ಡದೂ, ಪುರಾತನ ಕಾಲದ್ದೂ ಇದೆ. ಶ್ರೀ ಫಕೀರೇಶ್ವರನ ಜಾತ್ರೆಯು ವೈಶಾಖ ಶುದ್ಧ ಅಗೀಹುಣ್ಣಿವೆಯ ದಿವಸ ವೈಭವ ಪೂರ್ಣವಾಗಿ ನಡೆಯುತ್ತದೆ. ಕರ್ನಾಟಕದ ಬೇರೆ ಬೇರೆ ಭಾಗದಲ್ಲಿ ಶ್ರೀ ಫಕೀರೇಶ್ವರನ ಅನೇಕ ಶಾಖಾಮಠಗಳು ಉಂಟು. ಎಲ್ಲ ಮಠಗಳು ಶಿರಹಟ್ಟಿ ಮಠದ ಸ್ವಾಮಿಗಳ ಆಧಿಪತ್ಯದಲ್ಲಿರುತ್ತವೆ. ಪ್ರತಿವರುಷ ಜರಗುವ ಜಾತ್ರೆಗೆ ದೂರ ದೂರ

ಪ್ರಾಂತದಿಂದ ಲಕ್ಷಾಂತರ ಜನರು ಬಂದು ಸೇರುತ್ತಾರೆ. ಆ ಸಮಯಕ್ಕೆ ಜರಗುವ ಇಲ್ಲಿಯ ದನಗಳ ಜಾತ್ರೆಯು ಸುಪ್ರಸಿದ್ಧವಾಗಿದೆ.

ಇತಿಹಾಸಕಾರರು ಶ್ರೀ ಫಕೀರಸ್ವಾಮಿಯ ಕಥೆಯನ್ನು ಕೆಳಗಿನಂತೆ ಹೇಳಿದ್ದಾರೆ:— ಓರ್ವ ವೀರಶೈವ ಧರ್ಮದ ಹುಡುಗನು ಬಹುಕಾಲ ದೇಶ ಸಂಚಾರ ಮಾಡಿ ಒಬ್ಬ ಮುಸಲ್ಮಾನ ಅವಲಿಯಾನ ಶಿಷ್ಯನಾಗಿ, ಅವನ ಸೇವೆಯನ್ನು ಬಹಳ ದಿವಸಗಳವರೆಗೂ ಮಾಡಿ, ಅವನಿಂದ ಅನುಗ್ರಹ ಹೊಂದಿ ಫಕೀರೇಶನೆಂಬ ಹೆಸರಿನಿಂದ ಅದ್ಭುತ ಪವಾಡಗಳನ್ನು ಮಾಡಿದನು. ಈ ಪ್ರಕಾರವಾದ ಇತಿಹಾಸಕಾರರ ಅಭಿಪ್ರಾಯವು. ಶ್ರೀ ಮಠದಿಂದ ೧೯೪೮ ರಲ್ಲಿ ಪ್ರಕಟಿಸಲ್ಪಟ್ಟ ಶ್ರೀ ಫಕೀರೇಶ್ವರನ ಚರಿತ್ರಾಂಶಕ್ಕಿಂತ ಐತಿಹಾಸಿಕ ವಿಷಯವು ಸ್ವಲ್ಪ ಭಿನ್ನವಾಗಿರುತ್ತದೆ.

ವಿಜಾಪುರದ ವೀರಶೈವ ಧರ್ಮದ ಶಿವಪ್ಪ ಎಂಬ ಗೃಹಸ್ಥನಿಗೆ ಗೌರಮ್ಮ ಎಂಬ ಧರ್ಮಪತ್ನಿ ಇದ್ದಳು. ಅವಳು ಬಹಳ ಕಾಲದ ವರೆಗೆ ಮಕ್ಕಳಿಲ್ಲದವಳಾಗಿ ಸುಮಾರು ಕ್ರಿ. ಶ. ೧೬ ರಲ್ಲಿ ಖಾಜಾ ಅಮೀನದೀನ ಎಂಬ ಮುಸಲ್ಮಾನ ಸಾಧುವಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದಳು. ತನಗೆ ಪುತ್ರಪ್ರಾಪ್ತಿಯಾದರೆ ಮೊದಲಿನ ಮಗನನ್ನು ಕೊಡುತ್ತೇನೆಂದು ಆ ಸಾಧುವಿಗೆ ನಮ್ರತೆಯಿಂದ ಬೇಡಿಕೊಂಡಳು. ಹೀಗಿರುವಲ್ಲಿ ಕೆಲವು ದಿವಸಗಳಲ್ಲಿ ಅವಳು ಒಂದು ಗಂಡು ಮಗುವಿಗೆ ಜನ್ಮವಿತ್ತಳು. ಆ ಕೂಸು ದಿನೇ ದಿನೇ ಬೆಳೆದು ದೊಡ್ಡದಾಯಿತು. ಸತಿಪತಿಗಳು ಪುತ್ರವ್ಯಾಮೋಹದಲ್ಲಿ ಬಿದ್ದು ಖಾಜಾ ಅಮೀನನಿಗೆ ವಚನಕೊಟ್ಟುದನ್ನು ಮರೆತುಬಿಟ್ಟರು. ಆ ಹುಡುಗನಿಗೆ ಅಕಸ್ಮಾತ್ ಭೀಕರವಾದ ಸೀಕು ಆಯಿತು. ಅದು ಔಷಧೋಪಚಾರದಿಂದ ವಾಸಿಯಾಗಲಿಲ್ಲ. ಕೊನೆಗೆ ಆ ಹುಡುಗನು ಮರಣೋನ್ಮುಖನಾದ. ನಿರುಪಾಯರಾದ ದಂಪತಿಗಳು ತಮ್ಮ ಮಗನನ್ನು ತಂದು ಖಾಜಾ ಅಮೀನ ದೀನನಿಗೆ ಅರ್ಪಿಸಿದರು. ಅವನ ದೃಷ್ಟಿ ಬಿದ್ದೊಡನೆ ಹುಡುಗನ ಸೀಕುವಾಸಿಯಾಯಿತು. ಆ ಕಾಲದಿಂದ ಅವನು ಸಾಧುವಿನಲ್ಲಿಯೇ ಇರಹತ್ತಿದನು. ಇದರಿಂದ ಅವನಿಗೆ ಫಕೀರೇಶನೆಂಬ ಹೆಸರು ಬಂತು. ಅವನು ಬಾಲ್ಯಾವಸ್ಥೆಯಲ್ಲಿರುವಾಗಲೇ ತನ್ನ ಅಲೌಕಿಕ ಶಕ್ತಿಯಿಂದ ಅನೇಕ ಜನ ಶಿಷ್ಯರನ್ನಾಗಿ ಮಾಡಿಕೊಂಡನು.

ವಿಜಾಪುರದಲ್ಲಿ ಒಂದುದಿನ ಫಕೀರೇಶನ ಭಕ್ತನ ಮನೆಗೆ ಕಳ್ಳರು ಕನ್ನವಿಕ್ಕಿ ಎಲ್ಲ ವಸ್ತು ಒಡವೆಗಳನ್ನು ಅಪಹರಿಸಿಕೊಂಡು ಹೋಗುತ್ತಿರುವಷ್ಟರಲ್ಲಿ ಅವರಿಗೆ ಕಣ್ಣುಗಳು ಹೋಗಿ ಸಿಕ್ಕಿಬಿದ್ದರು. ಆಗ ಫಕೀರೇಶನು ತನ್ನ ಭಕ್ತರನ್ನು ರಕ್ಷಿಸಿದ್ದಲ್ಲದೇ ಅಪರಾಧಿಗಳಾದ ಕಳ್ಳರಿಗೆ ಕಣ್ಣುಗಳನ್ನುಕೊಟ್ಟು ಕರುಣಿಸಿದನು ಹೀಗೆ ಅವನು ಕೆಲವು ಪವಾಡಗಳನ್ನು ಅಲ್ಲಿ ತೋರಿಸುವವನಾಗಿ ತನ್ನ ಗುರುವಿನ ಅಪ್ಪಣೆ ಪಡೆದು ಜಗತ್ಕಲ್ಯಾಣಕ್ಕಾಗಿ ದೇಶಸಂಚಾರ ಮಾಡತೊಡಗಿದನು.

ಚಿತ್ರಕಲ್‌ದುರ್ಗ, ಹೈದರಾಬಾದ ಮೊದಲಾದ ಪಟ್ಟಣಗಳಲ್ಲಿ ಅದ್ಭುತ ಪವಾಡಗಳನ್ನು ತೋರಿಸಿದ್ದಲ್ಲದೆ ದಿಲ್ಲಿಗೆ ಹೋಗಿ ಅಕಬರ ಬಾದಶಹನಿಗೆ ಬೋಧೆಮಾಡಿದನು. ಅದರ ಕುರುಹಿಗಾಗಿ ಶೀಲ, ಶಿಕ್ಕೆ ರಣಬಿಲ್ಲಗಳನ್ನು ಪಡೆದನು. ಇತ್ಯಾದಿ ಚರಿತ್ರಾಂಶದಿಂದ ಶ್ರೀ ಫಕೀರೇಶನು ಕ್ರಿ. ಶ. ೧೬ ರಲ್ಲಿ ಪವಾಡಗಳನ್ನು ಮಾಡಿರುವುದಾಗಿ ತಿಳಿದುಬರುತ್ತದೆ. ಪರಮಾತ್ಮನು ಮಾನವ ಪ್ರಾಣಿಯ ಉದ್ಧಾರಕ್ಕಾಗಿ ಅನಂತ ರೂಪಗಳನ್ನು ತೊಟ್ಟು ಅವತರಿಸುವುದುಂಟು. ಫಕೀರೇಶನು ಶ್ರೀ ಖಾಜಾ ಅಮೀನ ದೀನನ ಅಂತೇವಾಸಿಯಾದುದರಿಂದ ಅವನ ವೇಷಭೂಷಣಗಳು ಮುಸಲ್ಮಾನ ಧರ್ಮವನ್ನನುಸರಿಸಿದ್ದವು. ಶ್ರೀ ಫಕೀರೇಶನು ನಿರ್ವಾಣ ಹೊಂದಿದ ನಂತರ ಅವನ ಗದ್ದಿಗೆಯು ಗೋರಿಯಂತೆ ಕಟ್ಟಲ್ಪಟ್ಟಿತು. ಹೀಗೆಯೇ ಅವನ ತರುವಾಯ ಬಂದ ಸ್ವಾಮಿಗಳ ಸಮಾಧಿಯ ಮೇಲೆ ಗೋರಿಗಳನ್ನು ಕಟ್ಟುವುದು ಪರಂಪರಾಗತವಾಗಿದೆ ಮೂಲ ಫಕೀರಸ್ವಾಮಿಯು ವೀರಶೈವನಿದ್ದುದರಿಂದ ಜಗದ್ಗುರು ಪಂಚಾಚಾರ್ಯರ ಶಾಖಾನುವರ್ತಿಗಳಾದ ಗುರುಸ್ಥಳದ ವಟುಗಳು ಈ ಮಠದ ಪಟ್ಟಾಧಿಕಾರವನ್ನು ವಹಿಸುತ್ತಾರೆ. ಈ ಪದ್ಧತಿಯು ಮೊದಲಿನಿಂದ ಬಂದುದಾಗಿದೆ. ಈ ಮಠದ ಸ್ವಾಮಿಗಳ ವೇಷಭೂಷಣಾದಿಗಳು ಮುಸಲ್ಮಾನರಂತೆ ಇದ್ದಾಗ್ಯೂ ದೇಹದಲ್ಲಿ ಸದಾ ಶಿವಲಿಂಗವನ್ನು ಧರಿಸುತ್ತಾರೆ. ಅವರು ತ್ರಿಕಾಲಗಳಲ್ಲಿ ಇಷ್ಟಲಿಂಗ ಪೂಜಾಸಕ್ತರಾಗಿರುತ್ತಾರೆ. ಈ ಮಠದಲ್ಲಿ ಪಟ್ಟಾಧಿಕಾರ ವಹಿಸಿದವರಲ್ಲಿ ಅನೇಕ ಸ್ವಾಮಿಗಳು ಪವಾಡಪುರುಷರಾಗಿ ಶಿವಯೋಗಿಗಳೆಂದು ಹೆಸರಾಗಿರುವರು. ಅವರುಗಳಲ್ಲಿ ಎಂಟನೆಯ ಪಟ್ಟದ ಲಿಂಗೈಕ್ಯ ಶ್ರೀ ಶಿವಯೋಗಿ ಸ್ವಾಮಿಗಳು ಶಿವಪೂಜಾಲೋಲರೂ ಶಾಪಾನುಗ್ರಹ ಸಮರ್ಥರೂ ಆಗಿದ್ದರು. ಅವರ

ತರುವಾಯ ಒಂಭತ್ತನೆಯ ಪಟ್ಟದ ಈಗಿನ ಶ್ರೀ ಚೆನ್ನವೀರ ಸ್ವಾಮಿಗಳು ಶ್ರೀಮಠದ ಅಧಿಕಾರಾರೂಢರಾಗಿರುವರು. ಇವರು ಶಿವಪೂಜಾದುರಂಧರರೂ ದಾನಿಗಳೂ ಆಗಿರುವರಲ್ಲದೆ ಅನೇಕ ಶಾಲೆ, ಸ್ಕೂಲ, ಕಾಲೇಜುಗಳನ್ನು ಸ್ಥಾಪಿಸಿ ನಾನಾ ಮುಖವಾಗಿ ದೇಶದ ಏಳ್ಗೆಗೆ ಕಾರಣರಾಗಿರುವರು.

## ಜ್ಯೇಷ್ಠ ಮಾಸ

ಜ್ಯೇಷ್ಠ ಹಾಗೂ ಆಷಾಢ, ಈ ಎರಡು ಮಾಸಗಳು ಗ್ರೀಷ್ಮ ಋತು ಪ್ರಧಾನವಾಗಿರುತ್ತವೆ. ಹಿಂದಿನ ವಸಂತ ಋತುವಿನಲ್ಲಿ ಪ್ರಕೋಪ ಹೊಂದಿದ ಕಫವು ಜ್ಯೇಷ್ಠ ಮಾಸದಲ್ಲಿ ಗ್ರೀಷ್ಮ ಋತುವಿನ ಪ್ರಭಾವದಿಂದ ಶಮನ ಹೊಂದುತ್ತದೆ.

"ಗ್ರೀಷ್ಮೋರೂಕ್ಷೋತಿ ಕಟುಕಃ ಪಿತ್ತಕೃತ್ ಕಫನಾಶನಃ" ||
ಎಂಬಂತೆ ಈ ಮಾಸದಲ್ಲಿ ಪಿತ್ತವು ವಿರೋಪ ಹೊಂದುತ್ತದೆ ಆದ್ದರಿಂದ
"ಸ್ವಾದುಸ್ನಿಗ್ಧ ಹಿಮಂ ಲಘುದ್ರವ ಮಯಂದ್ರವ್ಯಂ ರಸಾಲಾಂಸಿತಾಂ |
ಸಕ್ತುಕ್ಷೀರ ದಶಾಂಗುಲಾನಿಸಿತಯೂ ಶಾಲಿಂ ರಸಂ ಮಾಂಸಜಂ ||
ಶೀತಾಂಶುಂ ಸ್ವಪನಂದಿವಾಮಲಯಜಂ ಶೀತಂ ಪಯಃ ಪಾನಕಂ |
ಸೇವೇತೋಷ್ಣದಿನೇ ತ್ಯಜೇತ್ತು ಕಟುಕಕ್ಷಾರಾಮ್ಲ ಘರ್ಮಶ್ರಮಾನ್ ||

ಗ್ರೀಷ್ಮ ಋತುವುಳ್ಳ ಈ ಮಾಸದಲ್ಲಿ ಬಿಸಿಲು ಅಧಿಕವಾಗಿರುವುದರಿಂದ ಅಪಥ್ಯಕಾರಕ ಆಹಾರ ಸೇವನೆಯಿಂದ ಮಾನವನಿಗೆ ಅನಂತರೋಗರುಜಿನ ಗಳು ಸಂಭವಿಸುವವು. "ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ ಎಂಬ" ನಾಣ್ಣುಡಿ ಇದೆ. ಈ ಬೇಸಿಗೆ ಕಾಲದಲ್ಲಿ ಉದ್ಭವಿಸುವ ರೋಗಗಳಿಂದ ದೂರ ಉಳಿಯುವುದಕ್ಕಾಗಿ ಕೆಳಗೆ ವಿವರಿಸಿದ ಆಹಾರ ವಿಹಾರ ವನ್ನು ಸೇವಿಸುವುದು ಉಚಿತವಾಗಿದೆ.

ಈ ಬೇಸಿಗೆಯ ಕಾಲದಲ್ಲಿ—ಮಧುರರಸ ಪ್ರಧಾನವಾದ ಅಂದರೆ ಯಾಲಕ್ಕಿ ದ್ರಾಕ್ಷಿ, ಪಿಸ್ತಾ, ಕಲ್ಲುಸಕ್ಕರೆ ಮೊದಲಾದವುಗಳನ್ನು ಹಾಕಿ ತಯಾ ರಿಸಿ ಶ್ರೀಖಂಡ, ಪುರಿ ಮೊದಲಾದ ಸ್ವಾದು ಆಹಾರವನ್ನೂ, ಖಸ್ ಗುಲಾಬಿ

ಮೊದಲಾದ ತಂಪಾದ ಪಾನೀಯಗಳನ್ನೂ ಮತ್ತು ಪಚನಕ್ರಿಯೆಗೆ ಹಗುರಾದ ಕಿತ್ತಳೆ, ಮೋಸಂಬಿ ಮೊದಲಾದ ಹಣ್ಣಿನ ರಸವನ್ನೂ ಸೇವಿಸಬೇಕು. ಈ ಉಷ್ಣ ಕಾಲದಲ್ಲಿ ವಿಶೇಷತಃ ಮಾವಿನ ಹಣ್ಣು ಸಿಕ್ಕುವುದುಂಟು. ಇದು ಉಷ್ಣವಿರುವುದರಿಂದ ಅತಿಯಾಗಿ ಸೇವಿಸಬಾರದು. ಹುಳಿ ಅಪಕ್ವ, ಕೊಳೆತ ಮಾವಿನ ಹಣ್ಣನ್ನು ತಿನ್ನುವದರಿಂದ ಕಾಲರಾ ವಾಂತಿ ಅತಿಸಾರ ರೋಗವಾಗುವದುಂಟು. ಈ ಹಣ್ಣನ್ನು ಬಹಳ ಸೇವಿಸುವದರಿಂದ ಕೈಕಾಲುಗಳಲ್ಲಿ ದಾಹ(ಉರಿ) ಉಂಟಾಗುವದು. ಪಿತ್ತಾಧಿಕ್ಯವಾಗುತ್ತದೆ. ಕೊಳೆತ ಹಣ್ಣು-ಕಾಯಿಪಲ್ಲೆ ನಿರಂತರ ಸೇವಿಸುವುದರಿಂದ ಕುಷ್ಟರೋಗವಾಗುತ್ತದೆ. ಮಾವಿನ ಹಣ್ಣನ್ನು ಮುಂಜಾನೆ ಬರಿ ಹೊಟ್ಟೆಯಿಂದ ಸೇವಿಸಬಾರದು. ನಾಷ್ಟಾಮಾಡಿ ತಿನ್ನುವುದು ಉತ್ತಮ. ಈ ಹಣ್ಣನ್ನು ಸೇವಿಸಿ ಕಾಸಿದ ಹಸುವಿನ ಹಾಲನ್ನು ಸ್ವಲ್ಪ ಸೇವಿಸಿದರೆ ಈ ಹಣ್ಣಿನ ಉಷ್ಣಗುಣವು ದೇಹಕ್ಕೆ ತೊಂದರೆ ಕೊಡಲಾರದು ಉತ್ತಮ ಮಾವಿನ ಹಣ್ಣಿನ ರಸವನ್ನು ತೆಗೆದು ಸ್ವಲ್ಪಮಟ್ಟಿಗೆ ನೀರುಹಾಕಿ, ಸಕ್ಕರೆ, ಯಾಲಕ್ಕಿ, ಶುಂಠಿ, ಬೆರಿಸಿ ರಸಾಲ (ಶೀಕರಣೆ) ತಯಾರಿಸುವದುಂಟು ಇದು ಬೇಸಿಗೆಯಲ್ಲಿ ಸೇವಿಸಿದರೆ ಹಿತಕರವಿರುವುದು. ಹೀಗೆಯೇ ಹಾಲಿನಿಂದ ತಯಾರಿಸಿದ ಖೀರು ಮೊದಲಾದ ಸ್ನಿಗ್ಧ, ದ್ರವ ಆಹಾರವು ಈ ತಿಂಗಳಲ್ಲಿ ಆರೋಗ್ಯಕಾರಕವಾಗಿರುವುದು. ಈ ಕಾಲದಲ್ಲಿ ಉಷ್ಣ, ಕಟು, ಕ್ಷಾರ, ಅಮ್ಲ ರಸವುಳ್ಳ ಆಹಾರವನ್ನು ಸೇವಿಸಬಾರದು.

ಮಾನವನು ತನ್ನ ಜೀವನದ ಉದ್ದಕ್ಕೂ ಹಿತ, ಮಿತವಾದ ಆಹಾರ ಸೇವನೆಯಿಂದ ಆರೋಗ್ಯ ದೇಹಿಯಾಗಿ ಇಹ-ಪರಸುಖವನ್ನು ಸಾಧಿಸಬೇಕಾಗುವದು. ಇದನ್ನೇ ಗುರಿಯಾಗಿಟ್ಟುಕೊಂಡು ವ್ರತ, ನಿಯಮ, ಉಪೋಷಣೆ ಇತ್ಯಾದಿ ಧಾರ್ಮಿಕ ಕ್ರಿಯೆಗಳನ್ನು ಆಚರಿಸುವುದುಂಟು. ಧಾರ್ಮಿಕ ಆಚರಣೆಯು ಆರೋಗ್ಯವನ್ನು ಅವಲಂಬಿಸಿಕೊಂಡಿರುತ್ತದೆ. ಆದ್ದರಿಂದ ಈ ತಿಂಗಳಲ್ಲಿ ಹೇಳಲಾದ ಹಬ್ಬಗಳು ಮಾನವನ ಧರ್ಮ ಸಾಧನೆಗಾಗಿ ಇರುತ್ತವಲ್ಲದೆ ಆ ಹಬ್ಬಗಳಲ್ಲಿರುವ ತಿಂಡಿತಿನಸುಗಳು ಮತ್ತು ಮನೋರಂಜನೆಯ ವ್ಯವಹಾರಗಳು ಆರೋಗ್ಯ ಸಾಧನೆಗಾಗಿ ಇರುತ್ತವೆಂಬುದನ್ನು ಹಿಂದೆ ವಿವರಿಸಿದ್ದೇವೆ.

## ಜ್ಯೇಷ್ಠ ಮಾಸದಲ್ಲಿ ಬರುವ ಹಬ್ಬಗಳು

ಜ್ಯೇಷ್ಠ ಶುದ್ಧ ೫ ಶ್ರೀಸಿರಸಂಗಿ ಕಾಳಿಕಾದೇವಿ ಕಲಶೋತ್ಸವ, ಜ್ಯೇಷ್ಠ ಶುದ್ಧ ಷಷ್ಠಿ ಮಹಾರಾಣಿ ಝಾಂಸಿ ಲಕ್ಷ್ಮೀಬಾಯಿ ಪುಣ್ಯ ದಿನ. ಜ್ಯೇಷ್ಠ ಶುದ್ಧ ೧೦ ಯಾಜ್ಞವಲ್ಕ್ಯ ಜಯಂತಿ, ಜ್ಯೇಷ್ಠ ಶುದ್ಧ ೧೫ ಸತ್ಯ ಕಬೀರ ಜಯಂತಿ ವಟ ಸಾವಿತ್ರೀವ್ರತ, ವೃಷಭ ಪೂಜಾ ಅರ್ಥಾತ್ ಕಾರಹುಣ್ಣಿವೆ ಜ್ಯೇಷ್ಠ ಬಹುಳ ೧೩ ಶ್ರೀವಿದ್ಯಾರಣ್ಯ ಸ್ವಾಮಿಗಳವರ ಪುಣ್ಯ ದಿನ. ಜ್ಯೇಷ್ಠ ಬಹುಳ ಅಮಾವಾಸ್ಯಾ ಮೃಣ್ಮಯ ವೃಷಭ ಪೂಜಾ (ಮಣ್ಣೆತ್ತಿನ ಅಮಾವಾಸ್ಯಾ) ಈ ತಿಂಗಳ ಪೌರ್ಣಿಮೆಯ ದಿವಸ ಜ್ಯೇಷ್ಠಾ ನಕ್ಷತ್ರವಿರುವಕಾರಣ ಈ ತಿಂಗಳಿಗೆ ಜ್ಯೇಷ್ಠ ಮಾಸವೆಂದು ಅನ್ನುವುದುಂಟು. ಮೇಲೆ ವಿವರಿಸಿದ ಹಬ್ಬಗಳಲ್ಲಿ ಮುಖ್ಯವಾದ ಹಬ್ಬಗಳನ್ನು ಕೆಳಗೆ ವಿವರಿಸಿದ್ದೇವೆ.

### ವಟಸಾವಿತ್ರೀ ವ್ರತ

( ಜ್ಯೇಷ್ಠ ಶುದ್ಧ ಪೌರ್ಣಿಮಾ )

ಈ ವ್ರತವನ್ನು ಜ್ಯೇಷ್ಠ ಶುದ್ಧ ಪೌರ್ಣಿಮೆಯ ದಿವಸ ಆಚರಿಸುವರು. ಇದು ಮೂರು ದಿನದ ವ್ರತವಿದೆ. ಜ್ಯೇಷ್ಠಮಾಸ ಶುಕ್ಲಪಕ್ಷ ದ್ವಾದಶಿಯ ಮೂರುಸಂಜೆಯಲ್ಲಿ ಈ ವ್ರತವನ್ನು ಪ್ರಾರಂಭಿಸತಕ್ಕದ್ದು. ಕೆಲವರು ಅಮವಾಸ್ಯಾ ದಿನವೂ ಮಾಡುತ್ತಾರೆ. ಪಶ್ಚಿಮ ಭಾರತೀಯರು ಜ್ಯೇಷ್ಠ ಶುದ್ಧ ತ್ರಯೋದಶಿಯ ದಿವಸ ನಿರ್ಮಲವಾದ ಜಲಾಶಯಗಳಲ್ಲಿ ಸ್ನಾನಮಾಡಿ ದೇವರನ್ನು ಪೂಜಿಸಿ ವಟವೃಕ್ಷದ ಸಮೀಪಕ್ಕೆ ಹೋಗಿ ಸುಸಂಸ್ಕೃತರಾಗಿ ವೇದ ಪ್ರತಿಪಾದಿತಳಾದ ಸಾವಿತ್ರಿಯನ್ನು ಪೂಜಿಸುವರು. ಸಾವಿತ್ರಿಯೆಂದರೆ—ದೇವರು ಪ್ರಳಯದ ನಂತರ ತನ್ನ ಹೊಟ್ಟೆಯಲ್ಲಿಯ ಜಗತ್ತನ್ನು ಸೃಷ್ಟಿಕಾಲದಲ್ಲಿ ಹೊರಗೆ ಹಾಕುತ್ತಾನೆ. ಆದಕಾರಣ ದೇವರಿಗೆ ಸಾವಿತ್ರಿಯೆಂಬ ಅಭಿಧಾನವುಂಟು. ಬಹುತರವಾಗಿ ಈ ವ್ರತವು ಸ್ತ್ರೀಯರಿಂದ ಆಚರಿಸಲ್ಪಡುತ್ತದೆ. ಈ ಬಗ್ಗೆ ಒಂದು ಪೌರಾಣಿಕ ಕಥೆಯುಂಟು.

ಒಂದು ದಿನ ಸನತ್ಕುಮಾರನು ಭಯಭಕ್ತಿಯುತನಾಗಿ ಭಗವಾನ್ ಶಂಕರನಿಗೆ ನಮಸ್ಕರಿಸಿ, ಸ್ತ್ರೀಯರಿಗೆ ಅವೈಧ್ಯಕಾರವಾದ (ಮುತ್ತೈದೆಯ

ರಾಗಿರುವ ) ವ್ರತವನ್ನು ಹೇಳಬೇಕೆಂದು ಪ್ರಾರ್ಥಿಸಿಕೊಂಡನು. ಆಗ ಪರಮೇಶ್ವರನು:—



ಮದ್ರದೇಶದಲ್ಲಿ ಅಶ್ವಪತಿಯೆಂಬ ಅರಸನಿದ್ದನು. ಅವನಿಗೆ ಮಕ್ಕಳಿರಲಿಲ್ಲ. ವೇದ ಪ್ರತಿಪಾದಿತಳಾದ ಸಾವಿತ್ರಿಯ ಸೇವೆಯನ್ನು ಅವನು ಚಿರಕಾಲ ಆಚರಿಸಿದನು. ಅವನ ದೃಢಭಕ್ತಿಗೆ ಅವಳು ಮೆಚ್ಚಿ ನುಡಿದುದೇನಂದರೆ "ಎಲೈ

ರಾಜನೇ! ನಿನಗೆ ಗಂಡು ಸಂತಾನವಿಲ್ಲ, ಆದರೆ ಉಭಯಕುಲ ಸಂತಾರಕಳಾದ ಓರ್ವ ಮಗಳು ಮಾತ್ರ ನಿನಗೆ ಜನಿಸುತ್ತಾಳೆ. ಅವಳಿಗೆ ನನ್ನ ಹೆಸರು ಇಡು" ಎಂದು ನುಡಿದು ಅದೃಶ್ಯಳಾದಳು. ಮುಂದೆ ಕೆಲವು ಕಾಲದ ಮೇಲೆ ರಾಜನು ಸುರೂಪಿಯಾದ ಕನ್ನಿಕೆಯನ್ನು ಪಡೆದು, ಅವಳಿಗೆ ಸಂಭ್ರಮದೊಡನೆ 'ಸಾವಿತ್ರಿ'ಯೆಂಬ ನಾಮಕರಣ ಮಾಡಿದನು. ಅವಳು ದಿನೇ ದಿನೇ ಚಂದ್ರನಂತೆ ಬೆಳೆದು ದೊಡ್ಡವಳಾಗಿ ವಿವಾಹಕ್ಕೆ ಯೋಗ್ಯವಾದ ಅವಸ್ಥೆಗೆ ಬಂದಳು. ರಾಜನು ಅವಳಿಗೆ ವರನನ್ನು ಹುಡುಕಹತ್ತಿದನು. ಮಹಾತೇಜಸ್ವಿಯಾದ ಸಾವಿತ್ರಿಗೆ ಅನುರೂಪನಾದ ವರನು ಎಲ್ಲಿಯೂ ಸಿಗಲಿಲ್ಲವಾದ್ದರಿಂದ ರಾಜನು ಬೇಸತ್ತು ಮಗಳಿಗೆ-"ಅಮ್ಮಾ ನಿನಗೆ ಯೋಗ್ಯನಾದ ಪತಿಯನ್ನು ನೀನೇ ಹುಡುಕುವವಳಾಗು" ಎಂದು ನುಡಿದು ಕೆಲವು ವೃದ್ಧ ಮಂತ್ರಿಗಳೊಡನೆ ತನ್ನ ಮಗಳನ್ನು ಚತುರಂಗಬಲ ಸಮೇತವಾಗಿ ವರಾನ್ವೇಷಣೆಗೆ ಕಳುಹಿಸಿದನು.

ಮುಂದೆ ಸ್ವಲ್ಪ ದಿನಗಳ ಮೇಲೆ ಆ ರಾಜನಲ್ಲಿಗೆ ನಾರದನು ಬಂದನು. ರಾಜನು ಅತಿಥಿಯಾದ ನಾರದನನ್ನು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಉನ್ನತಾಸನದಲ್ಲಿ ಕುಳ್ಳಿರಿಸಿ ನಮಸ್ಕರಿಸಿದನು. ನಾರದನು ರಾಜನಿಗೆ ಕುಶಲ ಪ್ರಶ್ನೆ ಕೇಳಿದನು. ಅದೇ ಹೊತ್ತಿಗೆ ಸಾವಿತ್ರಿಯು ವರಾನ್ವೇಷಣ ಮಾಡಿಕೊಂಡು ಬಂದಳು. ಅವಳು ನಾರದನಿಗೂ, ತಂದೆಗೂ ವಂದಿಸಿ ನತಮುಖಿಯಾಗಿ ನಿಂತಳು. ನಾರದನು-"ರಾಜನೇ! ಇಲ್ಲಿಯವರೆಗೆ ಈ ಪುತ್ರಿಯ ವಿವಾಹವನ್ನೇಕೆ ಮಾಡಿಲ್ಲ? ಎಂದು ಕೇಳಿದನು. ಆಗ ರಾಜನು-"ಅಮ್ಮಾ ಮಗಳೇ! ವರಾನ್ವೇಷಣೆಗಾಗಿ ಹೋದವಳು ಈಗಲೇ ಬಂದಿರುವೆಯಲ್ಲವೇ? ಯಾವ ವರನನ್ನು ಹುಡಿಕಿಕೊಂಡು ಬಂದಿರಿವಿ? ನಾರದರ ಮುಂದೆ ಹೇಳಬೇಕೆಂದು" ನುಡಿದನು. ಆಗ ಸಾವಿತ್ರಿಯು-"ರುಕ್ಮಿಯು ದ್ಯುಮತ್ಸೇನನ ರಾಜವನ್ನು ಕಸಿದುಕೊಂಡನು. ರಾಜ್ಯ ಭ್ರಷ್ಟನಾದ ದ್ಯುಮತ್ಸೇನನು ಕುರುಡನಾಗಿ ಅರಣ್ಯದಲ್ಲಿ ವಾಸಿದ್ದಾನೆ. ಅವನ ಮಗನಾದ ಸತ್ಯವಾನನನ್ನು ನಾನು ಲಗ್ನ ಮಾಡಿಕೊಳ್ಳಲು ಒಪ್ಪಿದ್ದೇನೆ. ಅವನು ಸಕಲ ಸದ್ಗುಣ ಸಶೋಭಿತನು, ಸುರೂಪಿಯೂ ಆಗಿರುವನು" ಎಂದಳು. ನಾರದನು ಸ್ವಲ್ಪ ವಿಚಾರಮಗ್ನನಾಗಿ-"ಬಾಲಿಕೆ ನೀನು ಕಷ್ಟದಾಯಕವಾದ ಕೃತಿಯನ್ನೆಸಗಿದೆ. ಯಾಕಂದರೆ ಸತ್ಯವಾನನಿಗೆ ಇನ್ನು ಒಂದು ವರುಷಮಾತ್ರ ಆಯುಷ್ಯವಿದೆ, "ಮತ್ತೆ ಬೇರೊಬ್ಬ ವರನನ್ನು ಇನ್ನಾದರೂ ಹುಡುಕಿಕೊಂಡು

ಸುಖವಾಗಿ ಜೀವಿಸು" ಎಂದನು. ಆ ಮಾತಿಗೆ ಸಾವಿತ್ರಿಯು ಒಪ್ಪಲಿಲ್ಲ. ಮಗಳ ದೃಢವಾದಬುದ್ಧಿಯನ್ನು ನೋಡಿ ತಂದೆಯು ಸಂತುಷ್ಟನಾಗಿ, ಆ ಸತ್ಯವಾನನ ಕೂಡ ಮಗಳ ಮಂಗಲ ಕಾರ್ಯವನ್ನು ನೆರವೇರಿಸಿಕೊಟ್ಟನು. ಮುಂದೆ ಸಾವಿತ್ರಿಯು ತಂದೆ-ತಾಯಿಗಳ ಅಪ್ಪಣೆಯಂತೆ ಪತಿ ಗೃಹಕ್ಕೆ ಬಂದು ಅತ್ತೆ-ಮಾವಂದಿರ ಹಾಗೂ ಪತಿಯ ಸೇವಾ ಶುಶ್ರೂಷೆಯಲ್ಲಿ ನಿರತಳಾಗಿ ಅರಣ್ಯದಲ್ಲಿಯೇ ಇರುತ್ತಿದ್ದಳು. ನಾರದನು ಹೇಳಿದುದನ್ನು ಮರೆತಿರಲಿಲ್ಲ. ತನ್ನ ಪತಿಯ ಆಯುಷ್ಯದ ಲೆಕ್ಕವನ್ನು ದಿನ ದಿನವೂ ಮಾಡುತ್ತಿದ್ದಳು. ಕೊನೆಗೆ ಮೂರು ದಿನಗಳು ಮಾತ್ರ ಉಳಿದಿವೆ ಹುಣ್ಣಿವೆಯ ದಿನವೇ ತನ್ನ ಪತಿಯ ಮರಣದ ದಿನವೆಂದು ತಿಳಿದಳು. ಆಗ ಅವಳು ಉಪವಾಸ ಮಾಡಿದಳು. ಭಗವಾನ್ ಭವಾನೀ ಪತಿಗೆ ಮರೆ ಹೊಕ್ಕಳು ಹಗಲಿರುಳು ಅವನ ನಾಮಸ್ಮರಣೆಯಲ್ಲಿ ಎರಡು ದಿನಗಳು ಕಳೆಯಲಾಗಿ ಹುಣ್ಣಿವೆಯದಿನ ಬಂದೇಬಿಟ್ಟಿತು. ಅಂದು ಉಷಃಕಾಲದಲ್ಲೆದ್ದು ಸ್ನಾನಾದಿ ಕರ್ಮಗಳನ್ನು ತೀರಿಸಿಕೊಂಡು ಶುಚಿರ್ಭೂತಳಾಗಿ ಭಗವಾನ್ ಶಂಕರನನ್ನು ಪತ್ರಿ ಪುಷ್ಪ–ಧೂಪದೀಪಾದಿಗಳಿಂದ ಪೂಜಿಸಿ, ಇಂದಿನ ಸಂಕಷ್ಟವನ್ನು ಪರಿಹರಿಸೆಂದು' ಆ ಪರಮಾತ್ಮನಿಗೆ ಹಲವು ವಿಧವಾಗಿ ಏಕಚಿತ್ತದಿಂದ ಕಣ್ಮುಚ್ಚಿ ಬೇಡಿಕೊಳ್ಳುತ್ತಿರಲು ಸೂರ್ಯೋದಯವಾಯಿತು. ಸತ್ಯವಾನನು ನಿತ್ಯದಂತೆ ಅಂದು ಕಟ್ಟಿಗೆಗಳನ್ನು ತರಲು ಅರಣ್ಯಕ್ಕೆ ಹೊರಟನು. ಸಾವಿತ್ರಿಯು ಮುಂದೆ ಬಂದು ಪತಿಗೆ ಅಭಿವಂದಿಸಿ :– "ಪ್ರಾಣನಾಥಾ ! ನಾನಿಲ್ಲಿಗೆ ಬಂದು ಒಂದು ವರ್ಷವಾಯಿತು. ಒಂದೇ ಸ್ಥಾನದಲ್ಲಿದ್ದು ನನಗೆ ಬೇಸರವಾಗಿದೆ. ಇಂದು ನಾನು ತಮ್ಮ ಹಿಂದೆ ಬರುವೆ. ಈ ಅರಣ್ಯದಲ್ಲಿರುವ ತರು,ಗುಲ್ಮಖಗ ಮೃಗಸರಿತ್ ಮೊದಲಾದ ಸೃಷ್ಟಿ ಸೌಂದರ್ಯವನ್ನು ನೋಡಬೇಕೆಂದು ನನಗೆ ಆಶೆಯುಂಟಾಗಿದೆ ದಯವಿಟ್ಟು ನನ್ನನ್ನು ತಮ್ಮೊಡನೆ ಕರೆದುಕೊಂಡು ಹೋಗಬೇಕೆಂದು ಕೇಳಿಕೊಂಡಳು. ಸತ್ಯವಾನನು ತಂದೆ ತಾಯಿಗಳ ಅಪ್ಪಣೆ ಪಡೆದುಕೊಂಡು ಸತಿಸಾವಿತ್ರಿಯೊಡನೆ ಅರಣ್ಯವನ್ನು ಸೇರಿದನು. ಆಗ ಮಧ್ಯಾಹ್ನವಾಗಿತ್ತು, ಸತ್ಯವಾನನಿಗೆ ಬಳಲಿಕೆ, ಬಾಯಾರಿಕೆಯಾಯಿತು. ತಲೆ ನೋಯುತ್ತದೆಂದು ಸಾವಿತ್ರಿಯ ಸನಿಹಕ್ಕೆ ಬಂದು ಅವಳ ತೊಡೆಯ ಮೇಲೆ ತನ್ನ ತಲೆಯಿಟ್ಟು ವಿಶ್ರಮಿಸಿಕೊಂಡನು. ಅಷ್ಟರಲ್ಲಿಯೇ ದಕ್ಷಿಣ ದಿಕ್ಕಿನಿಂದ ಮಹಿಷಾರೋಹಿಯಾದ ಯಮದೇವನು ಬಂದು ತನ್ನ ಪಾಶದಿಂದ ಸತ್ಯವಾನನ

ಜೀವವನ್ನು ಬಂಧಿಸಿ ಮುಂದೆ ತೆರಳಿದನು. ಸಾವಿತ್ರಿಯು ಯಮದೇವನಿಗೆ ನಮಸ್ಕರಿಸಿ ಅವನ ಬೆನ್ನುಹತ್ತಿ ಹೊರಟಳು. ಆಗ ಯಮರಾಜನು – ಸತ್ಯವಾನನ ಆಯುಷ್ಯ ತೀರಿದೆ ಅವನನ್ನು ನನ್ನ ಲೋಕಕ್ಕೆ ಕರೆದುಕೊಂಡು ಹೋಗುತ್ತೇನೆ. ನೀನು ವೃಥಾ ಆಯಾಸ ಪಡಬೇಡ ಹಿಂತಿರುಗುವವಳಾಗು" ಎಂದು ನುಡಿದು ಮುಂದಕ್ಕೆ ಸಾಗಿದನು. ಸಾವಿತ್ರಿಯು ದೇವ ! ಸತಿಗೆ ಪಾತಿವ್ರತ್ಯವೇ ಭೂಷಣವಾಗಿದೆ. ಅಷ್ಟೇ ಅಲ್ಲ, ಪತಿದೇವನಿದ್ದರೆ ಸಕಲ ಸಂಪತ್ತು. ಪತಿಯೇ ಸಕಲ ದೈವ, ಪತಿಯು ನನ್ನ ಜೀವನಾಧಾರ ಇಷ್ಟಪ್ರಾಣ. ನಾನು ಪತಿಯಿಂದ ಎಂದೂ ಅಗಲಿರುವದಿಲ್ಲ, ಅವನೊಡನೆ ನನ್ನ ಜೀವವನ್ನು ಸೆಳೆದೊಯ್ಯುವವನಾಗು"ಎಂದು ಕನಿಕರ ಹುಟ್ಟುವಂತೆ ಅಂಗಲಾಚಿ ಬೇಡಿಕೊಂಡಳು. ಆ ಸಾಧ್ವಿಯಾದ ಸಾವಿತ್ರಿಯನ್ನು ಕಂಡು ಯಮರಾಜನ ಹೃದಯವು ಕರಗಿ ನೀರಾಯಿತು. "ಅಮ್ಮಾ ನಿನ್ನ ಪಾತಿವ್ರತ್ಯವು ಆದರ್ಶಪ್ರಾಯವಾಗಿದೆ, ನಿನ್ನ ಇಚ್ಛೆಯಂತೆ ಸತ್ಯವಾನನಿಗೆ ಪ್ರಾಣದಾನ ಮಾಡಿರುವೆನು. ಅಷ್ಟೇ ಅಲ್ಲ, ಕುರುಡನಾದ ನಿನ್ನ ಮಾವನಿಗೆ ನೇತ್ರದಾನ ಮಾಡಿರುವೆನು. ಅವನಿಗೆ ಕಳೆದುಹೋದ ರಾಜ್ಯವೂ ಲಭಿಸುವದು. ಎಲ್ಲರೂ ಧರ್ಮನಿರತರಾಗಿ ಸುಖವಾಗಿ ಜೀವಿಸಿರಿ"ಎಂದು ಹೇಳಿ ಯಮದೇವ ಅದೃಶ್ಯನಾದನು. ಸತ್ಯವಾನನು ಎಚ್ಚೆತ್ತು ಈ ಎಲ್ಲ ವಿಷಯವನ್ನು ಸ್ವಪ್ನದಂತೆ ಕಂಡನು. ಅತ್ತ ಕುರುಡನಾದ ದ್ಯುಮತ್ಸೇನನಿಗೆ ನೇತ್ರಗಳು ಬಂದವು. ಎಲ್ಲರೂ ಆಶ್ಚರ್ಯಚಕಿತರಾದರು. ಅಷ್ಟರಲ್ಲಿಯೇ ಅರಣ್ಯಕ್ಕೆ ಹೋದ ಸತ್ಯವಾನನು ಸತಿಯಾದ ಸಾವಿತ್ರಿಯೊಡನೆ ಬಂದು ವೃದ್ಧ ಮಾತಾಪಿತೃಗಳಿಗೆ ಸಮಸ್ಕರಿಸಿ ಅಲ್ಲಿ ಕುಳಿತುಕೊಂಡರು. ಅದೇ ಹೊತ್ತಿಗೆ ಅವರ ರಾಜಧಾನಿಯಿಂದ ಮಂತ್ರಿಗಳೂ, ಸೇನಾಪತಿಗಳೂ ಬಂದು "ರುಕ್ಮಿಯು ರಾಜ್ಯಬಿಟ್ಟು ಹೊರಟು ಹೋದನು. ತಾವು ಇನ್ನು ರಾಜ್ಯ ಸಿಂಹಾಸನವನ್ನೇರಬೇಕೆಂದು ಪ್ರಾರ್ಥಿಸಿದರು. "ಅಶ್ವಪತಿ ಮಹಾರಾಜನಿಗೆ ಕಳೆದುಹೋದ ರಾಜ್ಯವು ಅನಾಯಾಸವಾಗಿಯೇ ಸಿಕ್ಕಿತು. ಕಣ್ಣುಗಳು ಸಹಜವಾಗಿ ಬಂದವು. ಅಲ್ಪಾಯುಷಿಯಾದ ಸತ್ಯವಾನನು ಚಿರಾಯುಷ್ಯವುಳ್ಳವನಾದನು. ಸತಿ ಸಾವಿತ್ರೀದೇವಿಯ ವ್ರತಾಚರಣೆಯ ಪ್ರಭಾವದಿಂದ ಅಶ್ವಪತಿ ಮಹಾರಾಜನು ಸಕಲೈಶ್ವರ್ಯಸಂಪನ್ನನಾದನೆಂದು" ಶಿವನು ಸನತ್ಕುಮಾರನಿಗೆ ಬೋಧಿಸಿದನು.

धर्मराजको तो पालिये सत्यवान लौटारि ।
धन्य धन्य भारत जहाँ सावित्रीसी नारी ॥

## ಕಾರ ಹುಣ್ಣಿವೆ

### ಜ್ಯೇಷ್ಠ ಶುದ್ಧ ಪೌರ್ಣಿಮೆ

ಪೂರ್ವ ಕಾಲದಲ್ಲಿ ಕಾರಾಸುರನೆಂಬ ಕ್ರೂರನಾದ ರಾಕ್ಷಸನು ಮದೋನ್ಮತ್ತನಾಗಿ ಎಲ್ಲ ದೇವತೆಗಳನ್ನು ಪರಿಪರಿಯಾಗಿ ಪೀಡಿಸುತ್ತಿದ್ದನು. ಅವನಲ್ಲಿ ಅತುಲವಾದ ಸಾಮರ್ಥ್ಯವಿತ್ತು. ಆದುದರಿಂದ ಅವನ ಹೆಸರು ತೆಗೆದೊಡನೆ ಎಲ್ಲರೂ ನಡುಗುತ್ತಿದ್ದರು. ಅವನ ಉಪಟಳವು ದಿನೇದಿನೇ ಮತ್ತಿಷ್ಟು ಹೆಚ್ಚಾಯಿತು. ಹೀಗಿರಲು ಭಗವಾನ್ ಶಂಕರನು ಒಂದು ದಿವಸ ಸಕಲ ಸುರರನ್ನು ಕರೆದು ಆ ರಾಕ್ಷಸನನ್ನು ಸಂಹರಿಸಬೇಕೆಂದು ಒಬ್ಬೊಬ್ಬರನ್ನೇ ವಿಚಾರಿಸಿದನು. ಆ ದೈತ್ಯನು ಅತ್ಯಂತ ಕ್ರೂರನೂ, ಬಲಾಢ್ಯನೂ ಆದುದರಿಂದ ಅವನೊಡನೆ ಕಾದಾಡಲು ಯಾರೂ ಒಪ್ಪಲಿಲ್ಲ. ಆಗ ಶಂಕರನು ಒಂದು ಕೊಪ್ಪರಿಗೆ ಹುಗ್ಗಿಯನ್ನು ತಯಾರಿಸಿ ಅದರಲ್ಲಿ ಒಂದು ಹೊನ್ನುಂಗರವನ್ನು ಹಾಕಿ ತಿರುವಿಸಿದನು. ಸಕಲ ದೇವತೆಗಳನ್ನು ಸಾಲಾಗಿ ಕೂಡ್ರಿಸಿ, ನುಡಿದುದೇನಂದರೆ—"ಈ ಪಾಯಸವನ್ನು ಎಲ್ಲರಿಗೂ ಊಟಕ್ಕೆ ಬಡಿಸುತ್ತೇನೆ. ಆ ಹುಗ್ಗಿಯಲ್ಲಿರುವ ಉಂಗುರವು ಯಾರ ಪಾಲಿಗೆ ಬರುವುದೋ ಅವರು ಕಾರಾಸುರನೊಡನೆ ಕಾದಾಡಲು ಹೋಗಲೇಬೇಕೆಂದು ಕಟ್ಟಪ್ಪಣೆ ಮಾಡಿದನು. ಈ ಮಾತಿಗೆ ಎಲ್ಲ ದೇವತೆಗಳೂ ಒಪ್ಪಿಕೊಂಡರು. ಆ ಪ್ರಕಾರವಾಗಿ ಭಗವಾನ್ ಶಂಕರನು ಸಕಲ ದೇವಾನುದೇವತೆಗಳನ್ನೂ, ಎಲ್ಲ ಪ್ರಮಥರನ್ನೂ ಕಿನ್ನರ ಕಿಂಪುರುಷರನ್ನೂ ಸಾಲುಸಾಲಾಗಿ ಕೂಡ್ರಿಸಿ ಅವರಿಗೆ ಹುಗ್ಗಿಯನ್ನು ಬಡಿಸುತ್ತ ಬರಲು, ಆ ಉಂಗುರವು ನಂದೀಶ್ವರನ ಪಾಲಿಗೆ ಬಂದಿತು. ಆಗ ನಂದೀಶ್ವರನು ಶಂಕರನಿಗೆ ವಂದಿಸಿ—"ದೇವಾ! ಏಕೈಕವೀರನಾದಕಾರಾಸುರನೊಡನೆ ಕಾದಾಡಲು ಇಂದ್ರಾದಿ ದೇವಾಧಿದೇವತೆಗಳು ಅಸಮರ್ಥರಿರುವಾಗ ನನ್ನಿಂದೇನಾಗಬೇಕು, ಒಂದುವೇಳೆ ನಾನು ಅವನೊಡನೆ ಯುದ್ಧಮಾಡಿ ರಣರಂಗದಲ್ಲಿ ಮಡಿದರೆ ತಮ್ಮ ಸೇವೆಯು ನನಗೆ ದೂರಾಗುವದಿಲ್ಲವೇ" ಎಂದು ಹಲವು ಬಗೆಯಾಗಿ ಆ ಭಗವಂತನಿಗೆ ಬೇಡಿಕೊಂಡನು. ಆಗ ಶಂಕರನು ನಂದೀಶಾ ನೀನು

ಸಾಮಾನ್ಯನಲ್ಲ ನೀನು ಧರ್ಮಾವತಾರಿಯಾಗಿರುವೆ, ನಿನ್ನಲ್ಲಿ ಅಸದೃಶವಾದ ಸಾಮರ್ಥ್ಯವಿದೆ. ನಿನ್ನನ್ನು ಸೋಲಿಸುವ ಶಕ್ತಿ ಆದಾವ ದೈತ್ಯನಿಗೆ ಇದೆ. ಅಂತೇ ಈ ಹೊನ್ನುಂಗುರವು ನಿನ್ನ ಪಾಲಿಗೆ ಬಂದಿದೆ. ನೀನು ಹೆದರದೇ ಯುದ್ಧಕ್ಕೆ ತೆರಳಬೇಕೆಂದು" ಹೇಳಿದನು. ನಂದೀಶನು ದೇವಾ ಕೈಲಾಸಪತಿ. ನಿನ್ನ ಆದೇಶ ದಿಂದ ನನ್ನಲ್ಲಿ ಅದಾವುದೋ ಒಂದು ಅನಿರ್ವಚನೀಯವಾದ ಚೈತನ್ಯವುಂಟಾ ಯಿತು. ನಿನ್ನ ಅಪ್ಪಣೆಯ ಮೇರೆಗೆ ಈಗಲೇ ಆ ಅಧಮ ದೈತ್ಯನೊಡನೆ ಹೋರಾಡಿ ಅವನನ್ನು ಸಂಹರಿಸಿ ಅವನ ರುಂಡವನ್ನು ತಮ್ಮ ಅಡಿದಾವರೆ ಗಳಿಗೆ ಅರ್ಪಿಸುವೆ ಅನುಗ್ರಹಿಸಬೇಕೆಂದು ನಮಸ್ಕರಿಸಿದನು. ಶಂಕರನು ತಥಾಸ್ತು ಎಂದು ವರದ ಹಸ್ತವನ್ನಿತ್ತನು. ನಂದೀಶ್ವರನು ಭೈರವನೋ, ಪ್ರಳಯಕಾಲದ ಕಾಲರುದ್ರನೋ ಎಂಬಂತೆ ಕೈಲಾಸದಿಂದ ಹೊರಟು ನಭೋ ಮಂಡಲವನ್ನು ಭೇದಿಸುವಂತೆ ಗರ್ಜಿಸುವವನಾಗಿ ಧರಣೀತಲಕ್ಕಿಳಿದು ಭೂ ಒಡಲು ಒಡೆಯುವಂತೆ ಕಾಲ್ಗಳನ್ನು ಕೆದರುತ್ತ ಕಾರಾಸುರನಲ್ಲಿಗೆ ಬಂದು ಅವ ನನ್ನು ಕಾಳಗಕ್ಕೆ ಕರೆದನು. ಆಗ ಆ ದೈತ್ಯನು ಎಲೋ ಮುದಿ ಎತ್ತೇ! ಹರಿ ವಿರಂಚಿಗಳು ನನ್ನೊಡನೆ ಕಾದಾಡಲು ಹೆದರಿ, ಹೇಡಿಗಳಾಗಿ, ಕಾಡಿನಲ್ಲಿ ಕಾಣದ ವರಾಗಿ ಅಡಗಿಕೊಂಡಿರುವಾಗ ನಿನ್ನಿಂದೇನಾಗಬೇಕು ವೃಥಾ ಕಾಲುಕೆದರಬೇಡ ನಡೆಯಾಚೆಗೆ ಎಂದು ಚೀರಿದನು. ಆಗ ನಂದಿಯು ಆ ದೈತ್ಯನಿಗೆ ಹೆದರದೆ "ಎಲವೋ ದೈತ್ಯಾಧಮಾ! ನೀನು ಮಹಾವೀರಾಧಿವೀರನೆಂದು ಗರ್ವದಿಂದ ಸಕಲ ಸ್ವರರನ್ನು ಧಿಃಕರಿಸಿದೆ. ನಿನ್ನ ಸೊಕ್ಕು ಬೆಳೆದು ಆಕಾಶಕ್ಕೇರಿದೆ ಭೂಮಿ ತುಂಬವಷ್ಟು ಅಗಲವಾಗಿದೆ ಇನ್ನೆಲ್ಲಿ ಅದಕ್ಕೆ ಸ್ಥಾನವಿಲ್ಲ. ಹೀಗಿರಲು ಭಗ ವಾನ್ ಶಂಕರನು ನನ್ನನ್ನು ನಿನ್ನಲ್ಲಿಗೆ ಕಳಿಸಿರುವನು ನೀನು ಅಹಂಕಾರವನ್ನ ಳಿದು ಸಕಲ ದೇವತೆಗಳಲ್ಲಿ ದಾಸನಾಗಿರು ಭೂತದಯಾಪರನಾಗು, ಧರ್ಮ ದಿಂದ ನಡೆ. ಈ ಮಾತಿಗೆ ನೀನು ಇಂದು ಒಪ್ಪದಿದ್ದರೆ, ಯಮಪುರಿಯ ಬಾಗಿಲು ನಿನಗಾಗಿ ತೆರೆದಿದೆ. ಎಂದು ಹೇಳಿದನು. ನಂದೀಶನ ಮಾತು ಕಾರಾಸುರನಿಗೆ" ಮೈಗೆ ಬಾಣ ನಟ್ಟಂತಾಯಿತು. ಮಲಗಿದ ಸಿಂಹನನ್ನು ಮೀಸೆಹಿಡಿದು ಎಳೆದಂತಾ ಯಿತು. ಸಿಂಹವು ಹಸುವಿನ ಮೇಲೆ ಜಿಗಿಯುವಂತೆ ಆ ದೈತ್ಯನು ನಂದೀಶನ ಮೇಲೆ ಒಮ್ಮೆಲೇ ಜಿಗಿದುಬಿಟ್ಟನು. ಶಿವನ ಓಜಸ್ಸಿನಿಂದ ಪರಿಪೂರ್ಣನಾದ ನಂದೀಶನು ಆ ದೈತ್ಯನನ್ನು ತನ್ನ ಕೊಡುಗಳಿಂದ ಮೇಲಕ್ಕೆತ್ತಿ ತಿಗರಿಯಂತೆ

ಗಸ್ರನೇ ತಿರುಗಿಸಿ, ಗಗನಕ್ಕೆ ಮುಟ್ಟುವಂತೆ ತೂರಿ ಒಗೆದನಲ್ಲದೆ ಕೋಡು ಗಳಿಂದ ಕಾರಾಸುರನ ಹೊಟ್ಟೆಯನ್ನು ಹರಿದು ಅವನ ಕರಳುಗಳನ್ನು ಕೊರಳಿಗೆ ಸುತ್ತಿಕೊಳ್ಳುವವನಾಗಿ, ಅವನನ್ನು ಕೋಡುಗಳ ಮಧ್ಯದಲ್ಲಿಟ್ಟುಕೊಂಡು, ಕೈಲಾಸಕ್ಕೆ ಬಂದು ಶಂಕರನಿಗೆ ಅಭಿವಂದಿಸಿದನು. ನಂದೀಶ್ವರನ ಈ ಮಹತ್ಕಾರ್ಯವನ್ನು ನೋಡಿ ಎಲ್ಲ ಅಮರರು ಆನಂದದಿಂದ ಪುಷ್ಪವೃಷ್ಟಿಗರೆದರು. ಜ್ಯೇಷ್ಠ ಶುದ್ಧ ಪೌರ್ಣಿಮೆಯಂದು ನಂದೀಶನು ಲೋಕ ಕಂಟಕನಾದ ಕಾರಾಸುರನನ್ನು ಸಂಹರಿಸಿ ಲೋಕಕ್ಕೆ ಶಾಂತಿಯನ್ನು ಬೀರಿದನು. ಅವನು ಮಾಡಿದ ಅದ್ಭುತ ಲೀಲೆಯ ಸವಿನೆನಪು ಮುಂದಿನವರಿಗೆ ಉಳಿಯಲೆಂಬ ಸದಾಶಯದಿಂದ ನಮ್ಮ ಹಿಂದಿನ ಹಿರಿಯರು ಈ ಕಾರಹುಣ್ಣಿವೆಯ ಹಬ್ಬವನ್ನು ಆಚರಿಸುತ್ತ ಬಂದಿರುವರು. ಈ ಹುಣ್ಣಿವೆಯ ಪೂರ್ವದಿನದಲ್ಲಿ ಭಗವಾನ್ ಮಹಾದೇವನು ಹುಣ್ಣಿವೆಯಲ್ಲಿ ಹುಗ್ಗಿಯಲ್ಲಿ ಹೊನ್ನುಂಗುರ ಹಾಕಿ ಸಮಸ್ತ ದೇವತೆಗಳಿಗೆ ಊಟಕ್ಕೆ ಬಡಿಸಿದನು. ಆ ದಿನವು ಇಂದು ಹೊನ್ನುಗ್ಗಿಯೆಂದು ಹೆಸರಾಗಿದೆ. ಕಾರಹುಣ್ಣಿವೆಯದಿನ ನಂದೀಶ್ವರನು ಕಾರಾಸುರನನ್ನು ಸಂಹರಿಸುವಾಗ್ಗೆ, ಆ ರಾಕ್ಷಸನ ಹೊಟ್ಟೆಹರಿದು ಕರುಳುಗಳು ನಂದೀಶನ ಕೊರಳಿಗೂ ಕೋಡುಗಳಿಗೂ ಸುತ್ತಿಕೊಂಡವು, ಅವನ ಮೈಯಲ್ಲಿ ರಕ್ತರಂಜಿತವಾಯಿತು. ಅದಕ್ಕಾಗಿ ಜ್ಯೇಷ್ಠ ಶುದ್ಧ ಪೌರ್ಣಿಮೆಯ ದಿವಸ ನಂದೀಶ್ವರ ಅವತಾರಿಗಳಾದ ಎತ್ತುಗಳಿಗೆ ಮೈಗೆ ಹಸ್ತಾಂಕಿತವುಳ್ಳ ಕೆಂಪು ಬಣ್ಣವನ್ನು ಹಚ್ಚುವರು. ಕೋಡುಗಳಿಗೂ ಕೆಂಪು ಬಣ್ಣ ಹಚ್ಚಿ ಕೋಡಬಳಿ ಹಾಕುವರು. ಕೊರಳಲ್ಲಿ ಕರಿಗಡಬು, ಕೋಡಬಳಿಗಳ ಸರ ಹಾಕಿ ಪೂಜಿಸುವರು. ಸಂಧ್ಯಾ ಸಮಯದಲ್ಲಿ ಊರವರೆಲ್ಲ ಕೂಡಿ ಊರ ಮುಂದಿನ ಅಗಸಿಗೆ ಎತ್ತುಗಳನ್ನು ಒಯ್ದು ಅವುಗಳನ್ನು ಓಡಾಡಿಸಿ ಕರಿಹರಿಯುವರು. ಹೀಗೆ ನಂದೀಶ್ವರನ ಉಪಕಾರ ಸ್ಮರಣೆಗಾಗಿ ಈ ಹಬ್ಬವನ್ನಾಚರಿಸುವ ರೂಢಿಯಾಗಿದೆ. ಈ ಎತ್ತುಗಳೆಂದರೆ ನಂದೀಶ್ವರನ ಅವತಾರಗಳಾಗಿರುವವು. ನಂದಿಯೆಂದರೆ ಶಿವನನ್ನು ಹೊತ್ತು ತಿರುಗುವ ಪ್ರಮಥನು. ಎತ್ತುಗಳಾದರೂ ಆ ಪ್ರಮಥಸ್ವರೂಪವೇ ಸರಿ. ಆದ್ದರಿಂದ ಯಾರು ತಮ್ಮ ಮನೆಯಲ್ಲಿ ಆ ಎತ್ತುಗಳನ್ನು ಹೊಡೆಯದೇ ಬಡಿಯದೇ ಒದೆಯದೇ ಬಯ್ಯದೇ ದೇವರೆಂದು ಭಾವಿಸಿ, ಅವುಗಳಲ್ಲಿ ದಯಾಮಯರಾಗಿ ನಿತ್ಯ ಪೂಜಿಸುವರೋ ಅವರಿಗೆ ಧನಕನಕಾದಿ ಸಕಲ ವಿವಿಧ ಸಂಪತ್ತನ್ನೂ ಆಯುರಾರೋಗ್ಯ ಭಾಗ್ಯಾದಿಗಳನ್ನೂ ಆ ಪ್ರಮಥ ಪುಂಗವ ನಂದೀಶ್ವರನು ಅನುಗ್ರಹಿಸುವನು.

ನೀತಿ ಕ್ರಿಯಾಚಾರಗಳಿಂದ ಭ್ರಷ್ಟನಾದ ಕಾರಾಸುರನು ಲೋಕೈಕವೀರನಾದಾಗ್ಯೂ ತನ್ನ ಕುಕರ್ಮದಿಂದ ಅಧೋಗತಿಯನ್ನು ಹೊಂದಿದನು. ಪೂರ್ವಾರ್ಜಿತ ಪುಣ್ಯಬಲದಿಂದ ಮಾನವನು ಸಕಲವಿಧವಾದ ಸಂಪತ್ತಿನಿಂದ ಸುಖಿಯಾಗಿರುವನು. ಆಗ ಅವನು ಯೋಗ್ಯಾಯೋಗ್ಯವನ್ನು ಕುರಿತು ಆಚರಿಸಿದರೆ ಇಹಪರಗಳಲ್ಲಿ ಕೀರ್ತಿಯನ್ನೂ, ದೇವಾನುಗ್ರಹವನ್ನೂ ಪಡೆಯುವನು. ಕ್ಷಣಿಕವಾದ ಇಹಸುಖಕ್ಕೆ ಮರುಳಾಗಿ, ಕಾರಾಸುರನಂತೆ ಮದೋನ್ಮತ್ತನಾದರೆ ಸರ್ವನಾಶವನ್ನು ಹೊಂದುವನು.

## ಮಣ್ಣೆತ್ತಿನ ಅಮಾವಾಸ್ಯೆ

### ( ಜ್ಯೇಷ್ಠ ವದ್ಯ ಅಮಾವಾಸ್ಯೆ )

ಮಾನವನಿಗೆ ವಸ್ತ್ರಾದ್ಯನೇಕ ಆಭರಣಗಳು ಭೂಷಣವಲ್ಲ. ಅವನಿಗೆ ಸದ್ಗುಣಗಳು ಭೂಷಣವಾಗಿವೆ. ಹಾಗೆಯೇ ವಂಶಕ್ಕೆ ಸತ್ಪುತ್ರನು ಭೂಷಣನಾಗಿರುವನು. ಮತ್ತು ಆಕಾಶಕ್ಕೆ ರವಿಯು ಭೂಷಣನಾಗಿರುವಂತೆ; ರಾತ್ರಿಗೆ ಚಂದ್ರನು ಭೂಷಣನಾಗಿರುವಂತೆ; ರಾಜಸಭೆಗೆ ಪಂಡಿತನು ಭೂಷಣನಾಗಿರುವಂತೆ; ಸತಿಗೆ ಪಾತಿವ್ರತ್ಯವು ಭೂಷಣವಾಗಿದೆ. ಸ್ತ್ರೀಯು ತನ್ನ ಪಾತಿವ್ರತ್ಯದ ಪ್ರಭಾವದಿಂದ ಸಕಲ ಸಿದ್ಧಿಗಳನ್ನು ಕೈವಶಮಾಡಿಕೊಳ್ಳುವಳು. ಹರಿದಾಡುವ ಹಾವನ್ನೂ, ಉರಿಯುವ ಬೆಂಕಿಯನ್ನೂ, ಉಕ್ಕಿಬರುವ ಸಮುದ್ರವನ್ನೂ ಶಮನಮಾಡಬಲ್ಲಳು. ಅಷ್ಟೇ ಅಲ್ಲ ಮಾನವನ ಹಣೆಯಲ್ಲಿ ಭವಿಷ್ಯವನ್ನು ಬರೆಯುವ ಬ್ರಹ್ಮನ ಆಟವನ್ನು ನಿಲ್ಲಿಸಬಲ್ಲಳು. ಕೊನೆಗೆ ಕಾಲನ ಕರೆಯನ್ನೂ ಸಹ ಮೀರಿಸಬಲ್ಲಳು. ಅಂಥ ವಿಷಯವನ್ನೊಳಗೊಂಡ ಸಚ್ಚರಿತ್ರೆಯು ಮುಂದಿನ ಮಣ್ಣೆತ್ತಿನ ಅಮಾವಾಸ್ಯೆಯಲ್ಲಿ ವಿಶದವಾಗಿ ವರ್ಣಿತವಾಗಿದೆ.

## ಶಿವಲಿಂಗಪೂಜೆ

ಪುಣ್ಯ ಭೂಮಿಯಾದ ಈ ಭಾರತ ದೇಶದಿಂದ ಹೊರಟ ಶಿವೋಪಾಸನೆಯು ಪ್ರವಾಹರೂಪವಾಗಿ ಪ್ರಾಚೀನಕಾಲದಿಂದಲೂ ಅವಿಚ್ಛಿನ್ನವಾಗಿ ಜಗತ್ತಿನ ಮೂಲೆ ಮೂಲೆಯಲ್ಲಿ ಹರಿಯುತ್ತ ಬಂದಿದೆ.

"ಧಿಗ್‌ಭಸ್ಮರಹಿತಂಭಾಲಂ ಧಿಗ್‌ಗ್ರಾಮ ಮಶಿವಾಲಯಂ"||

ಅರ್ಥಾತ್ ಭಸ್ಮವನ್ನು ಧರಿಸದಿದ್ದ ಹಣೆಗೂ, ಶಿವಾಲಯವಿಲ್ಲದ ಊರಿಗೂ ಧಿಃಕಾರ ಎಂಬುವದು ಶೈವಧರ್ಮದ ವ್ಯಾಪಕತೆಯನ್ನು ತೋರಿಸುವುದಾಗಿದೆ. ಸುಂದರವಾದ ಶಹರಗಳಲ್ಲಿಯೂ, ಭದ್ರವಾಗಿ ಕಟ್ಟದ ಕೋಟೆ ಕೊತ್ತಲಗಳಲ್ಲಿಯೂ, ನಿರ್ಜನವಾದ ಬೆಟ್ಟಗಳ ತುದಿಯಲ್ಲಿಯೂ, ರಮ್ಯವಾಗಿ ಹರಿಯುವ ಹೊಳೆ – ಹಳ್ಳಗಳ ತೀರದಲ್ಲಿಯೂ, ದುರ್ಗಮವಾದ ಅರಣ್ಯದಲ್ಲಿಯೂ ಅತ್ಯಂತ ಪ್ರಾಚೀನ ಕಾಲದ ಸುಂದರ ಶಿವಾಲಯಗಳು ಅಚ್ಚಳಿಯದೆ ನಿಚ್ಚಳವಾಗಿ ಈಗಲೂ ಕಂಗೊಳಿಸುತ್ತವೆ. ಶಿವಾಲಯಗಳಿದ್ದಷ್ಟು ಪ್ರಾಚೀನತೆಯು ಅನ್ಯ ದೇವಾಲಯಕ್ಕಿಲ್ಲವೆಂಬ ಬಗ್ಗೆ ಅನೇಕ ಆಧಾರಗಳುಂಟು. ಸೃಷ್ಟಿಯ ಆದಿಯಲ್ಲಿ ಬ್ರಹ್ಮ, ವಿಷ್ಣು, ಇವರೀರ್ವರು ನಾನುಮೇಲು, ನಾನು ಮೇಲೆಂದು ವಾದಮಾಡುತ್ತಿರುವಾಗ, ಇವರ ಅಹಂಕಾರವನ್ನಳಿಯಲು ಅವರೆದುರು ಮಹಾನ್ ಜ್ಯೋತಿರ್ಮಯ ಶಿವಲಿಂಗವು ಪ್ರಾದುರ್ಭವಿಸಿ ಉಭಯರಿಗೆ ಸನ್ಮಾರ್ಗದರ್ಶಕವಾಯಿತು. ಆದುದರಿಂದ ಸಕಲ ಸುರಾಸುರರು, ಮನುಮುನಿಗಳು, ಕಿನ್ನರ ಕಿಂಪುರುಷರಾದಿಯಾಗಿ ಸರ್ವರೂ ಶಿವನನ್ನು ಲಿಂಗ ರೂಪದಿಂದ, ಅಂದಿನಿಂದ ಇಂದಿನ ವರೆಗೂ ಅನುದಿನ ಆರಾಧಿಸುತ್ತಿರುವರು. ಆವೆಯು ತನ್ನಲ್ಲಿ ಮುದುಡಿಕೊಂಡಿರುವ ಮುಖವನ್ನು ಇಚ್ಛಾನುಸಾರವಾಗಿ ಹೊರಗೆ ಚಾಚಿ ಬಾಹ್ಯ ವಸ್ತುಗಳನ್ನು ನಿರೀಕ್ಷಿಸಿ, ತನಗೆ ಬೇಡಾದಾಗ ಆ ಮುಖವನ್ನು ಪುನಃ ತನ್ನಲ್ಲಿಯೇ ಎಳೆದಿಟ್ಟುಕೊಳ್ಳುವಂತೆ ಆ ಲಿಂಗವು ಚರಾಚರ ವಸ್ತುಗಳಿಂದ ಪರಿಪೂರ್ಣವಾದ ಈ ಜಗತ್ತಿನ ಉತ್ಪತ್ತಿಗೆ ಕಾರಣವಾಗಿ, ಮತ್ತೊಮ್ಮೆ ಎಲ್ಲರನ್ನು ತನ್ನಲ್ಲಿಯೇ ಲೀನ ಮಾಡಿಕೊಳ್ಳುತ್ತದೆ.

"ಶೇತೇ ತಿಷ್ಠತಿ ಸರ್ವಂಜಗತ್‌ಯಸ್ಮಿನ್‌ಶಿವಃ ಶಂಭುಃ ವಿಕಾರ ರಹಿತಃ...." |

ಅಂದರೆ ಯಾವನಲ್ಲಿ ಸಕಲ ಜಗತ್ತು ಶಯನ ಮಾಡುವುದೋ, ಯಾವನು ವಿಕಾರರಹಿತನಾಗಿರುವನೋ, ಅವನೇ ಶಿವನು. ಅರ್ಥಾತ್ ಸ್ವರ್ಗ-ಮೃತ್ಯು-ಪಾತಾಳ ಮೊದಲಾದ ಸಕಲ ಲೋಕಗಳನ್ನು ತನ್ನಲ್ಲಿಯೇ ಯಾವನು ಲೀನ ಮಾಡಿಕೊಳ್ಳುವನೋ ಅವನೇ ಕರುಣಾಮಯನಾದ ಭಗವಾನ್ ಶಿವನು, ಇಂಥ ಶಿವನೇ ಸರ್ವೋತ್ತಮನೆಂದು ಭಕ್ತಿಯಿಂದ ನಿತ್ಯ ಆರಾಧಿ

ಸುವವರೇ ಶೈವರು. ಜಗತ್ತಿನಲ್ಲಿ ಮೊಟ್ಟಮೊದಲು ಒಂದೇ ಒಂದು ಶೈವ ಧರ್ಮವು ಪ್ರಬಲವಾಗಿ ಸರ್ವತ್ರ ಹಬ್ಬಿಕೊಂಡಿತ್ತು. ಆದ್ದರಿಂದಲೇ ಜಗತ್ತಿನ ಮೂಲೆ ಮೂಲೆಗಳಲ್ಲಿಯೂ ಶಿವಾಲಯಗಳು ಹುಟ್ಟಿರುವವು. ಅತ್ಯಂತ ಪ್ರಾಚೀನ ಕಾಲದಲ್ಲಿ ರಾಜಾಧಿರಾಜರಿಂದ ಕಟ್ಟಿಸಲ್ಪಟ್ಟ ಭವ್ಯವಾದ ಶಿವಾಲಯ ಗಳು ನೋಡಲು ಈಗಲೂ ವಿಪುಲವಾಗಿ ಸಿಕ್ಕುತ್ತವೆ. "ಹದಿನೈದು ಸಾವಿರ ವರುಷಗಳ ಹಿಂದೆ ಭಾರತದಲ್ಲಿ ಶಿವಲಿಂಗಪೂಜೆಯು ಅತ್ಯಂತ ಪ್ರಚಾರ ದಲ್ಲಿತ್ತೆಂದು" ಡಾ. ಪ್ರಾಣನಾಥ ವಿದ್ಯಾಲಂಕಾರ ಇವರು ತಾ. ೧-೫-೧೯೩೩ ರಲ್ಲಿ ಕಾಶಿಯಲ್ಲಿ ನಾಗರೀ ಪ್ರಚಾರಿಣೀ ಸಭೆಯ ವಾರ್ಷಿಕೋತ್ಸವದಲ್ಲಿ ಜರುಗಿದ ಭಾಷಣದಲ್ಲಿ ವಿವರಿಸಿದ್ದಾರೆ.

ಶಿವಾಂಕ ೫೭೩ ನೆಯ ಪುಟದಲ್ಲಿ ವಿವರಿಸಲ್ಪಟ್ಟ "ವಿದೇಶೋಂಮೆ ಶಿವಲಿಂಗ ಪೂಜಾ" ಎಂಬ ಲೇಖವು ಸರ್ವಗ್ರಾಹ್ಯವಾಗಿರುವುದರಿಂದ ಅದನ್ನು ಇಲ್ಲಿ ಪ್ರಾಸಂಗಿಕವಾಗಿ ವಿವರಿಸಲಾಗಿದೆ. "ಶಿವನಿರ್ಮಾಲ್ಯ ರತ್ನಾಕರ" ಗ್ರಂಥಕಾರರಾದ ಶ್ರೀ ಕೈ. ಬಾಬು ಬೇಚೂಸಿಂಹಜೀ ಶಾಂಭವ ಅವರು ತಮ್ಮ ಗ್ರಂಥದ ಪ್ರಸ್ತಾವನೆಯಲ್ಲಿ ಶ್ರೀ ಲುಇಸ್. ಸಾಹೇಬರ ಗ್ರಂಥದ ಆಧಾರ ದಿಂದ ವಿದೇಶಗಳಲ್ಲಿ ಸ್ಥಾಪಿಸಲ್ಪಟ್ಟ ಶಿವಲಿಂಗಗಳ ವಿಷಯವನ್ನು ವಿಶದವಾಗಿ ವಿವರಿಸಿದ್ದಾರೆ. 'ಬಾಬೀಲನ' ನಗರದಲ್ಲಿ ೧೨೦೦ ಫೂಟ ಎತ್ತರವಾದ ಶಿವ ಲಿಂಗವಿದೆ. ಇಷ್ಟು ದೊಡ್ಡ ಶಿವಲಿಂಗವು ಜಗತ್ತಿನ ಯಾವ ಭಾಗದಲ್ಲಿಯೂ ಸಿಗುವುದಿಲ್ಲ. ಇದೇ ಪ್ರಕಾರವಾಗಿ 'ಹೆಡ್ರಾಪೊಲಿಸ್ ನಗರದಲ್ಲಿ ಒಂದು ವಿಶಾಲವಾದ ಶಿವಾಲಯವಿದೆ. ಅಲ್ಲಿ ೩೦೦ ಫೂಟ ಎತ್ತರವಿರುವ ಶಿವಲಿಂಗ ವಿದೆ. ಅಮೇರಿಕಾಖಂಡದ 'ಬ್ರೆಜಿಲ' ದೇಶದಲ್ಲಿ ಅತ್ಯಂತ ಪ್ರಾಚೀನ ಕಾಲದ ಅನೇಕ ಶಿವಲಿಂಗಗಳಿರುತ್ತವೆ. ಯುರೋಪದ 'ಕಾರಿಂಥ ನಗರದಲ್ಲಿ ಪಾರ್ವತಿಯ ಮಂದಿರವಿರುತ್ತದೆ. ಇಟಲಿಯಲ್ಲಿ ಎಷ್ಟೋ ಈಸಾಯಿ ಧರ್ಮದ ವರು ಇಂದಿಗೂ ಶಿವಲಿಂಗವನ್ನು ಪೂಜಿಸುತ್ತಾರೆ. ಸ್ಕಾಟಲೈಂಡ (ಗ್ಲಾಸಗೋ) ದಲ್ಲಿ ಸುವರ್ಣಾಚ್ಛಾದಿತವಾದ ಒಂದು ಶಿವಲಿಂಗವಿದೆ. ಅಲ್ಲಿಯ ಜನರು ಅದನ್ನು ಅತ್ಯಂತ ಭಕ್ತಿಯಿಂದ ಪೂಜಿಸುತ್ತಾರೆ. ಉತ್ತರ ಆಫ್ರಿಕಾಖಂಡದ ಇಜಿಪ್ತ ಪ್ರಾಂತದಲ್ಲಿ 'ಮೇಫಿಸ' ಮತ್ತು 'ಅಸೀರಸ' ಎಂಬುವ ಕ್ಷೇತ್ರಗಳಲ್ಲಿ

ನಂದಿಯ ಮೇಲೆ ವಿರಾಜಿಸುವ, ತ್ರಿಶೂಲಪಾಣಿಯಾದ, ವ್ಯಾಘ್ರ ಚರ್ಮಾಂಬರಧಾರಿಯಾದ ಶಿವನ ಅನೇಕ ಮೂರ್ತಿಗಳಿರುತ್ತವೆ. ಅಲ್ಲಿಯ ಜನರು ಆ ಮೂರ್ತಿಗಳಿಗೆ ಹಾಲಿನಿಂದ ಅಭಿಷೇಕವಮಾಡಿ ಬಿಲ್ವದಳಗಳನ್ನರ್ಪಿಸಿ ಭಕ್ತಿಯಿಂದ ಪೂಜಿಸುತ್ತಿರುವರು.

## ವೃಷಭ

ಎಲ್ಲಿ ಎಲ್ಲಿ ಶಿವಾಲಯಗಳಿರುವವೋ, ಅಲ್ಲಲ್ಲಿ ನಂದಿಯ ವಿಗ್ರಹಗಳೂ ಉಂಟು. ನಂದಿಯು ಶಿವನ ಅಡಿಯಲ್ಲಿ ಅಗಲದೇ ಇರುವುದು ಶಾಸ್ತ್ರ ಸಿದ್ಧವಾಗಿದೆ ! ಶಿವನ ಅಂತರಂಗದಲ್ಲಿರುವ ಧರ್ಮವು ಶಿವನ ಅಪ್ಪಣೆಯಂತೆ ಮೂರ್ತಿಮತ್ತಾಗಿ ಬ್ರಹ್ಮಾಂಡದಲ್ಲಿ ಸಂಚರಿಸುತ್ತಿರಲು, ಹರಿ ಬ್ರಹ್ಮಾದಿಗಳ ಪ್ರಳಯವನ್ನು ಕಂಡು ಭಯಗೊಂಡು ಆ ನಂದಿಯು ಶಿವನಡಿಗೆ ಬಂದು, ಮೊದಲಿನಂತೆ ನಿನ್ನ ಅಂತರ್ದೊಳಗೆ ಇರುವೆನೆಂದು ಕೇಳಿಕೊಳ್ಳಲು, ಆಗ ಶಿವನು ಅವನಿಗೆ ಪರಾಕ್ರಮವನ್ನು ಕೊಟ್ಟು "ವೃಷಭರೂಪದಿಂದ ನಮ್ಮ ವಾಹನನಾಗು"ಎಂದು ಆ ನಂದೀಶನಿಗೆ ಅಪ್ಪಣೆಯನ್ನಿತ್ತನಂತೆ. ನಂದೀಶ್ವರನು ಶಿವನೊಡನೆ ಅವಿನಾಭಾವ ಸಂಬಂಧದಿಂದಿರುವ ಕಾರಣ ಪ್ರತಿಯೊಂದು ಶಿವಾಲಯದ ಲಿಂಗದ ಸಮ್ಮುಖದಲ್ಲಿ ವೃಷಭ ವಿಗ್ರಹವನ್ನಿರಿಸುವ ಸಾಂಪ್ರದಾಯವಿದೆ. ಆ ವೃಷಭೇಶನು ಭೂಲೋಕದಲ್ಲಿ ಎತ್ತು ಆಗಿ (ಬಸವಣ್ಣನಾಗಿ) ಅವತರಿಸಿ ಒಕ್ಕಲಿಗರಿಗೆ ಪ್ರಾಣಾಧಾರನಾಗಿರುವ ಕಾರಣ ನಿಖಿಲ ಭಾರತೀಯರು ಬಸವಣ್ಣನ ವಿಗ್ರಹವನ್ನು ಕಲ್ಲಿನಲ್ಲಿ ಕಟೆದು ಅಲ್ಲಲ್ಲಿ ಸ್ಥಾಪಿಸಿ ಪೂಜಿಸುತ್ತಿರುವರು. ಕೆಲವರು ಬೆಳ್ಳಿ-ಬಂಗಾರದ ವಿಗ್ರಹವನ್ನು ಮಾಡಿಸಿ ದೇವರ ಮನೆಯಲ್ಲಿ ಜಗುಲೆಯ ಮೇಲಿರಿಸಿ ಪೂಜಿಸುವರು. ಪೂರ್ವಕಾಲದಲ್ಲಿ ವೀರಶೈವರ ಮನೆ ಮನೆಗೂ ಬಾಗಿಲಿನ ಹಣೆಪಟ್ಟಿಗೆ ವೃಷಭಧ್ವಜ ಚಿಹ್ನವು ವಿರಾಜಿಸುತ್ತಿತ್ತು. ವೀರಶೈವ ಮಠಾಧೀಶರ ಹೊಲಗಳಿಗೆ ಲಿಂಗಮುದ್ರೆಯ ಕಲ್ಲುಗಳಿರುವುದು ಸುಪ್ರಸಿದ್ಧವಷ್ಟೇ ! ಆ ಕಲ್ಲುಗಳಲ್ಲಿ ವೃಷಭಧ್ವಜ ಚಿಹ್ನವನ್ನು ಈಗಲೂ ನೋಡಬಹುದು. ವೀರಶೈವ ಮಠಾಧೀಶರಾದ, ಸದ್ಯಃ ಪೀಠಾರೋಹಣ ಮಾಡಿರುವ ಜಗದ್ಗುರು ಪಂಚಾಚಾರ್ಯರ ಕರಬೆರಳುಗಳಲ್ಲಿ ನಂದಿ ಚಿನ್ಹವುಳ್ಳ ಹೊನ್ನುಂಗುರವು ಈಗಲೂ ದರ್ಶನೀಯವಾಗಿದೆ. ಈ ಸಾಂಪ್ರದಾಯವು

ಪ್ರಾಚೀನ ಕಾಲದಿಂದಲೂ ಬಂದುದಾಗಿದೆ. ಪ್ರಾಕ್ತನಕಾಲದಲ್ಲಿ ನಂದಿಚಿಹ್ನ ವುಳ್ಳ ಹೊನ್ನುಂಗುರವನ್ನು ಅನೇಕ ಶಿವಶರಣರು ಸದಾ ತಮ್ಮ ಬೆರಳಲ್ಲಿ ಧರಿ ಸುತ್ತಿದ್ದಾರೆಂಬುವದಕ್ಕೆ ಕೊಂಡಗುಳಿ ಕೇಶರಾಜನ ಚರಿತ್ರೆಯಿಂದ ತಿಳಿದು ಬರುತ್ತದೆ. ಹೀಗೆ ವೃಷಭ ಮೂರ್ತಿಯನ್ನು ನಾನಾ ರೀತಿಯಾಗಿ ನಿರ್ಮಿಸಿ ಪೂಜಿಸುವಂತೆ ಮಣ್ಣಿನಿಂದಲೂ ವಿಗ್ರಹವನ್ನು ತಯಾರಿಸಿ ಪೂಜಿಸುವದುಂಟು. ಶ್ರಾವಣಮಾಸದಲ್ಲಿ ಬೆಳವಲ ಪ್ರದೇಶದಲ್ಲಿ ಕೆಲವು ಕಡೆಗೆ ಪ್ರತಿ ಸೋಮವಾರ ದಿವಸ ಓಣಿ ಓಣಿಗೂ ಮಣ್ಣಿನ ದೊಡ್ಡ ದೊಡ್ಡ ಬಸವಣ್ಣನನ್ನು ಮಾಡಿ ಶೃಂಗರಿಸಿ ವೈಭವದೊಡನೆ ಪೂಜಿಸುತ್ತಾರೆ. ಆಷಾಢ ಮಾಸದಲ್ಲಿ ಹೆಣ್ಣು ಮಕ್ಕಳು ಓಣಿ ಓಣಿಗಳಲ್ಲಿ ಗುಳ್ಳವ್ವನನ್ನು ಮಾಡಿ ಪೂಜಿಸುತ್ತಿದ್ದಾರೆ. ಗಂಡು ಮಕ್ಕಳು ಒಂದೆಡೆ ಮಣ್ಣಿನ ಬಸವಣ್ಣನನ್ನು ಮಾಡಿ ಆಟವಾಡುವುದುಂಟು. ಈ ಎತ್ತಿನ ಪೂಜೆಯು ಜ್ಯೇಷ್ಠ ಶುದ್ಧ ಪೌರ್ಣಿಮೆಯ ದಿವಸ ಬಹು ವಿಜೃಂಭಣೆ ಯಿಂದ ಜರುಗುವುದು ಸುಪ್ರಸಿದ್ಧವಿದೆ. ಆನಂತರ ಜ್ಯೇಷ್ಠ ವದ್ಯ ಅಮಾ ವಾಸ್ಯೆಯ ದಿವಸ ಮಣ್ಣಿನ ಎತ್ತನ್ನುಮಾಡಿ ಪೂಜಿಸುವದು ಆದಕ್ಕೊಂದು ಕಥೆ ಯುಂಟು. ಅದು ಎಷ್ಟರಮಟ್ಟಿಗೆ ಸತ್ಯವಿದೆಯೋ ವಾಚಕರೇ ಅವಲೋಕಿಸ ಬೇಕು.

## ಮಣ್ಣೆತ್ತಿನ ಅಮವಾಸ್ಯೆ

ಮಣ್ಣೆತ್ತಿನ ಪೂಜೆಯು ಕೇವಲ ಕನ್ನಡನಾಡಿನಲ್ಲಿ ಪ್ರತಿವರುಷ ಜ್ಯೇಷ್ಠ ವದ್ಯ ಅಮವಾಸ್ಯೆಯ ದಿವಸ ಆಚರಿಸಲ್ಪಡುವುದು. ಈ ಹಬ್ಬದ ಆಚರಣೆಯ ಬಗ್ಗೆ ಸಂಸ್ಕೃತ ಪುರಾಣ, ಇತಿಹಾಸ, ಶಿಲಾಲೇಖ, ಇತ್ಯಾದಿಗಳ ಪ್ರಬಲ ಪ್ರಮಾಣವೇನೂ ಲಭ್ಯವಾಗುವುದಿಲ್ಲ. ಆದರೆ ಅದೃಶ್ಯಕವಿಯಿಂದ ರಚಿಸಲ್ಪಟ್ಟ ಪ್ರೌಢರಾಯನ ಕಾವ್ಯದಲ್ಲಿ ಮಾತ್ರ ಈ ಹಬ್ಬದ ಉತ್ಪತ್ತಿಯು ಹೇಗೆ ಆಯಿ ತೆನ್ನುವುದು ಹೇಳಲ್ಪಟ್ಟಿದೆ. ಈ ಗ್ರಂಥಕರ್ತನು ತನ್ನ ಕಾವ್ಯದಲ್ಲಿ ಅನೇಕ ಶಿವಶರಣರ ಕಥೆಗಳನ್ನು ಸರಸವಾಗಿಯೂ, ಮನೋಹರವಾಗಿಯೂ, ಪದ್ಯ ರೂಪವಾಗಿ ಹೆಣೆದಿರುವನು. ಆ ಗ್ರಂಥದಲ್ಲಿ ಜಕ್ಕಣಾಚಾರ್ಯನೆಂಬ ಮಂತ್ರಿಯು ರಾಜನಾದ ಪ್ರೌಢರಾಯನಿಗೆ ಶ್ರೇಷ್ಠರಾದ ಶಿವಭಕ್ತರ ಕಥೆಗಳನ್ನು ಬೋಧಿಸಿ, ಕೊನೆಗೆ ತನ್ನ ಮಂತ್ರಿಪದವಿಯನ್ನು ಚಾಮರಸನಿಗೆ ಕೊಟ್ಟು ನಿವೃತ್ತನಾದ

ನೆಂದು ಹೇಳಲಾಗಿದೆ. ಚಾಮರಸನು ಕ್ರಿ. ಶ. ೧೪೩೦ರಲ್ಲಿದ್ದನೆಂದೂ, ಇವನು ಪ್ರಭುಲಿಂಗಲೀಲೆಯನ್ನು ಬರೆದಿರುವನೆಂದೂ ಐತಿಹ್ಯವಿದೆ. ಚಾಮರಸನು ಪ್ರೌಢರಾಯನಲ್ಲಿ ಮಂತ್ರಿಯಾಗಿರುವದರಿಂದ ಪುಣ್ಣೆತ್ತಿನ ಹಬ್ಬವು ಆ ಪೂರ್ವ ದಲ್ಲಿಯೇ ಆಚರಣೆಯಲ್ಲಿತ್ತೆಂದು ನಿಸ್ಸಂದೇಹವಾಗಿ ಹೇಳಬಹುದು.

ಇಂದ್ರಪುರದ ಅರಸನಿಗೆ ಸುಂದರನೂ, ಸರ್ವಲಕ್ಷಣ ಸಂಪನ್ನನೂ ಆದ ಕಾಳಿಂಗ ಕುವರನೆಂಬ ಮಗನು ಜನಿಸಿದನು. ರಾಜನು ಲೋಕಾರೂಢಿಯಂತೆ ದೈವಜ್ಞರನ್ನು ಕರೆಯಿಸಿ "ಮಗುವು ಹುಟ್ಟಿದ ಮುಹೂರ್ತವು ಹೇಗಿರುವು ದೆಂದು ವಿಚಾರಿಸಿದನು. ಅವರು ಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲಿಂದ, ಆ ರಾಜಪುತ್ರನಿಗೆ ಹುಲಿಯಿಂದ ಮರಣವುಂಟೆಂದು ಹೇಳಿದರು. ಈ ಮಾತನ್ನು ಕೇಳಿ ರಾಜನು ಶೋಕಾತುರನಾಗಿ, ಅಂದಿನಿಂದ ತನ್ನ ಮಗನನ್ನು ಊರ ಹೊರಗೆ ಹೋಗಗೊಡದೇ ಕಾಳಜಿಯಿಂದ ಜೋಪಾನ ಮಾಡಹತ್ತಿದನು. ದಿನಗಳುರುಳಿದವು. ತಿಂಗಳು ತೀರಿದವು. ಹಲವು ಸಂವತ್ಸರಗಳು ಸರಿದವು. ಪುತ್ರನು ಬೆಳೆದು ದೊಡ್ಡವನಾದನು. ಹೀಗೆ ಕಾಳಿಂಗ ಕುವರನು ಯೌವನಾ ವಸ್ಥೆಗೆ ಬಂದೊಡನೆ ಅವನು ಅರಸನಾಜ್ಞೆಯನ್ನು ಮೀರಿ, ತನ್ನ ಮಿತ್ರರೊಡನೆ ನಿತ್ಯವೂ ಬೇಟೆಗೆ ಹೋಗಿ, ಸಿಂಗ, ಶಾರ್ದೂಲ, ಕರಡಿ, ಕಾಡಾನೆಗಳನ್ನು ಕೊಂದು ತಂದು, ತಂದೆಗೆ ಅತ್ಯಾನಂದವನ್ನುಂಟು ಮಾಡುತ್ತಿದ್ದನು. ಹೀಗಿ ರಲು ತಂದೆಯು ಒಂದು ದಿವಸ ಸತ್ಕುಲ ಪ್ರಸೂತಳಾದ ರಾಜಕುವರಿಯನ್ನು ಕರೆತಂದು ಮಗನ ಮದುವೆಯನ್ನು ಮೂರು ದಿವಸಗಳವರೆಗೂ ಸಂಭ್ರಮ ದೊಡನೆ ಮಾಡಹತ್ತಿದನು. ಆಗ ಕಾಳಿಂಗ ಕುವರನು ಮದುಮಗನಾಗಿ ಹರ್ಷದಿಂದ ಚಿತ್ರ ಮಂಟಪವನ್ನು ನೋಡಲಾತುರನಾಗಿ ರಾಜಪುತ್ರರೊಡನೆ ಅಲ್ಲಿಗೆ ಬಂದನು. ರಾಜಪುತ್ರನನ್ನು ಸುತ್ತುಗಟ್ಟಿದ ಮಿತ್ರರಲ್ಲಿ ಓರ್ವನು ಕಾಳಿಂಗ ಕುವರನನ್ನು ಮುಂದಕ್ಕೆ ಕರೆದು ಮದುವೆಯ ಮಂಟಪದಲ್ಲಿ ರಮ್ಯ ವಾಗಿ ಚಿತ್ರಿಸಿದ ತರತರದ ತರುಗುಲ್ಮಗಳನ್ನೂ, ಫಲಪುಷ್ಪಗಳನ್ನೂ, ಅಷ್ಟದಿಕ್ಪಾ ಲಕರನ್ನೂ, ದೇಶದೇಶದ ರಾಜರ ಭಾವಚಿತ್ರಗಳನ್ನೂ ವಿವರಿಸಿ ತೋರಿಸುತ್ತ, ತುಸು ಮುಂದಕ್ಕೆ ಸಾಗಿ, ಸಿಂಹ, ಕರಡಿ, ಕಾಡಕೋಣ, ಮಿಕ ಮೊದಲಾದವು ಗಳನ್ನು ತೋರಿಸುವವನಾಗಿ, ಎಲೈ ರಾಜಪುತ್ರನೇ— "ಅತ್ತ ನೋಡು ಅಲ್ಲಿ

ರುವ ಹುಲಿಯು ನಿನ್ನನ್ನು ಕೊಲ್ಲಲು ಬಾಯ್ದೆರೆದು ನಿನ್ನೆಡೆಗೆ ಬರುತ್ತಿರುವಂತೆ ಕಾಣುವದು ತೀವ್ರ ದೂರ ಸರಿ" ಎಂದು ಹೆದರಿಸಿದರು. ಅಷ್ಟಕ್ಕೆ ಅವನ ಆಯುಷ್ಯ ತೀರಿತು, ಆ ರಾಜಕುವರನು ತರತರನೆ ನಡುಗುವವನಾಗಿ ವಸುಧಾ ತಲಕ್ಕೆ ಕುಸಿದು ಬಿದ್ದು ಅರೆನಿಮಿಷದಲ್ಲಿಯೇ ಅಸುವನೀಗಿದನು. ಇದನ್ನೆಲ್ಲ ನೋಡುತ್ತ ನಿಂತಿದ್ದ ಮದುಮಗಳ ಮಾತಾಪಿತೃಗಳು, ತಮ್ಮ ಮಗಳನ್ನು ಕೊಡದೇ ಹಿಂದಕ್ಕೆ ಹೊರಟುಹೋದರು. ಆಗ ಅರಸನು ತನ್ನ ಮಗನ ಮರಣ ದಿಂದ ದುಃಖಾತುರನಾದನು. ಮತ್ತು ತನ್ನ "ಕುವರನ ವಿವಾಹವನ್ನು ಕಣ್ಣಾರೆ ನೋಡಲಿಲ್ಲವಲ್ಲಾ" ಎಂದು ಚಿಂತಿಸುವವನಾಗಿ,

"ಮುಂದೆಮೃಗ — — — — — ।
— — — — — — —
— — — — — — — ॥

ತಂದೆ ದುಃಖವಮಾಡಿ ಪೆಣಕೆ ಪೆಣ್ಗೊಟ್ಟಡಾ ।
ನೊಂದು ಲಕ್ಕದ ಪೊನ್ನ ತಡೆಯದೀಕ್ಷಣವೀವೆ
ನೆಂದು ಡಂಗುರ ಸಾರಲೊಬ್ಬ ವಿಪ್ರಂಗೇಳುಮಂದಿ
ಪೆಣ್ಮಕ್ಕಳಿರಲು " ॥೨॥

"ಆ ಹೆಣಕ್ಕೆ ಹೆಣ್ಣುಕೊಟ್ಟವರಿಗೆ ಒಂದು ಲಕ್ಷ ಹೊನ್ನು ಕೊಡುವೆ ನೆಂದು" ಡಂಗುರ ಹೊಡೆಯಿಸಿದನು. ಅದೇ ಪಟ್ಟಣದಲ್ಲಿ ಓರ್ವ ಬ್ರಾಹ್ಮಣನಿಗೆ ಏಳು ಮಂದಿ ಹೆಣ್ಣುಮಕ್ಕಳಿದ್ದರು. ಅವನು ಒಡಲಿಗೆ ಅನ್ನವಿಲ್ಲದೇ ಹೊದೆ ಯಲು ಅರಿವೆಯಿಲ್ಲದೇ ಬಡತನದಿಂದ ಬಳಲಿ ಬೆಂಡಾಗಿರುವನು. ಅವನು ರಾಜನ ಆ ಸಂದೇಶವನ್ನು ತನ್ನ ಸತಿಗೆ ತಿಳಿಸಿ, ಆವಳ ಅನುಮತಿಯಂತೆ ರಾಜ ನಲ್ಲಿಗೆ ಹೋಗಿ, ಒಂದು ಲಕ್ಷ ರೂಪಾಯಿಗಳನ್ನು ತೆಗೆದುಕೊಂಡು, ತನ್ನ ಮಗ ಳಾದ 'ಚನ್ನಮ್ಮ' ಎಂಬ ತರುಣಿಯನ್ನು ಕಾಳಿಂಗ ಕುವರನ ಹೆಣಕ್ಕೆ ಮದುವೆ ಮಾಡಿಕೊಟ್ಟನು. ಮುಗ್ಧೆಯಾದ ಚನ್ನಮ್ಮ ತನ್ನ ಪತಿಯೊಡನೆ ಯಾನವನ್ನು ಏರಿ ಪತಿ ಶುಶ್ರೂಷೆಯಲ್ಲಿ ನಿರತಳಾಗಿರುವಳು. ಅದನ್ನು ನೆರೆದ ಜನರು ಕಣ್ಣಾರೆ ಕಂಡು ಕಣ್ಣೀರು ಸುರಿಸುವವರಾಗಿ, ಹೆಣವನ್ನು ಸ್ಮಶಾನಕ್ಕೆ ತಂದಿಳುಹಿ, ಅಗ್ನಿ ಸಂಸ್ಕಾರ ಮಾಡುವಷ್ಟರಲ್ಲಿಯೇ ಸುತ್ತಲೂ ಮೋಡ ಮುಸುಕಿ, ಗುಡುಗು,

ಸಿಡಿಲು, ಗಾಳಿಯಿಂದ ಕೂಡಿದ ಆಣೆಕಲ್ಲಿನ ಮಳೆಯು ರಭಸದಿಂದ ಸುರಿಯ ಲಾರಂಭಿಸಿತು. ಇದರಿಂದ ಗಾಸಿಯಾದ ಬಂಧುಬಳಗದವರೂ, ನೆರೆದೆಲ್ಲ ಜನ ಜಂಗುಳಿಯೂ ಹೆಣವನ್ನು ಹಾಗೇ ಬಿಟ್ಟು ತಮ್ಮತಮ್ಮ ಮನೆಗಳಿಗೆ ಮರಳಿ ಹೋದರು. ರಭಸವಾದ ಮಳೆಯಿಂದ ಕೆಲವು ಹೊತ್ತಿನಲ್ಲಿಯೇ ಹೊಳೆಹಳ್ಳ ಗಳು ಸೂಸಿ, ಸಮರಸವಾಗಿ, ಭೂತಲವು ಜಲಮಯವಾಯಿತು. ಅಷ್ಟರ ಲ್ಲಿಯೇ ದಿನಮಣಿಯು ಧರಣೀತಲವನ್ನು ಸೇರಲು ರಾತ್ರಿಯಲ್ಲಿ ದಶದಿಶಗಳಲ್ಲಿ ಮಸಿಯು ಬಳಿದಂತೆ ಕಗ್ಗತ್ತಲೆ ಕವಿಯಿತು. ಇಷ್ಟಾದರೂ ಚನ್ನಮ್ಮ ಹೆದರ ಲಿಲ್ಲ. ತನ್ನ ಪತಿಯನ್ನು ಬಿಗಿದಪ್ಪಿಕೊಂಡು ಧೈರ್ಯವನ್ನು ತಾಳಿದಳು. ಹರನ ಮೊರೆಹೊಗದೇ ಬೇರೆದಾರಿ ಇಲ್ಲವೆಂದು ಭಾವಿಸಿದಳು. ಮತ್ತು ಆ ತರು ಣಿಯು ಮಳೆಯಿಂದ ತೊಯ್ದ ಮಣ್ಣಿನಿಂದ ಬಸವಣ್ಣನನ್ನು ಮಾಡಿ, ತಾ ಮುಡಿದ ಕುಸುಮಮಾಲೆ, ಗಂಧ, ಕುಂಕುಮ, ಉಡಿಯಕ್ಕಿ ಅಕ್ಷತೆಗಳನ್ನು ಧರಿಸಿ, ಫಲನೈವೇದ್ಯ, ತಾಂಬೂಲವ ಸಮರ್ಪಿಸಿ, ಭಕ್ತಿಯಿಂದ ಕರಗಳನ್ನು ಜೋಡಿಸಿ,

" ವರವೃಷಭರಾಜ ಒಲಿದೆನ್ನಕಾಂತಗೆ
ಹರಣವಿತ್ತು ರಕ್ಷಿಪುದು ದೇವ" ||೨೬||
(ಪ್ರೌಢರಾಯನ ಕಾವ್ಯ-ಪು-೨೫೩)

ಎಂಬುದಾಗಿ ಚನ್ನಮ್ಮ ತನ್ನ ಒಡಲೊಳಗಿರುವ ದುಃಖವನ್ನು ನಂದೀಶ್ವ ರನಿಗೆ ಹೇಳುತ್ತ ಒಂದೇ ಮನದಿಂದ ನಮಿಸಿ ನುತಿಸಹತ್ತಿದಳು. ತನ್ನ ಪತಿಯ ಪ್ರಾಣವನ್ನು ಪಡೆವುದಕ್ಕಾಗಿ, ದೈನ್ಯದಿಂದಲೂ, ದೃಢಭಕ್ತಿಯಿಂದಲೂ ಬೇಡಿ ಕೊಳ್ಳುತ್ತಿರುವ ಭಕ್ತಳನ್ನು ನೋಡಿ. ಭಗವಾನ್ ಭವಾನೀಪತಿಯು, ಕನಿಕರ ಪಟ್ಟು ಪಾರ್ವತಿಯೊಡನೆ ವೃಷಭಾರೂಢನಾಗಿ ಅವಳೆದುರು ಆವಿರ್ಭವಿಸಿ, ಮಗುವೇ! ಅಂಜಬೇಡವೆಂದು ಅಭಯ ಹಸ್ತವನಿತ್ತು ಕಾಳಿಂಗ ಕುವರನಿಗೆ ಪ್ರಾಣದಾನವನ್ನು ಮಾಡಿದುದಲ್ಲದೇ, "ಮಗಳೇ! ಇನ್ನೇನಾದರೂ ನಿನ್ನ ಇಷ್ಟಾರ್ಥವಿದೇಯೇ? ಎಂದು ಕೇಳಿದನು. ಆಗ ಚನ್ನಮ್ಮ, ತನ್ನೆದುರು ನಂದಿ ವಾಹನನು ಕರುಣಿಸಿ ಬಂದುದನ್ನು ನೋಡಿ ಆನಂದ ಪುಲಕಿತಳಾಗಿ ನುಡಿದು ದೇನಂದರೆ—'ದೇವ'! ಇಂದಿನ ದಿನದಲ್ಲಿ ನಂದಿಯನ್ನು ಭಕ್ತಿಯಿಂದ ಯಾವ

ವನಿತೆಯರು ಪೂಜಿಸುವರೋ, ಅವರು ಮುತ್ತೈದೆಯರಾಗಲಿ, ಮತ್ತು ಮಕ್ಕಳುಳ್ಳವರಾಗಿಲಿ, ಎಂದು ಕರಜೋಡಿಸಿ ಬೇಡಿಕೊಂಡಳು. ಆಗ ದಯಾಮಯನಾದ ಮಹೇಶ್ವರನು 'ತಥಾಸ್ತು' ಎಂದು ತನ್ನ ಭಕ್ತಳ ಮಸ್ತಕದ ಮೇಲೆ ವರದ ಹಸ್ತವನ್ನಿತ್ತು ಅಂತರ್ಧಾನನಾದನು. ಹೀಗೆ ಮಣ್ಣೆತ್ತಿನ ಪೂಜೆಯು ಚನ್ನಮ್ಮನ ಸ್ಮಾರಕವೆಂದೂ, ಆಕಾಶದಲ್ಲಿ ಮಿನಗುವ ರೋಹಿಣೀ ನಕ್ಷತ್ರವು ಅವಳ ಪಾತಿವ್ರತ್ಯದ ದ್ಯೋತಕವೆಂದೂ ಹಿರಿಯರು ಹೇಳುತ್ತಿರುವರು.

## ಆಷಾಢಮಾಸ

ಈ ಮಾಸವು ಗ್ರೀಷ್ಮ ಋತುವಿನಲ್ಲಿರುವ ಕಾರಣ ವಾತಾವರಣವು ಸಾಮಾನ್ಯವಾಗಿ ಜ್ಯೇಷ್ಠಮಾಸದಂತಿರುತ್ತದೆ. ಈ ತಿಂಗಳ ಕೊನೆಯ ದಿನಗಳಿಂದ ಮಳೆಗಾಲವು ಅರ್ಥಾತ್ ವರ್ಷಾಋತುವು ಪ್ರಾರಂಭವಾಗುತ್ತದೆ. ಆ ದಿನಗಳಲ್ಲಿ ಋತು ಸಂಧಿಕಾಲವಿರುವುದರಿಂದ ವರ್ಷಾಋತುವಿನಲ್ಲಿ ಹೇಳಿದ ಆಹಾರ ವಿಹಾರವನ್ನು ಸೇವಿಸುವುದು ಉತ್ತಮ. ಈ ತಿಂಗಳಿಂದ ಚಾತುರ್ಮಾಸ ಪೂಜಾ ಪ್ರಾರಂಭವಾಗುತ್ತದೆ. ಆಷಾಢ ಮಾಸದಿಂದ ನಾಲ್ಕು ತಿಂಗಳು ಮಳೆಗಾಲವಿರುವ ಕಾರಣ ರೋಗರುಜಿನಗಳು ಹೆಚ್ಚುವುದುಂಟು. ಸಾಂದ್ರವಾದ ಮೇಘಗಳಿಂದ ಸೂರ್ಯನ ಪ್ರಭಾವವು ಕುಗ್ಗಿ ಹವೆಯಲ್ಲಿ ಆರ್ದ್ರತೆಯುಂಟಾಗುತ್ತದೆ. ನೀರಿನಲ್ಲಿ ಜಡತ್ವವುಂಟಾಗುವುದು. ಆದುದರಿಂದ ಮಾನವನಿಗೆ ಅಗ್ನಿಮಾಂದ್ಯವಾಗುವುದು. ಇದು ರೋಗವೃದ್ಧಿಗೆ ಕಾರಣವಾಗುವುದು. ಈ ನಿವಾರಣೆಗಾಗಿ ಹಿಂದಿನ ಧರ್ಮಾಚಾರ್ಯರು ಚಾತುರ್ಮಾಸ್ಯ ವ್ರತಾಚರಣೆಯನ್ನಾಚರಿಸಲು ಹೇಳಿದಂತೆ ಕಾಣುತ್ತದೆ. ಈ ತಿಂಗಳಲ್ಲಿ ಹಬ್ಬ ಹರಿದಿನಗಳನ್ನು ಹೆಚ್ಚಾಗಿ ಹೇಳದಿದ್ದರೂ ಉತ್ತರ ಭಾರತೀಯರು ಆಷಾಢ ಮಾಸಕ್ಕೆ ಬೆಲೆಯನ್ನು ಕೊಡುತ್ತಾರೆ. ಯಾಕಂದರೆ ಈ ತಿಂಗಳಿಂದ ಚಾತುರ್ಮಾಸ ಪೂಜಾ ಪ್ರಾರಂಭವಾಗುತ್ತಿರುವದೇ ಕಾರಣ.

ಈ ಆಷಾಢ ಮಾಸದಲ್ಲಿ ಬರುವ ಪುಣ್ಯ ದಿನಗಳನ್ನು ಕೆಳಗೆ ಕಾಣಿಸಿದ್ದೇವೆ. ಇವುಗಳಲ್ಲಿ ವಿಶಿಷ್ಟವಾದವುಗಳನ್ನು ಮಾತ್ರ ವಿಶದವಾಗಿ ವಿವರಿಸಿದ್ದೇವೆ.

ಆಷಾಢ ಶುದ್ಧ ಚತುರ್ಥಿಯಲ್ಲಿ ನವಿಲುಗುಂದ ಶ್ರೀ ನಾಗಲಿಂಗೇಶ್ವರ ಪುಣ್ಯದಿನ. ಶುದ್ಧ ಏಕಾದಶಿಯಲ್ಲಿ ಪಂಢರಪುರಯಾತ್ರೆ. ಆಷಾಢ ಶು। ಪೌರ್ಣಿಮೆಯಲ್ಲಿ ಸತೀವ್ರತ. ಈ ತಿಂಗಳಲ್ಲಿ ಹೆಣ್ಣುಮಕ್ಕಳು ಪ್ರತಿ ಮಂಗಳವಾರದಲ್ಲಿ ಗುಳ್ಳವನ ಪೂಜೆಯನ್ನು ವೈಭವದಿಂದ ಆಚರಿಸುವದುಂಟು. ಆಷಾಢವದ್ಯ ೧ ರಲ್ಲಿ ಲೋಕಮಾನ್ಯ ಟಿಳಕರ ಪುಣ್ಯದಿನ, ೬ ರಲ್ಲಿ ಅವರ ಜಯಂತಿ ದಿನ. ಈ ತಿಂಗಳಿಂದ ದಕ್ಷಿಣಾಯನವು ಪ್ರಾರಂಭವಾಗುತ್ತದೆ. ಆಷಾಢವದ್ಯದಲ್ಲಿ ನಾಗರ ಅಮಾವಾಸ್ಯೆ.

## ಗುಳ್ಳವ್ವನ ಹಬ್ಬ

"ಗುಳ" ಶಬ್ದವು ಅಚ್ಚಗನ್ನಡವಿದ್ದು ಗೋಲಾಕಾರವೆಂದು ಅರ್ಥವಾಗುತ್ತದೆ. ಆದುದರಿಂದ "ಗುಳ್ಳವ್ವನು" ಭೂದೇವಿಯಾಗಿದ್ದಾಳೆ. ಕರ್ನಾಟಕದಲ್ಲಿ ಗುಳ್ಳವನ ಪೂಜೆಯು ಸರ್ವರಿಗೂ ಮಾನ್ಯವಾಗಿದೆ. ಹಳ್ಳಿಗಳಲ್ಲಿ ಹೆಣ್ಣುಮಕ್ಕಳು ಗುಳ್ಳವ್ವನನ್ನು ಬಲು ಹುಮ್ಮಸದಿಂದ ಈಗಲೂ ಮಾಡುವುದುಂಟು. ಆಷಾಢ ಮಾಸದಲ್ಲಿ ಮೊದಲನೆಯ ಮಂಗಳವಾರ ದಿವಸ ಹೆಣ್ಣುಮಕ್ಕಳು ಊಟ ಉಡುಗರೆ ತೀರಿಸಿಕೊಂಡು ಸಡಗರದಿಂದ ಚಿಕ್ಕಮಕ್ಕಳೊಡನೆ ಊರ ಮುಂದಿನ ಹೊಳೆಹಳ್ಳಗಳಿಗೆ ಹೋಗಿ, ಅಲ್ಲಿಯ ಆಲುತಂದು ಸಂಜೆಯಪ್ಪೊತ್ತಿಗೆ ಗುಳ್ಳವ್ವನನ್ನು ಒಂದು ಅಂತಸ್ತು ಮಾಡಿ, ಹಾಡಿ ಆಡುವ ರೂಢಿಯಿದೆ. ಹೀಗೆಯೇ ಗುಳ್ಳವ್ವನು ಆ ತಿಂಗಳಿನ ಉಳಿದ ಮೂರುವಾರಗಳಲ್ಲಿ ಒಂದೊಂದು ಅಂತಸ್ತು ಏರುತ್ತ ಏರುತ್ತ ಕೊನೆಗೆ ನಾಲ್ಕು ಅಂತಸ್ತಿನ ಅಖಂಡ ಗೋಪುರವಾಗಿ ನಿಲ್ಲುವಳು. ಈ ಗುಳ್ಳವ್ವನಿಗೆ ಗುಲಗಂಜಿ, ಜಾಲಿಯ ಹೂ-ಮೊಗ್ಗೆಗೊನೆಗಳನ್ನು ಏರಿಸುವರು. ಕುಂಕುಮ, ಕುಸಿಬಿ, ಕನ್ನಡಿಕಲಶಗಳಿಂದ ಅಲಂಕರಿಸಿ, ವಿವಿಧ ಆಭರಣಗಳನ್ನು ಧರಿಸಿ ಶೃಂಗರಿಸುವರು. ಗುಳ್ಳವ್ವನ ಮುಂದೆ ಮಣ್ಣೆತ್ತನ್ನೂ, ಎಡಮಗ್ಗಲಲ್ಲಿ ಗೊಗ್ಗವ್ವನನ್ನೂ ಇಟ್ಟು ಆಡುವುದುಂಟು.

ಗ್ರೀಷ್ಮಋತುವಿನಿಂದ ಸಂತೃಪ್ತಳಾದ ಭೂದೇವಿಯು, (ಗುಳ್ಳವ್ವನು) ವರ್ಷಾಋತುವಿನಿಂದ ಅರ್ಥಾತ್ ಗಂಗೆಯಿಂದ (ಗೊಗ್ಗವ್ವನಿಂದ) ಸಂತೃಪ್ತಳಾಗಿ ಸಮೃದ್ಧಳಾಗಲೆಂತಲೂ, ಧರ್ಮಾವತಾರಿಯಾದ ನಾಲ್ಕು ಕಾಲಿನ

ಬಸವನು ಈ ಭೂದೇವಿಯಲ್ಲಿ ಬಾಳಿ ಬೆಳಗಲೆಂತಲೂ ಇಲ್ಲಿ ಈ ಮೂವರನ್ನೂ ಅಂದರೆ ಗುಳ್ಳವ್ವ, ಗೊಗ್ಗವ್ವ, ಬಸವ ಇವರನ್ನು ಏಕತ್ರ ಕೂಡಿಸಿ, ಪೂಜಿಸುವ ಆರ್ಯಸಾಂಪ್ರದಾಯವಿದು. ಯಾಕಂದರೆ ಸಕಲರಿಗೂ ಈ ಮೂವರು ಅಶನ ವಸನ ದಾತೃಗಳಾಗಿರವರು.

## ವಿಭೂತಿ ಪುರುಷ ಶ್ರೀ ನಾಗಲಿಂಗೇಶ
## ಪುಣ್ಯದಿನ ಆಷಾಢ ಶು. ೪.

ಧರ್ಮದ ಗ್ಲಾನಿಯಾದಾಗ ಪರಮಾತ್ಮನು ಅವತಾರವೆತ್ತಿ ಮಾನವನನ್ನು ಉದ್ಧರಿಸುವನೆಂದು ಹಿಂದುಧರ್ಮ ಶಾಸ್ತ್ರವು ಹೇಳುವುದುಂಟು. ಇದನ್ನು ನಾವು ನಂಬಲೇಬೇಕು. ಸಂತತುಕಾರಾಮ, ಏಕನಾಥ, ಮೊದಲಾದ ಸಂತ ಶಿರೋಮಣಿಗಳು, ಜಗದ್ಗುರು ರೇಣುಕಾಚಾರ್ಯ, ಜಗದ್ಗುರು ಶಂಕರಾಚಾರ್ಯ ಮೊದಲಾದ ಆಚಾರ್ಯವರ್ಯರು ಮಾನವರಾದಾಗ್ಯೂ ಅವರು ಸಾಮಾನ್ಯರಾದ ನಮ್ಮಂತೆ ಇರಲಿಲ್ಲ. ಅವರು ಕೇವಲ ಸತ್ವಶೀಲರಾಗಿದ್ದರು; ಅವರ ನಡೆ-ನುಡಿಗಳು ಸದಾ ಪರಿಶುದ್ಧವಾಗಿದ್ದವು. ಅವರ ನಾಮಸ್ಮರಣೆಯಿಂದ ಈಗಲೂ ಮಾನವನು ಮಾನವತ್ವವನ್ನು ಪಡೆಯುವುದುಂಟು. ಆ ಮಹನೀಯರು ತೋರಿಸಿಕೊಟ್ಟ ಹೆದ್ದಾರಿಯು ಉಜ್ವಲವಾಗಿರುವುದಾದ್ದರಿಂದಲೇ ಅವರು ದೇವಾವತಾರಿಗಳೆಂದು ಹಿರಿಯರು ಹೇಳಿರುವದು. ಹೀಗೆಯೇ ಶ್ರೀ ನಾಗಲಿಂಗೇಶನು ವಿಭೂತಿ ಪುರುಷನಾಗಿ ಅವತರಿಸಿ ಅನೇಕರನ್ನು ಉದ್ಧರಿಸಿರುವುದುಂಟು.

ಈ ಮಹಾನುಭಾವನ ಬಗೆಗೆ ಅನೇಕರು ಅನೇಕ ಪ್ರಕಾರವಾದ ಕಥೆಯನ್ನು ಕಟ್ಟಿರುವುದುಂಟು. ಅವನ ಚರಿತ್ರಾಂಶದಿಂದ ತಿಳಿದು ಬರುವುದೇನಂದರೆ— ಶ್ರೀ ನಾಗಲಿಂಗೇಶನ ಕುಲಗೋತ್ರ, ಜನ್ಮಭೂಮಿ ಇವೆಲ್ಲ ನಿಶ್ಚಿತವಾಗಿ ತಿಳಿದು ಬರುವುದಿಲ್ಲ. ಅವನಾದರೂ ಖುದ್ಧ ಎಲ್ಲಿಯೂ ಯಾರ ಮುಂದೆಯೂ ಹೇಳಿದ್ದು ಗೋಚರವಾಗುವುದಿಲ್ಲ. ಅವನು ತನ್ನ ಏಳನೇ ವರ್ಷದಲ್ಲಿ ಬಿಜಾಪುರ ಜಿಲ್ಲಾ ಬದಾಮಿ ತಾಲೂಕು "ಜವಳಿಗೇರಿ"ಯಿಂದ ನವಿಲುಗುಂದಕ್ಕೆ ಬಂದನೆಂದು ಕೆಲವರು ಅಭಿಪ್ರಾಯಪಡುವುದುಂಟು. ಇವನು ಶ್ರೀ ಗರಗದ ಮಡಿವಾಳ ಸ್ವಾಮಿಗಳವರೊಡನೆ ಸಂಚರಿಸಿರುವುದುಂಟು ಹಾಗೂ ಶ್ರೀ ಶಿಶುನಾಳ

ಶೇಖರ ಸಮಕಾಲೀನನಾಗಿರುವನು. ಒಂದುಸಾರಿ ಶ್ರೀ ನಾಗಲಿಂಗೇಶನು ಗರಗದ ಮಡಿವಾಳೇಶ್ವರನೊಡನೆ ಹುಬ್ಬಳ್ಳಿ ಶ್ರೀ ಸಿದ್ಧಾರೂಢ ಸ್ವಾಮಿಗಳ ದರ್ಶನಕ್ಕೆ ಹೋದನಂತೆ, ನಾಗಲಿಂಗನು ಗರಗದ ಮಡಿವಾಳಪ್ಪನಿಗೆ ಒಂದು ತೆಂಗಿನ ಕಾಯಿಯನ್ನು ಕೊಟ್ಟು, ಶ್ರೀ ಸಿದ್ಧಾರೂಢ ಸ್ವಾಮಿಗಳ ಮುಂದೆ ಒಡೆಯಲು ಹೇಳಿದನಂತೆ. ಮಡಿವಾಳ ಸ್ವಾಮಿಗಳು ಆ ಪ್ರಕಾರವಾಗಿ ತೆಂಗಿನ ಕಾಯಿಯನ್ನು ಒಡೆಯುವಷ್ಟರಲ್ಲಿ ಅದು ಕೆಟ್ಟು ದುರ್ವಾಸನೆಯುಳ್ಳದ್ದಾಗಿತ್ತಂತೆ. ಆಗ ಶ್ರೀ ನಾಗಲಿಂಗೇಶನು:— "ಎಲೋ ಮಡಿವಾಳ ಈ ಕಾಯಿ ಮೇಲೆ ನೋಡಲು ಮಾತ್ರ ಚಂದ ಅದೆ. ಒಳಗೆ ದುರ್ವಾಸನೆಯುಳ್ಳದ್ದಾಗಿದೆ. ಇಲ್ಲಿಂದ ಮುಂದಕ್ಕೆ ಹೋಗುವಾ ನಡೆ" ಎಂದು ನುಡಿದರಂತೆ. ಇದರ ಮೇಲಿಂದ ಶ್ರೀ ನಾಗಲಿಂಗೇಶನು ಶ್ರೀ ಸಿದ್ಧಾರೂಢರ ಕಾಲದಲ್ಲಿ ಇದ್ದನೆಂದು ತಿಳಿದು ಬರುತ್ತದೆ.

ಶ್ರೀ ನಾಗಲಿಂಗೇಶನು ಪರಮಯೋಗಸಿದ್ಧನೆಂದು ತಿಳಿದು ಬರುತ್ತದೆ. ಅವನು ಯೋಗಿಯಾದರೂ ಪೈಶಾಚಿಕಾವಸ್ಥೆಯನ್ನು ಹೊಂದಿದ್ದನೆಂಬ ಊಹೆಗೆ ಆಸ್ಪದವಿದೆ. ಈ ಅವಸ್ಥೆ ಬರಲು ಕಾರಣವೇನಂದರೆ ಯೋಗಿಯ ಪ್ರಕೃತಿಯು ಕಫಪ್ರಧಾನವುಳ್ಳದಾಗಿದ್ದರೆ ಅವನು ಬಾಲಲೀಲಾವಸ್ಥೆಯನ್ನು ಹೊಂದುವನು. ಅದರಂತೆ ಪಿತ್ತಪ್ರಧಾನ ಪ್ರಕೃತಿಯುಳ್ಳವನಾಗಿದ್ದರೆ, ಉನ್ಮಾದಾವಸ್ಥೆಯನ್ನು ಹೊಂದುತ್ತಾನೆ. ವಾತಪ್ರಧಾನ ಪ್ರಕೃತಿಯುಳ್ಳವನಾಗಿದ್ದರೆ ಪೈಶಾಚಿಕಾವಸ್ಥೆಯನ್ನು ಹೊಂದುತ್ತಾನೆ. ೧ನೇ ಅವಸ್ಥೆಗೆ ಕಾರಣವೇನಂದರೆ ಕಫವು ಅಪ್ ತತ್ವಪ್ರಧಾನವಾಗಿದೆ. ಅಪ್ ಇದು ಸತ್ವಗುಣ ಭೂಯಿಷ್ಠವಾಗಿದೆ. ನೈಸರ್ಗಿಕ ಕಫಪ್ರಧಾನ ಪ್ರಕೃತಿಯುಳ್ಳವರು ಪ್ರಶಾಂತರೂ, ಕಷ್ಟಸಹಿಷ್ಣುಗಳೂ, ಸ್ಥೂಲ ದೇಹಿಗಳೂ ಮೇಧಾವಿಗಳೂ, ಅನ್ಯರು ಕೊಡುತ್ತಿರುವ ತೊಂದರೆಗಳನ್ನು ಸಹಿಸಿಕೊಳ್ಳುವವರೂ ಆಗಿರುತ್ತಾರೆ. ಇಂಥ ಪ್ರಕೃತಿಯನ್ನು ಹೊಂದಿದ ಯೋಗಿಯು ಬಾಲಲೀಲೆಯುಳ್ಳವನಾಗುವನು.

೨ನೇ ಅವಸ್ಥೆಗೆ ಕಾರಣವೇನಂದರೆ ಪಿತ್ತವು ತೇಜಸ್ಸಿನ ತತ್ವವುಳ್ಳದಾಗಿದೆ. ಪಿತ್ತವು ರಜೋಗುಣವುಳ್ಳದಾಗಿದೆ. ನೈಸರ್ಗಿಕ ಪಿತ್ತಪ್ರಧಾನ ಪ್ರಕೃತಿಯುಳ್ಳವರು ಉಗ್ರ ಸ್ವಭಾವವುಳ್ಳವರೂ ಅರ್ಥಾತ್ ತೀಕ್ಷ್ಣ ಸ್ವಭಾವದವರೂ

ಆಗಿದ್ದು ಸೇಡು ತೀರಿಸಿಕೊಳ್ಳುವ ಕ್ಷಾತ್ರಧರ್ಮವುಳ್ಳವರಾಗಿರುತ್ತಾರೆ. ಇಂಥ ಪ್ರಕೃತಿಯನ್ನು ಹೊಂದಿದ ಯೋಗಿಯು ಉನ್ಮಾದಾವಸ್ಥೆಯನ್ನು ಹೊಂದುವನು.

೩ನೇ ಅವಸ್ಥೆಗೆ ಕಾರಣವೇನಂದರೆ ವಾತವು ವಾಯುತತ್ವವುಳ್ಳದಾಗಿದೆ. ವಾತವು ತಮೋಗುಣಭೂಯಿಷ್ಠವಾಗಿದೆ. ನೈಸರ್ಗಿಕ ವಾತಪ್ರಧಾನ ಪ್ರಕೃತಿಯುಳ್ಳವರು ಚಂಚಲ ಸ್ವಭಾವದವರಾಗಿರುತ್ತಾರೆ. ಕಫಪ್ರಧಾನ ಪ್ರಕೃತಿಯುಳ್ಳವರು ಸ್ಥೂಲಶರೀರಿಗಳಾಗಿದ್ದರೆ ಪಿತ್ತಪ್ರಕೃತಿಯವರು ಸಾಧಾರಣ ಪ್ರಕೃತಿಯುಳ್ಳವರಾಗಿರುತ್ತಾರೆ. ವಾತಪ್ರಕೃತಿಯುಳ್ಳವರು ಅಷ್ಟೊಂದು ಎತ್ತರವಾಗಿ ಬೆಳೆಯಲಾರರು. ವಾತದಲ್ಲಿ ರೂಕ್ಷತೆಯಿರುವದರಿಂದ ಅವರ ಶರೀರವು ತೆಳುವಾಗಿರುತ್ತದೆ. ವಾತಪ್ರಕೃತಿಯವರಿಗೆ ನಿದ್ರೆ ಕಡಿಮೆ, ಇದರಿಂದ ಮೇದಸ್ಸು ಬೆಳೆಯುವದಿಲ್ಲವಾದ ಕಾರಣ ಪ್ರಕೃತಿಯು ತೆಳುವಾಗಿಯೇ ಕೊನೆಯವರೆಗೆ ಉಳಿಯುತ್ತದೆ. ವಾತಪ್ರಕೃತಿಯವರು ಚಂಚಲಸ್ವಭಾವವುಳ್ಳವರಾಗಿರುವರಾದ್ದರಿಂದ ಬಹಳವಾಗಿ ತಿರುಗುವವರಾಗುತ್ತಾರೆ. ಅವರ ಸ್ವಭಾವವಾದರೂ ತೀಕ್ಷ್ಣವಿರುತ್ತದೆ. ಇಂಥ ಪ್ರಕೃತಿಯನ್ನು ಹೊಂದಿದ ಯೋಗಿಯು ಪೈಶಾಚಿಕಾವಸ್ಥೆಯನ್ನು ಹೊಂದುವನು.

ಶ್ರೀ ನಾಗಲಿಂಗೇಶನು ವಾತಪ್ರಕೃತಿಯುಳ್ಳವನಾದುದರಿಂದ ತೆಳುವಾಗಿಯೂ ಸಾಧಾರಣ ಎತ್ತರವುಳ್ಳವನೂ ಆಗಿರಲುಬೇಕು. ಗರಗದ ಮಡಿವಾಳೇಶ್ವರರೊಡನೆ ಪ್ರವಾಸಮಾಡುತ್ತಿರುವಾಗ್ಗೆ ಒಂದು ಗ್ರಾಮದಲ್ಲಿಯ ದೇವತೆಯನ್ನು ಸುಟ್ಟಲೀಲೆ, ನವಿಲುಗುಂದ ಶ್ರೀ ಪಾಟೀಲರ ಮನೆಯಲ್ಲಿಯ ಗಣಪತಿ ವಿಗ್ರಹದ ಕೈಕಾಲುಗಳನ್ನು ಮುರಿದುಚಲ್ಲಿದ ಲೀಲೆ ಇತ್ಯಾದಿಗಳನ್ನು ನೋಡಿದರೆ ಈ ಮಹಾಯೋಗಿಯು ಪೈಶಾಚಿಕಾವಸ್ಥೆಯನ್ನು ಹೊಂದಿದ್ದನೆಂದು ತಿಳಿದುಬರುತ್ತದೆ.

ನಾಗಲಿಂಗೇಶನು ಪ್ರತಿದಿನ ಬೆಳಗಿನ ಮೂರುಗಂಟೆಗೆ ಯೋಗಸಾಮರ್ಥ್ಯದಿಂದ ಅದೃಶ್ಯನಾಗುತ್ತಿದ್ದನು. ಅವನನ್ನು ಆ ಸಮಯದಲ್ಲಿ ಕಂಡವರು ಯಾರೂ ಇಲ್ಲ. ಹಗಲು ಊರಲ್ಲಿ ಹುಚ್ಚನಂತೆ ಅಲೆಯುತ್ತಿದ್ದನು. ಸುಡುಗಾಡದಲ್ಲಿಯ ಶಿದಿಗೆಯನ್ನು ತಂದು ಅದರಲ್ಲಿ ಕುಳಿತುಕೊಂಡು ಬೋವಿಜನರಿಗೆ ಹೊತ್ತುಕೊಂಡು ಹೋಗಲು ಹೇಳುತ್ತಿದ್ದನು. ಹೀಗೆ ಅವನು ಒಂದುದಿನ

ನವಿಲುಗುಂದದಲ್ಲಿ ಶಿದಿಗೆಯಲ್ಲಿ ಕುಳಿತು ಒಂದು ಓಣಿಯಲ್ಲಿ ಹಾಯ್ದು ಹೋಗು ತ್ತಿದ್ದನು. ಕೆಲವರು "ಇದೆಂಥ ಅಮಂಗಲ ಹೀಗೆ ಮಾಡುವದು ಅಯೋಗ್ಯ ವೆಂದು" ಬೈಯ್ಯಲಾರಂಭಿಸಿದರು. ಆಗ ನಾಗಲಿಂಗೇಶನು ಶಿದಿಗೆಹೊತ್ತ ಬೋವಿ ಜನರಿಗೆ–ಎಲೋ ಇನ್ನು ಮುಂದಕ್ಕೆ ಹೋಗುವದು ಬೇಡ. ಈ ಶಿದಿಗೆ ಯನ್ನು ಇಲ್ಲಿಯೇ ಇರಿಸಿರಿ" ಎಂದು ಹೇಳಿ ರಸ್ತೆಯಲ್ಲಿ ಶಿದಿಗಿಯನ್ನು ಬಿಟ್ಟು ಎಲ್ಲಿಗೋ ಹೊರಟು ಹೋದನು. ಆಗ ಮರುದಿನವೇ ಊರಲ್ಲಿ ಕಾಲರಾ ಬೇನೆ ಹುಟ್ಟಿ ದಾರಿದಾರಿಗೆ ಹೆಣಗಳು ಕಾಣಿಸಿಕೊಂಡವಂತೆ. ಈ ಪ್ರಕಾರವಾಗಿ ಈ ಮಹಾನುಭಾವನು ಹಗಲಿನಲ್ಲಿ ಲೀಲೆಗಳನ್ನೆಸಗುತ್ತ ಸಾಯಂಕಾಲ ಎಂಟು ಗಂಟೆಯಾಗುತ್ತಲೇ ಬೇರೊಂದು ಅವಸ್ಥೆಗೆ ಬರುತ್ತಿದ್ದನಂತೆ. ಆ ಅವಸ್ಥೆಯಲ್ಲಿ ಪರಮಜ್ಞಾನಿಯಾಗಿ ಭಕ್ತರಿಗೆ ವೇದಾಂತ ಶಾಸ್ತ್ರ ಬೋಧೆಮಾಡುತ್ತಿದ್ದನಂತೆ. ಹಗಲು ಅವನೊಡನೆ ಯಾರೂ ಮಾತನಾಡುತ್ತಿದ್ದಿಲ್ಲ. ಒಂದು ವೇಳೆ ಮಾತ ನಾಡಿಸಿದರೆ ಏನು ಅನ್ನುತ್ತಿದ್ದನೋ, ಎಂಥ ಬೈಗಳ ಬೈಯ್ಯುತ್ತಿದ್ದನೋ ಹೇಳ ಲಿಕ್ಕಾಗದು. ರಾತ್ರಿ ಎಂಟುಗಂಟೆಗೆ ಪ್ರಜ್ಞಾವಸ್ಥೆಗೆ ಬಂದಾಗ್ಗೆ ಕೇಳಿದ ಪ್ರಶ್ನೆಗೆ ಉತ್ತರಕೊಡುತ್ತಿದ್ದನು. ಜನರೊಡನೆ ಸರಸಸಲ್ಲಾಪಗಳನ್ನಾಡುತ್ತಿದ್ದನು. ಹಸು ಗೂಸಿನಂತೆ ಹಸನಾಗಿ ಮಾತನಾಡುತ್ತಿದ್ದನು. ಈ ಮಹಾನುಭಾವನನ್ನು ಭಕ್ತಿ ಯಿಂದ ಆರಾಧಿಸಿ ಸುಖ ಸೌಭಾಗ್ಯವನ್ನು ಸಂಪಾದಿಸಿದವರೂ ಉಂಟು. ಸಿಟ್ಟಿ ನಿಂದ ಬೈದು ಬಡಿದು ಕಡುಬಡವರಾದವರೂ ಉಂಟು. ಆಗ ಅವನಿಂದ ಪ್ರಸಾದ ಪಡೆದ ಮನೆತನದವರು ಈಗಲೂ ಸುಖಸಮೃದ್ಧಿಯಿಂದಿರುವುದೂ ಉಂಟು. ಆಗ ಅವನಿಂದ ಶಾಪಹೊಂದಿದ ಮನೆತನದವರು ಈಗಲೂ ಅಳವುದೂಉಂಟು.

ಹೀಗೆ ನಾಗಲಿಂಗೇಶನು ಹಲವಾರು ಕಡೆಗೆ ಸಂಚರಿಸಿ, ತನ್ನ ಲೀಲಾ ತಿಶಯದಿಂದ ಭಕ್ತಕೋಟಿಯನ್ನು ಉದ್ಧರಿಸಿ ಶಾಲಿವಾಹನ ಶಕೆ ೧೮೦೦ ನೇ ಸಂವತ್ಸರದ ಆಷಾಢ ಶುದ್ಧ ಚತುರ್ಥಿಯ ದಿವಸ ಪರಂಧಾಮವನ್ನು ಹೊಂದಿ ದನು. ಆಗ ಅವನಿಗೆ ೮೦ ವರುಷಗಳಾಗಿದ್ದವು. ಆದರೂ ಅವನ ಶರೀರದಲ್ಲಿ ಎಲ್ಲಿಯೂ ಸುಕ್ಕಿನ ಸುಳಿವೇ ಇದ್ದಿಲ್ಲ. ಇವನ ಸಮಾಧಿಯು ನವಿಲುಗುಂದದ ಉತ್ತರ ಭಾಗದ ಗುಡ್ಡದ ಕೊನೆಯಲ್ಲಿದೆ. ಪ್ರತಿ ವರುಷ ಆಷಾಢ ಶುದ್ಧ ಚತುರ್ಥಿಯ ದಿವಸ ಅವನ ಪುಣ್ಯತಿಥಿಯು ಎಲ್ಲರಿಂದಲೂ ಅತ್ಯುಲ್ಲಾಸದಿಂದ ಆಚರಿಸಲ್ಪಡುತ್ತದೆ.

## ಸತೀವ್ರತ

### ಆಷಾಢ ಶು. ೧೫ ಸತೀವ್ರತ

ಈ ವ್ರತವು ಆಷಾಢ ಪೌರ್ಣಿಮೆಯಲ್ಲಿ ಆಚರಿಸಲ್ಪಡುತ್ತದೆ. ಅಧಿಕ ಆಷಾಢಮಾಸವಿದ್ದಾಗ ನಿಜ। ಆಷಾಢ ಶು।। ಪೌರ್ಣಿಮೆಯಿಂದ ಒಂದು ತಿಂಗಳ ವರೆಗೆ ವಿಶೇಷತಃ ಈ ವ್ರತವನ್ನು ಆಚರಿಸುವರು. ಕೇವಲ ಸೌಭಾಗ್ಯವತಿಯ ರಾದ ಸ್ತ್ರೀಯರು ಆಚರಿಸುತ್ತಾರೆ. ಅಂದಿನ ದಿನ ಸೌಭಾಗ್ಯವತಿಯರಾದ ಸ್ತ್ರೀಯರು ಉದಯಕಾಲದಲ್ಲೆದ್ದು, ದಂತಧಾವನಾದಿ ಕ್ರಿಯಗಳನ್ನಾಚರಿಸಿ, ನದಿ ಇಲ್ಲವೇ ಭಾವಿಯಲ್ಲಿ ಸ್ನಾನವನ್ನು ಮಾಡಿ ಶುಚಿರ್ಭೂತರಾಗಿ ಮನೆಗೆ ಬಂದು ಜಗಜ್ಜನನಿಯಾದ ಪಾರ್ವತಿಯನ್ನು ಭಯಭಕ್ತಿ ತತ್ಪರರಾಗಿ ಆರಾಧಿಸಬೇಕು. ಸುವರ್ಣ, ಇಲ್ಲವೇ ರಜತಮಯವಾದ ಪಾರ್ವತಿಯ ವಿಗ್ರಹವನ್ನು ಮಾಡಿಸ ಬೇಕು. ಬಡವರಿದ್ದಲ್ಲಿ ಪಾರ್ವತಿಯ ಶಿಲಾವಿಗ್ರಹವನ್ನು ಮಾಡಿಸಬೇಕು. ಅರ್ಘ್ಯಪಾದ್ಯಾದಿ ಸುಗಂಧ ದ್ರವ್ಯಗಳಿಂದಲೂ, ಪಂಚಾಮೃತದಿಂದಲೂ ಅಭಿ ಷೇಚನ ಮಾಡಿ ವಿವಿಧ ಪತ್ರ ಪುಷ್ಪ ಧೂಪ ದೀಪ ನೈವೇದ್ಯ ತಾಂಬೂಲಾದಿ ದ್ರವ್ಯಗಳನ್ನು ಅರ್ಪಿಸಿ, ರಾಜೋಪಚಾರದಿಂದ ಪೂಜಿಸಿ ಪ್ರಾರ್ಥಿಸಬೇಕು.

ವ್ರತವನ್ನಾಚರಿಸುವ ಸೌಭಾಗ್ಯವತಿಯು ಒಂದು ತಿಂಗಳವರೆಗೂ ನಿತ್ಯ ಮಂಗಲ ಸ್ನಾನ ಮಾಡುವವಳಾಗಿಯೂ, ದಾನಧರ್ಮ ನಿರತಳಾಗಿಯೂ, ಇರಬೇಕು. ಕೇವಲ ಸಾಯಂಕಾಲದಲ್ಲಿಯೇ ಭೋಜನ ಮಾಡಬೇಕು. ಹಾಸಿಗೆಯಲ್ಲಿ ಮಲಗದೇ ಭೂಮಿಯ ಮೇಲೆ ಮಲಗಬೇಕು. ಸರ್ವ ಪ್ರಾಣಿ ಗಳಲ್ಲಿ ದಯೆಯುಳ್ಳವಳೂ, ಸತ್ಯವಾದಿಯಾಗಿಯೂ ಆಗಿರಬೇಕು. ಕಲಹ ಶೋಕ ಇತ್ಯಾದಿ ಕ್ರೂರ ಕರ್ಮಗಳನ್ನು ವರ್ಜಿಸಬೇಕು. ಗುರುದೇವತೆ ಗಳಲ್ಲಿಯೂ, ಅತ್ತೆ-ಮಾವಂದಿರಲ್ಲಿಯೂ, ಪತಿಯಲ್ಲಿಯೂ ಭಕ್ತಿ ವಿಶ್ವಾಸವುಳ್ಳ ವರಾಗಿರಬೇಕು. ದೀನದಲಿತರನ್ನು ತಿರಸ್ಕರಿಸಬಾರದು. ಸದಾ ಶುದ್ಧ ಮನಸ್ಸುಳ್ಳವರಾಗಿರಬೇಕು. ಈ ಪ್ರಕಾರವಾಗಿದ್ದು ಒಂದು ತಿಂಗಳವರೆಗೆ ವ್ರತ ವನ್ನಾಚರಿಸಿದರೆ, ಸೌಭಾಗ್ಯವತಿಯು ವಿಧವೆಯಾಗಲಾರಳು. ಕನ್ನಿಕೆಯರು ಈ ವ್ರತವನ್ನಾಚರಿಸಿದರೆ, ತಮಗೆ ಅನುರೂಪನಾದ ವರವನ್ನು ಪಡೆಯುವರು.

ಈ ಸಂಬಂಧದಲ್ಲಿ ಒಂದು ಸುಂದರವಾದ ಕಥೆಯುಂಟು:—

ಒಂದುಸಾರೆ ದಕ್ಷಬ್ರಹ್ಮನು ಯಜ್ಞವನ್ನಾರಂಭಿಸಿದನು. ಆ ಯಜ್ಞದಲ್ಲಿ ಹರಿ, ವಿರಿಂಚಿಗಳೂ ಇಂದ್ರವರುಣಾದಿ ಅಷ್ಟದಿಕ್ಪಾಲಕರೂ, ಕಿನ್ನರಕಿಂಪುರುಷರಾದಿಯಾಗಿ ಸಕಲ ದೇವತೆಗಳೂ ಆದರದಿಂದ ಆಮಂತ್ರಿಸಲ್ಪಟ್ಟರು. ಆದರೆ ಆದಿದೇವನಾದ ಮಹಾದೇವನು ಆಗ ಕೈಲಾಸ ಪರ್ವತದಲ್ಲಿ ತಪೋನಿರತನಾಗಿದ್ದನು. ಅಂಥ ಶಿವನ ಅರ್ಧಾಂಗಿನಿಯಾದ ಸತೀದೇವಿಯು ದಕ್ಷಬ್ರಹ್ಮನ ಮಗಳಾಗಿದ್ದಳು. ಇವರೀರ್ವರನ್ನೂ ದಕ್ಷಬ್ರಹ್ಮನು ತನ್ನ ಯಜ್ಞಕ್ಕೆ ಕರೆಯಿಸಿಕೊಳ್ಳಲಿಲ್ಲ ಅಷ್ಟೇ ಅಲ್ಲ ಶಿವನ ಮುಂದೆ ಯಜ್ಞದ ಸುದ್ದಿಯನ್ನೇ ಎತ್ತಲಿಲ್ಲ. ಶಿವನು ಭಿಕ್ಷುವಾಗಿರುವನು. ರುದ್ರಾಕ್ಷಿ, ಸುಂಡಮಾಲೆ- ಧರಿಸಿ, ತಲೆಬುರಡೆ ಹಿಡಿದಿರುವನು. ಗಜ ಚರ್ಮಾಂಬರವನ್ನುಟ್ಟು, ಹುಲಿ ತೊಗಲು ಹೊತ್ತು, ಬೂದಿ ಬಡಿದುಕೊಂಡು, ಸದಾ ಸುಡುಗಾಡದಲ್ಲಿ ಸಂಚರಿಸುತ್ತಿರುವನು. ಭೀಕರಾಕೃತಿಯಿಂದ ಭೂತಪ್ರೇತಗಳೊಡನೆ ಇರುತ್ತಿರುವನು. ಇಂಥ ವಿಕೃತನಾದ ಶಿವನು ತನ್ನ ಯಜ್ಞಕ್ಕೆ ಯೋಗ್ಯನಲ್ಲವೆಂದು ದಕ್ಷಬ್ರಹ್ಮನು ಭಾವಿಸಿದ್ದನು. ಸಂಭ್ರಮದಿಂದ ಸಾಗಿದ ಯಜ್ಞಕ್ಕೆ ಸಕಲ ದೇವತೆಗಳು ಉಬ್ಬಿನಿಂದ ಬಂದು ತಮ್ಮ ತಮ್ಮ ಸ್ಥಾನದಲ್ಲಿ ಕುಳಿತಿದ್ದರು. ಅಲ್ಲಿಗೆ ನಾರದನೂ ಹೋದನು. ಅವನು ಮಹಾದೇವನು ಬಾರದಿರುವುದನ್ನು ಕಂಡನಲ್ಲದೇ ದಕ್ಷನ ಅನಾದರ ಬುದ್ಧಿಯನ್ನು ಅರಿತನು. ಆಗಲೇ ನಾರದನು ಕೈಲಾಸಕ್ಕೆ ತೆರಳಿ ವಿಶ್ವನಾಥನಿಗೆ ನಮಸ್ಕರಿಸಿ, ದಕ್ಷಬ್ರಹ್ಮನ ಯಜ್ಞದ ವೃತ್ತಾಂತವನ್ನು ಅವನ ಅವಹೇಳನವನ್ನೂ ಅರಿಕೆ ಮಾಡಿಕೊಂಡನು. ಶಿವನು ಈ ತರಹದ ದಕ್ಷನ ಹಾಗೂ ಸಕಲ ದೇವತೆಗಳ ಔದ್ಧತ್ಯವನ್ನು ತಿಳಿದನು. ಮತ್ತು ದಕ್ಷನನ್ನು ಶಿಕ್ಷಿಸಲು ಪ್ರವೃತ್ತನಾದನು. ಆದರೆ ಪಾರ್ವತಿಯು ತಾನೇ ದಕ್ಷಬ್ರಹ್ಮನಲ್ಲಿಗೆ ಹೋಗಿ ಅವನಿಗೆ ತಕ್ಕ "ಪ್ರಾಯಶ್ಚಿತ್ತ ಮಾಡುವೆ"ನೆಂದು ಶಿವನಿಗೆ ಹೇಳಿಕೊಂಡಳು. ಆ ಪ್ರಕಾರ ಅವಳು ಗಣಪತಿಯೊಡನೆ ತಂದೆಯ ಯಜ್ಞಶಾಲೆಗೆ ಬಂದಳು.

ಯಜ್ಞಶಾಲೆಯಲ್ಲಿ ಬಂದು ನಿಂತ ಪಾರ್ವತಿಯನ್ನು ತಂದೆಯು ಕಣ್ಣೆತ್ತಿ ನೋಡಲಿಲ್ಲ. ತಾಯಿಯೂ ತಿರುಗಿ ನೋಡಲಿಲ್ಲ. ಸಹೋದರಿಯರು ಸುಮ್ಮನಿದ್ದರು. ಉಳಿದವರು ಪಿಸಿಪಿಸಿ ನುಡಿಯಹತ್ತಿದರು. ಈ ತರಹದ ಅಪಮಾನ

ವನ್ನು ಸಹಿಸದೇ ಪಾರ್ವತಿಯು ಪ್ರಜ್ವಲಿಸುತ್ತಿರುವ ಆದೇ ಯಜ್ಞದಲ್ಲಿ ಧುಮುಕಿ ಪ್ರಾಣಬಿಟ್ಟಳು. ಇದನ್ನು ನೋಡಿ ಸನಿಹದಲ್ಲಿದ್ದ ಗಣಪತಿಯು ಆಯುಧಪಾಣಿಯಾಗಿ ಸರ್ವದೇವತೆಗಳನ್ನು ಹೊಡೆಯಹತ್ತಿದನು. ಆಗ ಅಲ್ಲಿದ್ದ ನಾರದನು ತತ್‌ಕ್ಷಣವೇ ಕೈಲಾಸಕ್ಕೆ ಹೋಗಿ, ಪಾರ್ವತಿಯು ಅಗ್ನಿಯಲ್ಲಿ ಬಿದ್ದುದನ್ನೂ, ಗಣಪತಿಯು ಓರ್ವನೇ ಸಕಲ ದೇವತೆಗಳೊಡನೆ ಹೋರಾಡುತ್ತಿರುವುದನ್ನೂ ಕೈಲಾಸನಾಥನ ಕಿವಿಗೆ ಇಟ್ಟನು. ಆಗ ಧೂರ್ಜ ಟಿಯು ಕ್ರೋಧಾಗ್ನಿತಪ್ತನಾಗಿ ತನ್ನ ಜಡೆಯನ್ನು ಕೊಡಹಿದನು. ಆಗಲೇ ಜಟಾಮುಕುಟದಿಂದ ವೀರಭದ್ರದೇವನು ಪ್ರಾದುರ್ಭವಿಸಿದನು. ಅವನು ಕಣ್ಣು ಕುಕ್ಕುವ ಕೆಂಡದಂತಿರುವ ಕಣ್ಣುಳ್ಳವನೂ, ಕೆಂಜೆಡೆಯುಳ್ಳವನೂ, ಖಡ್ಗಪಾ ಣಿಯೂ, ಭೀಕರಾಕೃತಿಯುಳ್ಳವನೂ ಆಗಿದ್ದನು. ಅವನು ಶಿವನಿಗೆ ನಮ ಸ್ಕರಿಸಿ ಏನಪ್ಪಣೆಯೆಂದು ಕರಜೋಡಿಸಿಕೊಂಡು ಕೇಳಿದನು. ಆಗ ಶಂಕರನು- "ಅಹಂಕಾರಿಯಾದ ದಕ್ಷನ ಶಿರಸ್ಸನ್ನು ಕತ್ತರಿಸುವಂತೆಯೂ, ಶಿವನನ್ನು ಅನಾ ದರಿಸಿ ಹವಿರ್ಭಾಗವನ್ನು ಸ್ವೀಕರಿಸಿದ ದೇವತೆಗಳನ್ನು ಸಂಹರಿಸುವಂತೆಯೂ ವೀರಭದ್ರದೇವನಿಗೆ ಆಜ್ಞಾಪಿಸಿದನು. ಆ ಪ್ರಕಾರವಾಗಿ ವೀರಭದ್ರನು ಯಜ್ಞ ಶಾಲೆಗೆ ಹೋಗಿ, ದೇವತೆಗಳೊಡನೆ ಯುದ್ಧಹೂಡಿ ಹಲವಾರು ದೇವತೆಗಳನ್ನು ಸಂಹರಿಸಿದ್ದಲ್ಲದೇ ಎಷ್ಟೋ ದೇವತೆಗಳನ್ನು ಅಂಗವಿಕಲರನ್ನಾಗಿ ಮಾಡಿದನು. ಉಳಿದವರನ್ನು ಯಜ್ಞಶಾಲೆಯಿಂದ ಓಡಿಸಿದನು. ಮತ್ತು ದಕ್ಷಬ್ರಹ್ಮನ ಶಿರ ಸ್ಸನ್ನು ಕತ್ತರಿಸಿ ತಂದು ಶಂಕರನಿಗೆ ಅರ್ಪಿಸಿ ತಾನು ಶಿವನ ಜಡೆಯಲ್ಲಿಯೇ ಪುನಃ ಲೀನನಾದನು.

ಕೆಲವು ಹೊತ್ತಿನ ಮೇಲೆ ಮಹಾದೇವನ ಕೋಪಾಗ್ನಿಯು ಪ್ರಶಾಂತ ವಾಯಿತು. ಆಗ ಬ್ರಹ್ಮ, ವಿಷ್ಣು, ಇವರು ಶಂಕರನ ಸನ್ನಿಧಿಗೆ ಬಂದು, ದೇವ! ಅಸಂಖ್ಯ ದೇವತೆಗಳ ಸಂಹಾರದಿಂದ ಸ್ವರ್ಗವು ಶೂನ್ಯವಾಯಿತು. ಮೃತರಾದ ದೇವತೆಗಳನ್ನು ಬದುಕಿಸಿ, ಅವರನ್ನು ಆಯಾಯ ಸ್ಥಾನದಲ್ಲಿ ನಿಯುಕ್ತರನ್ನಾಗಿ ಮಾಡಬೇಕಲ್ಲದೇ ಅಂಗಹೀನರನ್ನು ಪೂರ್ಣಾಂಗವುಳ್ಳವರ ನ್ನಾಗಿ ಮಾಡಬೇಕೆಂದು ಭಯಭಕ್ತಿಯಿಂದ ನಮ್ರರಾಗಿ ಬೇಡಿಕೊಂಡರು. ದಯಾ ನಿಧಿಯಾದ ಶಂಕರನು ಮೃತರಾದ ದೇವತೆಗಳನ್ನು ಅಮರರನ್ನಾಗಿ ಮಾಡಿದನು. ಅಂಗಹೀನರನ್ನು ಸುಗಾತ್ರರನ್ನಾಗಿ ಮಾಡಿದನು. ಆದರೆ ಯಜ್ಞವಿಘ್ನಕಾರಿ

ಯಾದ ಸತಿದೇವಿಗೆ ಪ್ರಾಣದಾನಮಾಡಲಿಲ್ಲ. ಅವಳಿಗೆ "ಪಕ್ಷಿಯೋನಿಯನ್ನು ಹೊಂದುವವಳಾಗಿ, ಕೋಕಿಲೆಯಾಗೆ"ಂದು ಶಾಪವಿತ್ತನು. ಆ ಪ್ರಕಾರವಾಗಿ ಪಾರ್ವತಿಯು ನಂದನವನದಲ್ಲಿ ಹತ್ತುಸಾವಿರ ವರ್ಷಗಳವರೆಗೆ ಕೋಕಿಲೆಯಾಗಿ ಸಂಚರಿಸುವವಳಾದಳು. ಈಶ್ವರ ಸಂಕೇತದಂತೆ ಆ ಸತಿದೇವಿಯು ಪುನಃ ಪರ್ವತರಾಜನಾದ ಹಿಮವಂತರಾಜನಲ್ಲಿ ಮಗಳಾಗಿ ಜನಿಸಿ ಪಾರ್ವತಿ ಎಂಬ ಅಭಿಧಾನವನ್ನು ಹೊಂದಿ ಶಿವನಿಗೆ ಅರ್ಧಾಂಗಿನಿಯಾದಳು. ಈ ಸಮಯದಿಂದ ಅಧಿಕ ಆಷಾಢಮಾಸದಿಂದ ಒಂದು ತಿಂಗಳವರೆಗೆ "ಸತೀವ್ರತವನ್ನು" ಆಚರಿಸುವುದುಂಟು. ಈ ವ್ರತಾಚರಣೆಯಿಂದ ಸ್ತ್ರೀಯರು ಚಿರಕಾಲದವರೆಗೆ ಮುತ್ತೈದೆಯರಾಗಿ ಬಾಳಿ ಬದುಕಿ ಸಕಲವಿಧಸುಖೈಶ್ವರ್ಯವನ್ನು ಪಡೆಯುವರು. ಈ ವ್ರತಕ್ಕೆ "ಕೋಕಿಲಾವ್ರತವೆಂ"ತಲೂ ಅನ್ನುವುದುಂಟು.

## ಶ್ರಾವಣಮಾಸ

ಹನ್ನೆರಡು ಮಾಸಗಳಲ್ಲಿ ಶ್ರಾವಣಮಾಸವು ಪರಮಪವಿತ್ರವಾಗಿದೆ. ಶ್ರಾವಣಮಾಸದ ಶುದ್ಧಪ್ರತಿಪದನಿಂದ ಅಮಾವಾಸಿಯವರೆಗೂ ಬರುವ ಪ್ರತಿಯೊಂದು ದಿನದಿನಕ್ಕೂ ದೇವರ ಲೀಲೆಯು ಜರಗಿರುವುದಾಗಿ "ಶ್ರಾವಣ ಮಹಾತ್ಮೆ" ಎಂಬುವ ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಈ ಮಾಸದಲ್ಲಿ ವೀರಶೈವರ ಮಠಮಂದಿರಗಳಲ್ಲಿ ಶ್ರೀರುದ್ರಾಭಿಷೇಕ, ಪುರಾಣಪ್ರವಚನಾದಿ ಪುಣ್ಯಕಾರ್ಯಗಳು ವೈಭವಪೂರ್ಣವಾಗಿ ಜರಗುತ್ತವೆ. ಮಾಸಾಂತ್ಯದಲ್ಲಿ ಭೂರುದ್ರಗಣಾರಾಧನೆ ಮೊದಲಾದ ಮಂಗಲಕಾರ್ಯವನ್ನಾಚರಿಸುವುದುಂಟು. ಶ್ರಾವಣಮಾಸದಲ್ಲಿ ತಂಬಿಟ್ಟು, ಕೊಬ್ರಿ, ಅರಳು, ಚಕ್ಕಲಿ, ಗಾರಿಗೆ ಮೊದಲಾದ ಭಕ್ಷ್ಯ-ಭೋಜ್ಯ ಪದಾರ್ಥಗಳನ್ನು ಹೆಚ್ಚಾಗಿ ತಿನ್ನುವುದುಂಟು. ಶ್ರಾವಣ ಮಾಸದಲ್ಲಿ ಬರುವ ನಾಗಚತುರ್ಥಿ, ಗರುಡಪಂಚಮಿಯ ಹಬ್ಬಗಳು ಅತ್ಯಂತ ವೈಭವದೊಡನೆ ಆಚರಿಸಲ್ಪಡುತ್ತವೆ. ಈ ಹಬ್ಬಗಳಲ್ಲಿ ಹೆಣ್ಣುಮಕ್ಕಳು ಪತಿ ಗೃಹದಿಂದ ತವರೂರಿಗೆ ಉಬ್ಬಿನಿಂದ ಬರುವುದುಂಟು. ಅನೇಕ ಜನರು ಬೀಗರೂರಿಗೆ ತಂಬಿಟ್ಟು ಕೊಬ್ರಿಯನ್ನು ಆದರದಿಂದ ಅರ್ಪಿಸುತ್ತಿರುವರು. ಪಂಚಮಿಯ ಹಬ್ಬದ ನಂತರ ಬರುವ ವರ್ಷತೊಡಕಿನ ದಿವಸ ಚಿಕ್ಕಮಕ್ಕಳು ಕೆಲ ಕಾಲದ ಹಿಂದೆ ಶಾಲಾಗುರುಗಳಿಗೆ ತಂಬಿಟ್ಟುಕೊಬ್ರಿಯನ್ನು ಅರ್ಪಿಸುತ್ತಿದ್ದರು.

ಪಂಚಮಿಯ ಹಬ್ಬದಲ್ಲಿ ಅಗಸರು, ಕ್ಷೌರಿಕರು ಮೊದಲಾದ ಆಯಗಾರರು ಧನಿಕರಿಂದ ತಂಬಿಟ್ಟು ಕೊಬ್ರಿಯನ್ನು ಖುಷಿಗಾಗಿ ಕೇಳಿಕೊಳ್ಳುವದುಂಟು. ಶ್ರಾವಣಮಾಸದಲ್ಲಿ ಬರುವ ಸೋಮವಾರವು ವಿಶಿಷ್ಟದಿನವಾಗಿರುತ್ತದೆ. ವೀರ ಶೈವರು ಅಂದು ತಮ್ಮ ತಮ್ಮ ಮಠಾಧಿಪತಿಗಳನ್ನು ಕರೆದು ಪೂಜಿಸಿ, ಭೂರಿ ದಕ್ಷಿಣೆಯನ್ನರ್ಪಿಸಿ ಪುಣ್ಯಪಡೆಯುವುದುಂಟು. ಕೆಲವು ಧನಿಕರು ಆ ದಿವಸ ತಮ್ಮ ಇಷ್ಟಮಿತ್ರರನ್ನು ಮನೆಗೆ ಬರಮಾಡಿಕೊಂಡು ಅವರಿಗೆ ಚಕ್ಕಲಿಗಾರಿಗೆ ತಂಬಿಟ್ಟು ತಿನಸುಗಳನ್ನು ಅರ್ಪಿಸಿ ಅವರನ್ನು ತೃಪ್ತಿಪಡಿಸುವುದುಂಟು.

ಈ ತಿಂಗಳಲ್ಲಿ ತಂಬಿಟ್ಟು, ಕೊಬ್ರಿ, ಅರಳು ಇವುಗಳು ವಿಶಿಷ್ಟವಾದ ಆಹಾರವಾಗಿರುತ್ತವೆ. ಉಳಿದ ಹಬ್ಬಗಳಲ್ಲಿ ಇವುಗಳ ದರ್ಶನವೇ ಇರುವುದಿಲ್ಲ. ಇವುಗಳ ಹೆಸರು ಶ್ರಾವಣಮಾಸ ದಾಟಿ ಗಣೇಶ ಚತುರ್ಥಿಯ ವರೆಗೆ ಕೇಳಬರುತ್ತದೆ. ನಂತರ ಇವುಗಳ ನೆನಪೇ ಇರುವುದಿಲ್ಲ. ಶ್ರಾವಣಮಾಸದಲ್ಲಿಯೇ ಇವುಗಳನ್ನು ಉಪಯೋಗಿಸಲು ಕಾರಣವೇನಿರಬಹುದೆಂಬುದನ್ನು ಅರಿಯುವುದು ಅವಶ್ಯ.

ಶ್ರಾವಣ ಮಾಸವು ವರ್ಷಾಋತುವಿನಲ್ಲಿ ಪ್ರಾಪ್ತವಾಗುತ್ತದೆ. ವರ್ಷಾ ಋತುವೆಂದರೆ ಮಳೆಗಾಲ. ಈ ಮಳೆಗಾಲದಲ್ಲಿ ಮಾನವ ದೇಹದಲ್ಲಿ ವಾತವು ಪ್ರಕೋಪವಾಗುವುದೆಂದು ಈ ಹಿಂದೆ ಹೇಳಿದ್ದೇವಷ್ಟೇ! ವರ್ಷಾಋತುವಿನಲ್ಲಿ ಪ್ರಕೋಪವಾದ ವಾತದೋಷದಿಂದ ಮನುಷ್ಯನು ರೋಗರುಜಿನಗಳಿಗೆ ತುತ್ತಾಗುವುದುಂಟು. ಅದರಿಂದ ಮುಕ್ತನಾಗಲು ಹಿಂದಿನ ಹಿರಿಯರು ಆ ವಾತದೋಷ ಶಮನವಾಗಲು ತಕ್ಕ ಆಹಾರ ವಿಹಾರವನ್ನು ನಿಸರ್ಗ ಚಿಕಿತ್ಸೆಗಾಗಿ ತೋರಿಸಿಕೊಟ್ಟಿರುವರು. ಮೇಲೆ ಹೇಳಿದ ಆಹಾರವು ಅಂದರೆ ಮಧುರ ಸ್ನಿಗ್ಧರೂಕ್ಷಮಿಶ್ರವಾದ ಆಹಾರವೂ, ಆಪ್ತೇಷ್ಟರ ಸಂದರ್ಶನವೂ, ಪೂಜಾ, ಪಾಠ, ಪುರಾಣ ಪ್ರವಚನ ಶ್ರವಣದಿಂದ ಆನಂದಪಡುವುದೂ ಇವೆಲ್ಲ ಈ ಋತುವಿನಲ್ಲಿ ಸಂಭವಿಸುವ ರೋಗಕ್ಕೆ ತಕ್ಕ ನಿಸರ್ಗ ಚಿಕಿತ್ಸೆಯಾಗಿದೆ.

"ವರ್ಷಾಸುಪ್ರಬಲೋ ವಾಯುಸ್ತಸ್ಮಾನ್ ಮಿಷ್ಟಾದಯಸ್ತ್ರಯಃ ।
ರಸಾಃ ಸೇವ್ಯಾ ವಿಶೇಷೇಣ ಪವನಸ್ಯೋಪ ಶಾಂತಯೇ ॥
ಭವೇದ್ವರ್ಷಾಸುವಪುಷಿ ಕ್ಲಿನ್ನತ್ವಂ ಯದ್ವಿಶೇಷತಃ ।
ತತ್ ಕ್ಲೇದ ಶಾಂತಯೇ ಸೇವ್ಯಾ ಆಪಿಕಟ್ವಾದಯಸ್ತ್ರಯಃ ॥

ಅಂದರೆ ವರ್ಷಾಋತುವಿನಲ್ಲಿ ವಾಯು, ಪ್ರಬಲವಾಗುತ್ತದೆ. "ತತ್ರಾದ್ಯಾ ಮಾರುತಂಘ್ನಂತಿ ಎಂಬಂತೆ ವಾತದೋಷದ ಶಮನಕ್ಕಾಗಿ ಮಧುರ, ಆಮ್ಲ, ಲವಣ ಪ್ರಧಾನ ಆಹಾರವನ್ನು ವಿಶೇಷವಾಗಿ ಸೇವಿಸಬೇಕು. ಒಂಮ ವೇಳೆ ಆಗ ಮಳೆಗಾಲ ವಿರುವುದರಿಂದ ಕಫವು ಪ್ರಕೋಪವಾದರೆ ಕಟು, ಕಷಾಯ ತಿಕ್ತ ರಸವುಳ್ಳ ಆಹಾರವನ್ನು ಸಹ ಸೇವಿಸಬೇಕು.

ಇದರಿಂದ ತಿಳಿದುಬರುವುದೇನಂದರೆ—ವರ್ಷಾಋತುವಿನಲ್ಲಿ ವಾತವು ಸಹಜವಾಗಿ ಪ್ರಕೋಪವಾಗಿರುತ್ತದೆ. ಅದರ ಉಪಶಮನವು ಮಧುರ ಆಹಾರ ಅಂದರೆ ತಂಬಿಟ್ಟು, ಇದರಿಂದ ಶಮನವಾಗುತ್ತದೆ. ತಂಬಿಟ್ಟು ಅಂದರೆ ತಂಗಳ ಹಿಟ್ಟು, ಇದರಲ್ಲಿದ್ದ ಮಾಧುರ್ಯವು ವಾತ ಶಾಮಕವಾಗಿರುವುದಲ್ಲದೇ ಕಫ ಶಾಮಕವೂ ಆಗಿದೆ, ದ್ವಿದಲಧಾನ್ಯ ಅಂದರೆ ಬೇಳೆ ಧಾನ್ಯವು ರೂಕ್ಷವಾಗಿರುವು ದರಿಂದ ಕಫನಾಶಕವಾಗಿದೆ. ತಂಬಿಟ್ಟಿನಲ್ಲಿರುವ ಕಡಲೀ ಹಿಟ್ಟನ್ನು ತನ್ನ ರೂಕ್ಷ ಗುಣದಿಂದ ಕಫಶಮನ ಮಾಡುವುದಾಗಿದೆ. ಕಡಲಿ ಹಿಟ್ಟಿನ ಜೊತೆಗಿರುವ ಬೆಲ್ಲವು ವಾತಶಾಮಕವಾಗಿರುವುದು. ಹೀಗೆಯೇ ಕೊಬ್ರಿಯು ಸ್ನಿಗ್ಧಗುಣವು ಳ್ಳದಾಗಿರುವುದರಿಂದ ತಂಬಿಟ್ಟಿನೊಡನೆ ಕೂಡಿಕೊಂಡು ವಾತಶಮನಕ್ಕೆ ಸಹಾ ಯಕವಾಗಿರುವುದು. ತಂಬಿಟ್ಟಿನಲ್ಲಿರುವ ಮಧುರ ರಸದಿಂದಲೂ, ಕೊಬ್ರಿಯಲ್ಲಿ ರುವ ಸಿಗ್ಧಗುಣದಿಂದಲೂ ಕಫ ವೃದ್ಧಿಯಾಗಬಾರದೆಂದು ರೂಕ್ಷಗುಣವುಳ್ಳ ಅರಳನ್ನು ಸೇವಿಸುವುದುಂಟು ಈ ಹಬ್ಬದಲ್ಲಿ ತಿಂದಂಥ ಜಡವಾದ ಆಹಾರವು ತೀವ್ರ ಪಚನವಾಗಲೆಂದು ಜೋಕಾಲಿ ಆಡುವುದುಂಟು. ಹಾರಾಟ, ಜೂಜಾಟ, ಜಿಗಿದಾಟ ಇವುಗಳೆಲ್ಲವೂ ಪಚನಕ್ರಿಯೆಗೆ ಅನುಕೂಲವಾಗಿವೆ. ಹಾರಾಟ ಜಿಗಿದಾಟಗಳಿಲ್ಲದಿದ್ದರೆ ಈ ಹಬ್ಬದಲ್ಲಿ ತಿಂದಂಥ ಉಂಡಿ ಕೊಬ್ರಿ ಮೊದಲಾ ದುದು ಹೊಟ್ಟೆಯಲ್ಲಿ ಅಡಕಲ ಗಡಿಗೆ ಏರಿಸಿದಂತಾಗುವುದಿಲ್ಲವೇ! ಅಸ್ತು ಈ ಹಬ್ಬದಲ್ಲಿ ಹೇಳಬೇಕಾದ ವಿಷಯ ಸಾಕಷ್ಟು ಇದೆ. ಅದೆಲ್ಲವೂ ಶ್ರಾವಣ ಮಹಾತ್ಮ್ಯೆಯಲ್ಲಿ ಉಕ್ತವಾಗಿದೆ.

ಶ್ರಾವಣ ಮಾಸದಲ್ಲಿ ಬರತಕ್ಕ ಮಂಗಲ ದಿನಗಳು—ಶ್ರಾವಣ ಶು। ೧ರಲ್ಲಿ ಶ್ರೀ ರುದ್ರಾಭಿಷೇಕ-ಶಿವಪುರಾಣ ಪ್ರಾರಂಭ, ಶು। ೩ರಲ್ಲಿ ಹರತಾಲಿಕಾ ವ್ರತ, ಶು। ೪ರಲ್ಲಿ ನಾಗ ಚತುರ್ಥಿ. ೫ ರಲ್ಲಿ ಪಂಚಮಿ ಹಬ್ಬ. ಮರುದಿವಸಕ್ಕೆ

ಹುತ್ತಾ ಮುರಿಯುವುದು ಅನ್ನುವುದುಂಟು ಆ ನಂತರ ಬರುವ ದಿವಸವು ಕಿಂ ಕಟ್ಟಂಬಲಿ. ಶು| ೬ ತೊಡಕು ಮಂಗಳ ಗೌರೀವ್ರತ. ಶು| ೧೦ ವರದ ಮಹಾಲಕ್ಷ್ಮೀವ್ರತ. ಸಂಪತ್ ಗೌರೀವ್ರತ. ಶು| ೧೫ ನಾರಳಿಪೌರ್ಣಿಮೆ, ಯಜು ಶ್ರಾವಣಿ, ರಕ್ಷಾಬಂಧನ. ಬಾಗೇವಾಡಿ ಮತ್ತು ಶಿವಯೋಗಮಂದಿರ ರಥೋತ್ಸವ. ಶ್ರಾವಣ ಬಹುಳ ೧ ಹುಬ್ಬಳ್ಳಿ ಶ್ರೀ ಸಿದ್ಧಾರೂಢ ಸ್ವಾಮಿಗಳ ಪುಣ್ಯದಿನ. ಬ| ೧೨ ಇಲಕಲ್ಲ ಶ್ರೀ ಮಹಾಂತ ಶಿವಯೋಗಿಗಳ ಪು. ದಿನ. ಶ್ರಾವಣ ಬ| ಅಮವಾಸ್ಯಾ ಬೆನಕನ ಅಮವಾಸ್ಯಾ. ಹುಬ್ಬಳ್ಳಿ ಶ್ರೀ ಮೂರು ಸಾವಿರ ಮಠದ ಜಾತ್ರೆ. ಶ್ರಾವಣ ಮಾಸದಲ್ಲಿ ಬರುವ ಶುಕ್ರವಾರ–ಸಂಪತ್ ಶುಕ್ರವಾರ ವ್ರತಗೌರೀ ಸ್ಥಾಪನ.

## ನಾಗಪಂಚಮಿ

### ( ಶ್ರಾವಣಶುದ್ಧ ೫ )

ಹಿಂದು ಧರ್ಮದ ಎಲ್ಲ ಹಬ್ಬಗಳಂತೆ ನಾಗರ ಪಂಚಮಿಯ ಹಬ್ಬವು ಅಖಿಲ ಭಾರತದಲ್ಲಿ ಧರ್ಮ ಶಾಸ್ತ್ರೋಕ್ತಿಯಂತೆ ಆಬಾಲವೃದ್ಧರಾಗಿ ಬಹು ವಿಜೃಂಭಣೆಯಿಂದ ನೆರವೇರುತ್ತದೆ. ಈ ಹಬ್ಬದಲ್ಲಿ ನಾಗರ ಹಾವಿನ ಪ್ರತಿಮೆ ಯನ್ನು ಇಲ್ಲವೆ ಹಾಳೆಯ ಮೇಲೆ ಬರೆದ ಹಾವಿನ ಚಿತ್ರವನ್ನು ದೇವರೆಂದು ಪೂಜಿಸುವ ಪದ್ಧತಿಯುಂಟು. ಭೀಕರವಾದ ಹಾವು ದೇವರೋ? ಎಂದು ಹಲವರು ಶಂಕಿಸಬಹುದು. ಪರಧರ್ಮದವರು ಪ್ರಶ್ನಿಸಬಹುದು. ಪ್ರಲಯ ಕರ್ತನಾದ ಶಿವನು ಹಾವನ್ನು ಹಾರದಂತೆ ದೇಹದಲ್ಲಿ ಧರಿಸಿರುವನು. ಜಗದ್ರ ಕ್ಷಕನಾದ ಶ್ರೀಹರಿಯು ಹಾವನ್ನು ಹಾಸಿಗೆಯಾಗಿ ಮಾಡಿಕೊಂಡಿರುವನು. ಪಾತಾಳಲೋಕದಲ್ಲಿ ಆದಿಶೇಷನಿರುವನೆಂದೂ, ಭೂಮಿಯನ್ನು ತನ್ನ ತಲೆಯ ಮೇಲೆ ಹೊತ್ತಿರುವನೆಂದೂ ಪ್ರಾಚೀನ ಪುರಾಣಗಳು ಹೇಳುತ್ತವೆ. ಶಾಸ್ತ್ರ ಪುರಾಣಗಳಲ್ಲಿ ನಂಬಿಗೆಯನ್ನಿಡುವುದೇ ಹಿಂದುವಿನ ಧರ್ಮ.

ಹಿಂದು ಧರ್ಮಶಾಸ್ತ್ರದಲ್ಲಿ ನಾಗದೇವರೆಂದು ನಂಬಲು ಹಲವಾರು ಉಪಂತಗಳು ಉಪಲಬ್ಧವಾಗುತ್ತವೆ, ಕ್ಷೇತ್ರಗಳಲ್ಲಿ ಇಲಿ ಮೊದಲಾದ ಕ್ಷುದ್ರ ಜೀವಿಗಳನ್ನು ಹಿಡಿದು ತಿಂದು ಪೀಕುಗಳನ್ನು ರಕ್ಷಿಸುತ್ತಿದ್ದ ಕಾರಣ ನಾಗರಿಕರಿಗೆ

ಕ್ಷೇತ್ರಪಾಲಕರೆಂದು ಒಕ್ಕಲಿಗರು ಅನ್ನುವುದಲ್ಲದೆ ಹೊಲಗಳಲ್ಲಿ, ಮನೆ ಮುಂದಿನ ತೋಟಗಳಲ್ಲಿ ಕಲ್ಲಿನ ನಾಗಪ್ಪನನ್ನಿರಿಸಿ ಪೂಜಿಸುವ ಪ್ರಘಾತವು ಪ್ರಾಚೀನ ಕಾಲದಿಂದ ಬಂದುದಾಗಿದೆ.

ಹರನಿಗೆ ಹಾರವಾಗಿ, ಹರಿಗೆ ಹಾಸಿಗೆಯಾಗಿ, ಗಣಪನ ಹೊಟ್ಟೆಗೆ ಕಟ್ಟಾಗಿ ನಿಷ್ಠೆಯಿಂದ ಸೇವೆ ಸಲ್ಲಿಸುತ್ತಿರುವ ನಾಗದೇವರನ್ನು ಭಾರತದ ಮೂಲ ನಿವಾಸಿಗಳು ಆರ್ಯರ ಪ್ರವೇಶದ ಪೂರ್ವದಲ್ಲಿಯೇ ಪೂಜಿಸುತ್ತಿದ್ದರು.

ಪೂರ್ವಜರು ನಾಗಲೋಕ, ಸ್ವರ್ಗಲೋಕ ಇತ್ಯಾದಿ ಲೋಕಗಳೊಡನೆ ನಿಕಟ ಸಂಬಂಧವನ್ನಿಟ್ಟುಕೊಂಡಿದ್ದರು. ರಾವಣನು ತನ್ನ ಭುಜಬಲದಿಂದ ಕೈಲಾಸ ಪರ್ವತವನ್ನು ಎತ್ತಿದನೆಂಬ ಕಥೆಯು ಮೇಲಿನ ವಿಷಯಕ್ಕೆ ನಿದರ್ಶನ ವಾಗಿದೆ. ಆರ್ಯರು ಅಲ್ಲಿಗೆ ಪ್ರವೇಶ ಮಾಡಿದ ನಂತರ ಅವರಿಗೂ, ಮೂಲ ನಿವಾಸಿಗಳಿಗೂ ಧರ್ಮಾಚರಣೆಯ ರೀತಿನೀತಿಗಳಲ್ಲಿ ಮತಭೇದವುಂಟಾಗಿ ಮೇಲಿಂದ ಮೇಲೆ ಪರಸ್ಪರರಲ್ಲಿ ಯುದ್ಧವು ನಡೆಯುತ್ತಲೇ ಇತ್ತು. ಹೀಗಿರಲು ಆರ್ಯರು ಆದಿನಿವಾಸಿಗಳ ನಾಗಪೂಜೆ ಮೊದಲಾದ ವ್ರತ ನಿಯಮಗಳಿಗೆ ಹೊಂದಿಕೊಂಡು:ಹೋಗಹತ್ತಿದರು. ಬರಬರುತ್ತ ನಾಗರೊಡನೆ ಶರೀರ ಸಂಬಂಧ ವನ್ನು ಸಹ ಬೆಳೆಸಿದರೆಂಬುದು ಕೆಳಗಿನ ವಿಷಯದಿಂದ ತಿಳಿದುಬರುವುದು.

ನಾಗ ಕನ್ನಿಕೆಯರು ತುಂಬಾಸ್ಫುರದ್ರೂಪಿಗಳು. ದ್ವಾಪರ ಯುಗದಲ್ಲಿ ಮಣಿಪುರದ ಚಿತ್ರವಾಹನ ರಾಜನ ಮಗಳಾದ ಚಿತ್ರಾಂಗದೆಯು ಅರ್ಜುನ ನೊಡನೆ ವಿವಾಹಿತಳಾದಳು. ಮುಂದೆ ನಾಗರಿಗೂ, ಆರ್ಯರಿಗೂ ವಿರೋಧ ವುಂಟಾಯಿತು. ತಕ್ಷಕನೆಂಬ ನಾಗರಾಜನು ಪರೀಕ್ಷಿತನನ್ನು ಕಚ್ಚಲು ವಿಷವೇರಿ ಮೃತನಾದನು. ಅವನ ಮಗನಾದ ಜನಮೇಜಯನು ಸೇಡು ತೀರಿಸಿ ಕೊಳ್ಳುವುದಕ್ಕಾಗಿ ನಾಗವಂಶವನ್ನು ನಿರ್ಮೂಲನೆ ಮಾಡಲು ಸರ್ಪಯಾಗ ವೆಸಗಿ, ಅನೇಕ ನಾಗರನ್ನು ಕೊಂದನು. ಆಗ ವಾಸುಕಿ ಎಂಬ ನಾಗಜಾತಿ ಯವನ ತಂಗಿಯ ಮಗ "ಅಸ್ತಿಕ ಋಷಿಯಿಂದ ಸರ್ಪಯಾಗವು ನಿಲ್ಲಿಸಲ್ಪಟ್ಟಿ ತಲ್ಲದೆ ನಾಶವಾಗುತ್ತಿದ್ದ ನಾಗ ಜಾತಿಗೆ ಉಳಿಗಾಲ ಒದಗಿತು. ತಕ್ಷಕನು ಪರೀಕ್ಷಿತನ ವಿಷವನ್ನು ಇಳಿಸಿ ಪ್ರಾಣ ಉಳಿಸಿದನು. ಅಂದಿನಿಂದ ಆರ್ಯ ರಲ್ಲಿಯೂ ಹೆಚ್ಚಾಗಿ ನಾಗರ ಪೂಜಾ ಪ್ರಘಾತವುಂಟಾಯಿತು.

## ನಾಗರು ವೀರಶೈವರು

ಲಿಂ. ಜಿ. ಟಿ. ಅಕ್ಕುಲಯ್ಯ ದೀಕ್ಷಿತ ಮದನಪಲ್ಲಿ ಈ ಮಹೋದಯರ ಒಂದು ಲೇಖನದಿಂದ ತಿಳಿದು ಬರುವುದೇನಂದರೆ—

"ನಾಗರ ಪ್ರಥಮ ರಾಜವಂಶವು ವಿದಿಶಾ ಪಟ್ಟಣದಲ್ಲಿ ರಾಜ್ಯವಾಳು ತ್ತಿತ್ತು. ಅಲ್ಲಿ ಶೇಷನಾಗ, ಭೋಗನಾಗ, ರಾಮಚಂದ್ರನಾಗ, ಭೂತನಂದಿ, ಶಿಶುನಂದಿ ಮೊದಲಾದವರಿದ್ದರು. ಕ್ರಿ. ಶ. ೮೦ ರಿಂದ ೧೪೦ ರ ವರೆಗೆ ಅವರು ಮಧ್ಯ ಭಾರತದಲ್ಲಿ ಕಾಡುಗಳಲ್ಲಿ ಅಡಗಿದ್ದರು. ಅಲ್ಲಲ್ಲಿ ಚಿಕ್ಕಪುಟ್ಟ ರಾಜ್ಯ ಗಳನ್ನು ಸ್ಥಾಪಿಸಿದರು. ಅಲ್ಲಿಂದ ರೇವಾ, ಬಾಗಲ್‌ಖಂಡದಿಂದ ಗಂಗಾತೀರದ ವರೆಗೆ ವ್ಯಾಪಿಸಿ ಶಕರಾಜರೊಡನೆ ಯುದ್ಧಮಾಡಿ ಸೋಲಿಸಿ ಭಾರತದಲ್ಲಿ ಸಾರ್ವ ಭೌಮರಾದರು. ಈ ನಾಗರಾಜರಿಗೆ "ಭಾರಶಿವ" ಎಂಬ ಹೆಸರು ಉಂಟಾ ಯಿತು. ಇವರಲ್ಲಿ ವೀರಸೇನ, ಹಯನಾಗ, ತ್ರಯನಾಗ, ಭರಜನಾಗ, ಭಾವ ನಾಗ, ಎಂಬವರು ಪ್ರಸಿದ್ಧ ಚಕ್ರವರ್ತಿಗಳಾಗಿದ್ದರು.

ನಾಗ ರಾಜ್ಯಾಂತರ್ಗತವಾದ "ಪರಸಮನಿಯಾ" ಪರ್ವತದ ಮೇಲೆ ಭುಮರಾ ಗ್ರಾಮಕ್ಕೆ ಸಮೀಪದ ಅರಣ್ಯದಲ್ಲಿರುವ ಒಂದು ಶಿಥಿಲವಾದ ಮಂದಿರದಲ್ಲಿ ಲಿಂಗಧಾರಣವಿರುವ ಮೂರ್ತಿ ಇದೆ. ಅದರ ಹೆಸರು 'ಭಾಕುಲ ಬಾಬಾ' ಇದು ಭಾರಕುಲದ ಹೆಸರಾಗಿರಬೇಕು. ಆ ಮಂದಿರದ ಸುತ್ತು ಮುತ್ತು ಕೆಲವು ಇಟ್ಟಿಗೆಗಳು ಬಿದ್ದಿವೆ. ಅವುಗಳಲ್ಲಿ ಅನೇಕ ಅಕ್ಷರಗಳು ಕೆತ್ತಲ್ಪ ಟ್ಟಿವೆ. ಅವುಗಳನ್ನು ಶ್ರೀ ಕಾಶೀಪ್ರಸಾದ ಜೋಯಿಸ್‌ವಾಲಾ ಅವರು ಕಂಡಿರು ವರು. ಆ ಲಿಪಿ ಕ್ರಿ. ಶ. ೧೫೦–೨೦೦ ಎಂದು ಗುರ್ತಿಸಲ್ಪಟ್ಟಿದೆ. ಬಾಬಾ ಕಾಶೀ ಪ್ರಸಾದ ಜೋಯಿಸವಾಲಾ ಇವರ ಅಭಿಪ್ರಾಯದಲ್ಲಿ–ಗುಪ್ತರು ರಾಜ್ಯವಾಳುವ ಪೂರ್ವದಲ್ಲಿ ತುಷಾನರ ತರುವಾಯ ನಾಗವಂಶರಾಜರು ರಾಜ್ಯಪಾಲನೆ ಮಾಡುತ್ತಿದ್ದರು. ಇವರ ಶಿಲಾಶಾಸನಗಳಿಂದ ತಿಳಿದು ಬರುವುದೇನಂದರೆ-ಈ ವಂಶದ ಆದಿ ಪುರುಷನು ಶಿವಲಿಂಗವನ್ನು ತನ್ನ ಭುಜದಲ್ಲಿ ಧರಿಸಿದ್ದನೆಂದು ತಿಳಿದುಬರುತ್ತದೆ.

"ಅಂಸಭಾರ ಸನ್ನಿವೇಶಿತ ಶಿವಲಿಂಗೋದ್ವಹನ ಶಿವಸುಪರಿತುಷ್ಟ ಸಮು ತ್ಪಾದಿತ ರಾಜವಂಶಾನಾಂ ಪರಾಕ್ರಮಾದಿಗತ ಭಾಗೀರಥ್ಯ ಮಲಜಲ

ಮೂರ್ಧಾಭಿಷಿಕ್ತಾನಾಂದ ಶಾಶ್ವಮೇಧಾವಭೃತಸ್ನಾನಾನಾಂ ಭಾರಶಿವಾನಾಂ" ಎಂದು ಉಲ್ಲಿಖಿತವಾಗಿದೆ. ಕಾಶಿಯಲ್ಲಿ ಈ ವಂಶಕ್ಕೆ ಸಂಬಂಧಿಸಿದ ಒಂದು ಮೂರ್ತಿ ದೊರೆತಿದೆ. ಅದರ ಶಿರಸ್ಸಿನಲ್ಲಿ ಶಿವಲಿಂಗ ಧರಿಸಿದ ಗುರ್ತು ಇದೆ." ಈ ಎಲ್ಲ ಸಂಗತಿಗಳಿಂದ ನಾಗರು ವೀರಶೈವರೆಂಬುದು ಸ್ಫುಟವಾಗಿ ತೋರುತ್ತದೆ. ಆದುದರಿಂದ ವೀರಶೈವರು ಪ್ರಾಚೀನ ಕಾಲದಿಂದ ನಾಗರನ್ನು ಅತ್ಯಂತ ಭಕ್ತಿಯಿಂದ ಪೂಜಿಸುತ್ತಿರುವರು.

ನಾಗ ಪೂಜೆಗೆ ಇನ್ನೊಂದು ಕತೆಯೆಂದರೆ—ಪೂರ್ವಕಾಲದಲ್ಲಿ ಹರದ್ವಾರದಲ್ಲಿ ಹದಿನಾಲ್ಕು ಜನ ಬ್ರಹ್ಮಚಾರಿಗಳು ಅತ್ಯಂತ ಸ್ನೇಹಿತರಾಗಿದ್ದರು. ಅವರು ಒಬ್ಬರಿಗೊಬ್ಬರು ಅಗಲಿರಲಾರದೇ ಕಾಶಿಯಲ್ಲಿ ಸಕಲ ವಿದ್ಯೆಗಳಲ್ಲಿ ಪಾರಂಗತನಾದ ಪಾತಂಜಲಿಗೆ ಶರಣು ಹೋಗಿ ವಿದ್ಯಾರ್ಜನೆಗೆ ನಿಂತರು. ಆ ಋಷಿಯು ಒಂದು ಪರದೆಯ ಮರೆಯಲ್ಲಿ ಕುಳಿತು ಹದಿನಾಲ್ಕು ಜನ ಶಿಷ್ಯರಿಗೆ ಹದಿನಾಲ್ಕು ವಿದ್ಯೆಗಳನ್ನು ಭಿನ್ನಭಿನ್ನವಾಗಿ ಏಕಕಾಲದಲ್ಲಿಯೇ ಒಬ್ಬನೇ ಹೇಳುತ್ತಿದ್ದನು. ಆದರೆ ಪರದೆಯಲ್ಲಿ ತನ್ನನ್ನು ಯಾರೂ ನೋಡಬಾರದೆಂದು ನಿರ್ಬಂಧಿಸಿದನು. ಹೀಗೆ ಹಲವಾರು ದಿನಗಳು ಗತಿಸಿದವು. "ವಿನಾಶ ಕಾಲೇ ವಿಪರೀತ ಬುದ್ಧಿ" ಎಂಬಂತೆ ಆ ಶಿಷ್ಯರಲ್ಲಿ ಓರ್ವನನ್ನು ಕುತೂಹಲವು ಕೆರಳಿಸಿತು. ಗುರುವಿನ ಕಟ್ಟಪ್ಪಣೆಯನ್ನು ಮರೆತು ಪರದೆ ಎತ್ತಿ ಪಾತಂಜಲಿಯನ್ನು ನೋಡಿದನು. ತತ್‌ಕ್ಷಣವೇ ಹದಿನಾಲ್ಕು ಹೆಡೆಯುಳ್ಳ ಭಯಂಕರ ಸರ್ಪವು ಭೋರ್ಗರೆಯುತ್ತ ವಿಷಜ್ವಾಲೆ ಉಗುಳುತ್ತ ಪರದೆಯ ಹೊರಹೊರಟು ಯಾವತ್ತು ಶಿಷ್ಯ ಜನರನ್ನು ಭಾಷ್ಯಗಳನ್ನು ಸುಟ್ಟುಹಾಕಿತಲ್ಲದೇ ಸಿಕ್ಕಸಿಕ್ಕವರನ್ನು ಕಚ್ಚಲಾರಂಭಿಸಿತು. ಆಶ್ರಮದಲ್ಲಿ ಎಲ್ಲೆಡೆಗಳಲ್ಲಿ ಹಾಹಾಕಾರವೆದ್ದಿತು. ಸರ್ವಋಷಿಗಳೂ, ದೇವತೆಗಳೂ ಆ ಸರ್ಪಸಂತೃಪ್ತಿಗಾಗಿ ಹಾಲು ಎರೆದರು. ಹಾಗೂ ಬಂಧು ಬಾಂಧವರಿಗೆ ತೊಂದರೆಯಾಗಬಾರದೆಂದು ಅವರೆಲ್ಲರ ಹೆಸರು ತೆಗೆದುಕೊಂಡು ಹಾಲು ಎರೆದರು. ಮತ್ತು ಲಾಜಗಳ (ಅರಳುಗಳ)ನ್ನು ಸುರಿಸಿದರು. ಕೊಬ್ರಿ, ಅರಳಿಟ್ಟು, ತಂಬಿಟ್ಟು ಮೋದಕಗಳನ್ನರ್ಪಿಸಿ ಪೂಜಿಸಿದರು. ಕೆಲವು ಹೊತ್ತಿನ ಮೇಲೆ ಪಾತಂಜಲಿ ಸರ್ಪದೇಹ ತೊಲಗಿ, ನಿಜರೂಪ ಧರಿಸಿ ಕನಿಕರಪಟ್ಟು ವಿನಾಶಹೊಂದಿದ ಸಕಲ ಶಿಷ್ಯರನ್ನು ಬದುಕಿಸಿ ಭಾಷ್ಯಗಳನ್ನು

ಪುನಃ ಉದ್ಧರಿಸಿದನು. ಈ ಘಟನೆ ಜರುಗಿದ್ದು ಕಾಶಿಪಟ್ಟಣದಲ್ಲಿ. ಈಗಲೂ ಅಲ್ಲಿ ನಾಗಕುಂಬಾ ಎಂಬ ಪ್ರಸಿದ್ಧ ಸ್ಥಾನವಿದೆ. ಪ್ರತಿವರುಷ ಶ್ರಾವಣ ಶುದ್ಧ ಪಂಚಮಿಯಲ್ಲಿ ದೊಡ್ಡ ಜಾತ್ರೆ ಕೂಡುತ್ತದೆ. ಲಕ್ಷಾಂತರ ಜನರು ಸೇರುವುದುಂಟು. ಅಲ್ಲಿರುವ ನಾಗಮೂರ್ತಿಗಳಿಗೆ ಎಲ್ಲರೂ ಹಾಲು ಎರೆಯುವರು. ಅದರಿಂದ ಆ ಭಾವಿಯ ನೀರೆಲ್ಲ ಹಾಲಿನಂತೆ ಕಾಣುತ್ತದೆ. ಸಾಯಂಕಾಲ ನಾಲ್ಕು ಗಂಟೆಗೆ ಅನೇಕ ಜನ ಪಂಡಿತರು ಕೂಡಿ ಶಾಸ್ತ್ರವಾದ ಮಾಡುವರು. ನಾಗದರ್ಶನ ಪಡೆದು ಮನೆಗಳಿಗೆ ತೆರಳುವರು.

ಪಾಟಲೀಪುರದಲ್ಲಿ ಶಿವಪ್ರಸಾದನೆಂಬ ಓರ್ವ ಧನಾಢ್ಯ ಶಿವಭಕ್ತನಿದ್ದನು. ಅವನಿಗೆ ಏಳುಜನ ಸೊಸೆಯರಿದ್ದರು. ಆರುಜನ ಸೊಸೆಯರಿಗೆ ಬಂಧು ಬಳಗದವರಿದ್ದರು. ಚಿಕ್ಕವಳಿಗೆ ಬಳಗವಿದ್ದಿಲ್ಲ. ಒಮ್ಮೆ ಶ್ರಾಮಣಮಾಸ ಸಮೀಪಿಸಿತು. ಎಲ್ಲ ಸೊಸ್ತೆಯರು ತಮ್ಮ ತಮ್ಮ ತವರೂರಿಗೆ ತೆರಳಿದರು. ಚಿಕ್ಕವಳು ಬೇರೆ ಎಲ್ಲಿಗೂ ಹೋಗದವಳಾಗಿ ಪತಿಯ ಮನೆಯಲ್ಲಿಯೇ ಅವಿಶ್ರಾಂತಳಾಗಿ ಉಳಿಯಬೇಕಾಯಿತು. ಅವಳು ಮನೆಯನ್ನು ಸಾರಿಸಿ ಸುಣ್ಣ ಬಣ್ಣ ಗಳಿಂದ ಅಲಂಕರಿಸಿ ನಾಗನೇವನಲ್ಲಿ ಭಕ್ತಿವಿಶ್ವಾಸವುಳ್ಳವಳಾಗಿ, ಅವನೇ ಸರ್ವ ಬಂಧು ಬಳಗವೆಂದು ಭಾವಿಸಿ, ಪೂಜಿಸಹತ್ತಿದಳು. ನಾಗರಾಜನು ಅವಳ ಭಕ್ತಿಗೆ ಸಂತುಷ್ಟನಾಗಿ ಓರ್ವ ಭಗವದ್ಭಕ್ತ ವೇಷಧಾರಿಯಾಗಿ ಶಿವಪ್ರಸಾದನನ್ನು ಕಂಡು—"ಈ ನಿನ್ನ ಚಿಕ್ಕ ಸೊಸೆಯಾದ ಸುಶೀಲೆ ನನ್ನ ಚಿಕ್ಕಪ್ಪನ ಮಗಳು; ನಾನು ಬಳಗವನ್ನಗಲಿ ಬಹಳ ದಿವಸಗಳಿಂದ ದೂರ ದೇಶದಲ್ಲಿದ್ದೆ. ಈಗ ಇವಳೊಬ್ಬಳೇ ಉಳಿದಿರುವಳು. ಇವಳ ಮುಖವನ್ನು ನೋಡದೇ ಬಹಳ ದಿವಸಗಳಾದವು. ಆದುದರಿಂದ ನಾಲ್ಕಾರು ದಿವಸ ನನ್ನ ಮನೆಗೆ ದಯವಿಟ್ಟು ಕಳುಹಿಸು" ಎಂದು ವಿನಯಾನ್ವಿತನಾಗಿ ಬೇಡಿಕೊಂಡನು. ಶಿವಪ್ರಸಾದನು ಅವನನ್ನು ಎಂದೂ ನೋಡಿದ್ದಿಲ್ಲ. ಅವನ ಮಾತನ್ನು ಕೇಳಿ ಅಚ್ಚರಿಗೊಂಡು ತನ್ನ ಸೊಸೆಗೆ "ಇವನು ಯಾರೆಂದು ವಿಚಾರಿಸಿದನು. ಅವಳಾದರೋ ಹಲವಾರು ವರುಷ ಅತ್ತೆಯ ಮನೆಯಲ್ಲಿದ್ದು ಬೇಸರಗೊಂಡವಳಾಗಿದ್ದಳು. ಆದುದರಿಂದ ಅವಳು—"ನನ್ನ ಅಣ್ಣನು ಹೌದೆ"ಂದು ಹೇಳಿದಳಲ್ಲದೇ 'ತಮ್ಮ ಅಪ್ಪಣೆಯಾದರೆ ಒಂದೆರಡು ದಿವಸ ತವರೂರಿಗೆ ಹೋಗಿಬರುವೆನೆಂ"ದಳು ಶಿವಪ್ರಸಾ

ದನು ಸಂತೋಷದಿಂದ ಸೊಸೆಯನ್ನು ಅಣ್ಣನೊಡನೆ ಬೀಳ್ಕೊಟ್ಟನು. ಸುಶೀಲೆ ತನ್ನ ಪತಿಯಾಜ್ಞೆ ಪಡೆದವಳಾಗಿ ಅತ್ತೆಮಾವಂದಿರಿಗೆ ನಮಸ್ಕರಿಸಿ ಬಂದಿದ್ದ ಅಣ್ಣನೊಡನೆ ಹಿಂಬಾಲಿಸಿ ಹೋದಳು. ಎಷ್ಟುದೂರ ಹೋದರೂ ಅವಳಿಗೆ ಒಂದು ಊರೂ ಕಣ್ಣಿಗೆ ಬೀಳಲಿಲ್ಲ. ಕೊನೆಗೆ ಒಂದು ದೊಡ್ಡ ಅರಣ್ಯ ಬಂದಿತು. ಅಲ್ಲಿ ಅನೇಕ ಗಿಡಗಳು ಒಂದಕ್ಕೊಂದು ಹತ್ತಿಕೊಂಡು ಮುಗಿಲು ಮುಟ್ಟಿ ವಂತೆ ಬೆಳೆದುನಿಂತಿದ್ದವು. ಸೂರ್ಯನ ಪ್ರಕಾಶವಿಲ್ಲದೆ ಅಂಧಕಾರ ಕವಿದಿತ್ತು. ಸುಶೀಲೆ ಭಯಗ್ರಸ್ತಳಾಗಿ ಮನದಲ್ಲಿ ಹಲವು ವಿಧವಾಗಿ ವಿಚಾರಿಸತೊಡ ಗಿದಳು. ಅಷ್ಟರಲ್ಲಿ ಅಣ್ಣನು ತನ್ನ ರೂಪವನ್ನು ಬಿಟ್ಟು ದೀರ್ಘಕಾಯದ ಸರ್ಪ ರೂಪ ಧರಿಸಿದನು. ಸುಶೀಲೆ ಈ ಭಯಂಕರ ಸರ್ಪವನ್ನು ನೋಡಿ ನಡುಗ ಹತ್ತಿದಳು. ಆಗ ಸರ್ಪವು ಅಮ್ಮಾ ನೀನು ಭಯಪಡಬೇಡ. ನಿನ್ನ ಭಕ್ತಿಗೆ ಮೆಚ್ಚಿ ನಾನು ಬಂದಿದ್ದೇನೆ. ನನಗೆ ವಾಸುಕಿ ಎನ್ನುವರು. ಈ ನನ್ನ ಹೆಡೆಯ ಮೇಲೆ ಕುಳಿತುಕೋ ನಿನ್ನನ್ನು ನಾಗಲೋಕಕ್ಕೆ ಕರೆದುಕೊಂಡು ಹೋಗು ವೆನು ಎಂದು ಮನುಷ್ಯನಂತೆ ನುಡಿಯಲು, ಅವಳು ಅಚ್ಚರಿಯಿಂದಲೂ, ಆನಂದದಿಂದಲೂ ಪುಲಕಿತಳಾಗಿ ನಾಗದೇವನ ಹೆಡೆಯ ಮೇಲೆ ಕುಳಿತು ನಾಗ ಲೋಕಕ್ಕೆ ತೆರಳಿದಳು. ಅಲ್ಲಿ ನಾಗರಾಜನು ಯಾವತ್ತೂ ತನ್ನ ಅನುಚರರಿಗೆ ಸುಶೀಲೆಯನ್ನು ಚನ್ನಾಗಿ ರಕ್ಷಿಸುತ್ತಿರಬೇಕೆಂದು ಆಜ್ಞೆ ವಿಧಿಸಿದನು. ಹೀಗಿರಲು ಒಂದು ದಿವಸ ನಾಗರಾಜನ ಸತಿಯಾದ ನೀಲಲೋಚನೆಯು ಅನೇಕ ಸಣ್ಣ ಸಣ್ಣ ನಾಗಪುತ್ರರನ್ನು ಹೆತ್ತಳು. ಭೂಮಿಯ ಮೇಲೆ ಸರಸರನೇ ಸರಿಯು ತ್ತಿರುವ ಸಣ್ಣ ಪುಟ್ಟ ಸರ್ಪಗಳನ್ನು ನೋಡಿ ಸುಶೀಲೆಗೆ ಭಯವಾಗಹತ್ತಿತು. ಆಗ ನೀಲಲೋಚನೆಯು "ಅಮ್ಮಾ ನೀನು ಭಯಪಡಬೇಡ. ಇಗೋ ಈ ಸುವರ್ಣದ ಕಟಕವನ್ನು ಕೈಯಲ್ಲಿ ಸದಾ ಧರಿಸಿಕೊಂಡಿರು, ಇದರಿಂದ ನಿನಗೆ ಭಯ ಬರಲಾರದು" ಎಂದು ಅವಳಿಗೊಂದು ಕಟಕವ(ಬಳೆಯ)ನ್ನು ಕೊಟ್ಟಳು. ಅಂದಿನಿಂದ ಸುಶೀಲೆ ನಿಶ್ಚಿಂತೆಯಿಂದಿರಲು ಒಂದು ದಿವಸ ಅವಳ ಕೈಯಲ್ಲಿಯ ಕಟಕ ಜಾರಿ ಕೆಳಗೆ ಬೀಳಲು, ಓರ್ವ ನಾಗಪುತ್ರನ ಬಾಲವು ಕಡಿದು ಹೋಯಿತು.

ಸುಶೀಲೆ ಕೆಲವು ಕಾಲವನ್ನು ನಾಗಲೋಕದಲ್ಲಿ ಸುಖವಾಗಿ ಕಳೆದು, ನಾಗರಾಜನ ಅಪ್ಪಣೆ ಪಡೆದವಳಾಗಿ ಪುನಃ ಪತಿಗೃಹಕ್ಕೆ ಬಂದಳು. ಅತ್ತ ನಾಗ

ಲೋಕದಲ್ಲಿ ನೀಲಲೋಚನೆಯ ನಾಗ ಪುತ್ರರು ಬೆಳೆದು ದೊಡ್ಡವರಾದರು. ಅವರಲ್ಲಿ ಒಬ್ಬನು ತನ್ನ ತಾಯಿಗೆ–"ಅವ್ವಾ ನನ್ನ ಬಾಲವು ವಿಕಲವಾಗಲು ಕಾರಣವೇನೆನ್ನಲು" ನೀಲಲೋಚನೆ ಹಿಂದೆ ನಡೆದ ಸಂಗತಿಯನ್ನು ಹೇಳಿದಳು. ಅವನು ಸಿಟ್ಟಿಗೆದ್ದು ಅಪಮಾನ ವೆಸಗಿದ ಸುಶೀಲೆಯ ಪ್ರಾಣಹರಣ ಮಾಡಲು ತನ್ನ ಸಹೋದರರೊಡನೆ ಅವಳ ಮನೆಗೆ ಬಂದನು. ಅಂದು ಶ್ರಾವಣ ಶುದ್ಧ ಪಂಚಮಿ, ಸುಶೀಲೆ ಸ್ನಾನಮಾಡಿ ಶುಚಿರ್ಭೂತಳಾಗಿ, ಅಣ್ಣ ನಾಗದೇವನ ಮೂರ್ತಿಯನ್ನು ಪಾಟಿಯ ಮೇಲೆ ಬರೆದು ಪತ್ರಿ ಪುಷ್ಪಗಳಿಂದಲೂ, ಧೂಪ ದೀಪ ಗಳಿಂದಲೂ ಪೂಜಿಸಿ, ಭತ್ತದ ಅರಳು, ನೆನೆಗಡಲಿ, ಹುರಿದಕ್ಕಿಯ ತಂಬಿಟ್ಟು ಅರ್ಪಿಸಿ ಕೈಜೋಡಿಸಿಕೊಂಡು 'ಅಣ್ಣಾ ನಾಗರಾಜಾ ನೀನೇ ನನಗೆ ಸಕಲಸಿರಿ, ಬಂಧು–ಬಳಗವಾಗಿರುವೆ. ನಿನ್ನ ದರ್ಶನವಿಲ್ಲದೆ ಒಂದು ವರುಷ ವಾಯಿತು. ನೀನು ಸುಖವಾಗಿರು. ನಿನ್ನ ಸತಿಸುತರಿಗೆ ದೇವರು ಸಕಲ ಸೌಭಾಗ್ಯವನ್ನೀಯಲಿ ಎಂದು ಪ್ರಾರ್ಥಿಸುವುದನ್ನು ನೋಡಿ ಆ ನಾಗದೇವತೆ ಗಳು ಸುಶೀಲೆಯ ಸೌಜನ್ಯಕ್ಕೆ ಪ್ರಸನ್ನರಾಗಿ ಅವಳಿಗೆ ಸಕಲ ಸೌಭಾಗ್ಯವನ್ನು ಅನುಗ್ರಹಿಸಿ ನಾಗಲೋಕಕ್ಕೆ ತೆರಳಿದರು.

ಭಾರತೀಯರು ಹೀಗೆ ಹಾವನ್ನು ಪೂಜಿಸಲು ಹಲವಾರು ಪ್ರಸಂಗಗಳು ಕಾರಣವಾಗಿವೆ. ಅದೇನೇ ಇರಲಿ, ಭೀಕರ ವಿಷವನ್ನು ಕಾರುವ ಹಾವನ್ನೂ ಹಾವಿನಂಥ ಕೆಟ್ಟ ಪ್ರಾಣಿಯನ್ನೂ ಕೊಲ್ಲಬಾರದೆಂದು ನಮ್ಮ ದ್ರಾವಿಡರು ತೋರಿಸಿದ ಅಹಿಂಸಾ ಮಾರ್ಗವನ್ನು ನಾವು ಮನಗಂಡು ಪರಿಪಾಲಿಸಿದರೆ ನಮಗೂ ನಮ್ಮ ಮುಂದಿನ ಸಂತತಿಗೂ ಸುಖವಿದೆ. ಹೆಣ್ಣು ಮಕ್ಕಳು ಸುಶೀಲೆ ಯಂತೆ ಪರಮ ಭಕ್ತಿ ವಿಶ್ವಾಸಗಳಿಂದ ನಾಗ ದೇವರನ್ನು ಪೂಜಿಸಿ ಅವನ ಕೃಪೆ ಯಿಂದ ತಮ್ಮ ಜನ್ಮ ಸಾರ್ಥಕ ಮಾಡಿಕೊಳ್ಳಬೇಕಲ್ಲದೆ ಭಕ್ಷ್ಯ–ಭೋಜ್ಯ ವಸ್ತುವನ್ನು ಸಾಕಷ್ಟು ಸವಿದು ಕವಲೆತ್ತಿನಂತೆ ಶೃಂಗಾರದಿಂದ ಕುಣಿಯುತ್ತ ನಲಿದಾಡಿದರೆ ಯಾವ ಕೃತಾರ್ಥವೂ ಆಗದು.

## ಹರತಾಲಿಕಾವ್ರತ

### ಶ್ರಾವಣ ಶು। ೩

ಹರತಾಲಿಕಾವ್ರತವು ಶ್ರಾವಣ ಶುದ್ಧ ೩ರಲ್ಲಿ ಆಚರಿಸಲ್ಪಡುತ್ತದೆ. ಅಂದಿನ ದಿನ ಮನೆಯನ್ನು ಗೋಮಯದಿಂದ ಸಾರಣೆಮಾಡಿ, ಸುಣ್ಣ ಬಣ್ಣಗಳಿಂದ

ಅಲಂಕರಿಸಬೇಕು. ಹೀಗೆ ಶುಚಿರ್ಭೂತವಾದ ಮನೆಯ ಒಂದು ಭಾಗದಲ್ಲಿ ಮಂಟಪವನ್ನು ಹಾಕಿ ಅದನ್ನು ಬಾಳೆಕಂಬಗಳಿಂದಲೂ ತಳಿರು ತೋರಣ ಗಳಿಂದಲೂ, ವಿವಿಧ ಪಲ್ಲವಗಳಿಂದಲೂ, ರಂಗವಲ್ಲಿಯಿಂದಲೂ ಶೃಂಗರಿಸ ಬೇಕು. ಆ ಮಂಟಪದಲ್ಲಿ ಪಾರ್ವತೀಪರಮೇಶ್ವರರ ಮೂರ್ತಿಯನ್ನು ವಿಧ್ಯುಕ್ತ ವಾಗಿ ಸ್ಥಾಪಿಸಿ ವ್ರತವನ್ನಾಚರಿಸಬೇಕು. ಈ ವ್ರತದಿಂದ ಸುಮಂಗಲೆಯರು ಚಿರಕಾಲ ಮುತ್ತೈದೆಯರಾಗಿ ಬಾಳುತ್ತಾರೆ.

ಜಗಜ್ಜನನಿಯಾದ ಪಾರ್ವತಿಯು ತನ್ನ ಸಖಿಯರೊಡನೆ ಮನೆಯಿಂದ ಹೊರಟುಹೋಗಿ ತಪಸ್ಸನ್ನಾಚರಿಸಿ ಶಿವನನ್ನು ಒಲಿಸಿಕೊಂಡದ್ದು ಇದೇ ಶ್ರಾವಣ ಶುದ್ಧ ತೃತೀಯಾ ದಿನ. ಆದ್ದರಿಂದ ಇಂದು ವ್ರತವನ್ನಾಚರಿಸುವುದು ಬಹು ಪ್ರಾಚೀನ ಕಾಲದಿಂದಲೂ ನಡೆದು ಬಂದುದಾಗಿದೆ.

ಈ ವ್ರತದ ವಿಷಯದಲ್ಲಿ ಭವಿಷ್ಯೋತ್ತರ ಪುರಾಣದಿಂದ ತಿಳಿದುಬರುವು ದೇನಂದರೆ:-ಹಿಮಾಲಯ ಪರ್ವತದಲ್ಲಿ ಪಾರ್ವತಿಯು ತನ್ನ ಬಾಲ್ಯಾವಸ್ಥೆಯಲ್ಲಿ ಶಿವನೊಡನೆ ಲಗ್ನವಾಗಲು ಹನ್ನೆರಡುವರುಷ ಕೇವಲ ಧೂಮ್ರಪಾನ ಮಾಡು ತ್ತಲೂ, ಅರವತ್ತನಾಲ್ಕು ವರುಷ ಒಣಗಿದ ಎಲೆಗಳನ್ನು ಸೇವಿಸುತ್ತಲೂ ತಪಸ್ಸನ್ನಾಚರಿಸಿದಳು. ಕೆಲವು ಕಾಲಗಳ ಮೇಲೆ ಒಣಗಿದ ಎಲೆಗಳನ್ನು ಕೂಡ ತ್ಯಾಗಮಾಡಲಾಗಿ, ಆವಳಿಗೆ "ಅಪರ್ಣಾ" ಎಂಬ ಹೆಸರು ಬಂತು. ಪಾರ್ವ ತಿಯ ತಾಯಿಯಾದ ಮೇನಕಾದೇವಿಯು, "ಉ= ಎಲೊ ಮಗಳೇ! ಮಾ= ಇಂಥ ಕಠಿಣವಾದ ತಪಸ್ಸನ್ನಾಚರಿಸಬೇಡ" ಎಂದು ನುಡಿದದ್ದರಿಂದ ಪಾರ್ವ ತಿಗೆ "ಉಮಾ" ಎಂಬುವ ಹೆಸರು ಬಂತು. ಮೃಣಾಲದಂತೆ ಕೋಮ ಲಾಂಗಿಯೂ, ಬಾಲಿಕೆಯೂ ಆದ ಪಾರ್ವತಿಯು ತಪಸ್ಸಿನಿಂದ ಕೃಶಳಾದು ದನ್ನು ನೋಡಿ ತಂದೆಯಾದ ಹಿಮವಂತ ರಾಜನಿಗೆ ದು:ಖವೆನಿಸಿತು. ಅವನಿಗೆ ಮುಂದೇನು ಮಾಡಬೇಕೆಂಬುದು ತಿಳಿಯಲಿಲ್ಲ. ಹೀಗಿರಲು ಒಂದು ದಿನ ನಾರ ದನು ಹಿಮವಂತ ರಾಜನಲ್ಲಿಗೆ ಬಂದು, "ಎಲೈ ರಾಜನೇ!— ಪಾರ್ವತಿಗೆ ಶ್ರೀ ವಿಷ್ಣುವು ಯೋಗ್ಯ ವರನಾಗುವನು. ಭಾಗ್ಯಶಾಲಿಯಾದ ಅವನಿಗೆ ನಿನ್ನ ಮಗಳನ್ನು ಕೊಟ್ಟು ಸುಖವಾಗಿರು" ಎಂದು ನುಡಿದನು. ಈ ಮಾತು ಹಿಮ ವಂತ ರಾಜನಿಗೂ ಸರಿ ಎನಿಸಿತು. ಆದರೆ ಪಾರ್ವತಿಯು ಇದನ್ನು ತಿಳಿದು

ಚಿಂತಾಕ್ರಾಂತಳಾಗಿ ಶಿವನ ಹೊರತಾಗಿ ತನಗೆ ಬೇರಾರೂ ಪತಿಯಾಗಲಾರ ರೆಂದು ನಿಶ್ಚಯಿಸಿ, ಯಾರಿಗೂ ತಿಳಿಯದಂತೆ ತನ್ನ ಸಖಿಯರೊಡನೆ ಮನೆ ಯಿಂದ ಹೊರಟು ಅನೇಕ ಗಿರಿಕಂದರಗಳನ್ನು ದಾಟುತ್ತ ಒಂದು ದುರ್ಗಮ ವಾದ ನದೀತೀರವನ್ನು ಹೊಂದಿದಳು. ಹಿಮವಂತ ರಾಜನು ಪಾರ್ವತಿಯನ್ನು ಹಿಂಬಾಲಿಸಿದನು. ಆದರೆ ಎಲ್ಲಿ ಹುಡುಕಿದರೂ ಅವಳು ಸಿಗಲಿಲ್ಲ. "ಅವಳು ಕ್ರೂರ ಮೃಗಗಳ ಬಾಯಿಗೆ ತುತ್ತಾಗಿರಬಹುದೆಂದು ಅವನು ನಿರಾಶನಾಗಿ ತನ್ನ ಶಿಬ್ಬಂದಿಯೊಡನೆ ಮರಗುತ್ತ ಮರಳಿ ಮನೆಗೆ ಬಂದನು.

ಅತ್ತ ಪಾರ್ವತಿಯು ನದೀತೀರದಲ್ಲಿ ಉಸುಕಿನ ಶಿವಲಿಂಗವನ್ನು ನಿರ್ಮಿಸಿ ಅವನ ಸಾನ್ನಿಧ್ಯದಲ್ಲಿ ಧ್ಯಾನಮಗ್ನಳಾದಳು. ಅವಳು ಹೇಮಂತ ಋತುವಿನಲ್ಲಿ ನೀರಿನಲ್ಲಿಯೂ, ಬೇಸಿಗೆಯಲ್ಲಿ ಪಂಚಾಗ್ನಿ ಮಧ್ಯದಲ್ಲಿಯೂ ನಿಂತು ಹಲವಾರು ಸಂವತ್ಸರ ಶಿವನನ್ನು ಆಹ್ವಾನಿಸಿದಳು. ಇಂಥ ಕಠಿಣವಾದ ತಪಸ್ಸಿಗೆ ಪ್ರಸನ್ನನಾದ ಶಂಕರನು ಶ್ರಾವಣ ಶುದ್ಧ ತೃತೀಯಾ ದಿವಸ ಪಾರ್ವ ತಿಗೆ ದರ್ಶನವನ್ನಿತ್ತು— "ನಿನ್ನ ಅಭೀಷ್ಟವೇನೆಂದು" ಕೇಳಿದನು. ಆಗ ಪಾರ್ವ ತಿಯು "ದೇವ! ನೀನು ನನಗೆ ಪ್ರಸನ್ನನಾದುದಾದರೆ, ನೀನು ನನ್ನೊಡನೆ ವಿವಾಹವಾಗಬೇಕೆಂದು" ಪ್ರಾರ್ಥಿಸಿದಳು. ಆಗ ಶಂಕರನು "ಏವಮಸ್ತು" ಎಂದು ಹೇಳಿ ಕೈಲಾಸಕ್ಕೆ ತೆರಳಿದನು.

ಸ್ವಲ್ಪ ಹೊತ್ತಿನಲ್ಲಿಯೇ ಅಲ್ಲಿಗೆ ಹಿಮವಂತ ರಾಜನು ಬಂದು ತನ್ನ ಮಗ ಳನ್ನು ನೋಡಿ, ಸಂತೋಷಭರಿತನಾಗಿ ಅವಳಿಗೆ ಮನೆಗೆ ಬರಬೇಕೆಂದು ಕೇಳಿ ಕೊಂಡನು. ಆಗ ಪಾರ್ವತಿಯು "ಭಗವಾನ್ ಶಂಕರನೊಡನೆ ವಿವಾಹ ವಾಗಲು ನನಗೆ ನೀನು ಒಪ್ಪಿಗೆ ಕೊಟ್ಟರೆ, ಮನೆಗೆ ಬರುವೆನೆಂ"ದು ಹೇಳಿದಳು. ಹಿಮವಂತ ರಾಜನು ಪಾರ್ವತಿಯ ಮಾತಿಗೆ ಒಪ್ಪಿ ಅವಳನ್ನು ಶಿವನೊಡನೆ ಸಂಭ್ರಮದಿಂದ ಲಗ್ನಮಾಡಿಕೊಟ್ಟನು.

## ರಕ್ಷಾಬಂಧನ

### ಶ್ರಾವಣ ಶು. ೧೫

ಶ್ರಾವಣ ಶುದ್ಧ ಪೌರ್ಣಿಮಿಯ ದಿನ ಈ ಹಬ್ಬವು ಆಚರಿಸಲ್ಪಡುತ್ತದೆ. ಈ ಹಬ್ಬವು ಉತ್ತರ ಭಾರತದಲ್ಲಿ ಒಳ್ಳೆ ವೈಭವದಿಂದ ಜರಗುತ್ತದೆ. ಹಿರಿಯರು ಸಣ್ಣವರಿಗೆ ರಕ್ಷಾಬಂಧನವನ್ನು ಮಾಡುತ್ತಾರೆ.

"ಯೇನ ಬದ್ಧೋಬಲೀ ರಾಜಾ ದಾನವೇಂದ್ರ ಮಹಾಬಲಃ ।
ತೇನತ್ವಾಮಪಿ ಬಧ್ನಾಮಿ ರಕ್ಷೇಮಾಚಲ ಮಾಚಲ" ॥

ಎಂಬ ಮಂತ್ರವನ್ನು ಉಚ್ಚಾರ ಮಾಡುತ್ತ ರಕ್ಷಾಬಂಧನವನ್ನು ಮಾಡುವುದುಂಟು. "ಈ ರಕ್ಷೆಯು" ರೇಷ್ಮೆಯ ಎಳೆಗಳಿಂದಲೂ ಜರದಿಂದಲೂ ತಯಾರಿಸಿದ್ದುದು ಇರುತ್ತದೆ. ಇದರ ಬೆಲೆಯು ಐದಾಣೆಯಿಂದ ಐವತ್ತು ರೂಪಾಯಿಗಳವರೆಗೆ ಇರುತ್ತವೆ. ಇವು ಪೇಟೆಯಲ್ಲಿ ಆದೇಕಾಲಕ್ಕೆ ಮಾರಲಿಕ್ಕೆ ಸಿಕ್ಕುತ್ತವೆ. ಆಯಾಯ ಮನುಷ್ಯರ ಯೋಗ್ಯತೆಗನುಸಾರವಾಗಿ ಅಂತಂತಹ ರಕ್ಷಾಬಂಧನಗಳನ್ನು ಮಾಡುತ್ತಾರೆ. ಬಹುತರವಾಗಿ ರಾಜಾಧಿರಾಜರಿಗೂ, ಸರಕಾರಿ ದೊಡ್ಡ ನೌಕರರಿಗೂ ಬೆಲೆಯುಳ್ಳ ರಕ್ಷಾಬಂಧನ ಮಾಡುತ್ತಾರೆ. ಕರ್ನಾಟಕದಲ್ಲಿ ಬಹುತರವಾಗಿ ಸವರ್ಣೀಯರು ಮಾತ್ರ ಈ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬದ ವಿಷಯವಾಗಿ ಭವಿಷ್ಯಪುರಾಣದಲ್ಲಿ ಒಂದು ಕಥೆಯುಂಟು. ಒಂದಾನೊಂದು ಕಾಲದಲ್ಲಿ ಸುರಾಸುರರಿಗೆ ಹನ್ನೆರಡು ವರುಷಗಳವರೆಗೆ ಎಡೆಬಿಡದೆ ಘನ ಘೋರವಾದ ಯುದ್ಧವು ನಡೆಯಿತು. ಸೋಲು ಗೆಲುವುಗಳು ಯಾರ ಪಾಲಿಗೂ ಸಿಗಲಿಲ್ಲ. ಯುದ್ಧ ಸಮಾಪ್ತಿಯ ಆಶೆಯೇ ಉಳಿಯಲಿಲ್ಲ. ಆಗ ಇಂದ್ರಾಣಿಯು, ವಿಧ್ಯುಕ್ತವಾಗಿ ಈ ವ್ರತವನ್ನಾಚರಿಸಿ, ತನ್ನ ಪತಿಯಾದ ಇಂದ್ರನ ಕೈಯಲ್ಲಿ "ರಕ್ಷಾ" ಕಟ್ಟಿದಳು. ಆದರ ಪ್ರಭಾವದಿಂದ ಇಂದ್ರನು ದಾನವರನ್ನು ಸಂಪೂರ್ಣವಾಗಿ ಸೋಲಿಸಿ, ವಿಜಯವನ್ನು ಸಂಪಾದಿಸಿಕೊಂಡನು.

## ಭಾದ್ರಪದ ಮಾಸವು

ಈ ತಿಂಗಳು ವರ್ಷಾಋತುವಿನಲ್ಲಿ ಪ್ರಾಪ್ತವಾಗುತ್ತದೆ. ವಾತಾವರಣವು ಸಾಧಾರಣವಾಗಿ ಶ್ರಾವಣ ಮಾಸದಂತೆಯೇ ಇರುತ್ತದೆ. ಈ ತಿಂಗಳಲ್ಲಿ ಬರತಕ್ಕ ಹಬ್ಬಗಳೆಂದರೆ—ಭಾದ್ರಪದ ಶು. ೪ ಗಣೇಶ ಚತುರ್ಥಿ, ಶು. ೧೪ ಅನಂತ ಚತುರ್ದಶಿ, ಶು. ೧೫ ಉಮಾಮಹೇಶ್ವರ ವ್ರತ ಮತ್ತು ಅನಂತನ ಹುಣ್ಣಿವೆ, ಭಾದ್ರಪದ ಬ. ೮ ಕೃಷ್ಣ ಜನ್ಮಾಷ್ಟಮಿ.

---

# ಗಣೇಶ ಚತುರ್ಥಿ

## ( ಭಾದ್ರಪದ ಶುದ್ಧ ೪ )



'ವಕ್ರತುಂಡ ಮಹಾಕಾಯ ಸೂರ್ಯಕೋಟಿ ಸಮಪ್ರಭ ।
ನಿರ್ವಿಘ್ನಂಕುರುಮೇದೇವ ಶುಭಕಾರ್ಯೇಷು ಸರ್ವದಾ' ॥

'ಗಣಾನಾಂ ಪತಿಃ ಗಣಪತಿಃ' ಪ್ರಮಥಗಣಕ್ಕೆ ಒಡೆಯನಾದುದರಿಂದ 'ಗಣಪತಿಯೆಂದು ಹೆಸರು. ವಿಘ್ನಗಳಿಗೆ ಈಶನಾದುದರಿಂದ ವಿಘ್ನೇಶ್ವರನೆಂದು ಅನ್ನುವುದುಂಟು. ಗಜಮುಖವಿರುವುದರಿಂದ 'ಗಜಾನನನೆಂತಲೂ ಹೇಳುವರು. ವಿಘ್ನೇಶ್ವರನನ್ನು ಸಮಸ್ತ ಶುಭ ಕಾರ್ಯಗಳಲ್ಲಿ ಮಂಗಲ ಮೂರ್ತಿಯೆಂದು ಮೊದಲು ಪೂಜಿಸುವುದುಂಟು. ಆನೆಯ ತಲೆ, ವಿಚಿತ್ರವಾದ ಮಾನವನ ಮೈಕಟ್ಟು ಮೂಷಕ ವಾಹನವುಳ್ಳ ಗಣಪತಿಯನ್ನು ನೋಡಿದರೆ "ಈ ವಿಚಿತ್ರ ಮೂರ್ತಿಯು ದೇವರೋ" ಎಂದು ನಾಸ್ತಿಕರು ಪ್ರಶ್ನಿಸಬಹುದು. ದೇವರು ನಿರಾಕಾರನಾಗಿದ್ದರೂ, ಅನಂತನಾಮ, ರೂಪ, ಕ್ರಿಯೆಯುಳ್ಳವನಾಗಿರುವ

ನೆಂದು ಹಿಂದೂ ಧರ್ಮದ ತತ್ವವಿದೆ. ಗಣಪತಿಯ ಜನ್ಮವನ್ನರಿಯದವರು ಮಾತ್ರ ಹಾಗೆ ಶಂಕಿಸಿದರೆ ವಿಷಾದ ಪಡಬೇಕಾಗಿಲ್ಲ. ಅವನ ಜನ್ಮವು ಹೇಗಾಯಿ ತೆಂದು ತಿಳಿದುಕೊಳ್ಳಲು ಧರ್ಮ ಶಾಸ್ತ್ರದಲ್ಲಿ ಅನೇಕ ಆಧಾರಗಳು ಸಿಕ್ಕುತ್ತವೆ.

ಬಹಳ ಕಾಲದ ಹಿಂದೆ ಗಜಾಸುರನೆಂಬ ಮದೋನ್ಮತ್ತನಾದ ರಾಕ್ಷಸನು ಗೋ-ಬ್ರಾಹ್ಮಣ ಮನು-ಮುನಿಗಳನ್ನು ಪೀಡಿಸುವವನಾಗಿ, ಸಕಲ ದೇವತೆ ಗಳಿಗೆ ಪರಿಪರಿಯಿಂದ ಪೀಡೆಯನ್ನುಂಟು ಮಾಡುತ್ತ ನಮೋ ನವೋ ಮಾಡಿ ಬಿಟ್ಟಿದ್ದನು. ಜಗದ್ರಕ್ಷಕನಾದ ಶ್ರೀ ವಿಷ್ಣುವು ದುಷ್ಟರನ್ನು ನಿಗ್ರಹಿಸಿ, ಶಿಷ್ಟರನ್ನು ಪಾಲಿಸಿ, ಧರ್ಮ ಸಂಸ್ಥಾಪನೆಯ ತನ್ನ ಕರ್ತವ್ಯವನ್ನು ನೆರವೇರಿಸಲು ಜಗಜ್ಜ ನನಿಯಾದ ಪಾರ್ವತಿಯ ಉದರದಲ್ಲಿ ಅವತಾರವೆತ್ತಿ ಆ ದುಷ್ಟನಾದ ಗಜಾ ಸುರನನ್ನು ಸಂಹರಿಸಿದನೆಂದು ಹೇಳುವುದುಂಟು.

ಇನ್ನೊಂದು ಕತೆಯೆಂದರೆ:- ಭಗವಾನ್ ಶಂಕರನು ಗಜಾಸುರನೆಂಬ ರಾಕ್ಷಸನನ್ನು ಸಂಹರಿಸಲು ಹೋದಾಗ್ಗೆ ಪಾರ್ವತಿಯು ಮಣ್ಣಿನ ಮೂರ್ತಿ ಯೊಂದನ್ನು ನಿರ್ಮಿಸಿ ಅದಕ್ಕೆ ಜೀವಕಳೆ ತುಂಬಿ, ದ್ವಾರಪಾಲಕನನ್ನಾಗಿ ಮಾಡಿ, ಒಳಗೆ ಸ್ನಾನಕ್ಕೆ ಹೋದಳು. ಶಿವನು ರಣರಂಗದಿಂದ ಹಿಂತುರುಗಿ ಬರಲು, ಆ ದ್ವಾರಪಾಲಕನು ತಾಯಿಯ ಅಪ್ಪಣೆಯಿಲ್ಲದೆ ಒಳಗೆ ಪ್ರವೇಶವಿಲ್ಲ ವೆಂದು ಬಿರುನುಡಿಯಾಡಿದನು. ಕೋಪಾವಿಷ್ಟನಾದ ಶಂಕರನು, ಅವನ ಶಿರ ಚ್ಛೇದನ ಮಾಡಿ ಒಳಗೆ ಪ್ರವೇಶ ಮಾಡಿದನು. ಈ ಸುದ್ದಿಯನ್ನು ಕೇಳಿದ ಪಾರ್ವತಿಯು ದುಃಖಾಕ್ರಾಂತಳಾಗಲು, ಅವಳ ಸಮಾಧಾನಕ್ಕಾಗಿ ಶಿವನು ತಾನು ಸಂಹರಿಸಿ ತಂದ ಗಜಾಸುರನ ಮಸ್ತಕವನ್ನು ಆ ಕ್ಷಣವೇ ಮೊಂಡ ದೇಹದ ಮೇಲಿರಿಸಿ ಪ್ರಾಣ ಪ್ರತಿಷ್ಠೆ ಮಾಡಿ "ನೀನು ಮಂಗಲ ಮೂರ್ತಿಯಾಗಿ ಸರ್ವ ಶುಭ ಕಾರ್ಯಗಳ ಪ್ರಾರಂಭದಲ್ಲಿ ಪೂಜೆಗೊಳ್ಳುವವನಾಗು" ಎಂದು ವರವನ್ನಿತ್ತನು. ಈ ಪ್ರಕಾರವಾಗಿ, ಭಾದ್ರಪದ ಶುದ್ಧ ಚತುರ್ಥಿಯಲ್ಲಿ ಗಣೇಶ ಜನ್ಮವಾದುದರಿಂದ ಅಂದು ಎಲ್ಲ ಭಾರತೀಯರು ಮನೆ-ಮಠ-ಮಂದಿರಗಳನ್ನು ಸುಣ್ಣಬಣ್ಣಗಳಿಂದಲೂ, ತಳಿರುತೋರಣಗಳಿಂದಲೂ ಶೃಂಗರಿಸಿ ಸುಂದರ ವಾದ ಮಂಟಪದಲ್ಲಿ ಆ ಗಣಪತಿಯ ಮೂರ್ತಿಯನ್ನು ಸ್ಥಾಪಿಸಿ, ಆಹ್ವಾನಿಸಿ ಐದು ದಿವಸಗಳವರೆಗೂ ಷೋಡಶೋಪಚಾರಗಳಿಂದ ಪೂಜಿಸುವರು. ಹೀಗೆ

ಗಣಪತಿಯು ತರತರದ ಭಕ್ಷ್ಯಭೋಜ್ಯ ಪದಾರ್ಥಗಳಿಂದ ಸಂತೃಪ್ತನಾಗಿ, ಮೂಷಕವಾಹನನಾಗಿ ಕೈಲಾಸಕ್ಕೆ ತೆರಳಿದ್ದನಂತೆ. ಮಧ್ಯಮಾರ್ಗದಲ್ಲಿ ಅವನ ವಾಹನವಾದ ಇಲಿಯು ಎಡವಿದ್ದರಿಂದ ಗಣಪತಿಯು ಬಿದ್ದು ಅವನ ಹೊಟ್ಟೆ ಒಡೆದು ಮೋದಕ (ಉಂಡೆ)ಗಳು ಹೊರಬೀಳಲು, ಅವನು ಹೊಟ್ಟೆಗೆ ಹಾವನ್ನು ಬಿಗಿದುಕೊಂಡನಂತೆ. ಇದನ್ನೆಲ್ಲ ನೋಡಿ ಚಂದ್ರನು ಗಹಗಹಿಸಿ ನಕ್ಕನು. ಗಣಪತಿಯು ಆಕ್ರೋಶಗೊಂಡು ಚಂದ್ರನನ್ನು ಕುರಿತು :—"ನೀನು ನನಗೆ ಪರಿಹಾಸ್ಯ ಮಾಡಿದ ಕಾರಣ ನಿನ್ನ ಮುಖವನ್ನು ನೋಡಿದವನು ಕಲಂಕಿಯಾಗಲಿ" ಎಂದು ಶಾಪವನ್ನಿತ್ತನು. ಚಂದ್ರನು ಈ ಪ್ರಕಾರವಾಗಿ ತನಗೆ ಒದಗಿದ ಶಾಪವನ್ನು ಕೇಳಿ ಪಶ್ಚಾತ್ತಾಪದಿಂದ ತನ್ನ ಮುಖವನ್ನು ಕಮಲಗಳ ಗುಂಪಿನಲ್ಲಿ ಮುಚ್ಚಿಕೊಂಡು ಕೂತನು. ಚಂದ್ರನ ಅಭಾವದಿಂದ ದೇವತೆಗಳಲ್ಲಿ ಗಲಭೆಯೆದ್ದಿತು. ಆಗ ಎಲ್ಲರೂ ಬ್ರಹ್ಮದೇವನ ಬಳಿಗೆ ಹೋಗಿ ಈ ಎಲ್ಲ ವಿಷಯವನ್ನು ಅವನಿಗೆ ಅರಿಕೆ ಮಾಡಿಕೊಂಡರು. ಬ್ರಹ್ಮನು ದೇವತೆಗಳನ್ನು ಕುರಿತು-"ಗಣೇಶನ ಪ್ರಸನ್ನತೆಯ ಹೊರತು ಚಂದ್ರನ ಶಾಪವನ್ನೂ, ಕಲಂಕವನ್ನೂ ದೂರ ಮಾಡಲು ಯಾರೂ ಸಮರ್ಥರಿಲ್ಲವು" ಎಂದು ಹೇಳಿ ಗಣೇಶ ಪೂಜೆಯ ವಿಧಿಯನ್ನು ದೇವತೆಗಳಿಗೆ ಬೋಧಿಸಿದನು. ಆ ಮೇಲೆ ಬೃಹಸ್ಪತಿಯು ಗಣೇಶ ಪೂಜಾ ವಿಧಾನವನ್ನು ಚಂದ್ರನಿಗೆ ತಿಳಿಸಿದನು. ಚಂದ್ರನು ವಿಧಿವತ್ತಾಗಿ ಗಣೇಶನನ್ನು ಪೂಜಿಸಿದನು. ಚಂದ್ರನ ಪೂಜೆಯಿಂದಲೂ, ಸ್ತುತಿಯಿಂದಲೂ ಗಣೇಶನು ಪ್ರಸನ್ನನಾದಾಗ್ಯೂ ತಾನು ಕೊಟ್ಟ ಶಾಪವನ್ನು ಸಂಪೂರ್ಣವಾಗಿ ತಿರುಗಿ ತೆಗೆದುಕೊಳ್ಳದೇ ಅದರ ಪ್ರಭಾವವನ್ನು ಪರಿಮಿತವಾಗಿ ಮಾಡಿದನು. "ಕೇವಲ ಒಂದೇ ದಿವಸ ಅಂದರೆ ಭಾದ್ರಪದ ಶುದ್ಧ ಚತುರ್ಥಿಯ ದಿವಸ ಚಂದ್ರನ ಮುಖವನ್ನು ನೋಡಿದವನು ಕಲಂಕಿಯಾಗಲಿ" ಎಂದು ತನ್ನ ಶಾಪವನ್ನು ದೃಢಪಡಿಸಿದನು. ಆದ್ದರಿಂದ ಅಂದಿನ ದಿವಸ ಚಂದ್ರನು ಮುಳುಗುವವರೆಗೂ ಎಷ್ಟೋ ಜನರು ಒಳಗೆ ಕೂತು ಸ್ಯಮಂತಕೋಪಾಖ್ಯಾನವನ್ನು ಕೇಳುತ್ತ ಕಾಲಕಳೆದು ಐದು ಮನೆಗಳಿಗೆ ಹೋಗಿ ಗಣಪತಿಯ ದರ್ಶನವನ್ನು ತೆಗೆದುಕೊಳ್ಳುವರು.

ಗಣೇಶನ ವ್ರತಾಚರಣೆಯಿಂದ ಸಕಲ ಸಿದ್ಧಿಗಳು ಲಭಿಸುವವು. ವೈದಿಕ ಮತಾವಲಂಬಿಗಳು ನಿತ್ಯ ನೈಮಿತ್ತಿಕ ಕಾರ್ಯಗಳಲ್ಲಿ ಇಂದಿಗೂ ಆ ಮಂಗಲ

ಮೂರ್ತಿಯನ್ನು ಮೊದಲು ಸ್ತುತಿಸುವದುಂಟು. ಗಣಪತಿಯ ಪ್ರಾಚೀನ ಮಂದಿರಗಳು ಇಂದಿಗೂ ಅಚ್ಚಳಿಯದೇ ಭಾರತದ ಎಲ್ಲೆಡೆಗಳಲ್ಲಿ ಕಂಗೊಳಿಸುತ್ತವೆ. ಸಾಂಗಲಿಯಲ್ಲಿ ಗಣೇಶ ಮಂದಿರವು ದರ್ಶನೀಯವಾಗಿದೆ. ಹಂಪೆಯಲ್ಲಿಯೂ ಅತ್ಯುನ್ನತವಾದ ಗಣಪತಿಯ ಮೂರ್ತಿಗಳುಂಟು.

ಕುರುಕ್ಷೇತ್ರದಲ್ಲಿ ಕೌರವ – ಪಾಂಡವರ ಯುದ್ಧದಲ್ಲಿ ಶ್ರೀ ಕೃಷ್ಣನು ಪಾಂಡವರನ್ನು ಕುರಿತು :— "ಎಲೈ ಪಾಂಡವರೇ! ನೀವು ಈ ಯುದ್ಧದಲ್ಲಿ ಜಯಶಾಲಿಗಳಾಗಬೇಕಾದರೆ ಗಣೇಶ ಚತುರ್ಥಿಯ ವ್ರತವನ್ನು ಆಚರಿಸಿರಿ ಎಂದು ಬೋಧಿಸಲಾಗಿ, ಪಾಂಡವರು ಶ್ರೀಕೃಷ್ಣನ ಆಜ್ಞೆಯಂತೆ ಗಣೇಶ ಚತುರ್ಥಿಯ ವ್ರತವನ್ನಾಚರಿಸಿ ಯುದ್ಧದಲ್ಲಿ ವಿಜಯಿಗಳಾದರೆಂದು ಮಹಾಭಾರತದಲ್ಲಿ ಉಲ್ಲೇಖಿಸಿದೆ. ಶ್ರೀಕೃಷ್ಣನು ಭಾದ್ರಪದ ಶುದ್ಧ ಚತುರ್ಥಿಯ ದಿವಸ ಚಂದ್ರನನ್ನು ನೋಡಿದ ದೋಷದಿಂದಲೇ ಸ್ಯಮಂತಕಮಣಿಯ ಕಳ್ಳನೆಂಬ ಆರೋಪವನ್ನು ಪಡೆದನು. ಆ ಮೇಲೆ ದೇವರ್ಷಿಯಾದ ನಾರದನ ಉಪದೇಶದಿಂದ ಗಣೇಶ ಚತುರ್ಥಿಯ ವ್ರತವನ್ನಾಚರಿಸಿ ಅಪವಾದದಿಂದ ಮುಕ್ತನಾದನೆಂದು ಸ್ಕಂದಪುರಾಣದ ಉಕ್ತಿಯದೆ.

## ಶ್ರೀಕೃಷ್ಣನು ಗಣೇಶ ಚತುರ್ಥಿಯ ವ್ರತವನ್ನಾಚರಿಸಿದ್ದು

ದ್ವಾರಕಾ ಪಟ್ಟಣದಲ್ಲಿ ಧರ್ಮನಿಷ್ಠನೂ, ಉದಾರಿಯೂ ಆದ ಅಗ್ರಸೇನನೆಂಬ ಯಾದವನಿದ್ದನು. ಅವನಿಗೆ ಸತ್ರಜಿತ ಮತ್ತು ಪ್ರಸೇನನೆಂಬ ಇಬ್ಬರು ಗಂಡುಮಕ್ಕಳಿದ್ದರು. ಸತ್ರಜಿತನು ಒಂದಾನೊಂದು ಸಮಯದಲ್ಲಿ ಸೂರ್ಯದೇವನನ್ನು ಕುರಿತು ಉಗ್ರವಾದ ತಪಸ್ಸನ್ನಾಚರಿಸಿದನು. ಆತನ ತಪಸ್ಸಿಗೆ ಸೂರ್ಯದೇವನು ಪ್ರಸನ್ನನಾಗಿ ಸತ್ರಜಿತನಿಗೆ ಶ್ರೇಷ್ಠವಾದ ಸ್ಯಮಂತಕವೆಂಬ ಹೆಸರಿನ ಮಣಿಯನ್ನು ದಯಪಾಲಿಸಿ ನುಡಿದುದೇನಂದರೆ–"ಈ ಮಣಿಯು ಪ್ರತಿ ದಿವಸ ಪ್ರಾತಃಕಾಲದಲ್ಲಿ ತನಗಿಂತಲೂ ಎಂಟು ಪಟ್ಟು ಒಜ್ಜೆಯುಳ್ಳ ಬಂಗಾರವನ್ನು ಕೊಡುವದು, ಇದನ್ನು ಚನ್ನಾಗಿ ರಕ್ಷಿಸು. ಮತ್ತು ಈ ಸ್ಯಮಂತಕ ಮಣಿಯನ್ನು ಧರಿಸತಕ್ಕ ಮನುಷ್ಯನು ಸದಾಚಾರಿಯೂ, ಪವಿತ್ರ ಮನಸ್ಸುಳ್ಳವನೂ ಆಗಿರಬೇಕು. ಒಂದು ಪಕ್ಷದಲ್ಲಿ ಅಪವಿತ್ರನಾದ ಮನುಷ್ಯನು ಇದನ್ನು ಧರಿಸಿ

ದ್ದಾದರೆ ಏಕಕಾಲದಲ್ಲಿಯೇ ಮರಣ ಹೊಂದುವನು" ಎಂದು ಸೂರ್ಯ ದೇವನು ಅಂತರ್ಧಾನನಾದನು.

ಸತ್ರಾಜಿತನು ಈ ಮಣಿಯನ್ನು ತೆಗೆದುಕೊಂಡು ದ್ವಾರಕಾ ನಗರಕ್ಕೆ ಬಂದನು. ದ್ವಾರಕಾ ನಗರ ನಿವಾಸಿಗಳೆಲ್ಲರೂ ದೇದೀಪ್ಯಮಾನವಾದ ಸ್ಯಮಂತಕ ಮಣಿಯನ್ನು ನೋಡಿ ಸಾಕ್ಷಾತ್ ಸೂರ್ಯನೇ ಭೂಮಿಗೆ ಇಳಿದು ಬಂದಿರುವನೋ ಏನೋ ಎಂದು ಆಶ್ಚರ್ಯದಿಂದ ಮುಗ್ಧರಾದರು. ಒಂದಾನೊಂದು ದಿವಸ ಸತ್ರಾಜಿತನು ಈ ಮಣಿಯನ್ನು ಧರಿಸಿಕೊಂಡು ಶ್ರೀಕೃಷ್ಣನ ಭೆಟ್ಟಿಗೆ ಹೋದನು. ಆಗ ಶ್ರೀಕೃಷ್ಣನು ಸತ್ರಾಜಿತನನ್ನು ನೋಡಿ ಆನಂದಾಶ್ರುಗಳನ್ನು ಸುರಿಸುತ್ತ ಆತನನ್ನು ಯೋಗ್ಯವಾದ ಆಸನದಲ್ಲಿ ಕುಳ್ಳಿರಿಸಿದನು. ಆ ಮಣಿಯನ್ನು ನೋಡಿ, ಶ್ರೀಕೃಷ್ಣನು :— "ಮೂರು ಲೋಕಗಳನ್ನೇ ಬೆಳಗುತ್ತಿರುವ ಇಂಥ ಮಣಿಯನ್ನು ಪಡೆದ ನೀನು ನನಗಿಂತಲೂ ಧನ್ಯನು" ಎಂದು ನುಡಿದನು. ಸತ್ರಾಜಿತನು ಶ್ರೀಕೃಷ್ಣನ ಈ ಪ್ರಕಾರವಾದ ವಿಚಾರವನ್ನು ಕೇಳಿ, ಇವನು ನನ್ನಿಂದ ಬಲಾತ್ಕಾರವಾಗಿ ಈ ಮಣಿಯನ್ನು ಅಪಹರಿಸಬಹುದೆಂದು ಸಂಶಯ ಪಟ್ಟನು. ಈ ಭಯದಿಂದಲೇ ಸತ್ರಾಜಿತನು ಸ್ಯಮಂತಕ ಮಣಿಯನ್ನು ತನ್ನ ತಮ್ಮನಾದ ಪ್ರಸೇನನಿಗೆ ಕೊಟ್ಟು, ಅವನಿಗೆ "ತ್ರಿಕರಣ ಪೂರ್ವಕವಾಗಿ ಪವಿತ್ರವುಳ್ಳವನಾಗಿರು. ಇಲ್ಲವಾದರೆ ಈ ಮಣಿಯು ನಿನ್ನ ಸರ್ವಸ್ವವನ್ನೇ ಹಾಳುಮಾಡುವದಲ್ಲದೇ ಪ್ರಾಣವನ್ನೇ ಸೆಳೆಯುವುದು" ಎಂದು ಪ್ರಸೇನನಿಗೆ ಉಪದೇಶ ಮಾಡಿದನು.

ಒಂದಾನೊಂದು ದಿವಸ ಪ್ರಸೇನನು ಮತ್ತು ಕೃಷ್ಣನು ಉಭಯರೂ ಕೂಡಿ ಬೇಟೆಗಾಗಿ ಅರಣ್ಯಕ್ಕೆ ಹೋದರು. ಸ್ವಲ್ಪದೂರ ಹೋದಮೇಲೆ ಪ್ರಸೇನನು ತಾನು ಸ್ವತಂತ್ರವಾಗಿ ಬೇಟೆಯಾಡುವ ನಿಮಿತ್ತದಿಂದ ಕೃಷ್ಣನನ್ನು ಬಿಟ್ಟು ಬೇರೆ ಮಾರ್ಗವಾಗಿ ಹೋದನು. ಕೆಲವು ಹೊತ್ತಿನಮೇಲೆ ಕೃಷ್ಣನು ಪ್ರಸೇನನನ್ನು ಹುಡುಕಲಾಗಿ ಸಿಗದೇ ಇದ್ದುದರಿಂದ ತಾನೊಬ್ಬನೇ ತಿರುಗಿ ಮನೆಗೆ ಬಂದನು. ಪ್ರಸೇನನು ತಿರುಗಿ ಬಾರದಿದ್ದುದನ್ನು ನೋಡಿ ಸತ್ರಾಜಿತನು ಸಂಶಯ ಪಟ್ಟನಲ್ಲದೇ "ಕೃಷ್ಣನು ನನ್ನ ತಮ್ಮನನ್ನು ಕೊಂದು ಮಣಿಯನ್ನು ಅಪಹರಿಸಿದ್ದಾನೆ"ಂದು ಅನ್ನ ಹತ್ತಿದನು. ದ್ವಾರಕಾವಾಸಿಗಳೆಲ್ಲರೂ ಈ

ಮಾತನ್ನು ಕೇಳಿ ಇದು ನಿಜವಿರಬಹುದೆಂದು ಊಹಿಸತೊಡಗಿದರು. ನಿರ್ಮಲ ಮನಸ್ಸಿನವನಾದ ಕೃಷ್ಣನು ಎಳ್ಳಿನಿತೂ ಭಯಪಡದೇ ತನಗೆ ಬಂದ ಅಪವಾದ ವನ್ನು ದೂರಮಾಡಿಕೊಳ್ಳಲು ಪ್ರಯತ್ನಪಡಬೇಕಾಯಿತು. ಪ್ರಸೇನನ ಸ್ಥಿತಿಯು ಅರಣ್ಯದಲ್ಲಿ ಏನಾಗಿರಬಹುದು ಮತ್ತು ಮಣಿಯನ್ನು ಅಪಹರಿಸಿ ದವರು ಯಾರಿರಬಹುದು ಎಂಬುದನ್ನು ಶೋಧಪಡಿಸಲು ಅವನು ಕೆಲವು ಸಿಪಾಯಿಗಳೊಡನೆ ಅರಣ್ಯಕ್ಕೆ ಹೋದನು. ಶ್ರೀಕೃಷ್ಣನು ಸ್ವಲ್ಪದೂರ ಹೋಗಿ ನೋಡುವಷ್ಟರಲ್ಲಿ ಪ್ರಸೇನನೂ ಮತ್ತು ಆತನ ಕುದುರೆಯೂ ಸತ್ತು ಬಿದ್ದಿರುವದನ್ನು ಕಂಡು ಎಲ್ಲರೂ ದುಃಖಿತರಾದರು. ಆದರೆ ಸ್ಯಮಂತಕ ಮಣಿಯು ಅವನಲ್ಲಿ ದೊರೆಯಲಿಲ್ಲ. ಅಲ್ಲಿ ಸಿಂಹನ ಹೆಜ್ಜೆಗಳು ಮಾತ್ರ ಬಿದ್ದಿದ್ದವು. ಆಗ ಸ್ವಲ್ಪ ಯೋಚಿಸಲಾಗಿ ಸಿಂಹವು ಇವನನ್ನು ಕೊಂದು ಮಣಿಯನ್ನು ಅಪಹರಿಸಿರಬಹುದೆಂದು ನಿಶ್ಚಯಿಸಿದರು. ಮತ್ತು ಸಿಂಹನ ಹೆಜ್ಜೆಗಳನ್ನು ನೋಡುತ್ತಾ, ನೋಡುತ್ತಾ ಎಲ್ಲರೂ ಮುಂದಕ್ಕೆ ಸಾಗಿದರು. ಸ್ವಲ್ಪದೂರ ಹೋದ ಮೇಲೆ ಸಿಂಹವೂ ಸತ್ತು ಬಿದ್ದಿತ್ತು. ಆದರೆ ಮಣಿಯು ಅದರಲ್ಲಿ ದೊರೆಯಲಿಲ್ಲ. ಅಲ್ಲಿ ಎಲ್ಲರೂ ಕುಳಿತು ಸ್ವಲ್ಪ ಯೋಚಿಸುತ್ತ ಅತ್ತಿತ್ತ ನೋಡಲಾಗಿ ಕರಡಿಯ ಹೆಜ್ಜೆಗಳು ಬಿದ್ದಿದ್ದವು. ಆಗ ಕರಡಿಯು ಸಿಂಹನನ್ನು ಕೊಂದು ಮಣಿಯನ್ನು ಅಪಹರಿಸಿಕೊಂಡು ಹೋಗಿದೆಯೆಂದು ನಿಶ್ಚಯಿಸಿ ಕರಡಿಯ ಹೆಜ್ಜೆಗಳನ್ನು ನೋಡುತ್ತಾ ಎಲ್ಲರೂ ಮುಂದಕ್ಕೆ ಸಾಗಿ ದರು. ಕಡೆಗೆ ಒಂದು ಗವಿಯು ಹತ್ತಿತು. ಅದು ಅಂಧಕಾರಮಯವಾಗಿತ್ತು. ಕೃಷ್ಣನು ತನ್ನ ಯಾವತ್ತೂ ಸಿಪಾಯಿಗಳನ್ನು ಗವಿಯ ಬಾಗಿಲಲ್ಲಿರಿಸಿ ತಾನೋರ್ವನೇ ಅಂಧಕಾರಮಯವಾದ ಗವಿಯಲ್ಲಿ ಪ್ರವೇಶ ಮಾಡಿದನು. ಕೃಷ್ಣನು ಎಷ್ಟು ದೂರ ಹೋದರೂ ಅದರ ಅಂತವೇ ತಿಳಿಯದಾಯಿತು. ಆ ಗವಿಯು ಎಂಟುನೂರು ಮೈಲು ದೂರ ಉದ್ದವಿತ್ತು. ಕಡೆಗೆ ಒಂದು ರಾಜ ಸದನ (ರಾಜಮಂದಿರ)ವು ಕೃಷ್ಣನ ಕಣ್ಣಿಗೆ ಬಿತ್ತು.

ಒಳಗೆ ಪ್ರವೇಶಮಾಡಿ ನೋಡಲಾಗಿ ಒಂದು ಕೂಸು ತೊಟ್ಟಿಲಲ್ಲಿ ನಿದ್ರಿಸುತ್ತಿತ್ತು. ಸ್ಯಮಂತಕ ಮಣಿಯು ಆ ಹುಡುಗನ ಆಟಕ್ಕೋಸ್ಕರ ತೊಟ್ಟಿಲಲ್ಲಿ ತೂಗಹಾಕಿತ್ತು. ಮತ್ತು ಓರ್ವ ಸುಂದರ ಕನ್ಯೆಯು ಆ

ತೊಟ್ಟಿಲನ್ನು ತೂಗುತ್ತಾ ಕುಳಿತಿದ್ದಳು. ಆ ಸುಂದರ ಕನ್ಯೆಯ ಕಡೆ ನೋಟವು ಕೃಷ್ಣನ ಮನಸ್ಸನ್ನಾಕರ್ಷಿಸಿತು. ಕನ್ಯೆಯಾದರೂ ಕೃಷ್ಣನ ರೂಪಾತಿಶಯ ವನ್ನು ನೋಡಿ ಮೋಹಿತಳಾದಳು. ಮತ್ತು ಅವಳು ಕೃಷ್ಣನನ್ನು ಕುರಿತು. “ನೀನು ಮಣಿಯನ್ನು ತೆಗೆದುಕೊಂಡು ಹೋಗಲು ಬಂದಿರುವೆಯಾದ್ದರಿಂದ ಅದನ್ನು ತೆಗೆದುಕೊಂಡು ಶೀಘ್ರವಾಗಿ ಇಲ್ಲಿಂದ ಹೊರಟು ಹೋಗು. ಇಲ್ಲಿ ಗಲಭೆಯನ್ನು ಮಾಡಬೇಡ. ಯಾಕಂದರೆ ನನ್ನ ತಂದೆಯಾದ ಜಾಮವಂತನು ನಿದ್ರೆಯಿಂದ ಎಚ್ಚತ್ತು ನಿನ್ನನ್ನು ಕೊಲ್ಲಬಹುದು ಎಂದಳು. ಕೃಷ್ಣನು ಕನ್ಯೆಯ ಮಧುರವಾದ ಮಾತಿನ ಕಡೆಗೆ ಎಳ್ಳಷ್ಟೂ ಲಕ್ಷ್ಯಗೊಡಲಿಲ್ಲ. ಆದರೆ ತನ್ನಲ್ಲಿದ್ದ ಶಂಕವನ್ನು ಜೋರಿನಿಂದ ಊದಿದನು. ಜಾಮವಂತನು ಆ ಘೋರವಾದ ಶಬ್ದದಿಂದ ನಿದ್ರೆಯಿಂದ ಎಚ್ಚತ್ತು ಕೃಷ್ಣನೊಡನೆ ಘೋರವಾದ ಕದನವನ್ನು ಹೂಡಿದನು.

ಅತ್ತ ಗವಿಯ ಬಾಗಿಲಲ್ಲಿ ಕುಳಿತ ಯಾವತ್ತೂ ಜನರಿಗೆ ಕೃಷ್ಣನ ದಾರಿ ಯನ್ನು ನೋಡುತ್ತಾ ಎಷ್ಟೋ ದಿವಸಗಳು ಕಳೆದವು. ಕೃಷ್ಣನು ಬಾರದೇ ಇದ್ದುದನ್ನು ನೋಡಿ ಯುದ್ಧದಲ್ಲಿ ಅವನು ಮಡಿದು ಹೋಗಿರಬಹುದೆಂದು ನಿಶ್ಚಯಿಸಿ ಅವರೆಲ್ಲರೂ ಕೃಷ್ಣನ ಶ್ರಾದ್ಧಕರ್ಮವನ್ನು ಮಾಡಿದರು.

ಗವಿಯಲ್ಲಿ ಜಾಮವಂತ ಮತ್ತು ಕೃಷ್ಣ ಉಭಯರಿಗೆ ಇಪ್ಪತ್ತೊಂದು ದಿವಸ ಘೋರ ಯುದ್ಧವು ನಡೆಯಿತು. ಕೊನೆಗೆ ಕೃಷ್ಣನು ಜಾಮವಂತನನ್ನು ಸೋಲಿಸಿದನು. ಜಾಮವಂತನು ಕೃಷ್ಣನ ಪರಾಕ್ರಮವನ್ನು ನೋಡಿ ಸಂತೋಷಭರಿತನಾಗಿ ಅವನಿಗೆ ತನ್ನ ಕನ್ಯೆಯನ್ನು ಕೊಡುವದಲ್ಲದೆ ಆ ಮಣಿ ಯನ್ನು ವರದಕ್ಷಿಣೆಯನ್ನಾಗಿ ಕೊಟ್ಟನು. ಕೃಷ್ಣನು ಜಾಮವಂತಿಯನ್ನು ಮಣಿಸಹಿತವಾಗಿ ತೆಗೆದುಕೊಂಡು ದ್ವಾರಕಾಪುರಿಗೆ ತಿರುಗಿ ಬಂದನು. ಯಾದವರ ಸಭೆಯನ್ನು ಕೂಡಿಸಿ ಹಿಂದೆ ನಡೆದ ಯಾವತ್ತೂ ವೃತ್ತಾಂತವನ್ನು ಸವಿಸ್ತಾರವಾಗಿ ಅಲ್ಲಿ ಹೇಳಿದನು. ಮತ್ತು ಸತ್ರಜಿತನಿಗೆ ಸ್ಯಮಂತಕ ಮಣಿ ಯನ್ನು ತಿರುಗಿಕೊಟ್ಟನು. ಸತ್ರಜಿತನು ಅವಿಚಾರದಿಂದ ಕೃಷ್ಣನಿಗೆ ಅಪವಾದ ವನ್ನು ಕೊಟ್ಟ ಬಗ್ಗೆ ಬಹಳ ಪಶ್ಚಾತ್ತಾಪ ಹೊಂದಿ ಕ್ಷಮೆ ಬೇಡಿಕೊಂಡನು. ಮತ್ತು ತನ್ನ ಮಗಳಾದ ಸತ್ಯಭಾಮಾ ಎಂಬ ಕನ್ಯೆಯನ್ನು ಕೃಷ್ಣನ ಸಂಗಡ

ವಿವಾಹ ಮಾಡಿಕೊಟ್ಟನು. ಸತ್ರಾಜಿತನು ಕೃಷ್ಣನಸಂಗಡ ಮಿತ್ರಭಾವದಿಂದ ಇರಹತ್ತಿದನು. ಸತ್ರಾಜಿತನು ಸ್ಯಮಂತಕ ಮಣಿಯನ್ನು ಹೊಂದಿ ಸುಖದಿಂದ ಇರುತ್ತಿರುವಲ್ಲಿ ಆ ಮಣಿಯನ್ನು ಅಪಹರಿಸಬೇಕೆಂದು ಎಷ್ಟೋ ದಿವಸಗಳಿಂದ ಹವಣಿಸಿಕೊಂಡು ಕೂತಿದ್ದ ಶತಧನ್ವ ಮತ್ತು ಅಕ್ರೂರ ಎಂಬವರು ಸತ್ರಾಜಿತ ನನ್ನು ಕೊಂದು ಮಣಿಯನ್ನು ತೆಗೆದುಕೊಂಡು ಎಲ್ಲಿಯೋ ಮಾಯವಾದರು. ಆ ಸಮಯದಲ್ಲಿ ಕೃಷ್ಣನು ಹಸ್ತಿನಾಪುರದಲ್ಲಿದ್ದನು. ಸತ್ರಾಜಿತನ ಮಗಳಾದ ಸತ್ಯಭಾಮೆಯು ಕೃಷ್ಣನಲ್ಲಿಗೆ ಹೋಗಿ ತನ್ನ ತಂದೆಯ ಮರಣವನ್ನೂ ಮತ್ತು ಸ್ಯಮಂತಕ ಮಣಿಯನ್ನು ಅಪಹರಿಸಿದ ಸಂಗತಿಯನ್ನೂ ವಿಶದವಾಗಿ ತಿಳಿಸಿದಳು.

ಆಗ ಕೃಷ್ಣ ಮತ್ತು ಬಲರಾಮ ಇವರಿಬ್ಬರೂ ಶತಧನ್ವನನ್ನು ಕೊಲ್ಲಲು ಅವನನ್ನು ಹುಡುಕಹತ್ತಿದರು. ಈ ಸುದ್ದಿಯನ್ನು ಕೇಳಿ ಶತಧನ್ವನು ತನ್ನಲ್ಲಿದ್ದ ಮಣಿಯನ್ನು ಅಕ್ರೂರನಿಗೆ ಕೊಟ್ಟು ಅವನನ್ನು ಕಾಶೀ ಪಟ್ಟಣ (ಬನಾರಸ)ಕ್ಕೆ ಓಡಿಸಿದನು. ಮತ್ತು ತಾನು ದಕ್ಷಿಣ ದೇಶಕ್ಕೆ ಹೊರಟನು. ಕೃಷ್ಣನು ಶತ ಧನ್ವನ ಬೆನ್ನು ಹತ್ತಿ ಅವನನ್ನು ಹಿಡಿದು ಕೊಂದನು. ಆದರೆ ಅವನಲ್ಲಿ ಮಣಿಯು ದೊರೆಯಲಿಲ್ಲ. ಆತನು ದ್ವಾರಕಾ ನಗರಕ್ಕೆ ತಿರುಗಿ ಬಂದು ಯಾದವರಿಗೆ ಶತಧನ್ವನ ಮರಣದ ಸಂಗತಿಯನ್ನೂ ಮಣಿಯ ಅಭಾವವನ್ನೂ ತಿಳಿಸಿದನು. ಆಗ ನಗರವಾಸಿಗಳಿಗೂ ಮತ್ತು ಬಲರಾಮನಿಗೂ, ಕೃಷ್ಣನು ಮಣಿಯನ್ನು ದುರಾಶೆಯಿಂದ ತನ್ನಲ್ಲಿಟ್ಟುಕೊಂಡಿದ್ದಾನೆಂಬ ಸಂಶಯವು ಉದ್ಭವಿಸಿತು. ಈ ಸಮಾಚಾರವನ್ನು ತಿಳಿದು ಕೃಷ್ಣನಿಗೆ ಬಹಳ ದುಃಖ ವೆನಿಸಿತು. ಅವನು ಇದೇ ಚಿಂತೆಯಲ್ಲಿ ಕುಳಿತಿರಲಾಗಿ ಅಲ್ಲಿಗೆ ನಾರದ ಮಹರ್ಷಿಯು ಬಂದನು. ಆಗ ಕೃಷ್ಣನು ನಾರದನಿಗೆ ತನ್ನ ದುಃಖದ ಸಂಗತಿ ಯನ್ನು ತಿಳಿಸಿದನು. ನಾರದನು ಕೃಷ್ಣನನ್ನು ಕುರಿತು "ನೀನು ಭಾದ್ರಪದ ಶುದ್ಧ ಚತುರ್ಥಿಯ ದಿವಸ ಚಂದ್ರನನ್ನು ನೋಡಿರುತ್ತೀ, ಆದಕಾರಣ ನಿನ್ನ ಮೇಲೆ ಈ ಪ್ರಕಾರವಾದ ಕಲಂಕವು ಬಂದಿದೆ. ಮತ್ತು ನೀನು ಈ ಅಪವಾದ ದಿಂದ ಮುಕ್ತನಾಗಬೇಕಾದರೆ ಗಣೇಶನನ್ನು ವಿಧಿವತ್ತಾಗಿ ಪೂಜಿಸು" ಎಂದು ನುಡಿದನಲ್ಲದೇ ಚಂದ್ರನು ವಿಘ್ನೇಶ್ವರನಿಂದ ಶಾಪಗ್ರಸ್ತನಾದುದನ್ನೂ ಪುನಃ ಅವನಿಂದ ವಿಮೋಚನೆಯಾದುದನ್ನೂ ತಿಳಿಸಿ, ವಿಘ್ನೇಶ್ವರ ವ್ರತಾಚರಣೆಯ

ನಿಯಮವನ್ನು ಹೇಳಿಕೊಟ್ಟನು. ಆ ಪ್ರಕಾರವಾಗಿ ಶ್ರೀ ಕೃಷ್ಣನು ನಾರದನ ಆದೇಶದಂತೆ ಗಜಾನನ ವ್ರತವನ್ನಾಚರಿಸಿ ಅಪವಾದದಿಂದ ಮುಕ್ತನಾದನು.

ನದಿಮೂಲ, ಋಷಿಮೂಲ, ದೇವಮೂಲ, ಶಾಸ್ತ್ರ–ಪುರಾಣಗಳ ಮೂಲವನ್ನು ಕಂಡವರಾರು? ಕಥೆಗಳ ವಿಷಯವೇನೇ ಇರಲಿ ಗಣೇಶನ ಜನ್ಮ ವಾದುದು ಭಾದ್ರಪದ ಚತುರ್ಥಿಯ ದಿನ. ಇದು ಭಗವಾನ್ ಶಂಕರನು ದುಷ್ಟನಾದ ಗಜಾಸುರನನ್ನು ಸಂಹರಿಸಿ, ಜಗತ್ ಕಲ್ಯಾಣ ಮಾಡಿದ ಸುದಿನ ವಾದ್ದರಿಂದ ಎಲ್ಲರೂ ಆ ಮಂಗಲಮೂರ್ತಿಯ ಸ್ಮಾರಕವನ್ನು ಆಚರಿಸುವುದು ಪವಿತ್ರ ಕರ್ತವ್ಯವಾಗಿದೆ.

## ಅನಂತಚತುರ್ದಶಿ (ಭಾದ್ರಪದ ಶುದ್ಧ ೧೪)

ಮಾನವನು ಪರಮಾತ್ಮನ ಸಾನಿಧ್ಯ ಪಡೆಯಬೇಕಾದರೆ ಕಷ್ಟದಿಂದಲೇ ಸಾಧ್ಯ. ಶ್ರೀಮಂತಿಕೆಯ ಸುಪ್ಪತಿಕೆಯಲ್ಲಿ ಸುಖವಾಗಿ ಶಯನ ಮಾಡಿದರೆ ಸಾಧ್ಯವಿಲ್ಲೆಂಬುದನ್ನು ನಮ್ಮ ಹಿಂದಿನ ಮಹಾತ್ಮರು ಬೋಧಿಸಿರುವರಲ್ಲದೇ ದೊಡ್ಡ ದೊಡ್ಡ ಗ್ರಂಥಗಳನ್ನು ಬರೆದೂ ಪ್ರಸಿದ್ಧಗೊಳಿಸಿದ್ದಾರೆ. ಆ ರೀತಿಯಾಗಿ ಪರಮಾತ್ಮನ ಸಾಮಿಪ್ಯ ಹೊಂದಬೇಕಾದರೆ ಅವರು ಹೇಳಿದ ವ್ರತ, ಉಪೋಷಣೆಗಳನ್ನು ಪಾಲಿಸಬೇಕಾಗುವುದು. ಶುದ್ಧ ಮನಸ್ಕನಾಗಿ ಭಗವಂತನನ್ನು ಧ್ಯಾನಿಸಬೇಕು. ದುಷ್ಕರ್ಮಗಳನ್ನು ದೂರ ಮಾಡಬೇಕು. ಸತ್ಯ–ಅಹಿಂಸೆ ಯಿಂದ ನಡೆಯಬೇಕು.

ಸ್ತ್ರೀಯು ಪತಿಯನ್ನು ಸೇವಿಸಿ, ಒಲಿಸಿ ಅವನೊಡನೆ ತಾನೂ ಪಾರ ಮಾರ್ಗದೆಡೆಗೆ ಹೋಗುವಂತೆ ಪ್ರಯತ್ನಿಸಬೇಕು. ಇದು ಪತಿವ್ರತೆಯಾದ ಸ್ತ್ರೀಗೆ ಸಾಧ್ಯವೆಂಬುದನ್ನು ಹಲವಾರು ಹಿಂದಿನ ಚರಿತ್ರೆ, ಪುರಾಣ, ಪುಣ್ಯ ಕಥೆಗಳ ಮೂಲಕ ತಿಳಿದುಕೊಳ್ಳಬಹುದು.

ಇಂದು ನಮ್ಮ ಹಿಂದೂ ಜನತೆಯು ಒಲವು ಧಾರ್ಮಿಕ ಶ್ರದ್ಧೆಯ ಕಡೆಗೆ ನಿರ್ಲಕ್ಷ್ಯವಾಗಿದೆ. ಅನೇಕ ರಾಜಕೀಯ – ಸಾಮಾಜಿಕ ಕಾರಣಗಳಿಂದ ಆ ಭಾವನೆಯು ನಶಿಸಿ ಹೋಗಹತ್ತಿದೆ. ಇಂಥ ದಾರುಣ ಪರಿಸ್ಥಿತಿಯಲ್ಲಿಯೂ

ನಮ್ಮ ಮಾತೆಯರಲ್ಲಿ ಧಾರ್ಮಿಕ ಭಾವನೆ ಅಳಿದಿಲ್ಲ. ಅವರು ಇನ್ನಿಷ್ಟು ಜಾಗ್ರತರಾದರೆ ಮಾತ್ರ ಸನಾತನ ಧರ್ಮಕ್ಕೆ ಪೂರ್ಣ ಕಳೆಯೇರುವುದೆಂಬುದ ರಲ್ಲಿ ಸಂದೇಹವಿಲ್ಲ. ಇದಕ್ಕೆ ಗುರಿಯಾಗಿಟ್ಟು ಭವಿಷ್ಯೋತ್ತರ ಪುರಾಣದಲ್ಲಿ ಈ "ಅನಂತಚತುರ್ದಶಿ"ಯ ಮಹತ್ವವನ್ನು ವಿಶದೀಕರಿಸಲಾಗಿದೆ.

ಪೂರ್ವಕಾಲದಲ್ಲಿ ಪಾಂಡವರು ರಾಜ್ಯ ಕಳೆದುಕೊಂಡು ವನವಾಸದಲ್ಲಿ ದುಃಖಪಡುತ್ತಿರುವಾಗ ಶ್ರೀ ಕೃಷ್ಣಪರಮಾತ್ಮನು ಅವರ ಯೋಗಕ್ಷೇಮ ವಿಚಾರಿಸಲು ಹೋದನು. ಆಗ ಧರ್ಮರಾಜನು ತಮ್ಮ ಕಷ್ಟ ನಿವಾರಣೆ ಯಾಗಲು ಶ್ರೀ ಕೃಷ್ಣನನ್ನು ಮೊರೆಯಿಟ್ಟನು. ಆಗ ಶ್ರೀ ಕೃಷ್ಣನು ಬೋಧಿ ಸಿದುದೇನಂದರೆ— "ಯುಧಿಷ್ಠಿರಾ! ಸರ್ವ ವ್ರತಗಳಲ್ಲಿ ಅನಂತವ್ರತವು ಶ್ರೇಷ್ಠವಾಗಿದೆ. ಅದು ಶೀಘ್ರವಾಗಿ ಫಲ ಕೊಡುವುದು. ಆ ವ್ರತದಲ್ಲಿಯ ಅನಂತನು ನಾನೇ ಆಗಿದ್ದೇನೆ. ಮಾನವ ಪ್ರಾಣಿಯ ಕಷ್ಟ ಪರಿಹಾರಕ್ಕಾಗಿ ನಾನೇ ನಾರಾಯಣನಾಗಿ ಅವತರಿಸಿರುವೆ. ಚಂದ್ರ-ಸೂರ್ಯರು, ಸಪ್ತ ಸಮುದ್ರವು, ಭೂಮಿಯ ಮೇಲಿನ ತರುಗುಲ್ಮ, ಆಕಾಶದಲ್ಲಿ ಮಿನುಗುವ ನಕ್ಷತ್ರ ಹೀಗೆ ಅಣು-ರೇಣುಗಳಲ್ಲಿ ನಾನೇ ವ್ಯಾಪಿಸಿರುವೆನು. ಪ್ರತಿ ವರುಷ ಭಾದ್ರಪದ ಶುದ್ಧ ಚತುರ್ದಶಿಯ ದಿವಸ ನನ್ನನ್ನು ಅನಂತನೆಂದು ಪೂಜಿಸಿದರೆ ನಿನ್ನ ಇಷ್ಟಾರ್ಥವೆಲ್ಲ ಪರಿಪೂರ್ಣವಾಗುವುದೆಂದು" ಶ್ರೀ ಕೃಷ್ಣ ಪರಮಾತ್ಮನು ಧರ್ಮರಾಜನಿಗೆ ಬೋಧಿಸಿದನು.

ಆಗ ಧರ್ಮರಾಜನು— "ಭಗವಂತಾ! ಈ ವ್ರತವನ್ನು ಹಿಂದೆ ಯಾರು ಆಚರಿಸಿದರು. ಮತ್ತು ಅದರ ವಿಧಾನವನ್ನು ದಯವಿಟ್ಟು ಬೋಧಿಸ ಬೇಕೆಂದು" ಪ್ರಾರ್ಥಿಸಿದನು.

ಆಗ ಶ್ರೀ ಕೃಷ್ಣನು— "ರಾಜನೇ! ಕೃತಯುಗದಲ್ಲಿ 'ಸುಮಂತು' ಎಂಬ ಭಗವದ್ಭಕ್ತನಿದ್ದನು. ಅವನಿಗೆ 'ದೀಕ್ಷೆ' ಎಂಬ ಹೆಂಡತಿ. ಅವಳು ಒಂದು ಹೆಣ್ಣು ಕೂಸಿಗೆ ಜನ್ಮವಿತ್ತು ತೀರಿಹೋದಳು. ಆ ಕನ್ಯೆಗೆ 'ಸುಶೀಲೆ' ಎಂದು ನಾಮಕರಣ ಮಾಡಿದರು. ಕೆಲವು ದಿನಗಳು ಗತಿಸಲು ಸುಮಂತುವಿಗೆ ತನ್ನ ಕರ್ಮಾನುಷ್ಠಾನಗಳಿಗೆ ವ್ಯತ್ಯಯ ಬರಹತ್ತಿತು. ಆಗ ಅವನು

'ಕರ್ಕಶೆ' ಎಂಬ ಕನ್ಯೆಯೊಡನೆ ವಿವಾಹವಾದನು. ಹೆಸರಿಗೆ ತಕ್ಕಂತೆ ಅವಳು ಕರ್ಕಶೆಯಾಗಿದ್ದಳು. ಆಕೆ ತನ್ನ ಮಲಮಗಳೊಡನೆ ಕಾರಣವಿಲ್ಲದೆ ಅನುದಿನವೂ ಕಲಹ ಮಾಡುತ್ತಿದ್ದಳು. ಇದನ್ನು ನೋಡಿ ಸುಮಂತುವಿಗೆ ಬಹಳ ಖೇದ ವೆನಿಸಿತು. ಸುಶೀಲೆಯಾದ ತನ್ನ ಮಗಳಿಗೆ ಹೆಂಡತಿಯು ಹಿಂಸಿಸುವುದು ಸರಿದೋರಲಿಲ್ಲ. ಅವನು 'ಪ್ರಾಪ್ತ ವಯಸ್ಕಳಾದ ತನ್ನ ಮಗಳನ್ನು ಮದುವೆ ಮಾಡಿ ಕೊಡುವುದು ಉತ್ತಮವೆಂದು' ಆಲೋಚಿಸಿ, ಯೋಗ್ಯ ವರನನ್ನು ಶೋಧಿಸಿ, ಕೌಂಡಿಣ್ಯನೆಂಬ ಯೋಗ್ಯ ತರುಣನಿಗೆ ಕನ್ಯಾದಾನ ಮಾಡಿ ಕೊಟ್ಟನು.

ಆಷಾಢ, ಶ್ರಾವಣ ಮಾಸಗಳು ಪ್ರಾಪ್ತವಾದುದರಿಂದ ಮಗಳನ್ನು ವ ಅಳಿಯನನ್ನು ಸುಮಂತು ಮನೆಯಲ್ಲಿ ಇಟ್ಟುಕೊಂಡನು. ಹೆಂಡತಿಯ ಕಲಹವು ಶಾಂತವಾಗದೆ ದಿನದಿನವೂ ಬೆಳೆಯುತ್ತಲೇಯಿತ್ತು. ಕೌಂಡಿಣ್ಯ ಅತ್ತೆಯ ನಡೆತೆಗೆ ಬೇಸತ್ತು ಹೋದನು. ಅವನು ಒಂದು ದಿನ ಮಾವನಿಗೆ— "ಈಗ ಆಷಾಢ, ಶ್ರಾವಣ ಮಾಸಗಳು ಕಳೆದುಹೋದವು. ನಾನು ನನ್ನ ಸತಿ ಯೊಡನೆ ಇಲ್ಲಿಯೇ ಸಮೀಪದಲ್ಲಿ ಬೇರೆ ಆಶ್ರಮವನ್ನು ಕಟ್ಟಿಕೊಂಡು ಇರುವೆನು" ಎಂದು ವಿನಯಪೂರ್ವಕ ಕೇಳಿಕೊಂಡನು. ಆಗ ಸುಮಂತು— "ಭಾದ್ರಪದ ಶುದ್ಧ ತ್ರಯೋದಶಿಯನಂತರ ಹೋಗಬಹುದೆಂದು" ಹೇಳಿದನು. ಆಗ ಕೌಂಡಿಣ್ಯನು ನಿರುಪಾಯನಾಗಿ ಮಾವನ ಮನೆಯಲ್ಲಿಯೇ ಉಳಿದುಕೊಂಡನು. ತ್ರಯೋದಶಿಯು ಬಂದಿತು. ಕೌಂಡಿಣ್ಯನುಹೆಂಡತಿ ಯೊಡನೆ ಹೊರಟುನಿಂತನು. ಆಗ ಸುಮಂತು ತನ್ನ ಹೆಂಡತಿಗೆ— "ಮಗಳು ಗಂಡನ ಮನೆಗೆ ಪ್ರಯಾಣ ಮಾಡುವಳು. ಅವಳಿಗೆ ಉಡಿತುಂಬಿ, ಬೇಕಾದ ಸೀದಾ ಸಾಮಗ್ರಿಗಳನ್ನು ಉಡಿಗೆ-ತೊಡಿಗೆಗಳನ್ನು ಕೊಟ್ಟು ಕಳುಹಿಸು" ಎಂದು ನುಡಿದನು. ಆಗ ಅವಳು ಮನೆಯಲ್ಲಿದ್ದ ಎಲ್ಲ ಸಾಮಗ್ರಿಗಳನ್ನು ಒಂದು ಕೋಣೆಯಲ್ಲಿಟ್ಟು ಅದರಲ್ಲಿ ತಾನೂ ಕುಳಿತು ಬಾಗಿಲು ಮುಚ್ಚಿಕೊಂಡು ಮಲಗಿಕೊಂಡಳು. ಸುಮಂತು ತನ್ನ ಹೆಂಡತಿಯ ಈ ದುರ್ನಡತೆಯನ್ನು ನೋಡಿ ಧಿಃಕರಿಸಿ, ಅಡಿಗೆಯ ಮನೆಯಲ್ಲಿ ಅತ್ತಿತ್ತ ನೋಡಿದನು. ಯಾವ ವಸ್ತುವೂ ಇದ್ದಿಲ್ಲ. ಒಂದುಕಡೆ ಮೂಲೆಯಲ್ಲಿ ಗೋದಿಯ ತೌಡಿನ ರಾಶಿಮಾತ್ರ ಇತ್ತು. ಅದನ್ನೇ

ತಂದು ಮಗಳ ಉಡಿಯಲ್ಲಿ ಹಾಕಿ ಬಹಳ ದುಃಖದಿಂದ ಮಗಳನ್ನೂ-ಅಳಿಯನನ್ನೂ ಬೀಳ್ಕೊಟ್ಟನು.

ಮಧ್ಯಾಹ್ನದ ಸಮಯ. ಕೌಂಡಿಣ್ಯನ ಬಂಡಿ ಒಂದು ನದಿಯ ತೀರಕ್ಕೆ ಬಂದಿತು. ಅಲ್ಲಿ ಬಂಡಿಯನ್ನು ನಿಲ್ಲಿಸಿ, ಕೌಂಡಿಣ್ಯನು ಇಳಿದು ನದಿಯಲ್ಲಿ ಸ್ನಾನ ಮಾಡಿ, ಅನುಷ್ಠಾನ ಮಾಡಹತ್ತಿದನು.

ಸುಶೀಲೆಯು ಅಲ್ಲಿಯೇ ಅತ್ತಿತ್ತ ತಿರುಗಾಡುತ್ತಿದ್ದಳು. ಅಲ್ಲಿ ಅವಳಿಗೊಂದು ರಮ್ಯವಾದ ವನವು ಕಂಡಿತು. ಆ ವನದಲ್ಲಿ ಕೆಲವು ಸುವಾಸಿನಿಯರು 'ಅನಂತ'ನ ವ್ರತ ನಡೆಸಿದ್ದರು. ಸುಶೀಲೆ ಅವರಿದ್ದಲ್ಲಿಗೆ ಹೋಗಿ "ತಾಯೀ ನೀವಾವ ವ್ರತವನ್ನು ನಡೆಸಿರುವಿರಿ? ಇದನ್ನು ಮಾಡುವದರಿಂದ ಫಲವೇನು?" ಎಂದು ಅಲ್ಲಿ ನೆರೆದ ಸುಮಂಗಲೆಯರನ್ನು ಕೇಳಿದಳು. ಆಗ ಅವರು— "ನಾವು ಮಾಡುತ್ತಿರುವುದು 'ಅನಂತ'ನ ವ್ರತವು. ಈ ವ್ರತಾಚರಣೆಯಿಂದ ಸಕಲ ಶಿರಿಯು ಸದ್ಯದಲ್ಲಿಯೇ ಸಿಗುವದು' ಎಂದು ಹೇಳಿದರು. ಸುಶೀಲೆಯು ತಾನೂ ಆ ವ್ರತವನ್ನು ಮಾಡಲು ಇಚ್ಛೆಯುಳ್ಳವಳಾದಳು. ಅವಳ ಕೋರಿಕೆಯಂತೆ ಆ ಸುಮಂಗಲೆಯರು ವಿಧಿಪೂರ್ವಕವಾಗಿ ಸುಶೀಲೆಯಿಂದ ವ್ರತವನ್ನು ಮಾಡಿಸಿದರು. ಸುಶೀಲೆ ಭಕ್ತಿಪೂರ್ವಕ ವ್ರತವನ್ನು ಆಚರಿಸಿ ಅನಂತನ ದಾರವನ್ನು ಕೊರಳಲ್ಲಿ ಧರಿಸಿಕೊಂಡು ತನ್ನ ಪತಿಯಿದ್ದೆಡೆಗೆ ಬಂದಳು. ಕೌಂಡಿಣ್ಯನು ತನ್ನ ಅನುಷ್ಠಾನವನ್ನು ಪೂರೈಸಿಕೊಂಡು ಬಂದನು. ಉಭಯರೂ ಬಂಡಿಯಲ್ಲಿ ಕುಳಿತು ಪುನಃ ಪ್ರಯಾಣಿಸಿದರು.

ತುಸು ಮುಂದೆ ಸಾಗುವದರೊಳಗಾಗಿ ಇಂದ್ರನ ಅಮರಾವತಿಯನ್ನು ಹೋಲುವ ಒಂದು ರಮಣೀಯವಾದ ಪಟ್ಟಣವು ಅವರಿಗೆ ಕಾಣಿಸಿತು. ಆ ಪಟ್ಟಣದಿಂದ ಕೌಂಡಿಣ್ಯನಿಗೆ ಎದುರಾಗಿ ವಾದ್ಯವೈಭವದೊಡನೆ ಒಂದು ಮೆರವಣಿಗೆಯು ಬಂದಿತು. ಅದರಲ್ಲಿಯ ಪ್ರಮುಖರು ಕೌಂಡಿಣ್ಯದ ಬಂಡಿಯ ಸಮೀಪಕ್ಕೆ ಬಂದು ಕೌಂಡಿಣ್ಯನಿಗೆ ನಮಸ್ಕರಿಸಿ, "ಮಹಾ ತಪಸ್ವಿಗಳಾದ ಕೌಂಡಿಣ್ಯ ಮಹಾಮುನಿಗಳೇ! ನೀವು ನಮ್ಮ ರಾಜ್ಯದ ಅರಸರು. ಅದೋ ಎದುರಿನಲ್ಲಿ ಕಾಣುವದು ನಿಮ್ಮ ರಾಜಧಾನಿ. ಹಾಗೂ ಉನ್ನತವಾಗಿಯೂ ಮನೋಹರವಾಗಿಯೂ ಕಾಣುವ ಆ ಸುಂದರವಾದ ಮಂದಿರವೇ ನಿಮ್ಮ

ಅರಮನೆ. ಮಹಾನುಭಾವರಾದ ತಾವು ನಗರ ಪ್ರವೇಶ ಮಾಡಿ ಪ್ರಜೆಗಳನ್ನು ಪುತ್ರರೋಪಾದಿಯಲ್ಲಿ ರಕ್ಷಿಸಬೇಕು" ಎಂಬುದಾಗಿ ಪ್ರಾರ್ಥಿಸಿ, ದಂಪತಿಗಳನ್ನು ರಥದಲ್ಲಿ ಕುಳ್ಳಿರಿಸಿಕೊಂಡು ಮೆರವಣಿಗೆಯಿಂದ ಅರಮನೆಗೆ ಕರೆದುಕೊಂಡು ಹೋದರು. ಕೌಂಡಿಣ್ಯನು ಅಂದಿನಿಂದ ರಾಜ್ಯದಾಡಳಿತೆಯನ್ನು ಕೈಯಲ್ಲಿ ತೆಗೆದುಕೊಂಡು ಸುಖವಾಗಿ ಸಿಂಹಾಸನದಲ್ಲಿರುತ್ತಿರಲು ಕೆಲವು ದಿವಸಗಳಲ್ಲಿಯೇ ಅವನ ಸಿರಿಸಂಪತ್ತು ಸಮೃದ್ಧಿಯಾಯಿತು. ಹೀಗಿರುವಾಗ ಒಂದು ದಿನ ಕೌಂಡಿಣ್ಯ ತನ್ನ ಅರಮನೆಯ ಅಂತಃಪುರದಲ್ಲಿ ಸತಿಯೊಡನೆ ವಿಲಾಸಮಗ್ನನಾಗಿರುವಾಗ ಸುಶೀಲೆಯ ಕೊರಳಲ್ಲಿರುವ ಅನಂತನ ದಾರವನ್ನು ನೋಡಿ, "ಇದೇನು ಕಟ್ಟಿಕೊಂಡಿರುವೆ" ಎಂದು ಕೇಳಿದನು. ಆಗ ಸುಶೀಲೆ ಆ ದಾರದ ವಿಚಾರವಾಗಿ ಯಾವತ್ತೂ ಸಂಗತಿಯನ್ನು ಹೇಳಿದಳಲ್ಲದೆ "ನಮಗೆ ಇಷ್ಟೆಲ್ಲ ಸಿರಿಸಂಪತ್ತು ದೊರೆತುದು ಆ ಅನಂತನ ಅನುಗ್ರಹದಿಂದ" ಎಂದು ಹೇಳಿದಳು. "ವಿನಾಶಕಾಲೇ ವಿಪರೀತ ಬುದ್ಧಿಃ" ಎಂಬ ನಾಣ್ಣುಡಿಯಂತೆ ಕೌಂಡಿಣ್ಯ ತನ್ನ ಹೆಂಡತಿ ಹೇಳಿದುದನ್ನು ನಂಬದೇ "ಇದು ಪತಿ ವಶೀಕರಣ ದಾರವು. ಇದನ್ನು ಧರಿಸಿಕೊಂಡು ನನ್ನನ್ನು ಮರಳು ಮಾಡಲು ಪ್ರಯತ್ನಿಸುತ್ತಿರುವೆ" ಎಂದು ಕೋಪದಿಂದ ಗರ್ಜಿಸುವವನಾಗಿ ಅವಳ ಕೊರಳಲ್ಲಿರುವ ದಾರವನ್ನು ಕಿತ್ತುಕೊಂಡು ಬೆಂಕಿಯಲ್ಲಿ ಎಸೆದನು. ಆ ಕೂಡಲೇ ಸುಶೀಲೆ ದುಃಖದಿಂದ ಬೆಂಕಿಯಲ್ಲಿ ಹಾಲು ಹೊಯ್ದು ಆರಿಸಿ ದಾರವನ್ನು ಪುನಃ ಕಟ್ಟಿಕೊಂಡಳು.

ಕೌಂಡಿಣ್ಯನ ಈ ದುಷ್ಕೃತಿಯ ಪರಿಣಾಮ ಅಂದಿನಿಂದಲೇ ಪ್ರಾರಂಭವಾಯಿತು. ಮರುದಿನವೇ ವೈರಿಗಳು ಅವನ ರಾಜ್ಯವನ್ನು ಮುತ್ತಿ ಸಕಲ ಸಿರಿಯನ್ನು ಸುಲಿಗೆ ಮಾಡಿದರಲ್ಲದೆ ರಾಜ ಸಿಂಹಾಸನವನ್ನು ಸಹ ಇವನಿಂದ ಕಸಿದುಕೊಂಡರು. ಅಲ್ಲದೇ ಅವನ ಸರ್ವಾಧಿಕಾರವನ್ನು ಅಪಹರಿಸಿದರು. ದರಿದ್ರನಾದ ಕೌಂಡಿಣ್ಯ ಸತಿಯೊಡನೆ ಅತ್ಯಂತ ಸಂತಾಪದಿಂದ ರಾಜಧಾನಿಯನ್ನು ತೊರೆದು ತಿರುಕನಂತೆ ಹೊರಟುಹೋಗಿ ಅಡವಿಯನ್ನು ಸೇರಿದನು. ಆಗ ಸುಶೀಲೆ ಮನಮರುಗಿ ಗಂಡನಿಗೆ ಹೇಳಿದುದೇನಂದರೆ – "ಸ್ವಾಮೀ ! ಈಗ ನಾವು ಅನುಭವಿಸುತ್ತಿರುವ ಯಾತನೆ ಅನಂತನ ಅನಕೃಪೆಯೆಂದು ತಿಳಿಯಿರಿ. ಅಂದು ನನ್ನ ಕೊರಳಲ್ಲಿಯ ಅನಂತನ ದಾರವನ್ನು ನೀವು ಹರಿದು

ಬೆಂಕಿಯಲ್ಲಿ ಹಾಕಿದ ಪ್ರತಿಫಲವಾಗಿ ನಾವು ಈಗ ಇಂಥ ದುರ್ದೆಶೆಯಲ್ಲಿ ಇರಬೇಕಾಗಿದೆ" ಎಂದು ನುಡಿದಳು. ಆಗ ಕೌಂಡಿಣ್ಯ "ಹಾಗಾದರೆ ಇಂದೇ ನಾನು ನಿಶ್ಚಯವಾಗಿ ಅನಂತನನ್ನು ಕಾಣುವೆ. ಆತನಲ್ಲಿ ಕ್ಷಮೆ ಬೇಡುವೆ. ಅವನು ದರ್ಶನ ಕೊಡದಿದ್ದರೆ, ಅವನಿಗಾಗಿ ಪ್ರಾಣಾರ್ಪಣ ಮಾಡುವೆ"ಎಂದು ನಿರ್ಧರಿಸಿ ಅತ್ತಿತ್ತ ಸುತ್ತಾಡಹತ್ತಿದನು. ಭೆಟ್ಟಿಯಾದವರನ್ನೆಲ್ಲ ಅನಂತನೆಲ್ಲಿ ? ಎಂದು ಕೇಳುತ್ತ ಮುಂದಕ್ಕೆ ಸಾಗಿದನು.

ಹೀಗೆ ಕಂಡಕಂಡವರನ್ನು ಅನಂತನೆಲ್ಲಿ? ಅನಂತನೆಲ್ಲಿ? ಎಂದು ಕೇಳುತ್ತ ಫಲಭರಿತವಾದ ಒಂದು ವೃಕ್ಷವನ್ನು, ಅಡವಿಯಲ್ಲಿ ಬೆಳೆದು ನಿಂತ ಹುಲ್ಲನ್ನು ತಿನ್ನದಿರುವ ಒಂದು ಎತ್ತನ್ನೂ ಯಾರಿಗೂ ಉಪಯೋಗವಾಗದಿರುವ ನೀರಿನಿಂದ ತುಂಬಿದ ಕೆರೆಗಳನ್ನೂ, ಒಂದು ಆನೆಯನ್ನೂ, ಒಂದು ಕತ್ತೆಯನ್ನೂ ಅನಂತನೆಲ್ಲಿ? ಎಂದು ಪ್ರಶ್ನಿಸಿದನು. ಆಗ ಅವುಗಳೆಲ್ಲವೂ "ನಾವು ಅನಂತ ನನ್ನು ನೋಡಿಲ್ಲ. ಅವನನ್ನು ನೀನೇ ದಯವಿಟ್ಟು ತಂದು ತೋರಿಸಿ, ನಮ್ಮನ್ನು ಉದ್ಧಾರಮಾಡೆಂ''ದು ಹೇಳಿದವು. ಕೌಂಡಿಣ್ಯನು ಕೊನೆಗೆ ನಿರುಪಾಯನಾಗಿ ಪ್ರಾಣ ನೀಗಲು ನಿರ್ಧರಿಸಿದನು. ಆಗ ಓರ್ವ ಸಂತನು ಬಂದು, "ಕೌಂಡಿಣ್ಯನೇ! ನಿನಗೆ ಅನಂತನನ್ನು ತೋರಿಸುವೆ. ನನ್ನೊಡನೆ ಬಾ" ಎಂದು ಅವನನ್ನು ಒಂದು ಪರ್ವತದ ಗುಹೆಗೆ ಕರೆದುಕೊಂಡು ಹೋಗಿ, ಅಲ್ಲಿ ಮಹಾನುಭಾವ ನಾದ ಆ ಸಾಧುವು "ನಾನೇ ಅನಂತನೆಂ''ದು ತನ್ನ ನಿಜ ಸ್ವರೂಪವನ್ನು ತೋರಿಸಿದನು. ಆಗ ಕೌಂಡಿಣ್ಯ ಅನಂತನ ರೂಪವನ್ನು ನೋಡಿ ನಮಸ್ಕರಿಸಿ ಅನನ್ಯ ಭಾವದಿಂದ ಅವನನ್ನು ಸ್ತುತಿಸಿದನು. ತನ್ನ ಪ್ರಮಾದದ ಬಗ್ಗೆ ಕ್ಷಮೆ ಬೇಡಿದನು. ಆಗ ಅನಂತನು ಪ್ರಸನ್ನಚಿತ್ತನಾಗಿ, ಕೌಂಡಿಣ್ಯನಿಗೆ ಧರ್ಮಬುದ್ಧಿ, ದಾರಿದ್ರ್ಯನಾಶ, ಶಾಶ್ವತ ವೈಕುಂಠವಾಸ ಈ ಮೂರು ವರಗಳನ್ನು ಅನುಗ್ರಹಿಸಿ ದನು'' ಎಂಬುದಾಗಿ ಶ್ರೀಕೃಷ್ಣನು ಧರ್ಮರಾಜನಿಗೆ ಹೇಳಿದನು. ಶ್ರೀಕೃಷ್ಣನ ಉಪದೇಶದಂತೆ ಧರ್ಮರಾಜನು ಅನಂತನ ವ್ರತವನ್ನು ವಿಧಿ ಪುರಸ್ಸರವಾಗಿ ನೆರವೇರಿಸಿ, ಕಳೆದುಕೊಂಡ ರಾಜ್ಯವನ್ನು ಪುನಃ ಪಡೆದುಕೊಂಡನು.

ಪುಣ್ಯ ಭೂಮಿಯಾದ ಭಾರತದಲ್ಲಿ ಆಸೇತು ಹಿಮಾಚಲದ ವರೆಗೆ ಈ ವ್ರತವು ಆಚರಿಸಲ್ಪಡುವದು. ಸರ್ವರೂ ತಮ್ಮ ಶಕ್ತ್ಯಾನುಸಾರ ಈ ವ್ರತವನ್ನು ಆಚರಿಸಿ ಅನಂತನ ಕೃಪೆಗೆ ಪಾತ್ರರಾಗಬೇಕು.

# ಉಮಾ—ಮಹೇಶ್ವರ ವ್ರತ
## ( ಭಾದ್ರಪದ ಶುದ್ಧ ಪೂರ್ಣಿಮಾ )



ಈ ವ್ರತವು ಭಾದ್ರಪದ ಶುದ್ಧ ಅನಂತನ ಹುಣ್ಣಿವೆಯ ದಿನ ಆಚರಿಸಲ್ಪಡುತ್ತದೆ. ಭಗವಾನ್ ಶಂಕರನ ಆರಾಧನೆಯೇ ಈ ವ್ರತದ ವೈಶಿಷ್ಟ್ಯವಾಗಿದೆ. ಈ ಬಗ್ಗೆ ಮತ್ಸ್ಯ ಪುರಾಣದಲ್ಲಿ ಉಕ್ತವಾದ ಒಂದು ಕಥೆಯುಂಟು.

ಪರಮ ಶಿವಭಕ್ತನಾದ ದೂರ್ವಾಸ ಋಷಿಯು ಒಂದು ದಿನ ರಮ್ಯವಾದ ನದೀ ತೀರದಲ್ಲಿ ಹಾಯ್ದು ಬರುತ್ತಿರುವ ಸಮಯದಲ್ಲಿ ಶ್ರೀ ವಿಷ್ಣುವು ಎದುರಿಗೆ ಬಂದನು. ಆಗ ಋಷಿಯು ತನಗೆ ಶಿವನಿಂದ ಆಶೀರ್ವದಿಸಲ್ಪಟ್ಟ ಬಿಲ್ವ ಪತ್ರಿಯ ಮಾಲೆಯನ್ನು ವಿಷ್ಣುವಿಗೆ ಅರ್ಪಿಸಿದನು. ಅವನು ಆ ಮಾಲೆಯನ್ನು ತೆಗೆದುಕೊಂಡು ತನ್ನ ವಾಹನವಾದ ಗರುಡನ ಬೆನ್ನಮೇಲೆ ಇಟ್ಟನು. ಈ ರೀತಿಯಾಗಿ ವಿಷ್ಣುವು ಶಿವ ಪ್ರಸಾದದಲ್ಲಿ ಅನಾದರವುಳ್ಳವನಾದುದರಿಂದ ಋಷಿಯು ಕೋಪಾವಿಷ್ಟನಾಗಿ "ಎಲೋ ನಿನ್ನ ಲಕ್ಷ್ಮಿಯು ಕ್ಷೀರಸಮುದ್ರದ ಪಾಲಾಗಲಿ, ಗರುಡನು ವಿನಾಶ ಹೊಂದಲಿ; ವೈಕುಂಠ ಸ್ಥಾನದಿಂದ ನೀನು ಚ್ಯುತನಾಗಿ ಘೋರ ಅರಣ್ಯದಲ್ಲಿ ತಿರುಗುವವನಾಗು" ಎಂದು ಶಾಪವಿತ್ತನು. ಋಷಿಯ ಶಾಪವನ್ನು ಕೇಳುತ್ತಲೇ ವಿಷ್ಣುವು ನಿಸ್ತೇಜನಾದನು. ಲಕ್ಷ್ಮಿಯೂ

ಸಕಲ ಶಿರಿಯೂ ಕ್ಷೀರಸಾಗದಲ್ಲಿ ಮುಳುಗಿದವು. ಗರುಡನು ಅದೃಶ್ಯನಾದನು. ಅವನು ಏನೂ ತಿಳಿಯದವನಾಗಿ ಘೋರಾರಣ್ಯದಲ್ಲಿಯೂ, ಗಿರಿಕಂದಕ ಗಳಲ್ಲಿಯೂ ತಿರುಗಹತ್ತಿದನು.

ಹೀಗಿರುತ್ತಿರಲು ಅಕಸ್ಮಾತ್ ಒಂದು ದಿನ ಅದೇ ಅರಣ್ಯದಲ್ಲಿ ದೈವ ವಶಾತ್ ವಿಷ್ಣುವಿಗೆ ಗೌತಮ ಮುನಿಯ ದರ್ಶನವಾಯಿತು. ಋಷಿಯನ್ನು ನೋಡುತ್ತಲೇ ವಿಷ್ಣುವಿಗೆ ಕಷ್ಟದಿಂದ ಕಂಠವು ಬಿಗಿಯಿತು. ತನಗೆ ಒದಗಿದ ದುರ್ದೆಶೆಯನ್ನೂ, ಅದರ ಕಾರಣವನ್ನೂ ಗದ್ಗದ ಸ್ವರದಿಂದ ಅವರಿಗೆ ಅರುಹಿ ದನು. ಆಗ ಗೌತಮ ಮುನಿಯು ವಿಷ್ಣುವಿಗೆ ಉಮಾ-ಮಹೇಶ್ವರ ವ್ರತಾ ಆಚರಣೆಯ ನಿಯಮವನ್ನು ತಿಳಿಸಿಕೊಟ್ಟನು. ಆ ಪ್ರಕಾವಾಗಿ ವಿಷ್ಣುವು ವಿಧಿವತ್ತಾಗಿ ವ್ರತವನ್ನಾಚರಿಸಲು, ಕಳೆದು ಹೋದ ತನ್ನ ವೈಕುಂಠ ಸ್ಥಾನ ವನ್ನು ಪಡೆದು, ಮೊದಲಿನಂತೆ ಲಕ್ಷ್ಮೀಸಂಪನ್ನನಾದನು.

## ಕೃಷ್ಣ—ಜನ್ಮಾಷ್ಟಮಿ (ಗೋಕುಲಾಷ್ಟಮಿ)
## (ಭಾದ್ರಪದ ಬಹುಳ ಅಷ್ಟಮಿ)



ದ್ವಾಪರಯುಗದಲ್ಲಿ ಶೂರಸೇನನೆಂಬರಾಜನು, ಮಥುರಾ ನಗರವನ್ನು ಮುಖ್ಯ ರಾಜಧಾನಿಯನ್ನಾಗಿ ಮಾಡಿಕೊಂಡು, ಶೂರಸೇನ ದೇಶಗಳನ್ನು

ಸುಖವಾಗಿ ಆಳುತ್ತಿದ್ದನು. ಅವನಿಗೆ ವಸುದೇವನೆಂಬ ಸದ್ಗುಣಸಂಪನ್ನನಾದ ಮಗನಿದ್ದನು. ಅವನ ವಿವಾಹವು ಭೋಜ ಕುಲದ ಉಗ್ರಸೇನನ ಮಗಳಾದ ಅರ್ಥಾತ್ ಕಂಸನ ತಂಗಿಯಾದ ದೇವಕಿಯೊಡನೆ ಅತ್ಯಂತ ವೈಭವದೊಡನೆ ನೆರವೇರಿತು. ಕಂಸನು ತನ್ನ ಪ್ರೀತಿಯ ತಂಗಿಯಾದ ದೇವಕಿಯನ್ನು ಬೀಳ್ಕೊಡುವ ಉದ್ದೇಶದಿಂದ ರಾಜವೈಭವದೊಡನೆ ಹೊರಟನು. ಮಾರ್ಗ ಮಧ್ಯದಲ್ಲಿ ಹೋಗುತ್ತಿರುವಾಗ ಅವನಿಗೆ ಆಕಾಶವಾಣಿಯು – "ಎಲೋ ಕಂಸಾ ನಿನ್ನ ತಂಗಿಯನ್ನು ಸಂಭ್ರಮದಿಂದ ಅವಳ ಪತಿಗೃಹಕ್ಕೆ ಕಳುಹಿಸಲು ಹೊರಟಿರುವಿಯೋ ! ಅವಳ ಗರ್ಭದಿಂದ ಜನಿಸಿದ ಎಂಟನೆಯ ಮಗನು ನಿನ್ನ ಮರಣಕ್ಕೆ ಕಾರಣನಾಗುವನು"ಎಂದು ಕೇಳಿಸಿತು. ಅಶರೀರವಾಣಿಯು ಕಂಸನಿಗೆ ಸಿಡಿಲುಹೊಡೆದಂತಾಯಿತು. ಕೂಡಲೇ ಅವನು ತನ್ನ ತಂಗಿಯನ್ನು ಕೊಂದುದಾದರೆ ತನಗಾಗುವ ಮರಣ ತಪ್ಪುವುದೆಂದು ಆಲೋಚಿಸಿ ಒರೆಯಿಂದ ಖಡ್ಗವನ್ನು ಹಿರಿದು, ಅವಳನ್ನು ಕೊಲ್ಲಲುದ್ಯುಕ್ತನಾದನು. ಇದನ್ನೆಲ್ಲ ಸಖೇದಾಶ್ಚರ್ಯದಿಂದ ನೋಡುತ್ತ ನಿಂತಿದ್ದ ವಸುದೇವನು ತನ್ನ ಮನದಲ್ಲಿ – "ಕಂಸನು ಮಹಾ ಕ್ರೂರನಾಗಿರುವನು. ತನ್ನ ತಂದೆಯಾದ ಉಗ್ರಸೇನನನ್ನು ಕಾರಾಗೃಹದಲ್ಲಿರಿಸಿ ರಾಜ್ಯವನ್ನಾಳಿದವನಾಗಿರುವನು." ದೇವಕಿಯನ್ನು ಈಗ ಕೊಲ್ಲದೇ ಬಿಡುವುದಿಲ್ಲ. ಆದರೂ ಇವನ ಸಿಟ್ಟನ್ನು ಶಮನ ಮಾಡಬೇಕೆಂದು ಆಲೋಚಿಸಿದವನಾಗಿ ಕಂಸನಿಗೆ ಉಪದೇಶ ಮಾಡಲಾರಂಭಿಸಿದನು – "ಭೋಜಕುಲಾವತಂಸನಾದ ಕಂಸನೇ ! ನಿನ್ನ ಶೌರ್ಯ ಔದಾರ್ಯಾದಿ ಗುಣಗಳ ಬಗ್ಗೆ ಸಕಲ ವೀರಾಧಿವೀರರು ಅತ್ಯಂತ ಗೌರವ ಆದರವುಳ್ಳವರಾಗಿರುವರು. ಇದರಿಂದಾಗಿ ನಿನ್ನ ಉಜ್ವಲವಾದ ವರ್ಚಸ್ಸು ದಿಗಂತದಲ್ಲಿ ವ್ಯಾಪ್ತವಾಗುತ್ತಲಿದೆ. ಹೀಗಿರುವಾಗ ಸ್ತ್ರೀವಧೆಯು ಅದರಲ್ಲಿಯೂ ನಿನ್ನ ತಂಗಿಯ ವಧೆಯು ಈ ಸಂಭ್ರಮದ ಸಮಯದಲ್ಲಿ ಅಯೋಗ್ಯವಾಗುವುದು. ಒಂದು ವೇಳೆ ನೀನು ಕೊಲೆಗೆ ಸಿದ್ಧನಾದುದಾದರೆ, ನಿನಗೂ, ನಿನ್ನ ಕುಲಕ್ಕೂ ಕಲಂಕಬಾರದಿರಲಾರದು. ಸ್ತ್ರೀ ಹತ್ಯೆಯಿಂದ ನೀನು ಅಪಕೀರ್ತಿಗೆ ಗುರಿಯಾಗುವುದು ಒತ್ತಟ್ಟಿಗಿರಲಿ, ಪರಲೋಕದಲ್ಲಿ ನೀನು ಮಹಾ ಯಾತನೆಯನ್ನು ಅನುಭವಿಸಲೇಬೇಕಾಗುವುದು. ಈ ಶರೀರವು ನಶ್ವರವಾದುದು. ಮರಣವು ಯಾರಿಗೂ ತಪ್ಪಿದ್ದಲ್ಲ. ಇಲ್ಲಿಯ ವರೆಗೆ

ಯಾವನೂ ಸ್ಥಿರವಾಗಿ ಜೀವಿಸಿಲ್ಲ. ಹುಟ್ಟುವಾಗಲೇ ಮಾನವನು ಮರಣ ವನ್ನು ಬೆನ್ನಿಗೆ ಕಟ್ಟಿಕೊಂಡೇ ಬರುತ್ತಾನೆ" ಈ ಪ್ರಕಾರವಾಗಿ ವೇದಾಂತ ತತ್ವವನ್ನು, ಜನನ ಮರಣಗಳ ಮರ್ಮವನ್ನು, ಪಾಪ ಪುಣ್ಯಗಳ ವಿಚಾರ ವನ್ನು ವಿಶದವಾಗಿ ಉಪದೇಶಿಸಿದನು.

ಕಂಸನಿಗೆ ವಸುದೇವನ ಬೋಧೆಯು ಕಹಿಯಾಗಿ ಪರಿಣಮಿಸಿತು. ಅವನಿಗೆ ತಲೆಯಲ್ಲಿ ಹುಳಗಳು ಬಿದ್ದಂತಾಗಿ ದಿಗ್ಭ್ರಾಂತನಾದನು. ಸನ್ನಿಪಾತ ಜ್ವರಪೀಡಿತನಂತೆ ತನ್ನ ವಿಚಾರವನ್ನೇ ಜಪಿಸಹತ್ತಿದನು. ವಸುದೇವನು ಈ ಆಪತ್ಕಾಲದಿಂದ ಪಾರಾಗುವ ಹಾದಿಯನ್ನೇ ಹುಡುಕುತ್ತಿರುವಾಗ ಅವನಿ ಗೊಂದು ಉಪಾಯವು ಹೊಳೆಯಿತು.

ಆಗ ಅವನು ಕಂಸನನ್ನು ಕುರಿತು– "ಕಂಸಾ, ದೇವಕಿಯಿಂದ ನಿನಗಾವ ಭಯವೂ ಇಲ್ಲ. ಗಂಡಾಂತರದಿಂದ ನೀನು ಪಾರಾಗಲೆಂದೇ ಆಕಾಶವಾಣಿಯು ಮುನ್ಸೂಚನೆ ಮಾಡಿದೆ. ಒಂದು ವೇಳೆ ನೀನು ಮರಣ ಹೊಂದಿದರೆ ನನಗಾಗುವ ಲಾಭವಾದರೂ ಯಾವುದು ? ನಿನ್ನನ್ನಗಲಿದರೆ ನಾನಾದರೂ ದುಃಖಿಯಾಗಬೇಕಾಗುವುದು. ನಾನು ಸದಾ ನಿನ್ನ ಹಿತವನ್ನೇ ಬಯಸುತ್ತೇನೆ. ದೇವಕಿಯು ಎಂಟನೆಯ ಗರ್ಭದಿಂದ ನಿನಗೆ ಭಯವಿದೆಯಷ್ಟೇ ! ಆದರೆ ಅವಳ ಗರ್ಭದಿಂದ ಜನಿಸಿದ ಮಕ್ಕಳನ್ನು ನಿನ್ನ ಸ್ವಾಧೀನ ಮಾಡಿದರೆ ನೀನು ತೃಪ್ತಿ ಹೊಂದುವೆಯಷ್ಟೇ ? ಈ ರೀತಿಯಾದ ಕರಾರಿನಿಂದ ಈ ನಿನ್ನ ಬಡತಂಗಿಗೆ ಜೀವದಾನ ಮಾಡು" ಎಂದು ಬೇಡಿಕೊಂಡನು. ಕಂಸನಿಗೆ ಈ ಮಾತು ಸಮಂಜಸವೆನಿಸಿತಾದುದರಿಂದ ವಸುದೇವ–ದೇವಕಿಯರನ್ನು ತತ್‌ಕ್ಷಣವೇ ಬಂಧಿಸಿ ಕಾರಾಗೃಹದಲ್ಲಿರಿಸಿ ಭದ್ರವಾದ ಕಾವಲಿಟ್ಟನು.

ಗೋಕುಲದಲ್ಲಿ ನಂದ ಮೊದಲಾದ ಗವಳಿಗರೂ, ವಸುದೇವನ ಬಂಧು-ಬಳಗ ಇಷ್ಟಮಿತ್ರರೆಲ್ಲರೂ ದುರ್ಬಲರಾಗಿದ್ದರಾದುದರಿಂದ ಅವರೆಲ್ಲರೂ ಕಂಸನ ಕೈಗೊಂಬೆಯಾಗಿದ್ದರು. ಅವರು ಪರಾಧೀನರಾಗಿದ್ದರೂ ಕಂಸನ ಕೊಲೆಯಲ್ಲಿ ಗುಪ್ತ ಕಾರಸ್ಥಾನವನ್ನು ನಡೆಸೇ ಇದ್ದರು. ಇದಾವುದೂ ಕಂಸನಿಗೂ, ಅವನ ಬಂಧುಬಳಗಕ್ಕೂ ಎಳ್ಳನಿತು ತಿಳಿದಿರಲಿಲ್ಲ. ಕಂಸನು ತನ್ನ ಬಾಹುಬಲದಿಂದ ತ್ರಿಲೋಕಗಳನ್ನು ನಡುಗಿಸುವವನಾಗಿದ್ದನಲ್ಲದೇ ಅರಿಷ್ಟ,

ಪತನ, ಬಕಾಸುರ, ಮೊದಲಾದ ತನ್ನ ಬಲಿಷ್ಠ ಬಳಗದವರನ್ನೂ, ಭೌಮ್ಯ, ಬಾಣಾಸುರ ಮೊದಲಾದ ದಾನವ ವೀರರನ್ನೂ ಕೂಡಿಕೊಂಡು ಯಾದವ ಕುಲವನ್ನು ನಿರ್ಮೂಲ ಮಾಡಬೇಕೆಂಬ ವಿಚಾರದಲ್ಲಿದ್ದನು.

ಯಾದವ ಕುಲದವರೆಲ್ಲರೂ ನಂದಾದಿ ಗವಳಿಗರೊಡನೆ ಸೇರಿ ತಾವೆಲ್ಲರೂ ಸಂಕಷ್ಟದಿಂದ ಪಾರಾಗಲು ಶ್ರೀ ವಿಷ್ಣುವಿಗೆ ಮೊರೆಹೊಕ್ಕರು. "ಪರಿತ್ರಾಣಾಯ ಸಾಧೂನಾಂ" ಎಂಬಂತೆ ವಿಷ್ಣುವು ದುಷ್ಟ ನಿಗ್ರಹಮಾಡಿ ಶಿಷ್ಟರನ್ನು ಪರಿಪಾಲಿಸಿ ಲೋಕಕ್ಕೆ ಶಾಂತಿಯನ್ನುಂಟುಮಾಡುವ ತನ್ನ ಕರ್ತವ್ಯವನ್ನು ನೆರವೇರಿಸುವುದಕ್ಕಾಗಿ ಸಿದ್ಧನಾದನು. ನಂದನ ಸತಿಯಾದ ಯಶೋದಾ ದೇವಿಯ ಗರ್ಭದಲ್ಲಿ ತನ್ನ ಯೋಗಮಾಯೆಗೆ ಜನಿಸಲು ಆಜ್ಞಾಪಿಸಿ, ತಾನು ಕಾರಾಗ್ರಹದಲ್ಲಿರುವ ವಸುದೇವನ ಸತಿಯಾದ ದೇವಕಿಯ ಗರ್ಭದಲ್ಲಿ ಮಧ್ಯ ರಾತ್ರಿಯ ಸಮಯಕ್ಕೆ ಜನ್ಮವೆತ್ತಿದನು. ಅದೇಸಮಯಕ್ಕೆ ಯೋಗಮಾಯೆಯು ಯಶೋದೆಯ ಗರ್ಭದಲ್ಲಿ ಮಾಯಾದೇವಿಯು ಜನಿಸಿದಳು. ಕಂಸನ ದುಷ್ಕೃತ್ಯಕ್ಕೆ ಅಂಜಿದ ವಸುದೇವನು ಕಾರಾಗ್ರಹದಲ್ಲಿ ಹುಟ್ಟಿದ ಕೃಷ್ಣನನ್ನು ಮಧ್ಯರಾತ್ರಿ ಯಲ್ಲಿಯೇ ಗೋಕುಲಕ್ಕೆ ಒಯ್ದು ಯಶೋದೆಗೆ ಕೊಟ್ಟು, ಅವಳಿಂದ ಜನಿಸಿದ ಮಾಯಾದೇವಿಯನ್ನು ತಂದು ದೇವಕಿಗೆ ಕೊಟ್ಟನು. ಈ ಮೊದಲೇ ಏಳು ಕೂಸುಗಳನ್ನು ಕೊಂದ ಕಂಸನು ಈ ಕೂಸನ್ನು ಕೊಲ್ಲಲು ಬಂದೊಡನೆ ದೇವಕಿಯು – "ಅಣ್ಣಾ, ಇದು ಹೆಣ್ಣುಕೂಸು. ಇವಳು ನಿನಗೆ ಸೋದರ ಸೊಸೆಯಲ್ಲವೇ ! ಇವಳನ್ನು ಕೊಂದು ಶಿಶುಹತ್ಯೆ, ಸ್ತ್ರೀಹತ್ಯೆ ಪಾಪವನ್ನು ಕಟ್ಟಿಕೊಳ್ಳಬೇಡ" ಎಂದು ಹಲವು ವಿಧವಾಗಿ ದೀನವಾಣಿಯಿಂದ ಬೇಡಿ ಕೊಂಡಳು. ಕ್ರೂರನಾದ ಕಂಸನಿಗೆ ದಯೆ ಬರಲಿಲ್ಲ. ಅವನು ಕೂಸನ್ನು ಕೈಯಲ್ಲಿ ಹಿಡಿದುಕೊಂಡು, ನೆಲಕ್ಕೆ ಅಪ್ಪಳಿಸಬೇಕೆಂದು ಮೇಲಕ್ಕೆತ್ತಿದಾಗ ಆ ಕೂಸು ಕೊಸರಿಕೊಂಡು ಆಕಾಶಕ್ಕೆ ಜಿಗಿದು ಹೊರಟುಹೋಯಿತು. ಹೋಗುವಾಗ ಆ ಕೂಸು — "ಅಧಮಾ ಕಂಸಾ, ನಿನ್ನನ್ನು ಕೊಲ್ಲಲು ಶತ್ರುವು ಈ ಮೊದಲೇ ಜನಿಸಿರುವನು. ಅವನು ಬೆಳೆಯುತ್ತಿರುವನು, ಬಹು ಎಚ್ಚರಿಕೆ" ಎಂದು ಮಾಯವಾಯಿತು. ಇದನ್ನು ಕಂಡು ಕಂಸನು ಸಖೇದಾಶ್ಚರ್ಯವುಳ್ಳವನಾದನು. ಶ್ರೀಕೃಷ್ಣನು ಗೋಕುಲದಲ್ಲಿ ಹೇಗೆ ಬೆಳೆದನು. ಅವನು ಕಂಸನನ್ನು ಹೇಗೆ ಕೊಂದನು. ಇತ್ಯಾದಿ ವಿಷಯವನ್ನು

ಮಹಾಭಾರತದ ಓದುಗರು ಅರಿಯದಿರಲಾರರು. ಭಾದ್ರಪದ ಬಹುಳ ಅಷ್ಟಮಿಯ ಅರ್ಧರಾತ್ರಿಯಲ್ಲಿ ರೋಹಿಣೀ ನಕ್ಷತ್ರದ ಮೇಲೆ ಶ್ರೀಕೃಷ್ಣನ ಜನ್ಮ ವಾದುದರಿಂದ ಆ ದಿನವು ಹಬ್ಬವಾಗಿ ಭಾರತದ ಬಹು ಭಾಗದಲ್ಲಿ ಭಕ್ತಿ, ಗೌರವಾದರಗಳೊಡನೆ ಆಚರಿಸಲಾಗುವುದು.

## ಆಶ್ವೀಜ ಮಾಸ

ಆಶ್ವೀಜ ಮಾಸವು ಶರದ್ ಋತುವಿನಲ್ಲಿ ಬರುತ್ತದೆ. ಹಿಂದಿನ ವರ್ಷಾ ಋತುವಿನಲ್ಲಿ ಆಕಾಶವು ಮೋಡಗಳಿಂದ ಆಚ್ಛಾದಿತವಾಗಿದ್ದು ಈ ಋತುವಿನಲ್ಲಿ ಅವುಗಳಿಲ್ಲ ಇಲ್ಲದಂತಾಗುವುದರಿಂದ ಸೂರ್ಯನ ಕಿರಣಗಳು ಒಮ್ಮೆಲೇ ಪ್ರಖರ ವಾಗುತ್ತವೆ. ಈ ಕಾರಣದಿಂದ ಪಿತ್ತವು ಪ್ರಕೋಪ ಹೊಂದುತ್ತದೆ.

"ಸರ್ಪಿಃಸ್ವಾದುಕಷಾಯತಿಕ್ತಕರಸಾಯಚ್ಛೀತಲಂ ಯಲ್ಲಘು ॥"

ಅಂದರೆ ಆಶ್ವೀಜ ಮಾಸದ (ಶರತ್ ಋತುವಿನ)ಲ್ಲಿ ವೃದ್ಧಿ ಹೊಂದಿದ ಪಿತ್ತಶಮನಕ್ಕಾಗಿ ಘೃತಮಿಶ್ರಿತವಾದ ಮಧುರಾಹಾರವನ್ನು ಮತ್ತು ಕಷಾಯ, ತಿಕ್ತರಸಪ್ರಧಾನವಾದ ಆಹಾರವನ್ನು ಸೇವಿಸಬೇಕೆಂದು ಆರೋಗ್ಯಶಾಸ್ತ್ರದ ಆದೇಶವಿದೆ. ಈ ತಿಂಗಳಲ್ಲಿ ಮನುಷ್ಯನು ತನ್ನ ಆರೋಗ್ಯ ರಕ್ಷಣೆಗಾಗಿ ಬೆಲ್ಲ, ಸಕ್ಕರೆ, ತುಪ್ಪ, ಗೋದಿ, ಜವೆಗೋದಿ, ಹೆಸರು, ಅಕ್ಕಿ ಇವುಗಳಿಂದ ತಯಾರಿಸಿದ ಆಹಾರವನ್ನು ವಿಶೇಷತಃ ಸೇವಿಸುವುದು ಉತ್ತಮ. ಈ ಶರದೃತುವಿನಲ್ಲಿ ಅಂಶೂದಕವು ಆರೋಗ್ಯದಾಯಕವೆಂದು ಆಯುರ್ವೇದ ಶಾಸ್ತ್ರವು ಹೇಳುತ್ತದೆ.

"ದಿವಾರವಿಕರೈರ್ಜುಷ್ಟಂ ನಿಸಿಶೀತಕರಾಂಶುಭಿಃ ।
ಜ್ಞೇಯಮಂಶೂದಕಂ ನಾಮಸ್ನಿಗ್ಧಂ ದೋಷತ್ರಯಾಪಹಂ ॥"

ಹಗಲು ಸೂರ್ಯನ ತೇಜಸ್ಸಿನಿಂದಲೂ, ರಾತ್ರಿ ಚಂದ್ರನ ಕಿರಣ ಗಳಿಂದಲೂ ನಿರ್ದೋಷವಾದ ನೀರಿಗೆ ಅಂಶೂದಕವೆಂದು ಹೆಸರು. ಕಳೆದ ವರ್ಷಾಋತುವಿನಲ್ಲಿ ಸೂರ್ಯಚಂದ್ರರ ಕಿರಣಗಳು ಮುಸುಕಿದ ಮೋಡಗಳಲ್ಲಿ ಮುಚ್ಚಿ ಹೋಗಿರುವ ಕಾರಣ ನದನದಿಗಳ ನೀರು ಅತ್ಯಂತ ಜಡವಾಗಿರುತ್ತದೆ. ಆಗ ಅಂಥ ನೀರನ್ನು ಕುಡಿಯುವುದು ಹಲವಾರು ರೋಗಗಳಿಗೆ ಕಾರಣವಾಗು ತ್ತದೆ. ಈ ಆಶ್ವೀಜ ಮಾಸದಲ್ಲಿ ಆಕಾಶವು ನಿರಭ್ರವಾಗಿ, ಸೂರ್ಯಚಂದ್ರರ

ಕಿರಣಗಳು ನಿಚ್ಚಳವಾಗುತ್ತವೆ. ಇದರಿಂದ ಹೊಳೆಹಳ್ಳಗಳ ಕೆರೆಭಾವಿಗಳ ನೀರು ನಿರ್ಮಲವಾಗುತ್ತದೆ. ಇಂಥ ನೀರನ್ನು ಉದಯ ಕಾಲದಲ್ಲಿ ಸೇವಿಸುವುದರಿಂದ ಆರೋಗ್ಯ ವೃದ್ಧಿಯಾಗುತ್ತದೆ. ಈ ಆರೋಗ್ಯಶಾಸ್ತ್ರದ ನಿಯಮವನ್ನನುಸರಿಸಿಯೇ ಆಶ್ವೀಜ ಶುದ್ಧ ಶೀಗೆ ಹುಣ್ಣಿವೆಯಲ್ಲಿ ಮಲೆನಾಡದಲ್ಲಿ ಹೊಲಗಳಿಗೆ ಹೋಗಿ ಜನರು ಚರಗ ಚಲ್ಲಿ ತರತರದ ಭಕ್ಷ್ಯಭೋಜ್ಯ ಪದಾರ್ಥಗಳನ್ನು ಸೇವಿಸಿ ನಿರ್ಮಲವಾದ ನೀರು ಕುಡಿದು ಆನಂದಪಡುವುದುಂಟು. ಈ ಹಬ್ಬವು ಮಲೆನಾಡಿನಲ್ಲಿ ಅತ್ಯಂತ ವೈಭವದೊಡನೆ ಜರಗುತ್ತದೆ. ಇದೇ ಪ್ರಕಾರವಾಗಿ ಈ ತಿಂಗಳಲ್ಲಿ ಜರಗುವ ಹಬ್ಬಗಳು ಧಾರ್ಮಿಕವಾಗಿದ್ದರೂ ಆರೋಗ್ಯದಾಯಕಗಳಾಗಿರುತ್ತವೆ.

ಈ ತಿಂಗಳದ ಪ್ರತಿ ಪದದಲ್ಲಿ ಘಟಸ್ಥಾಪನೆ, ನವರಾತ್ರಿ ಅಂದರೆ ದೇವೀ ಪೂಜಾ ಪ್ರಾರಂಭ. ಮೂಲಾ ನಕ್ಷತ್ರದಲ್ಲಿ ಸರಸ್ವತಿಯನ್ನು ಆಹ್ವಾನಮಾಡಿ ಶ್ರವಣಾ ನಕ್ಷತ್ರದಲ್ಲಿ ವಿಸರ್ಜನ ಮಾಡುವುದುಂಟು. ಆಶ್ವೀಜ ಶು. ಮಹಾನವಮಿ, ಶಸ್ತ್ರಪೂಜಾ, ಶು. ದಶಮಿಗೆ ವಿಜಯಾದಶಮಿಯನ್ನು ಸಡಗರದೊಡನೆ ಸರ್ವತ್ರ ಆಚರಿಸುವರು.

ಆಶ್ವೀಜ ಬ. ೧೪ ನರಕಚತುರ್ದಶಿ ಅಭ್ಯಂಗ ಸ್ನಾನ, ಬ. ೧೫ ದೀಪಾವಳೀ ಅಮಾವಾಸ್ಯಾ ಲಕ್ಷ್ಮೀಪೂಜಾ ಜರಗುತ್ತದೆ.

## ವಿಜಯಾದಶಮಿ ( ನಾಡಹಬ್ಬ )

ಜನರು ಈ ಹಬ್ಬವನ್ನು ಎಲ್ಲ ಹಬ್ಬಗಳಿಗಿಂತಲೂ ಹೆಚ್ಚು ಉಬ್ಬಿನಿಂದ ಆಚರಿಸುವುದುಂಟು. ಯಾಕಂದರೆ ಹಲಕೆಲವು ಹಬ್ಬಗಳು ಹಿಂದುಸ್ಥಾನದ ಒಂದೊಂದು ಭಾಗದಲ್ಲಿ ಮಾತ್ರ ಆಚರಿಸಲ್ಪಡುತ್ತಿದ್ದರೆ, ಇದು ಅಖಿಲ ಭಾರತದ ಮೂಲೆ ಮೂಲೆಯಲ್ಲಿಯೂ ಅತ್ಯಂತ ಅಟ್ಟಹಾಸದೊಡನೆ ಅವರವರ ಕುಲಾಚಾರಕ್ಕನುಸರಿಸಿ ಆಚರಿಸಲ್ಪಡುತ್ತದೆ. ಆದುದರಿಂದ ಈ ಹಬ್ಬಕ್ಕೆ "ನಾಡಹಬ್ಬವೆಂ"ದು ಹೆಸರು ಬಂದಿದೆ. ಅನೇಕ ಆಸ್ತಿಕ ಜನರು ಒಂಬತ್ತು ದಿವಸಗಳ ವರೆಗೆ ಘಟಸ್ಥಾಪನೆ ಮಾಡಿ ತಪ್ಪದೇ ವ್ರತವನ್ನಾಚರಿಸುವರು. ಹಾಗೂ ದುರ್ಗಾಪಾಠ ಹವನವನ್ನು ಮಾಡುವರು. ಬಂಗಾಲದಲ್ಲಿ ಶಕ್ತಿ

ಉಪಾಸಕರು ವಿಶೇಷವಾಗಿರುವುದರಿಂದ ಅಲ್ಲಿ ನವರಾತ್ರಿ ಮಹೋತ್ಸವವು ಬಹು ವೈಭವದೊಡನೆ ನಡೆಯುವದು. ಅಲ್ಲಿ ಕೆಲವು ಕಾಲಗಳ ಹಿಂದೆ "ನವರಾತ್ರಿಯಲ್ಲಿ ನರಬಲಿಯನ್ನು ಕೊಡುತ್ತಿದ್ದರೆಂದು ಕಥೆಗಳುಂಟು. ಅಲ್ಲದೇ ದೇವಿಗಾಗಿ ಪಶುವಧೆಯನ್ನು ಸಹ ಮಾಡುತ್ತಿದ್ದರು. ಬ್ರಿಟಿಶ್ ಸರಕಾರದವರು ಅವುಗಳಿಗೆಲ್ಲ ಕಟ್ಟು ಹಾಕಿದರು. ಉತ್ತರ ಭಾರತದಲ್ಲಿ ವಿಜಯಾದಶಮಿಯ ದಿವಸ ಶಮಿಯನ್ನು (ಬಂಗಾರವನ್ನು) ಪರಸ್ಪರ ಸಮರ್ಪಿಸುವ ಪರಿಪಾಠವಿಲ್ಲ.



ಈ ರೂಢಿಯು ದಕ್ಷಿಣ ಭಾರತದಲ್ಲಿ ವಿಶೇಷತಃ ಕರ್ನಾಟಕದಲ್ಲಿಯೇ ಹೆಚ್ಚಾಗಿ ಇರುತ್ತದೆ. ಕನ್ನಡ ನಾಡಿನಲ್ಲಿ ನವರಾತ್ರಿಯ ಕಾಲಕ್ಕೆ ಪಶುವಧೆ ಮಾಡುವ ರೂಢಿಯಲ್ಲ. ಆ ಕಾಲಕ್ಕೆ ಅನೇಕ ಕಡೆಯಲ್ಲಿ ವೀರಶೈವರು ಒಂಬತ್ತು ದಿವಸ ಗಳ ವರೆಗೆ ಘಟಸ್ಥಾಪನೆ ಮಾಡಿ ದೇವೀ ಪುರಾಣವನ್ನು ಶಾಸ್ತ್ರ ವಿಧಿಯಂತೆ ಆಚರಿಸಿ ವಿಜಯಾದಶಮಿಯ ದಿನ ಪೂಜ್ಯರಾದ ಮಾಹೇಶ್ವರರಿಗೆ ಅನ್ನ ಸಂತರ್ಪಣೆ ಮಾಡಿಸಿ ಭೂರಿ ದಕ್ಷಿಣೆಯನ್ನರ್ಪಿಸುವರು. ಈ ಹಬ್ಬಕ್ಕೆ ಕೆಲವರು 'ಮಹಾನವಮಿ ಹಬ್ಬ, ಬನ್ನಿ ಹಬ್ಬ, ವಿಜಯಾದಶಮಿ, ದಸರೆ ಹೀಗೆ ಭಿನ್ನ

ಭಿನ್ನ ಅನ್ವರ್ಥಕ ನಾಮಗಳಿಂದ ಕರೆಯುವರು ಅವೆಲ್ಲಕ್ಕೂ ಕಾಲಾಂತರದಲ್ಲಿ ಘಟಿಸಿದ ಹಲವಾರು ಕಥೆಗಳು ಮೂಲಾಧಾರವಾಗಿರುವವು.

ಆಶ್ವೀಜ ಮಾಸವು ಬರುವ ಹೊತ್ತಿಗೆ ವರ್ಷಾಋತು (ಮಳೆಗಾಲ)ವು ಕಳೆದುಹೋಗಿ ಹೊಳೆ ಹಳ್ಳಗಳ ಪ್ರವಾಹವು ಇಳಿಮುಖವಾಗುವುದು. ಶರದೃತುವಿನ ಪ್ರಭಾವದಿಂದ ನೀರು ತಿಳಿಯಾಗಿ ಹರಿಯುವದು. ಮಳೆಗಾಲದಲ್ಲಿ ಕೆಸರು ಗಟ್ಟಿದ ಭೂಮಿ ಆಶ್ವೀಜ ಮಾಸದಲ್ಲಿ ಪೂರ್ವದಿಕ್ಕಿನ ರೂಕ್ಷವಾದ ಗಾಳಿಯಿಂದ ಬಿಗಿದು ಗಟ್ಟಿಯಾಗಿರುವುದು. ಅಲ್ಲದೇ ಆಕಾಶವು ನಿರಭ್ರವಾಗಿರುವುದು. ಈ ಶರದೃತುವು ಪ್ರವಾಸಿಕರಿಗೂ, ದಂಡಯಾತ್ರೆಗೆ ಹೊರಡುವ ರಾಜರಿಗೂ ಅನುಕೂಲ ಸಮಯವಾಗಿದೆ. ಚೈತ್ರ ಶುಕ್ಲ ಪಾಡ್ಯ, ವೈಶಾಖ ಶುಕ್ಲ ತೃತೀಯಾ ಅರ್ಧ ದಿವಸ, ಆಶ್ವೀಜ ಶುದ್ಧ ದಶಮಿ, ಕಾರ್ತೀಕ ಶುಕ್ಲ ಪಾಡ್ಯ, ಇವುಗಳು ಶುಭಮುಹೂರ್ತಗಳೆಂದು ಜ್ಯೋತಿಷ್ಯ ಶಾಸ್ತ್ರದ ಅಭಿಪ್ರಾಯವಿದೆ. ಆದ್ದರಿಂದ ಆಶ್ವೀಜ ಶುದ್ಧ ದಶಮಿಯು ಶುಭದಿವಸವಾದುದರಿಂದ ಅಂದು ರಾಜರು ತಮ್ಮ ಚತುರಂಗಬಲ ಸಮೇತರಾಗಿ ದಂಡಯಾತ್ರೆಗೆ ಹೊರಡಲು ಸನ್ನದ್ಧರಾಗಿ ಆಶ್ವೀಜ ಶುದ್ಧ ನವಮಿಯ ದಿವಸ ತಮ್ಮ ಶಸ್ತ್ರಾಸ್ತ್ರಗಳನ್ನು ಪೂಜಿಸಿ ವಿಜಯಾಭಿಲಾಷೆಯಿಂದ ಮರುದಿವಸ ಅಂದರೆ ದಶಮಿಯ ದಿವಸ ಸೀಮಾಂತರ ಪ್ರವೇಶ ಮಾಡುತ್ತಿದ್ದರು. ಆ ನಂತರ ವಿಜಯವನ್ನು ಸಂಪಾದಿಸಿ ತಿರುಗಿ ತಮ್ಮ ರಾಜಧಾನಿಗೆ ಬಂದ ಮೇಲೆ ಹೆಬ್ಬಾಗಿಲಿನಲ್ಲಿ ನಿಂತು ಸುಮಂಗಲೆಯರಿಂದ ಮಂಗಲಾರತಿ ಬೆಳಗಿಸಿಕೊಂಡು ತಾವು ಗೆದ್ದು ತಂದಂಥ ಬಂಗಾರದ ಕೆಲವು ಭಾಗವನ್ನು ಪ್ರತಿಫಲವಾಗಿ ಆರುತಿಯಲ್ಲಿ ಹಾಕುತ್ತಿದ್ದರು. ಆದ್ದರಿಂದ ಈಗಲೂ ಆ ದಿವಸ ಸುವರ್ಣ ಪೂಜೆಯನ್ನು ಮಾಡುವುದುಂಟು. ಅಲ್ಲದೇ ಪುರಪ್ರಮುಖರು ಊರ ಮುಂದಿನ ಶಮೀವೃಕ್ಷಕ್ಕೆ ವಾದ್ಯವೈಭವದೊಡನೆ ಹೋಗಿ ಪೂಜಿಸಿ ಅದರ ತೊಪ್ಪಲವನ್ನು ತಂದು ಬಂಗಾರವೆಂದು ಪರಸ್ಪರರಲ್ಲಿ ಅರ್ಪಿಸುತ್ತಿರುವುದು ಈಗಲೂ ವಾಡಿಕೆಯಲ್ಲಿದೆ. ಅದಕ್ಕೊಂದು ಪೌರಾಣಿಕ ಕಥೆಯುಂಟು—

ದ್ವಾಪರ ಯುಗದಲ್ಲಿ ಪಾಂಡವರು ಕೌರವರೊಡನೆ ಜೂಜು ಆಡಿ, ಸಕಲ ಸಂಪತ್ತನ್ನು ಸೋತು ದುರ್ದೈವಿಗಳಾಗಿ ವನವಾಸಕ್ಕೆ ಹೋದರು.

ಮುಂದೆ ಒಂದು ವರುಷ ಅವರು ವಿರಾಟ ರಾಜನಲ್ಲಿ ಅಜ್ಞಾತವಾಸಕ್ಕಾಗಿ ಹೋಗುವ ಮುನ್ನ ತಮ್ಮ ವೇಷಭೂಷಣಗಳನ್ನೂ, ಶಸ್ತ್ರಾಸ್ತ್ರಗಳನ್ನೂ ಶಮೀ ವೃಕ್ಷದಲ್ಲಿ ಅಡಗಿಸಿಟ್ಟರು. ಹೀಗಿರಲು ಕೌರವರು ಒಂಪಾನೊಂದು ದಿವಸ ವಿರಾಟ ರಾಜನ ಗೋವುಗಳನ್ನು ಅಪಹರಿಸಿಕೊಂಡು ಹೋಗಲು, ಉತ್ತರ ಕುಮಾರನು ಅವುಗಳನ್ನು ತಾನು ಬಿಡಿಸಿಕೊಂಡು ಬರುವೆನೆಂದು ಜಂಭ ಕೊಚ್ಚಿಕೊಳ್ಳುತ್ತ ಸೈನ್ಯಸಮೇತನಾಗಿ ಉಬ್ಬಿನಿಂದ ಹೋಗಿ ಶತ್ರು ಸೈನ್ಯಕ್ಕೆ ಹೆದರಿ ಹಿಮ್ಮುಖನಾಗಿ ಕಾಲುಗಳಿಗೆ ಬುದ್ಧಿಗಲಿಸಿ ಓಡಿಬರುವುದರಲ್ಲಿದ್ದನು. ಆಗ ಬೃಹನ್ನಡೆ ವೇಷದಲ್ಲಿರುವ ಸಾರಥಿಯಾದ ಅರ್ಜುನನು ಶಮೀ ವೃಕ್ಷದಲ್ಲಿ ಆ ಮೊದಲು ಬಚ್ಚಿಟ್ಟ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಶತ್ರುಗಳನ್ನು ಸೋಲಿಸಿ ಗೋವುಗಳನ್ನು ಹಿಂತಿರುಗಿಸಿಕೊಂಡು ಬಂದು ವಿರಾಟ ರಾಜನ ಮನಾನಂದಗೊಳಿಸಿದುದು ಇದೇ ವಿಜಯಾ ದಶಮಿಯ ದಿವಸ. ಮುಂದೆ ಪಾಂಡವರು ಶಮೀ ವೃಕ್ಷದಲ್ಲಿರುವ ತಮ್ಮ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ದಾಯಾದಿಗಳಾದ ಕೌರವರೊಡನೆ ಹೋರಾಡಿ ವಿಜಯವನ್ನು ಪಡೆದದ್ದು ಇದೇ ಆಶ್ವೀಜ ಶುದ್ಧ ದಶಮಿಯ ದಿವಸ. ಈ ವಿಜಯಕ್ಕೆ ಕಾರಣವಾದ ಶಮೀ ವೃಕ್ಷವು ಕೆಲವು ಕಾಲ ಶಸ್ತ್ರಾಸ್ತ್ರಗಳನ್ನು ತನ್ನಲ್ಲಿ ಗುಪ್ತವಾಗಿರಿಸಿಕೊಂಡು ಪಾಂಡವರನ್ನು ರಕ್ಷಿಸಿ, ಶತ್ರುವಿನಾಶಕ್ಕೆ ಕಾರಣವಾಯಿತಲ್ಲದೇ ಜಗತ್ತಿಗೆ ಶಾಂತಿ ಯನ್ನುಂಟು ಮಾಡಿತು. ಈ ರೀತಿಯಾದ ಶಮಿಯ ಪ್ರಭಾವದಿಂದ ಸರ್ವರೂ ಆಗ ದುಃಖವನ್ನು ನೀಗಿ ಉದ್ಯೋಗ ನಿರತರಾಗಿ ಸುವರ್ಣವನ್ನು ಅರ್ಥಾತ್ ಸುವರ್ಣ ಸಮಯವನ್ನು ಹೊಂದಿದರು. ಇಂಥ ಸುವರ್ಣಕ್ಕೆ ಶಮಿಯು ಮೂಲಾಧಾರವಾದುದರಿಂದ ಸರ್ವರೂ ಶಮೀ ತೊಪ್ಪಲಕ್ಕೆ ಬಂಗಾರವೆಂದು ಹೇಳಿ, ಇಷ್ಟಮಿತ್ರರಿಗೂ, ಹಿರಿಯರಿಗೂ, ಕಿರಿಯರಿಗೂ ಅದನ್ನರ್ಪಿಸುತ್ತ ಇನ್ನು ವೈರಭಾವವನ್ನುಳಿದು ಮುಂದೆ ನಾವೂ, ನೀವೂ ಬಂಗಾರದಂತಿರೋಣ ವೆಂದು ಹೇಳಿದುದು ಇದೇ ವಿಜಯಾದಶಮಿಯ ದಿವಸ.

ತ್ರೇತಾ ಯುಗದಲ್ಲಿ ಶ್ರೀ ರಾಮಚಂದ್ರನ ಮುತ್ತಜ್ಜನಾದ ರಘುರಾಜನು ಯುದ್ಧಕ್ಕೆ ಹೋದದ್ದು ಆಶ್ವೀಜ ಶುಕ್ಲ ದಶಮಿಯ ದಿವಸ.

ರಾಮ-ರಾವಣರ ಯುದ್ಧದಲ್ಲಿ ರಾವಣನನ್ನು ಸಂಹರಿಸಲು ರಾಮನು ಹಲವಾರು ಉಪಾಯಗಳನ್ನು ಮಾಡಬೇಕಾಯಿತು. ಆದರೂ ರಾವಣನು

ಸಾಯಲಿಲ್ಲ. ಅವನಲ್ಲಿರುವ ಅದ್ಭುತವಾದ ಶಕ್ತಿಯನ್ನು ನೋಡಿ ರಾಮನು ಆಶ್ಚರ್ಯಚಕಿತನಾಗಿ ಬೇರೆ ದಾರಿ ಕಾಣದೇ ಪರಾಶಕ್ತಿಯೆನಿಸಿದ ದೇವಿಗೆ ಮೊರೆಹೊಕ್ಕು ಪ್ರಾರ್ಥಿಸತೊಡಗಿದನು. ಆಗ ದೇವಿಯು ಆಶ್ವೀಜ ಶುದ್ಧ ಪ್ರತಿಪದೆಯ ದಿವಸ ಅರ್ಧ ರಾತ್ರಿಯ ಸಮಯಕ್ಕೆ ಶ್ರೀ ರಾಮನಿಗೆ ಪ್ರಸನ್ನಳಾಗಿ ರಾವಣನನ್ನು ಕೊಲ್ಲುವ ಸಾಮರ್ಥ್ಯವನ್ನು ದಯಪಾಲಿಸಿದಳು. ದೇವಿಯ ಅನುಗ್ರಹದಿಂದ ಕೃತಾರ್ಥರಾದ ಪ್ರಜಗಳು ಋಷಿ ಸಮುದಾಯದೊಡನೆ ಸೇರಿಕೊಂಡು ರಾವಣನ ಒಧೆಯಾಗುವವರೆಗೂ ದೇವಿಯ ಆರಾಧನೆಯನ್ನು ಪ್ರಾರಂಭಿಸಿದರು. ಆಶ್ವೀಜ ಶುದ್ಧ ಅಷ್ಟಮಿಯ ದಿವಸ ಶ್ರೀ ರಾಮನು ರಾವಣನನ್ನು ಸಂಹರಿಸಿದನು. ೯ನೆಯ ದಿವಸ ಸರ್ವರೂ ಆನಂದ ಭರಿತರಾಗಿ ಭಕ್ತಿಯಿಂದ ದೇವಿಯನ್ನು ಸ್ತುತಿಸಿ ದೊಡ್ಡ ಯಜ್ಞವನ್ನಾಚರಿಸಿದರು. ಆ ಯಜ್ಞದಲ್ಲಿ ದೇವಿಗೆ ಶಾಂತಿಗಾಗಿ ಅನೇಕ ಪಶುಗಳನ್ನು ಆಹುತಿಕೊಟ್ಟರು. ದಶಕಂಠನ ಯುದ್ಧದಲ್ಲಿ ವಿಜಯಿಯಾದ ರಾಮನು ಆಶ್ವಿಜ ಶುದ್ಧ ದಶಮಿಯ ದಿವಸ ತನ್ನ ರಾಜಧಾನಿಯಾದ ಅಯೋಧ್ಯೆಯ ಕಡೆಗೆ ಪ್ರಯಾಣ ಮಾಡಿದ್ದರಿಂದ ಆ ದಿವಸಕ್ಕೆ ದಶಹರಾ ಎಂದು ಅನ್ನುವುದುಂಟು. ಒಂಬತ್ತು ದಿವಸಗಳವರೆಗೆ ನಂದಾದೀಪವನ್ನಿರಿಸಿ ದೇವಿಯನ್ನು ಆರಾಧಿಸಿದ ನಿಮಿತ್ತವಾಗಿ ನವರಾತ್ರಿಯೆಂದು ಹೆಸರುಂಟಾಯಿತು.

ಮಹಾ ಪ್ರಲಯಕಾಲದಲ್ಲಿ ಚರಾಚರ ವಸ್ತುಮಯವಾದ ಈ ಜಗತ್ತು, ಜಲರಾಶಿಯಲ್ಲಿ ಮುಳುಗಿಹೋಯಿತು. ಆಗ ಸಹಸ್ರಾರು ವರುಷ ಶೇಷಶಾಯಿಯಾಗಿ ಯೋಗ ನಿದ್ರೆಯಲ್ಲಿರುವ ಭಗವಾನ್ ವಿಷ್ಣುವಿನ ಕರ್ಣ ಮಲದಿಂದ ಮಧು, ಮತ್ತು ಕೈಟಭರೆಂಬ ಇಬ್ಬರು ದೈತ್ಯರು ಆವಿರ್ಭವಿಸಿದರು. ವಿಷ್ಣುವಿನ ನಾಭಿಕಮಲದಿಂದ ಜನಿಸಿದ ಬ್ರಹ್ಮನು ಆ ದೈತ್ಯರ ಕರಾಲ ಆಕೃತಿಯನ್ನು ನೋಡಿ ಭಯಗೊಂಡು ವಿಷ್ಣು ಪರಮಾತ್ಮನನ್ನು ಎಚ್ಚರಿಸುವುದಕ್ಕಾಗಿ ಮಹಾಮಾಯೆಗೆ ಮರೆಹೊಕ್ಕು ಪ್ರಾರ್ಥಿಸತೊಡಗಿದನು. ಭಗವಾನ್ ವಿಷ್ಣುವು ಯೋಗ ನಿದ್ರೆಯಿಂದ ಎದ್ದು ಸಹಸ್ರಾರು ವರುಷ ಮಧು–ಕೈಟಭರೊಡನೆ ಘನಘೋರ ಯುದ್ಧ ಮಾಡಿ ವಿಫಲನಾದನು. ಆಗ ಇಂದ್ರವರುಣಾದಿ ದೇವತೆಗಳು ಕೈಲಾಸಕ್ಕೆ ಅಧಿಪತಿಯಾದ ಮಹಾದೇವನಿಗೆ ಮೊರೆಹೊಕ್ಕು ಅನನ್ಯ ಭಾವದಿಂದ ಪ್ರಾರ್ಥಿಸತೊಡಗಿದರು. ಭಗವಾನ್ ಶಂಕರನ ಅಪ್ಪಣೆಯ ಮೇರೆಗೆ ಪರಾ

ಶಕ್ತಿ ಎನಿಸಿದ ಮಹಾಮಾಯೆಯು, ಹತ್ತು ಶಿರಸ್ಸು, ಹತ್ತು ಹಸ್ತ, ಶ್ಯಾಮ ವರ್ಣವುಳ್ಳವಳಾಗಿ ಅವತರಿಸಿ ಕೆಂಡದಂಥ ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತಲೂ ಮೇಘದಂತೆ ಗರ್ಜಿಸುತ್ತಲೂ ಪ್ರಲಯಕಾಲದ ಅಗ್ನಿಯಂತೆ ಸಮರಾಂಗಣವನ್ನು ಸೇರಿ ಮಧು ಕೈಟಭರನ್ನು ಅನಾಯಾಸವಾಗಿಯೇ ಸಂಹರಿಸಿ "ಮಹಾ ಕಾಲಿಯೆಂದು ಹೆಸರಾದಳು." ಇದು ದೇವಿಯ ಪ್ರಥಮಾವತಾರವಾಗಿದೆ.

ಪೂರ್ವದಲ್ಲಿ—ಮಹಿಷಾಸುರನೆಂಬ ದಾನವ ವೀರನು ತನ್ನ ಅಮೋಘವಾದ ಬಾಹುಬಲದಿಂದ ಯುದ್ಧದಲ್ಲಿ ಇಂದ್ರ ವರುಣಾದಿ ದೇವತೆಗಳನ್ನು ಸದೆಬಡೆದು ತಾನೇ ಸ್ವರ್ಗಾಧಿಪತಿಯಾಗಿ ಸಮಸ್ತ ಸುರರನ್ನು ಸ್ವರ್ಗದಿಂದ ಹೊಡೆದೋಡಿಸಿ, ಗರ್ವದಿಂದ ಮೆರೆಯಹತ್ತಿದನು. ನಿರಾಶ್ರಿತರಾದ ಎಲ್ಲ ದೇವತೆಗಳು ದಿಗ್ಭ್ರಾಂತರಾಗಿ ಗತಿಗಾಣದೇ ಆದಿದೇವನಾದ ಶಂಕರ ಸಾನ್ನಿಧ್ಯವನ್ನು ಹೊಂದಿ, ತಮಗೊದಗಿದ ದುಃಖವನ್ನು ದೂರಮಾಡಬೇಕೆಂದು ಕೈ ಮುಗಿದು ಆರ್ತಸ್ವರದಿಂದ ಬೇಡಿಕೊಂಡರು. ದಯಾಮಯನಾದ ಮಹದೇವನು ಅವರಿಗೆ 'ಅಂಜಬೇಡಿರೆಂದು' ಅಭಯ ಹಸ್ತವನ್ನಿತ್ತು, ಮದೋನ್ಮತ್ತನಾದ ಮಹಿಷಾಸುರನ ದುಷ್ಕೃತ್ಯವನ್ನರಿತವನಾಗಿ ಕ್ರೋಧಾಗ್ನಿಯಿಂದ ತಪ್ತನಾಗಲು, ಅವನ ಶರೀರದಿಂದ ಜಾಜ್ವಲ್ಯಮಾನವಾದ ಒಂದು ದಿವ್ಯ ತೇಜಸ್ಸು ಹೊರಹೊರಟು ಮಹಾಲಕ್ಷ್ಮಿಯ ರೂಪಗೊಂಡಿತು. ಮಹಾಲಕ್ಷ್ಮಿಯ ದರ್ಶನದಿಂದ ಸಮಸ್ತ ದೇವತೆಗಳು ತೇಜೋಭರಿತರಾದರು, ಅವರೆಲ್ಲರ ಶರೀರದಿಂದ ವೀರ ತೇಜಸ್ಸು ಹೊರಹೊಮ್ಮಿ ಅದೊಂದು ಸಿಂಹವಾಗಿ ಮೂರ್ತಿಗೊಂಡು ಮಹಾಲಕ್ಷ್ಮಿಗೆ ಭವ್ಯವಾದ ವಾಹನವಾಯಿತು, ಆಗ ಸಕಲ ದೇವತೆಗಳು ತಮ್ಮ ತಮ್ಮ ದಿವ್ಯಾಸ್ತ್ರಗಳನ್ನು ದೇವಿಗೆ ಸಮರ್ಪಿಸಿ ಸತ್ಕರಿಸಿದರು. ಹೀಗೆ ಮಹಾಲಕ್ಷ್ಮಿಯು ತರತರದ ಶಸ್ತ್ರಾಸ್ತ್ರಗಳಿಂದ ಸಮಲಂಕೃತಳಾಗಿ ಸಿಂಹವನ್ನೇರಿ, ಬ್ರಹ್ಮಾಂಡವನ್ನೇ ಭೇದಿಸುವವಳಂತೆ ಗರ್ಜಿಸುತ್ತ ಭೀಕರಾಕೃತಿಯುಳ್ಳವಳಾಗಿ, ಮಹಿಷಾಸುರನ ಮರ್ದನೆಗಾಗಿ ಸಮರಾಂಗಣಕ್ಕೆ ತೆರಳಿದಳು. ಮುಂದೆ ದೀರ್ಘ ಕಾಲದವರೆಗೂ ದೇವಿಯು ಆ ಅಸುರನೊಡನೆ ಹೋರಾಡಿ ಕೊನೆಗೆ ಅವನ ಶಿರಸ್ಸನ್ನು ಕತ್ತರಿಸಿ ನೆಲಕ್ಕುರುಳಿಸಿದಳು. ಹೀಗೆ ಮಹಾಶಕ್ತಿಯು ೨ನೆಯ ಮಹಾಲಕ್ಷ್ಮಿಯ ಅವತಾರವನ್ನು ತಾಳಿದಳು.

ಪೂರ್ವದಲ್ಲಿ ಶುಂಭ, ನಿಶುಂಭರೆಂಬ, ಬಲಾಢ್ಯರಾದ ರಾಕ್ಷಸರು ಸೈನ್ಯ ಸಮೇತರಾಗಿ ಸ್ವರ್ಗವನ್ನು ಮುತ್ತಿ, ದೇವತೆಗಳೊಡನೆ ಹೋರಾಡಿ, ಇಂದ್ರನನ್ನು ಸೆರೆ ಹಿಡಿದು ಅವನ ಸ್ಥಾನವನ್ನು ಸೆಳೆದುಕೊಂಡರು. ಮತ್ತು ಎಲ್ಲ ದೇವತೆಗಳಿಗೂ ತಾವೇ ಪ್ರಭುಗಳೆಂದು ಸಾರಿ ರಾಜ್ಯವನ್ನಾಳಹತ್ತಿದರು. ಆಗ ಸಮಸ್ತ ದೇವತೆಗಳು ಚಿಂತಾಕ್ರಾಂತರಾಗಿ ಹಿಮಾಲಯಕ್ಕೆ ಹೋಗಿ, ತಮಗೊದಗಿದ ಸಂಕಟವನ್ನು ಪರಿಹರಿಸಬೇಕೆಂದು ಪಾರ್ವತಿಯನ್ನು ಪ್ರಾರ್ಥಿಸತೊಡಗಿದರು. ದೇವತೆಗಳ ಸ್ತೋತ್ರದಿಂದ ಪ್ರಸನ್ನಳಾದ ಪಾರ್ವತಿಯು ದಯಾರ್ದ್ರ ಹೃದಯಳಾಗಿ, ಎಲ್ಲ ದೇವತೆಗಳನ್ನು ಸಮಾಧಾನ ಪಡಿಸುವಷ್ಟರಲ್ಲಿಯೇ ಅವಳ ದೇಹದಿಂದ ಕೋಟಿ ಸೂರ್ಯರಂತೆ ಹೊಳೆಯುವ ದಿವ್ಯ ಜ್ಯೋತಿಯೊಂದು ಉದಯಿಸಿತು. ನೋಡು ನೋಡುವಷ್ಟರಲ್ಲಿಯೇ ಆ ಜ್ಯೋತಿಯೊಳಗಿಂದ ರತಿಯ ಪ್ರತಿ ರೂಪವೋ ಎಂಬಂತೆ ಸರಸ್ವತಿ ತೋರುವ ಮಹಾ ಸರಸ್ವತಿಯು ಹೊರ ಹೊರಟಳು. ಅವಳು ಪಾರ್ವತಿಯ ಅಪ್ಪಣೆಯಂತೆ ಸಕಲ ಸೇನಾ ಸಮೇತಳಾಗಿ ಶುಂಭ, ನಿಶುಂಭರೊಡನೆ ಯುದ್ಧ ಮಾಡುವದಕ್ಕಾಗಿ ಅವರ ಸಮೀಪಕ್ಕೆ ಹೋದಳು. ಆ ರಾಕ್ಷಸರು ಜಗನ್ಮೋಹಿನಿಯಾದ ಮಹಾ ಸರಸ್ವತಿಯ ಸೌಂದರ್ಯಕ್ಕೆ ಮೋಹಿತರಾಗಿ ಅವಳೊಡನೆ ವಿವಾಹವಾಗಬೇಕೆಂದು ಆಲೋಚಿಸಿ ಸುಗ್ರೀವನೆಂಬ ತಮ್ಮ ಸೇವಕನನ್ನು ಕರೆದು ಮಹಾ ಸರಸ್ವತಿಯನ್ನು ತಮ್ಮಲ್ಲಿಗೆ ಕರೆದುಕೊಂಡು ಬರಬೇಕೆಂದು ಅವನಿಗೆ ಅಪ್ಪಣೆಯನ್ನಿತ್ತರು. ಸುಗ್ರೀವನು ಮಹಾಸರಸ್ವತಿಯಲ್ಲಿಗೆ ಬಂದು ಶುಂಭ, ನಿಶುಂಭರ ಸಂದೇಶವನ್ನು ತಿಳಿಸಿದನು. ದೇವಿಯು ಆ ರಾಕ್ಷಸರ ಅಭಿಪ್ರಾಯವನ್ನು ನಿರಾಕರಿಸಿದಳು.ಕೃದ್ಧ ರಾದ ಶುಂಭ, ನಿಶುಂಭರು ಧೂಮ್ರಲೋಚನನೆಂಬ ತಮ್ಮ ಸೇನಾಪತಿಯನ್ನು ಕರೆದು ಅವನಿಗೆ- "ಸಾವಿರಾರು ಶೂರ ಸೈನಿಕರೊಡನೆ ನೀನು ಈಗಲೇ ಹೋಗಿ ಆ ಧೂರ್ತ ಸ್ತ್ರೀಯಳನ್ನು ಹಿಡಿದೆಳೆದು ತಾ" ಎಂದು ಆಜ್ಞೆಯನ್ನು ವಿಧಿಸಿದರು. ಆ ಪ್ರಕಾರವಾಗಿ ಧೂಮ್ರಲೋಚನನು ಮಹಾರಥಿಕರೊಡನೆ ಅವಳಲ್ಲಿಗೆ ಬಂದು ನುಡಿದುದೇನಂದರೆ- "ಅಮ್ಮಾ ಸುಮ್ಮನೆ ಕಾಲ ವಿಲಂಬದಿಂದ ಪ್ರಯೋಜನವಿಲ್ಲ. ದೇವಾಧಿ ದೇವತೆಗಳಿಗೆ ಒಡೆಯರಾದ ನಮ್ಮ ಸಮ್ರಾಟ್ ಶುಂಭನಿಶುಂಭರೊಡನೆ ನೀನು ವಿವಾಹಿತಳಾಗಿ ಸುಖದಿಂದ ಬಾಳು, ಇಲ್ಲವಾದರೆ ನಿನ್ನ ಪ್ರಾಣವು ನಮ್ಮೀ ಹದನಾದ ಆಯುಧಗಳಿಗೆ ಆಹುತಿಯಾಗಬೇಕಾಗುವುದು"

ಎಂದು ಕೇಳಿಕೊಂಡನು. ಮಹಾಸರಸ್ವತಿಯು ಧೂಮ್ರಲೋಚನನ ಜೊಳ್ಳು ಮಾತಿಗೆ ಬೆದರಲಿಲ್ಲ. ಬಹಳ ಹೇಳುವುದೇನು ಶಸ್ತ್ರಾಸ್ತ್ರಗಳಿಂದಲೇ ಉತ್ತರ ವನ್ನಿತ್ತಳು. ಕ್ಷಣಾರ್ಧದಲ್ಲಿಯೇ ಧೂಮ್ರಲೋಚನನನ್ನೂ ಅವನ ಸಕಲ ಸೈನ್ಯವನ್ನೂ ಸತ್ಯಾನಾಶ ಮಾಡಿದಳು. ಈ ಸುದ್ದಿಯನ್ನು ಕೇಳಿದ ಶುಂಭ ನಿಶುಂಭರು ಅತ್ಯಂತ ಕ್ರುದ್ಧರಾಗಿ, ಚಂಡ, ಮುಂಡರೆಂಬ ತಮ್ಮ ಅನುಯಾಯಿ ಗಳನ್ನು ಕರೆದು– "ಆ ಹೆಮ್ಮಾರಿಯಾದ ನಾರಿಯನ್ನು ಹೊತ್ತು ತಂದು ನಮ್ಮೆದುರು ನಿಲ್ಲಿಸಬೇಕೆಂ"ದು ಸೊಕ್ಕಿನಿಂದ ನುಡಿದರು. ಚಂಡಮುಂಡರು ತಮ್ಮ ಒಡೆಯರ ಹೇಳಿಕೆಯಂತೆ ಕೊಬ್ಬಿದ ಯೋಧರೊಡನೆ ದೇವಿಯಲ್ಲಿಗೆ ಹೋಗಿ ಕಾಲು ಕೆದರಿ ಅವಳೊಡನೆ ಕದನವನ್ನಾರಂಭಿಸಿದರು. ಈ ಪ್ರಕಾರ ವಾದ ದೈತ್ಯರ ಉದ್ಧಟ ಕೃತಿಯಿಂದ ಕ್ರುದ್ಧಳಾದ ದೇವಿಯ ಮೈಗೆ ಕಾವೇರಿತು. ಕಣ್ಣುಗಳು ಕೆಂಪಾದವು. ನೋಡನೋಡುವಷ್ಟರಲ್ಲಿಯೇ ಸರಸ್ವತಿಯ ಮಸ್ತಕ ದಿಂದ ಭೀಕರ ಆಕೃತಿಯುಳ್ಳ ಸ್ತ್ರೀಯಳೊಬ್ಬಳು ಹೊರಹೊರಟಳು. ಅವಳು ಕಪ್ಪಾದ ಮೈಬಣ್ಣವುಳ್ಳವಳಾಗಿ ಕೊರಳಲ್ಲಿ ರುಂಡಮಾಲೆಯನ್ನು ಧರಿಸಿರುವಳು. ಮತ್ತು ಹುಲಿಯ ಚರ್ಮವನ್ನುಟ್ಟು, ಜಡಿಮುಡಿ ಬಿಟ್ಟು ನಾಲಿಗೆ ಹೊರಹಿರಿದು, ಚಪಚಪ ಬಡಿಯುತ್ತ ರಾಕ್ಷಸರ ಸೈನಿಕರನ್ನು ಹಿಡಿಯಲ್ಲಿ ಹಿಡಿಹಿಡಿದು ತಿಂದು ತೇಗಿದಳು. ಕೊನೆಗೆ ಚಂಡ, ಮುಂಡರು ಮುಂದೆ ಬಂದು ನಿಲ್ಲಲು ಅವರ ಮುಂಡವನ್ನು ಖಡ್ಗದಿಂದ ಚೆಂಡಾಡಿ, ರುಂಡಗಳನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಮಹಾಸರಸ್ವತಿಯ ಅಡಿದಾವರೆಗಳಿಗೆ ಅರ್ಪಿಸಿದಳು. ಮಹಾ ಸರಸ್ವತಿಯು ಚಂಡಮುಂಡರ ಪ್ರಚಂಡವಾದ ಸಂಹಾರ ಕಾರ್ಯಕ್ಕೆ ಕಾರಣ ಳಾದ ಅವಳಿಗೆ ಚಾಮುಂಡಿ ಎಂಬ ಹೆಸರಿಟ್ಟಳು. ಹಾಗೂ ಪ್ರಸನ್ನಳಾದ ಮಹಾ ಸರಸ್ವತಿಯು– "ನೀನು ಚಾಮುಂಡಿ ಎಂಬ ಅಭಿಧಾನದಿಂದ ಸರ್ವರಿಂದ ಪೂಜಿಸಲ್ಪಡುವವಳಾಗು" ಎಂದು ಆಶೀರ್ವದಿಸಿದಳು.

ಚಂಡಮುಂಡರು ಸಮರಾಂಗಣದಲ್ಲಿ ಮಡಿದ ವಾರ್ತೆಯನ್ನು ಕೇಳಿ ಅತ್ಯಂತ ಕ್ರುದ್ಧರಾದ ಶುಂಭ ಮತ್ತು ನಿಶುಂಭರು ಯುದ್ಧಕ್ಕೆ ಸನ್ನದ್ಧರಾಗಿ ದೇವಿಯಲ್ಲಿಗೆ ಬಂದು ಗರ್ಜಿಸತೊಡಗಿದರು. ಆಗ ಮಹಾಸರಸ್ವತಿಯ ಶರೀರ ದಿಂದ "ಚಂಡಿಕಾ" ಎಂಬುವ ಮತ್ತೋರ್ವ ದೇವಿಯು ಉದ್ಭವಿಸಿ ಆ ದೈತ್ಯ

ರನ್ನು ಕುರಿತು– "ಜೀವಿತವಾಗಿರಬೇಕೆಂಬುವ ಅಭಿಲಾಷೆ ನಿಮಗಿದ್ದರೆ, ಈಗಲೇ ನೀವು ಪಾತಾಳಲೋಕಕ್ಕೆ ತೆರಳಿ ಅಲ್ಲಿ ಸುಖವಾಗಿ ಬಾಳಿರಿ" ಎಂದು ಹೇಳಿದಳು. ಆ ಮಾತಿಗೆ ಶುಂಭ, ನಿಶುಂಭರು ಒಪ್ಪದೇ ದೇವಿಯೊಡನೆ ಕಲಿತನ ದಿಂದ ಕಾದಾಡಿ, ಕೊನೆಗೆ ದೇವಿಯ ಹದನಾದ ಖಡ್ಗದಿಂದ ಮರಣ ಹೊಂದಿ ದರು. ಕೆಲವು ದೈತ್ಯರು ತಮ್ಮ ಕಾಲುಗಳಿಗೆ ಬುದ್ಧಿಗಲಿಸಿ ಪಲಾಯನ ಮಾಡಿದರು. ಆದರೆ "ರಕ್ತಬೀಜನೆಂ"ಬ ರಾಕ್ಷಸನು ಮಾತ್ರ ದೇವಿಗೆ ಎದುರಾಗಿ ಕಾದಾಡಹತ್ತಿದನು. ಅವನಲ್ಲಿ ಒಂದು ಅತ್ಯದ್ಭುತವಾದ ಶಕ್ತಿಯಿತ್ತು. ಅದಾ ವುದೆಂದರೆ;— "ಅವನ ಒಂದು ಹನಿರಕ್ತ ಯುದ್ಧರಂಗದಲ್ಲಿ ಬಿದ್ದುದಾದರೆ, ಆ ರಕ್ತದೊಳಗಿಂದ ಅಂಥ ರಾಕ್ಷಸನು ಆ ಕ್ಷಣವೇ ಆವಿರ್ಭವಿಸಿ ಯುದ್ಧಕ್ಕೆ ಸಿದ್ಧನಾಗಿ ನಿಲ್ಲುವನು. ಒಂದು ವೇಳೆ ಅವನ ಶಿರಹರಿದು ಭೂಮಿಯಲ್ಲಿ ರಕ್ತ ಪ್ರವಾಹವಾಗಹತ್ತಿದರೆ, ಅಸಂಖ್ಯ ರಾಕ್ಷಸರು ಆ ರಕ್ತದಲ್ಲಿ ಉದ್ಭವಿಸು ವರು." ಈ ಮಾಯಾತಂತ್ರವನ್ನು ಸರಸ್ವತಿಯು ಮೊದಲೇ ಅರಿತವಳಾಗಿ ತನ್ನ ಸಹಾಯಕ್ಕಾಗಿ ಕಾಲಿಕಾದೇವಿಯನ್ನು ಆಹ್ವಾನಿಸಿ, ರಕ್ತಬೀಜನೊಡನೆ ಘನಘೋರವಾದ ಯುದ್ಧವನ್ನಾರಂಭಿಸಿದಳು. ಗಾಯಗೊಂಡ ರಕ್ತಬೀಜನ ದೇಹದಿಂದ ರಕ್ತಧಾರೆಯು ಹೊರಡುವಷ್ಟರಲ್ಲಿಯೇ ಕಾಲಿಕಾದೇವಿಯು ತನ್ನ ನಾಲಿಗೆ ಚಾಚಿ ಆ ರಕ್ತವನ್ನು ನೆಲಕ್ಕೆ ಬೀಳದಂತೆ ನೆಕ್ಕುವಳು. ಈ ರೀತಿಯಾಗಿ ಮಹಾಸರಸ್ವತಿಯು, ಯುದ್ಧದಲ್ಲಿ ರಕ್ತಬೀಜನನ್ನು ಲೀಲಾಮಂತ್ರದಿಂದ ಸಂಹರಿಸಿದಳು. ಈ ತೆರನಾದ ಮಹಾದೇವಿಯ ಯುದ್ಧವನ್ನು ದೇವತೆಗಳು ಆಕಾಶದಲ್ಲಿ ಮೋಡಗಳ ಮರೆಯಲ್ಲಿ ನಿಂತು ನೋಡಿ ವಿಸ್ಮಿತರಾದರು. ಅಲ್ಲದೇ ಕಳೆದುಹೋದ ತಮ್ಮ ತಮ್ಮ ಪದವಿಯನ್ನು ತಿರುಗಿ ಪಡೆದುಕೊಂಡು ಹರ್ಷ ಭರಿತರಾದರು. ಇದು ಮಹಾಸರಸ್ವತಿಯ ೩ನೆಯ ಅವತಾರವಾಗಿದೆ.

ವಸುದೇವನು, ಕಂಸನ ಕಾರಾಗೃಹದಲ್ಲಿ ಜನಿಸಿದ ಕೃಷ್ಣನನ್ನು ಪಾರು ಮಾಡುವದಕ್ಕಾಗಿ 'ನಂದಾ' ಎಂಬುವ ಹೆಣ್ಣುಕೂಸನ್ನು ಕಾರಾಗೃಹದಲ್ಲಿರಿಸಿ ತಾನು ಅಲ್ಲಿಂದ ಹೊರಟುಹೋದನು. ಕಂಸನು ಕಾರಾಗೃಹಕ್ಕೆ ಬಂದು ನೋಡುವಷ್ಟರಲ್ಲಿ ಒಂದು ಹೆಣ್ಣುಕೂಸನ್ನು ಕಂಡನು. ಆಗ ಅವನು ಕ್ರೋಧ ದಿಂದ ಆ ಕೂಸನ್ನು ಕೈಯಿಂದ ಮೇಲಕ್ಕೆತ್ತಿ ನೆಲಕ್ಕೆ ಅಪ್ಪಳಿಸಲು ಆ ಕೂಸು,

ಅವನ ಕೈಯಿಂದ ನುಸುಳಿ ಆಕಾಶಕ್ಕೆ ಜಿಗಿದು ಹೊರಟು ಹೋಯಿತು. ಆಗ ಆಕಾಶದಲ್ಲಿ;— "ಎಲವೋ ಕಂಸ ನಿನ್ನ ವೈರಿಯು ಜನಿಸಿರುವನು" ಎಂಬುವ ಶಬ್ದವಾಯಿತು. ಳನೆಯ ಅವತಾರಿಯಾದ 'ಆನಂದಾ' ಎಂಬವಳು ಗೋಕುಲ ದಲ್ಲಿರುವ ನಂದನ ಕುವರಿಯಾಗಿರುವಳು.

ಆದಿಶಕ್ತಿಯಾದ ದೇವಿಯು ಓರ್ವರಾಕ್ಷಸನನ್ನು ತನ್ನ ಹಲ್ಲುಗಳಿಂದ ಹರಿದು ಸಂಹರಿಸಿದ ಕಾರಣ ಅವಳಿಗೆ 'ರಕ್ತದಂತಿ' ಎಂಬುವ ಹೆಸರು ಬಂದಿದೆ. ಇದು ಐದನೆಯ ಅವತಾರವಾಗಿದೆ.

ಪೂರ್ವದಲ್ಲಿ ಒಂದಾನೊಂದು ಕಾಲಕ್ಕೆ ಒಂದು ನೂರುವರುಷ ಬರಗಾಲ ಒದಗಿ, ಅನ್ನ ನೀರಿಲ್ಲದೇ ಸಕಲ ಜೀವಿಗಳು ಬಳಲುತ್ತಿರುವಾಗ ಜಗದಾ ಧಾರಳಾದ ದೇವಿಯು "ಶಾಖಾಂಬರೀ" ಎಂಬುವ ಆರನೆಯ ಅವತಾರವನ್ನು ತಾಳಿ, ಎಲ್ಲ ಜೀವಿಗಳನ್ನು ಸಂರಕ್ಷಿಸಿದಳು.

ಪೂರ್ವದಲ್ಲಿ "ದುರ್ಗಮ" ಎಂಬುವ ದುಷ್ಟ ರಾಕ್ಷಸನು, ಸಿಕ್ಕಸಿಕ್ಕವ ರನ್ನು ಸೊಕ್ಕಿನಿಂದ ಸಂಹರಿಸುತ್ತ ದುಃಖವನ್ನುಂಟು ಮಾಡುತ್ತಿದ್ದನು. ಆಗ ದೇವಿಯು ದುರ್ಗಮನನ್ನು ಕೊಂದು "ದುರ್ಗಾ" ಎಂಬುವ ಏಳನೆಯ ಅವತಾರವೆತ್ತಿದಳು.

ದೇವಿಯು "ಮಾತಂಗೀ" ಎಂಬುವ ಎಂಟನೆಯ ಅವತಾರವೆತ್ತಿದಳು.

ಒಂಭತ್ತನೆಯದಾದ "ಲಭರಾಂಬರೀ" ಎಂಬುವ ಅವತಾರವನ್ನು ಹೊಂದಿ ದೇವಯು 'ಅರುಣ' ಎಂಬುವ ರಾಕ್ಷಸನನ್ನು ಸಂಹರಿಸಿದಳು.

## ಕಾರ್ತಿಕ ಮಾಸ ೧೭

ಈ ತಿಂಗಳು ಶರದೃತುವಿನಲ್ಲಿ ಪ್ರಾಪ್ತವಾಗುತ್ತದೆ. ವಾತಾವರಣವು ಆಶ್ವೀಜ ಮಾಸದಂತೆಯೇ ಇದ್ದರೂ ಮುಂದೆ ಕೆಲವು ವಿಷಯವನ್ನು ವಿವರಿ ಸಿದ್ದೇವೆ. ಈ ತಿಂಗಳಲ್ಲಿ ಬರತಕ್ಕ ಹಬ್ಬಗಳೆಂದರೆ— ಕಾರ್ತಿಕ ಶು. ೧ ಬಲಿ ಪ್ರತಿಪದ, ವಿಕ್ರಮ ಸಂವತ್ಸರಾರಂಭ, ಗೋವರ್ಧನಪೂಜಾ, ವಹಿಪೂಜಾ. ಶು. ಯಮ ದ್ವಿತಿಯಾ ಕಾರ್ತಿಕ ಶು. ಕಾಲಾಷ್ಟಮಿ, ಶು. ೧೨ ತುಲಸೀ ವಿವಾಹ

ಪಂಢರಪುರದ ಜಾತ್ರೆ. ಚಾತುರ್ಮಾಸವೂ ಸಮಾಪ್ತಿ. ಕಾರ್ತಿಕ ಶು. ೧೪ ವೈಕುಂಠ ಚತುರ್ದಶಿ. ಶು. ೧೫ ತ್ರಿಪುರೀ ಪೌರ್ಣಿಮಾ.

## ತುಲಸೀ ವಿವಾಹ ಕಾರ್ತಿಕ ಶು. ೧೨

ಕೃಷ್ಣನಿಗೆ ಅನೇಕಜನ ಸ್ತ್ರೀಯರಿರುವುದು ಪುರಾಣ ಪ್ರಸಿದ್ಧವಷ್ಟೇ! ಅವರಲ್ಲಿ ಸತ್ಯಭಾಮಾ ಎಂಬವಳು ಒಂದುಸಾರೆ ಎಲ್ಲ ಸತಿಯರಲ್ಲೂ ತಾನು ಬಹು ಚಲುವೆಯೆಂದೂ, ಶ್ರೀಕೃಷ್ಣನು ತನ್ನಲ್ಲಿಯೇ ಹೆಚ್ಚಾಗಿ ಅನುರಾಗ ವುಳ್ಳವನಾಗಿರುವನೆಂದೂ ಅಭಿಮಾನದಿಂದ ಮೆರೆಯಹತ್ತಿದಳು. ಈ ಅಹಂಕಾರ ತುಸು ದಿವಸಗಳಲ್ಲಿ ಮೇರೆದಪ್ಪಿ ಬೆಳೆಯಿತು. ಆಗ ಇವಳಿಗೊಂದು ಪಾಠ ಕಲಿಸಲು ನಾರದ, ದ್ವಾರಕಾ ಪುರಿಗೆ ಆಗಮಿಸಿ ಸತ್ಯಭಾಮೆಯ ಸದನಕ್ಕೆ ಹೋದನು. ಅವನ ದರುಶನದಿಂದ ಅವಳು ಆನಂದಭರಿತಳಾಗಿ ಸತ್ಕರಿಸಿ ಸಿಂಹಾಸನದಲ್ಲಿ ಕುಳ್ಳಿರಿಸಿ, ನಾರದನೇ! ಶ್ರೀಕೃಷ್ಣನು ಜನ್ಮಜನ್ಮಾಂತರ ದಲ್ಲಿಯೂ ನನಗೆ ಪತಿಯಾಗಬೇಕೆಂಬ ಅಭಿಲಾಷೆಯಿದೆ. ಇದಕ್ಕೆ ಏನಾದರೂ ಅಂಥ ವ್ರತ ನಿಯಮಗಳಿದ್ದರೆ, ತಿಳಿಸಬೇಕೆಂದು ಕೇಳಿಕೊಂಡಳು. ಅದಕ್ಕೆ ನಾರದನು – "ಈ ಜನ್ಮದಲ್ಲಿ ದಾನಮಾಡಿದುದನ್ನೇ ಪುನರ್ಜನ್ಮದಲ್ಲಿ ಪಡೆಯು ವನೆಂದು ಶಾಸ್ತ್ರ ಹೇಳುತ್ತಿರುವುದು. ಅಂದರೆ ಈಗ ಧನದಾನ ಮಾಡಿದವನು ಪುನರ್ಜನ್ಮದಲ್ಲಿ ಧನಿಕನಾಗುವನು. ಭೂದಾನ ಮಾಡಿದವನು ಭೂಮಿಗೆ ಒಡೆಯನಾಗುವನು. ಆದುದರಿಂದ ಈ ಜನ್ಮದಲ್ಲಿ ನೀನು ಶ್ರೀಕೃಷ್ಣನನ್ನು ದಾನ ಮಾಡುವುದಾದರೆ ಪುನರ್ಜನ್ಮದಲ್ಲಿ ಇವನೇ ನಿನಗೆ ಪತಿಯಾಗುವನು" ಎಂದನು. ನಾರದನ ನೀತಿಯು ನಿಜವೆಂದು ನಿಶ್ಚಯಿಸಿ, ಸತ್ಯಭಾಮಾ, ತನ್ನ ಪತಿಯಾದ ಶ್ರೀಕೃಷ್ಣನನ್ನು ವಿಧಾನೋಕ್ತವಾಗಿ ನಾರದನಿಗೆ ದಾನ ಮಾಡಿದಳು. ನಾರದನು ಶ್ರೀಕೃಷ್ಣನನ್ನು ತನ್ನ ಶಿಷ್ಯನನ್ನಾಗಿ ಪರಿಗ್ರಹಿಸಿ ವೀಣಾಹೊರುವ ಕೆಲಸಕ್ಕಾಗಿ ನೇಮಿಸಿಕೊಂಡು ಸ್ವರ್ಗಕ್ಕೆ ಹೊರಡಲನು ವಾದನು. ಈ ಸುದ್ದಿ ರುಕ್ಮಿಣಿಹೊರ್ತುಪಡಿಸಿ ಇನ್ನುಳಿದ ಎಲ್ಲ ಸತಿಯರಿಗೆ ತಿಳಿಯಿತು. ಅವರೆಲ್ಲರೂ ಸತ್ಯಭಾಮೆಯಲ್ಲಿಗೆ ಬಂದು, "ಶ್ರೀಕೃಷ್ಣನು ಹದಿನಾರು ಸಾವಿರನೂರೆಂಟು ಜನ ಸ್ತ್ರೀಯರಿಗೂ ಪತಿಯಾಗಿರುವಾಗ ನೀನೊಬ್ಬಳೇ ಅವನನ್ನು ದಾನಮಾಡುವ ಅಧಿಕಾರವೆಲ್ಲಿದೆ ? ಎಂದು ಗರ್ಜಿಸಿ

ದರು. ಆಗ ಸತ್ಯಭಾಮಾ ನಿರುತ್ತರಳಾಗಿ, ನಾರದನನ್ನೇ ಇದಕ್ಕೆ ಪರಿಹಾರ ಕೇಳಿಕೊಂಡಳು. ಆಗ ನಾರದನು–ಅಮ್ಮ ಸತ್ಯಭಾಮಾ, ಇವರನ್ನುವ ಮಾತು ಸತ್ಯವಿದೆ. ಆದರೆ ನೀನು ಕೃಷ್ಣನ ತೂಕ ಸುವರ್ಣ, ರತ್ನ, ಆಭರಣಗಳನ್ನು ಕೊಡುವುದಾದರೆ, ಇವನನ್ನು ನಿಮಗೆ ತಿರುಗಿಕೊಡುವೆನೆ"ಂದು ಹೇಳಿದನು. ಆ ಮಾತಿಗೆ ಸತ್ಯಭಾಮಾ ಒಪ್ಪಿ, ಒಂದು ದೊಡ್ಡ ತಕ್ಕಡಿತರಿಸಿ, ಅದರ ಒಂದು ಪರಡಿಯಲ್ಲಿ ಶ್ರೀಕೃಷ್ಣನನ್ನು ಕುಳ್ಳಿರಿಸಿ ಮತ್ತೊಂದು ಪರಡಿಯಲ್ಲಿ ತನ್ನ ಎಲ್ಲ ಆಭರಣಗಳನ್ನು ಹಚ್ಚಿದಳು. ಆದರೆ ಕೃಷ್ಣಕೂತ ಪರಡಿ ನೆಲಬಿಟ್ಟು ತಿಲ ಮಾತ್ರವಾದರೂ ಮೇಲೇಳಲಿಲ್ಲ. ಸತ್ಯಭಾಮೆಗೆ ಮಾತಾಡಲು ಬಾಯಿ ಬಾರದಾಯಿತು. ಆಗ ಉಳಿದೆಲ್ಲ ಸತಿಯರೂ ತಮ್ಮ ತಮ್ಮ ರತ್ನಾಭರಣ ಗಳನ್ನು ಹಚ್ಚಿದರು. ಆದರೂ ಕೃಷ್ಣ ಕುಳಿತ ಪರಡಿ ನೆಲಹಿಡಿದೇ ಇತ್ತು. ಇದನ್ನು ನೋಡಿ ಸತ್ಯಭಾಮಾ ಹೆದರಿ ಹೌಹಾರಿದಳು. ಆಗ ನಾರದ ರುಕ್ಮಿಣಿಯ ಆಭರಣಗಳನ್ನೂ ಕೂಡ ತರಬೇಕೆಂದು ಸೂಚನೆಯಿತ್ತನು. ರುಕ್ಮಿಣಿಯ ಹೆಸರೆಂದರೆ ಸತ್ಯಭಾಮೆಗೆ ಸೇರುತ್ತಿರಲಿಲ್ಲ. ಆದರೂ ಅನಿವಾರ್ಯ ವಾಗಿ ಅವಳು ರುಕ್ಮಿಣಿಯಿದ್ದಲ್ಲಿಗೆ ಹೋಗಲೇಬೇಕಾಯಿತು. ಸತ್ಯಭಾಮಾ ರುಕ್ಮಿಣಿಯಲ್ಲಿಗೆ ಹೋದಾಗ ಅವಳು ಸ್ನಾನಮಾಡಿ ಶುಚಿರ್ಭೂತಳಾಗಿ ಶುಭ್ರ ಬಟ್ಟೆಗಳನ್ನುಟ್ಟುಕೊಂಡು ತುಲಸೀಪೂಜೆಯಲ್ಲಿ ನಿರತಳಾಗಿದ್ದಳು. ಸತ್ಯಭಾಮಾ ತನ್ನಲ್ಲಿಗೆ ಬಂದುದು ಆಶ್ಚರ್ಯವೆನಿಸಿತು. ರುಕ್ಮಿಣಿಯು ಅವಳನ್ನು ಆದರದಿಂದ ಕರೆದು ಆಸನದಲ್ಲಿ ಕುಳ್ಳಿರಿಸಿ ತನ್ನಲ್ಲಿಗೆ ಬಂದ ಕಾರಣವನ್ನು ಕೌತುಕದಿಂದ ಕೇಳಿದಳು. ಆಗ ಸತ್ಯಭಾಮಾ ನಾರದನಲ್ಲಿ ನಡೆದ ಸಮಾಚಾರವನ್ನು ಸವಿಸ್ತಾರವಾಗಿ ಶ್ರುತಪಡಿಸಿದಳು. ರುಕ್ಮಿಣಿಯು, ಸತ್ಯಭಾಮಾ ಹೇಳಿದುದನ್ನು ಸಾವಧಾನವಾಗಿ ಕೇಳಿ, "ಅಮ್ಮಾ ನನಗೆ ಕೃಷ್ಣನೇ ಸರ್ವಾಭರಣವಾಗಿರುವನು. ನಾನು ಯಾವ ಆಭರಣವನ್ನೂ ಉಪಯೋಗಿಸುವುದಿಲ್ಲ. ಯದ್ಯಪಿ ಇದ್ದರೂ ಜಗತ್ಪತಿಯಾದ ಅವನ ತೂಕ ಆಭರಣ ಅರ್ಪಿಸುವುದು ಯಾರಿಗಾದರೂ ಸಾಧ್ಯವಾದೀತೆ ! ಆದರೆ ಈ ತುಲಸೀದೇವಿಯಲ್ಲಿ ಏನಾದರೂ ಇರುವುದೇ ಹೇಗೆ ? ಕೇಳಿಕೊಳ್ಳುವಾ ! " ಎಂದು ನುಡಿದಳು. ಮತ್ತು ತುಲಸಿಯನ್ನು ಅನನ್ಯಭಾವದಿಂದ ಬೇಡಿಕೊಂಡಳು. ರುಕ್ಮಿಣಿಯ ಪ್ರಾರ್ಥನೆಯ ಮೇರೆಗೆ ತುಲಸಿಯ ವೃಕ್ಷದಿಂದ ಒಂದು ಎಲೆಯು ಉದುರಿತು. ಅದನ್ನೇ ತೆಗೆದು

ಕೊಂಡು ಸತ್ಯಭಾಮೆಯೊಡನೆ ರುಕ್ಮಿಣಿಯು ನಾರದನಿದ್ದಲ್ಲಿಗೆ ತೆರಳಿದಳು. ಮೊದಲು ನಾರದನಿಗೆ ಸಮಸ್ಕರಿಸಿ, ಅನಂತರ ಕೃಷ್ಣನಿಗೆ ನಮಸ್ಕರಿಸಿ, ತುಲಸೀದಲವನ್ನು ತಕ್ಕಡಿಯ ಪರಡಿಯಲ್ಲಿರಿಸಿ ಕೈಜೋಡಿಸಿ ನಿಂತುಕೊಂಡಳು. ಆಗಲೇ ಕೃಷ್ಣನು ಕುಳಿತಿದ್ದ ಪರಡಿ ಮೇಲಕ್ಕೇರಿತು. ಸತ್ಯಭಾಮೆಯ ದರ್ಪ ದೂರಾಯಿತು. ಆಗಲೇ ಅವಳು ರುಕ್ಮಿಣಿಯ ಪಾದಗಳಿಗೆರಗಿ ಕ್ಷಮೆ ಕೇಳಿದಳು. ನಾರದನಾದರೋ ತುಲಸೀದಲವನ್ನು ಕೈಯಲ್ಲಿ ತೆಗೆದುಕೊಂಡು ರುಕ್ಮಿಣಿಯೇ ಕೃಷ್ಣನ ಪಟ್ಟದರಸಿಯೆಂದು ಹಾಡಿಹರಿಸಿ ಹೊರಟುಹೋದರು. ಇತ್ತ ರುಕ್ಮಿಣಿಯು ಸಕಲ ಸೌಭಾಗ್ಯವನ್ನೂ ತುಲಸಿಗೆ ಅರ್ಪಿಸಿ ಇದೆಲ್ಲವೂ ಅವಳ ಲೀಲೆಯೆಂದು ಅತಿಯಾಗಿ ಸ್ತುತಿಸಿದಳು. ಅಂದಿನಿಂದಲೂ ಪ್ರತಿವರುಷ ಆನಂದದಿಂದ ಕಾರ್ತಿಕ ಶು|| ಏಕಾದಶಿಯಲ್ಲಿ ಕೃಷ್ಣನೊಡನೆ ತುಲಸೀ ರೂಪಿಯಾದ ರುಕ್ಮಿಣಿಯ ವಿವಾಹ ಮಾಡುವುದಾಗಿ ಪದ್ಮಪುರಾಣ ಹೇಳುತ್ತದೆ.

## ಕಾಲಾಷ್ಟಮಿ

### ಕಾರ್ತಿಕ ಶುದ್ಧ ಅಷ್ಟಮೀ

ಒಂದು ಸಾರೆ ಬ್ರಹ್ಮನು ತಾನು ಸೃಷ್ಟಿಕರ್ತನೆಂಬ ಅಭಿಮಾನದಿಂದ ಸರ್ವ ದೇವತೆಗಳಿಗೂ ಮಿಗಿಲಾದವನೆಂದು ಹೇಳಿಕೊಳ್ಳತೊಡಗಿದನು. ವಿಷ್ಣು ಇಂದ್ರಾದಿ ದೇವತೆಗಳು ತನಗಿಂತ ಕನಿಷ್ಠರೆಂದು ಧಿಕ್ಕರಿಸಿದನು. "ಶಿವನು ತನ್ನಿಂದ ನಿರ್ಮಿಸಲ್ಪಟ್ಟವನೆಂತಲೂ, ಅವನು ಅಳಹತ್ತಿದ್ದರಿಂದ ಶಿವನಿಗೆ "ರುದ್ರ"ನೆಂಬ ಹೆಸರು ಉತ್ಪನ್ನವಾಯಿತೆಂತಲೂ ಹೇಳತೊಡಗಿದನು. ಬ್ರಹ್ಮನು ಮೊದಲು ಐದು ಮುಖವುಳ್ಳವನಾಗಿದ್ದನು. ತನ್ನ ಮಧ್ಯ ಮುಖದಿಂದ ಶಿವನನ್ನು ಮನವಾರೆ ನಿಂದಿಸತೊಡಗಿದನು. ಬ್ರಹ್ಮನಿಗೆ ಅಹಂಕಾರದ ಅತಿರೇಕ ಮೇರೆ ದಪ್ಪಿ ಬೆಳೆಯಲಾಗಿ ಶಿವನಿಗೆ ಸಿಟ್ಟುಬಂತು, ಅವನು ತತ್‌ಕ್ಷಣವೇ ಕಾಲಭೈರವನನ್ನು ಹುಟ್ಟಿಸಿದನು. ಅವನು ಶಿವನ ಅಪ್ಪಣೆಯ ಮೇರೆಗೆ ಬ್ರಹ್ಮನ ಒಂದು ಶಿರಸ್ಸನ್ನು ಕೈಬೆರಳಿನ ಉಗುರಿನಿಂದ ಕತ್ತರಿಸಿದನು. ಆಗ ಬ್ರಹ್ಮನು ಚತುರ್ಮುಖವುಳ್ಳವನಾದನು, ಅಹಂಕಾರ ದೂರಾಯಿತು. ಶಿವನನ್ನು ಹಲವು ನಾಮಗಳಿಂದ ಸ್ತುತಿಸಿದನು. ಶಿವನು ಕಾಲ ಭೈರವನಿಗೆ ಕಾಶಿಯಲ್ಲಿರಲು ಅಪ್ಪಣೆಯನ್ನಿತ್ತನು. ಕಾಲ ಭೈರವನು ಬಹು ಭೀಕರ ದೇವತೆಯಾಗಿರುವನು.

ಅವನ ಒಂದು ಕೈಯಲ್ಲಿ ತ್ರಿಶೂಲವಿದೆ. ಮತ್ತೊಂದು ಕೈಯಲ್ಲಿ ರಕ್ತಪಾತ್ರೆ, ಇನ್ನೊಂದು ಕೈಯಲ್ಲಿ ಖಡ್ಗ ೪ನೆಯ ಕೈಯಲ್ಲಿ ಹೆಣದ ಶಿರಸ್ಸು ಇದೆ. ಕಾಶಿಯಲ್ಲಿ ಸುಂದರವಾದ ಶಿಲೆಯಿಂದ ನಿರ್ಮಿತವಾದ ವಿಶಾಲವಾದ ಕಾಲಭೈರವನ ಮಂದಿರವಿದೆ. ಅಲ್ಲಿ ಅವನ ಪೂಜಾ ಸತ್ಕಾರವು ವೈಭವ ಪೂರ್ಣವಾಗಿ ಜರ ಗುತ್ತದೆ. ನಾಯಿಯು ಅವನ ವಾಹನವಾದುದರಿಂದ ಕಾಶಿಯ ಕಾಲಭೈರವ ಮಂದಿರದಲ್ಲಿ ನಾಯಿಯ ಕೊರಳಲ್ಲಿ ಭಕ್ತರು ಹೂಮಾಲೆಗಳನ್ನು ಹಾಕಿ ಅವು ಗಳಿಗೆ ನಮಸ್ಕರಿಸುವರು. ಮತ್ತು ಅವುಗಳಿಗೆ ತಿನ್ನಲು ತರತರದ ಮಿಠಾಯಿ ಗಳನ್ನು ಕೊಡುವರು. ಕಾರ್ತಿಕ ಶುದ್ಧ ಅಷ್ಟಮಿಯ ದಿನ ಅಲ್ಲಿ ದೊಡ್ಡ ಮೇಲಾ ಆಗುತ್ತದೆ. ಕಾಲಭೈರವನು ಭೂತ ಪ್ರೇತಗಳಿಗೂ ಒಡೆಯನೆಂದು ಜನರು ಭಾವಿಸುವರು. ಮನೆಯಲ್ಲಿ ಹೊರಗಿನಿಂದ ಸರ್ಪವು ಬಂದು ಸೇರಿಕೊಂಡಿದ್ದರೆ ಅಲ್ಲಿ ಕಾಲಭೈರವನ ಹೆಸರು ಬರೆದರೆ ಅದು ಮನೆಬಿಟ್ಟು ಹೋಗುವದೆಂದು ಜನರು ನಂಬಿದ್ದಾರೆ. ಕಾಲಭೈರವನ ದಾರಗಳನ್ನು ಕಾಶಿಯಿಂದ ಜನರು ತರಿಸಿ ಕೊಂಡು ಕೈಯಲ್ಲಿ ಅಥವಾ ಕೊರಳಲ್ಲಿ ಧರಿಸಿಕೊಳ್ಳುವರು. ಇದರಿಂದ ಕತ್ತಲಲ್ಲಿ ಸಂಚರಿಸಿದರೆ ಭೂತ ಬಾಧೆಯಿಲ್ಲವೆಂದು ಅಜ್ಜನ ಕಥೆಯುಂಟು.

## ಕಾರ್ತಿಕ ವೈಕುಂಠ ಚತುರ್ದಶಿ

ಕಾರ್ತಿಕ ಶುದ್ಧ ಚತುರ್ದಶಿಗೆ ವೈಕುಂಠ ಚತುರ್ದಶಿ ಎಂಬ ಹೆಸರು. ಈ ದಿವಸ ಶೈವ ಮತ್ತು ವೈಷ್ಣವ ಮತಾವಲಂಬಿಗಳು ತಮ್ಮ ತಮ್ಮ ಇಷ್ಟ ದೇವರನ್ನು ಆರಾಧಿಸಿ, ಉಪೋಷಣ ವ್ರತವನ್ನಾಚರಿಸುವರು. ಉಷಃಕಾಲ ದಲ್ಲಿ ಶಿವನನ್ನೂ, ಸಂಧ್ಯಾ ಸಮಯದಲ್ಲಿ ವಿಷ್ಣುವನ್ನೂ ಆರಾಧಿಸುವುದರಿಂದ, ಕೈಲಾಸ ಹಾಗೂ ವೈಕುಂಠ ಪ್ರಾಪ್ತಿಯಾಗುವುದೆಂದು ಆಯಾಯ ದೈವತ ಪೂಜಕರ ಭಾವನೆಯಿದೆ. ಈ ವ್ರತವು ಪೌರಾಣಿಕವಾದುದರಿಂದ ಬಹು ಪ್ರಾಚೀನ ಕಾಲದಿಂದಲೂ ನಡೆದು ಬಂದುದಾಗಿದೆ. ಉತ್ತರ ಭಾರತೀಯರು ಈ ವ್ರತವನ್ನು ಹೆಚ್ಚಾಗಿ ಆಚರಿಸುವರು. ಇದರ ಸಂಬಂಧವಾಗಿ 'ಸನತ್ಕುಮಾರ ಸಂಹಿತೆಯಲ್ಲಿ ಒಂದು ಕಥೆಯು ಹೇಳಲ್ಪಟ್ಟದೆ'.

ಒಮ್ಮೆ ಭಗವಾನ್ ವಿಷ್ಣುವು ವೈಕುಂಠದಿಂದ ಕಾಶೀ ಕ್ಷೇತ್ರಕ್ಕೆ ಬಂದು, ಮಣಿಕಾ ತೀರ್ಥದಲ್ಲಿ ಸ್ನಾನವನ್ನು ಮಾಡಿ, ವಿಶ್ವನಾಥನನ್ನು ಸಹಸ್ರ ಕಮಲ

ಪುಷ್ಪಗಳಿಂದ ಪೂಜಿಸುವ ಸಂಕಲ್ಪ ಮಾಡಿದನು. ಒಂದೊಂದೇ ಕಮಲ ಪುಷ್ಪವನ್ನು ಶಿವನಿಗೆ ಅರ್ಪಿಸಹತ್ತಿದನು. ಅವನ ಭಕ್ತಿ ಪರೀಕ್ಷೆಗಾಗಿ ಶಂಕರನು ಒಂದು ಕಮಲ ಪುಷ್ಪವನ್ನು ಯಾರೂ ಕಾಣದಂತೆ ಕಡಿಮೆ ಮಾಡಲು, ವಿಷ್ಣುವು ಕಮಲ ಪುಷ್ಪಕ್ಕೆ ಸಮಾನವಾದ ತನ್ನ ನೇತ್ರವನ್ನು ಕಿತ್ತು ಶಿವನ ಪಾದಕ್ಕೆ ಅರ್ಪಿಸಿದನು. ಆಗ ವಿಷ್ಣುವಿನ ಭಕ್ತಿಗೆ ಮೆಚ್ಚಿದ ಶಿವನು ಅವನಿಗೆ ಸುದರ್ಶನ ಚಕ್ರವನ್ನು ಅನುಗ್ರಹಿಸಿದನು. ಕಾರ್ತಿಕ ಶುದ್ಧ ಚತುರ್ದಶಿಯ ದಿವಸ ಹರಿಹರರ ಏಕತ್ರ ಸಮಾಗಮದ ಸ್ಮಾರಕವಾಗಿ ಶೈವ ಮತ್ತು ವೈಷ್ಣವರು ಈ ವ್ರತವನ್ನಾಚರಿಸುವರು. ಯಾವ ಸುದರ್ಶನ ಚಕ್ರವು ಹರನಿಂದ ಹರಿಯ ಹಸ್ತವನ್ನು ಹೊಂದಿ ಸಮಸ್ತ ಸುರ, ನರೋರಗರ ಸುಖಸಾಮ್ರಾಜ್ಯಕ್ಕೆ ಮಾರ್ಗದರ್ಶಕವಾಯಿತೋ! ಅದೇ ಸುದರ್ಶನ ಚಕ್ರವು ಇಂದು ನಮ್ಮ ಭಾರತ ಸಾಮ್ರಾಜ್ಯದ ಚಿಹ್ನವಾಗಿ ಸರ್ವರಿಗೂ ಸುಖವನ್ನುಂಟು ಮಾಡುವುದಾಗಿದೆ.

## ಕಾರ್ತಿಕ ತ್ರಿಪುರೀ ಪೌರ್ಣಿಮಾ

ಕಾರ್ತಿಕ ಶುದ್ಧ ಪೌರ್ಣಿಮೆಯ ದಿವಸ ಭಗವಾನ್ ಶಂಕರನು ತ್ರಿಪುರ ಸಂಹಾರ ಮಾಡಿ ತ್ರಿಲೋಕವಾಸಿಗಳಿಗೆ ಸೌಖ್ಯವನ್ನುಂಟು ಮಾಡಿದ್ದರಿಂದ ತ್ರಿಪುರೀ ಪೌರ್ಣಿಮೆಯೆಂದು ಹೆಸರು.

## ತ್ರಿಪುರ ಸಂಹಾರ

ತಾರಕಾಸುರನ ಪುತ್ರರಾದ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂಬ ಮೂರು ಜನ ರಾಕ್ಷಸರು ತಮ್ಮ ತಂದೆಯಂತೆ ತಾವೂ ತ್ರಿಲೋಕಾಧಿಪತಿ ಗಳಾಗಬೇಕೆಂತಲೂ, ಅಮರತ್ವವನ್ನು ಪಡೆಯಬೇಕೆಂತಲೂ ನಿರ್ಧರಿಸಿ ಒಂದು ವಿಶಾಲವಾದ ಅರಣ್ಯವನ್ನು ಪ್ರವೇಶಿಸಿ ಅಂತರಂಗದಲ್ಲಿ ಬ್ರಹ್ಮದೇವನನ್ನು ಪರಮನಿಷ್ಠೆಯಿಂದ ಧ್ಯಾನಿಸುತ್ತ ಪಂಚಾಗ್ನಿ ಮಧ್ಯದಲ್ಲಿ ತಪವಂ ಗೈಯ್ಯ ಲಾರಂಭಿಸಿದರು. ದಿನ ಉರುಳಿದಹಾಗೆಲ್ಲ ಇವರ ತಪಸ್ಸು ಕಠಿಣವಾಗ ತೊಡಗಿತು. ಘೋರ ತಪಸ್ಸಿನಿಂದುಂಟಾದ ಜ್ವಾಲೆಯು ದಿಶೆದಿಶೆಗಳನ್ನು ವ್ಯಾಪಿ ಸಿತು. ಅದನ್ನು ಸಹಿಸಲಾರದೆ ಸಕಲ ಜೀವಿಗಳು ದೇವರಿಗೆ ಮೊರೆಹೊಕ್ಕು ಈ ತಪೋಜನ್ಯತಾಪವನ್ನು ತಡೆಯಬೇಕೆಂದು ದೀನ ಸ್ವರದಿಂದ ಬೇಡಿಕೊಂಡರು.

ಇದನ್ನು ಅರಿತು ಸೃಷ್ಟಿಕರ್ತನಾದ ಬ್ರಹ್ಮನು ದಯಾರ್ದ್ರ ಹೃದಯನಾಗಿ ಈ ದುಃಖ ದೂರಮಾಡಲು ಆ ರಾಕ್ಷಸತ್ರಯರ ತಪೋಭೂಮಿಗೆ ಬಂದು, ಅವರಿಗೆ ಪ್ರತ್ಯಕ್ಷನಾದನು. "ಎಲೈ ರಾಕ್ಷಸರೇ! ನಿಮ್ಮಿತರಹದ ತಪಸ್ಸಿಗೆ ನಾನು ಮೆಚ್ಚಿರುವೆನು. ಇನ್ನು ನಿಮ್ಮ ಕಠಿಣವಾದ ತಪಸ್ಸನ್ನು ನಿಲ್ಲಿಸಿ ನಿಮ್ಮ ಇಷ್ಟಾರ್ಥವನ್ನು ಪಡೆದುಕೊಂಡು ಸುಖವಾಗಿ ಜೀವಿಸಿರಿ" ಎಂದು ನುಡಿದನು. ಕೂಡಲೆ ಆ ಮೂರು ಜನ ರಾಕ್ಷಸರು ತಮ್ಮ ಮುಂದೆ ಬ್ರಹ್ಮ ಬಂದು ನಿಂತುದನ್ನು ನೋಡಿ, ಆನಂದ ಪುಲಕಿತರಾಗಿ, ಅವನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ನುಡಿದುದೇನಂದರೆ–"ದೇವ ನೀನು ನಮಗೆ ಪ್ರಸನ್ನನಾಗಿರುವೆ ಯಾದರೆ ನಮಗೆ ಎಂದೂ ಮರಣ ವಾಗದಂತೆ ಆಶೀರ್ವದಿಸು" ಎಂದು ವಿನಯದಿಂದ ಕರಜೋಡಿಸಿ ಶಿರಬಾಗಿ ಬೇಡಿಕೊಂಡರು. ಇವರ ಅಂತರಂಗವನ್ನರಿತ ಅಜನು, ಈ ವರವನ್ನು ಇವರಿಗೆ ಅನುಗ್ರಹಿಸುವುದು ಅನುಚಿತವೆಂದು ಭಾವಿಸಿದನು. ಸವಿನುಡಿಯಿಂದಲೇ ಅವರನ್ನು ಸಂತೈಸಬೇಕೆಂದು ಮನದಲ್ಲಿ ಆಲೋಚಿಸಿ ಅವರನ್ನು ಕುರಿತು ನುಡಿದುದೇನಂದರೆ–ಪುತ್ರರೇ ! "ಜಾತಸ್ಯ ಹಿ ಧೃವಂಮೃತ್ಯುಃ" ಎಂಬಂತೆ ಹುಟ್ಟಿದವನು ಒಂದಿಲ್ಲೊಂದು ದಿನ ಸಾಯಲೇಬೇಕು. ಅಷ್ಟೇ ಏಕೆ? ಚರಾಚರ ವಸ್ತುಗಳನ್ನು ನಿರ್ಮಿಸಿ, ಜಗಜ್ಜನಕನೆಂದು ಹೊಗಳಿಸಿಕೊಳ್ಳುವ ನಾನಾದರೂ ಈ ಹಿಂದೆ ಹಲವುಸಾರೆ ಸತ್ತು ಹುಟ್ಟಿರುವೆನು. ಈಗಲಾದರೂ ಮುಂದೆ ಒಂದು ದಿವಸ ಮರಣ ಹೊಂದುವವನೇ ಆಗಿರುವೆನು. ಆದರೆ ಆದಿ, ಅಂತ ಶೂನ್ಯನಾಗಿ ಜಗದೇಕ ದೇವನಾದ ಆ ಪರಶಿವನು ಮಾತ್ರ ಎಂದಿಗೂ ಸಾಯನು. ಸಮಸ್ತ ವಸ್ತುವು ಅವನ ಒಡೆತನದಲ್ಲಿದೆ. ಹೀಗಿರುವಲ್ಲಿ ನನಗೆ ಅಸಾಧ್ಯವಾಗಿರುವ ಈ ವರವನ್ನು ಅದೆಂತು ಕೊಡಲಾದೀತು! ಅದ್ದರಿಂದ ಇದರ ಹೊರತಾಗಿ ಉಳಿದ ಯಾವವರಗಳನ್ನಾದರೂ ಬೇಡಿದರೆ ಅವುಗಳನ್ನು ಅನುಗ್ರಹಿಸಲು ಸಮರ್ಥನಾಗಿರುವೆನು" ಎಂದನು.

ಆಗ ರಾಕ್ಷಸರು–"ದೇವ ! ನೀನು ನುಡಿದುದೆಲ್ಲವೂ ನಿಜವಿದೆ. ಆದರೆ ಸ್ವರ್ಗ–ಮರ್ತ್ಯ–ಪಾತಾಳವಾಸಿಗಳಿಗೆ ಯಾರಿಗೂ ಪ್ರವೇಶಿಸಲು ಸಾಧ್ಯವಲ್ಲದ ಮೂರು ಪಟ್ಟಣಗಳನ್ನು ಅಂತರಿಕ್ಷದಲ್ಲಿ ನಮ್ಮ ನಿವಾಸಕ್ಕಾಗಿ ನಿರ್ಮಿಸಿಕೊಳ್ಳುವೆವು. ಆ ತ್ರಿಪುರಗಳು ನಿರಂತರ ತಿರುಗುತ್ತಿರುವಂತೆಯೂ, ದೇವಮಾನ ಸಹಸ್ರ ಸಂವತ್ಸರಗಳಿಗೊಮ್ಮೆ ಆ ಮೂರು ಪಟ್ಟಣಗಳು ಒಂದು ನಿಮಿಷ

ಮಾತ್ರ ನಿಲ್ಲುವಂತೆಯೂ, ಆದೇ ಸಮಯಕ್ಕೆ ಯಾರಾದರೂ ಒಂದೇ ಬಾಣ ದಿಂದ ಆ ತ್ರಿಪುರಗಳನ್ನು ಹೊಡೆದು ಕೆಡವಿದರೆ ಮಾತ್ರ ಆಗ ನಮಗೆ ಮರಣ ವುಂಟಾಗುವಂತೆಯೂ ಅನುಗ್ರಹಿಸಬೇಕೆಂದು" ಬೇಡಿಕೊಂಡರು. ಅಜನು ಅವರ ಅಪೇಕ್ಷೆಯಂತೆ ಅನುಗ್ರಹಿಸಿ ಅಂತರ್ಧಾನನಾದನು.

ಆ ನಂತರ ಅವರು ದಾನವ ಶಿಲ್ಪಿಯಾದ 'ಮಯ'ನಿಂದ ಒಂದೇ ಕೀಲ ವುಳ್ಳ ಮೂರು ಪಟ್ಟಣಗಳನ್ನು ಅಂತರಿಕ್ಷದಲ್ಲಿ ನಿರ್ಮಿಸಿದರು. ಸತತವಾಗಿ ತೀವ್ರ ವೇಗದಿಂದ ತಿರುಗುತ್ತಿರುವ ತ್ರಿಪುರಗಳಲ್ಲಿ ಆ ದಾನವತ್ರಯರು ವಾಸ ಮಾಡುತ್ತಿರುವವರಾಗಿ ತಮ್ಮ ದಾಯಾದಿಗಳಾದ ದೇವತೆಗಳಿಗೆ ಹಲವು ಬಗೆ ಯಾಗಿ ಹಿಂಸೆ ಕೊಡುತ್ತ ತ್ರಿಲೋಕ ಒಡೆಯರಾಗಿ ತಿರುಗಹತ್ತಿದರು. ಆದರೂ ಅವರಿಗೆ ತೃಪ್ತಿ ಇರಲಿಲ್ಲ. ಯಾಕಂದರೆ-ತಮಗೆ ದೇವಮಾನ ಸಹಸ್ರ ಸಂವತ್ಸರ ಕ್ಕಾದರೂ ನಾವು ಸಮೀಪಿಸುವುದೆಂದು ಅವರು ಅರಿತ್ತಿದ್ದರು. ಆದಕ್ಕಾಗಿ ಮೃತ್ಯುಂಜಯನಾದ ಮಹದೇವನ ಆರಾಧನೆಯಲ್ಲಿಯೂ, ಜಪತಪಗಳಲ್ಲಿಯೂ, ಕಾಲಕಳೆಯುವವರಾಗಿ, ಶಿವಲಿಂಗವನ್ನು ಸದಾ ದೇಹದಲ್ಲಿ ಧರಿಸಿದವರಾಗಿ, ಸತತ ಶಿವನಾಮೋಚ್ಚಾರ ಮಾಡುತ್ತ ಸದಾಚಾರಿಗಳಾಗಿರುತ್ತಿದ್ದರು. ಅಷ್ಟೇ ಅಲ್ಲ ಆ ತ್ರಿಪುರ ನಿವಾಸಿಗಳಾದ ರಾಕ್ಷಸರಾದರೂ ಪರೋಪಕಾರ ಪರಾಯ ಣರೂ, ಪರಧನಕಾಸೆಗೈಯ್ಯದವರೂ, ಪರನಾರೀ ಸಹೋದರರೂ, ದಾನ ಶೂರರೂ, ಶಿವಭಕ್ತಿ ಸಂಪನ್ನರೂ, ಉತ್ತಂಗಲಿಂಗಾಂಕಿತರೂ, ಸತ್ಯಸಂಧರೂ ಆಗಿದ್ದರು. ಅಲ್ಲದೇ ಅವರಿಗೆ ಕೊಲೆ-ಸುಲಿಗೆ ಸೇರದು. ಅತ್ಯಾಚಾರಕ್ಕೆ ಅಣು ಮಾತ್ರವೂ ಆಸ್ಪದವಿರಲಿಲ್ಲ. ಆ ತ್ರಿಪುರುಗಳಲ್ಲಿರುವ ಸ್ತ್ರಿಯರಾದರೂ ತ್ರಿಲೋಕ ಸುಂದರಿಯರಾಗಿದ್ದರೂ ತ್ರಿಕಾಲದಲ್ಲಿಯೂ ತ್ರಿನಯನ ನಾಮೋಚ್ಚಾರ ದಲ್ಲಿಯೇ ನಿರತರಾಗಿರುವರು. ಮತ್ತು ಪತಿಸೇವಾ ದುರಂಧರರಾಗಿ ಪರಮ ಪತಿವ್ರತೆಯಾಗಿದ್ದರು. ಆ ಪಟ್ಟಣ ನಿವಾಸಿಗಳು ರಾಕ್ಷಸ ಜನ್ಮದಲ್ಲಿ ಜನಿ ಸಿದ್ದರೂ ಸದ್ಗುಣಗಣದಿಂದ ಸುಶೋಭಿತರಾಗಿ, ಶಿವಾನುಗ್ರಹಕ್ಕೆ ಪಾತ್ರ ರಾಗಿದ್ದರು. ಅಂತೆಯೇ ಅವರು ಹೋದ ಹೋದಲ್ಲೆಲ್ಲ ಜಯಶಾಲಿಗಳಾ ಗಿಯೇ ತಮ್ಮ ಪಟ್ಟಣಕ್ಕೆ ಹಿಂತಿರುಗಿ ಬರುತ್ತಿದ್ದರು. ಆದರೆ ಅವರಿಗೆ ಶೌರ್ಯ ಔದಾರ್ಯಾದಿ ಗುಣಗಳು ಹೆಚ್ಚಿದ ಹಾಗೆಲ್ಲ ಅವರು ಅತ್ಯಂತ ಅಹಂಕಾರಿಗಳಾಗಿ ಸಕಲ ಸಾಧುಸಂತರನ್ನೂ ಮನುಮುನಿಗಳನ್ನೂ ಹೆಚ್ಚು ಹೆಚ್ಚಾಗಿ ಹಿಂಸಿಸ

ತೊಡಗಿದರು. ಅಷ್ಟೇ ಅಲ್ಲ ಬ್ರಹ್ಮ ಮೊದಲಾದ ದೇವಾನು ದೇವತೆಗಳನ್ನೂ ರಣರಂಗದಲ್ಲಿ ಸೋಲಿಸಿ ಸ್ಥಾನ ಭ್ರಷ್ಟರನ್ನಾಗಿ ಮಾಡಿ ಸಕಲ ಲೋಕಗಳನ್ನು ತಾವೇತಾವಾಗಿ ಆಳತೊಡಗಿದರು. ಆಗ ಇಂದ್ರಾದಿ ದೇವತೆಗಳು ಗತಿಗಾಣದೇ ವಿಷ್ಣುವಿನಲ್ಲಿಗೆ ಹೋಗಿ, ತಾರಕನ ಪುತ್ರರು ಕ್ರೂರ ಉಪದ್ರವವನ್ನು ಅವನಿಗೆ ವಿವರಿಸಿ ತಮ್ಮನ್ನು ಯಾವ ವಿಧದಿಂದಲಾದರೂ ಸಂರಕ್ಷಿಸಬೇಕೆಂದು ಬೇಡಿ ಕೊಂಡರು. ವಿಷ್ಣುವು ಸಕಲಸುರರನ್ನು ಸಂತೈಸಿ "ಎಲೈ ದೇವತೆಗಳೇ! ಅವರು ಬ್ರಹ್ಮನ ವರಬಲದಿಂದ ಮರಣರಹಿತರಾಗಿ ಮತ್ತರಾಗಿರುವರು. ಹಾಗೂ ಅವರು ಸದಾಚಾರದಿಂದಲೂ, ಶಿವಭಕ್ತಿಯಿಂದಲೂ, ಸತಿಯರ ಪಾತಿವ್ರತ್ಯ ಭಾವದಿಂದಲೂ, ಶಿವಾನುಗ್ರಹಕ್ಕೆ ಪಾತ್ರರಾಗಿರುವರು. ಶಂಕರನ ಕೃಪೆಯು ಅವರ ಮೇಲಿರುವ ವರೆಗೂ ಅವರು ಯಾರಿಗೂ ಹೆದರಲಾರರು. ಶಿವಾನುಗ್ರಹ ವೆಂಬ ವಜ್ರಕವಚವು ಅವರ ಮೇಲಿರುವ ವರೆಗೂ ಅವರನ್ನು ಯಾರೂ ಸೋಲಿಸಲಾರರು. ಅವರನ್ನು ಜಯಿಸಬೇಕಾದರೆ ಅವರಲ್ಲಿರುವ ಸದಾಚಾರ ವನ್ನೂ, ಶಿವಭಕ್ತಿಯನ್ನೂ ಅವರ ಪತ್ನಿಯರ ಪಾತಿವ್ರತ್ಯವನ್ನೂ ಹಾಳು ಮಾಡಬೇಕು. ಅವರನ್ನು ಕುಮಾರ್ಗಿಗಳನ್ನಾಗಿಯೂ, ಕಾಮುಕರನ್ನಾಗಿಯೂ ಮಾಡಬೇಕು. ಆದ್ದರಿಂದ ನೀವಾರಾದರೂ ಅಲ್ಲಿ ಹೋಗಿ ಉಪಾಯದಿಂದ ಅವರ ಹೃದಯದಲ್ಲಿ ಅರಿಷಡ್ವರ್ಗದ ಬೀಜವನ್ನು ಬಿತ್ತಿ ವಿಷಯಲಂಪಟ ರಾಗುವಂತೆ ಮಾಡಿಬಂದರೆ ಅವರನ್ನು ಆಗಲೇ ಸೋಲಿಸಬಹುದು." ಎಂದನು.

ಆಗ ದೇವತೆಗಳೆಲ್ಲರೂ "ದೇವ! ಈ ಕಠಿಣ ಕಾರ್ಯವು ನಿನ್ನಿಂದಲೇ ಸುಲಭ ಸಾಧ್ಯವಲ್ಲದೇ ಬೇರೆ ಯಾರಿಂದಲೂ ಆಗಲಾರದು. ಆದ್ದರಿಂದ ನೀನೇ ಅಲ್ಲಿಗೆ ಹೋಗಿ ಅವರನ್ನು ನಾಶಮಾಡಬೇಕು." ಎಂದು ಬೇಡಿಕೊಂಡರು. ಆಗ ವಿಷ್ಣುವು, ನಾಸ್ತಿಕ ಸಂನ್ಯಾಸಿ ವೇಷವನ್ನು ಧರಿಸಿ ನಾರದನನ್ನು ತನ್ನ ಶಿಷ್ಯನನ್ನಾಗಿ ಮಾಡಿಕೊಂಡು ಅಜ್ಞಾನ ಮಾರ್ಗದರ್ಶಕ ಶಾಸ್ತ್ರಗ್ರಂಥಗಳನ್ನು ರಚಿಸಿ ಅವುಗಳನ್ನು ತನ್ನೊಡನೆ ತೆಗೆದುಕೊಂಡು ತ್ರಿಪುರಗಳನ್ನು ಪ್ರವೇಶಿ ಸಿದನು. ಅಲ್ಲಿರುವ ಅನೇಕ ರಾಕ್ಷಸರು ಇವರ ರೂಪು ಲಾವಣ್ಯಕ್ಕೂ, ವಾಕ್ ಚಾತುರ್ಯಕ್ಕೂ ಮರುಳಾಗಿ ಇವರನ್ನು ಆದರದಿಂದ ಕರೆದು ಸತ್ಕರಿಸಹತ್ತಿದರು. ಆ ನಾಸ್ತಿಕ ಸಂನ್ಯಾಸಿಯು ಅಥರ್ವಣವೇದ ವಿದ್ಯೆಯ ಬಲದಿಂದ ಆ ರಾಕ್ಷಸ ರನ್ನು ಬೆರಗುಗೊಳಿಸಿ ಇವರು ಇಚ್ಛಿಸಿದ ಪದಾರ್ಥಗಳನ್ನೆಲ್ಲ ಇಂದ್ರಜಾಲ

ವಿದ್ಯೆಯಿಂದ ಒದಗಿಸಿಕೊಟ್ಟು ತಮ್ಮಲ್ಲಿ ವಿಶ್ವಾಸ ಹುಟ್ಟುವಂತೆ ಮಾಡಿಕೊಂಡನು. ಆ ತ್ರಿಪುರವಾಸಿಗಳೆಲ್ಲರೂ ಇವನ ವಿದ್ಯಾಬುದ್ಧಿಗಳಿಗೆ ಮರುಳಾಗಿ ಇವನೇ ಸಾಕ್ಷಾತ್ ಪರಬ್ರಹ್ಮನೆಂದು ನಂಬಿ ತಮ್ಮ ಸರ್ವಸ್ವವನ್ನೇ ಅರ್ಪಿಸಿ ಇವನಿಗೆ ಶಿಷ್ಯರಾದರು. ತ್ರಿಲೋಕಾಧಿಪತಿಗಳಾದ ರಾಕ್ಷಸತ್ರಯರೂ ಸಹ ಆ ಸಂನ್ಯಾಸಿಯ ಪ್ರಭಾವಕ್ಕೆ ಒಳಗಾಗಿ ಬಳಿಯಲ್ಲಿಯೇ ನಿಂತು ಕಟಿಬದ್ಧರಾಗಿ ಸೇವೆ ಸಲ್ಲಿಸಹತ್ತಿದರು.

ಹೀಗೆ ತ್ರಿಪುರವಾಸಿಗಳೆಲ್ಲರೂ ತಮ್ಮ ಶಿಷ್ಯರಾದುದನ್ನು ನೋಡಿ ಆ ವೇಷಧಾರಿ ಗುರುಶಿಷ್ಯರು ರಾಕ್ಷಸ ಸಮೂಹವನ್ನೆಲ್ಲ ತಮ್ಮಲ್ಲಿಗೆ ನಿತ್ಯ ಬರ ಮಾಡಿಕೊಂಡು ಅವರಿಗೆ ತಮ್ಮ ಧರ್ಮೋಪದೇಶ ಕೊಡಹತ್ತಿದರು. "ರಾಕ್ಷಸ ಕುಲೋತ್ತಂಸರೇ! ನಾವು ಇಷ್ಟು ದಿವಸಗಳ ವರೆಗೂ ನಮ್ಮ ಮಹಿಮಾತಿಶಯವನ್ನು ಪ್ರತ್ಯಕ್ಷ ಪ್ರಮಾಣಗಳಿಂದ ತೋರಿಸುತ್ತಿರುವೆವು. ಆದರೂ ಇಲ್ಲಿ ಅನೇಕರು ಇನ್ನೂ ತಮ್ಮ ಅಜ್ಞಾನದಿಂದ ತಿರುಕನಾದ ಆ ಶಿವನನ್ನೇ ಆರಾಧಿಸುತ್ತಿರುವರು. ಆ ಶಂಕರನು ಗತಿಗಾಣದೇ ವ್ಯಾಘ್ರಚರ್ಮಾಂಬರವನ್ನುಟ್ಟು, ಹೆಣದ ಬೂದಿಯನ್ನು ಬಳಿದುಕೊಂಡು, ರುಂಡಮಾಲೆಯನ್ನು ಕೊರಳಲ್ಲಿ ಧರಿಸಿದವನಾಗಿ ಸುಡಗಾಡಿನಲ್ಲಿ ತಿರುಗುತ್ತಿರುವನು. ಇಂಥವನನ್ನು ಏಕೆ ಪೂಜಿಸುತ್ತಿರುವಿರಿ? ಇವನಲ್ಲಿ ಅದಾವ ಮಹಿಮೆಯನ್ನು ಕಂಡಿರುವಿರಿ? ಅವನನ್ನು ಲಿಂಗರೂಪಿನಿಂದ ನಿಮ್ಮ ಪರಿಶುದ್ಧವಾದ ಹೃದಯದೊಳಗಿಟ್ಟು ಕಾದುಕೊಂಡಿರುವುದು ನಿಮಗೆ ಹೇಯವೆನಿಸುವುದಿಲ್ಲವೇ! ಅವನ ಪೂಜೆಗಾಗಿಯೇ ನೀವು ಮೂರು ಹೊತ್ತು ಸ್ನಾನ ಮಾಡುತ್ತಿರುವಿರಿ. ಮಲಮಯವಾದ ನಿಮ್ಮ ಶರೀರವನ್ನು ಮೂರು ಹೊತ್ತು ತೊಳೆದರೆ ಅದು ಎಂದಿಗಾದರೂ ಪವಿತ್ರವಾದೀತೇ! ಆ ಭಿಕ್ಷುಕನ ಪ್ರಸನ್ನತೆಗಾಗಿ ಅನಶನಾದಿ ವ್ರತನಿಯಮಗಳನ್ನು ಆಚರಿಸಿ ವೃಥಾಶರೀರ ಶೋಷಣೆಮಾಡಿಕೊಳ್ಳುತ್ತಿರುವಿರಿ! ಸುವರ್ಣರತ್ನಾಭರಣಗಳನ್ನು ಧರಿಸುವುದರ ಬದಲು ಮರದಜೊಳ್ಳು ಬೀಜವಾದ ರುದ್ರಾಕ್ಷಿಯನ್ನು ಕಲ್ಲಿನ ಲಿಂಗವನ್ನೂ ಕೊರಳಲ್ಲಿ ಹಾಕಿಕೊಂಡು ಹಣೆಗೆ ಬೂದಿ ಬಡಕೊಂಡರೆ ಸ್ವರ್ಗ ಸಿಕ್ಕುವುದೇ? ಎಲ್ಲಿದೇ ಸ್ವರ್ಗ? ಇಲ್ಲಿ ನಾವು ಸುಖಸೌಭಾಗ್ಯವನ್ನು ಅನುಭವಿಸುವುದೇ ಸ್ವರ್ಗ; ಸುಖಸಂಪತ್ತು ಇದ್ದರೂ ಅವುಗಳನ್ನು ಅನುಭವಿಸದೇ ಆತ್ಮನನ್ನು ಕೊರಗಿಸುವುದೇ ನರಕ. ಹಲವರು ಹೊಟ್ಟೆ

ಹೊರಕರು ಶಿವನೇ ಶ್ರೇಷ್ಠನೆಂದು ಹೇಳುತ್ತ ಎಲ್ಲರನ್ನೂ ತಮ್ಮಂತೆಯೇ ಮಾಡಿಕೊಳ್ಳಲು ಈ ಆಟ ಹೂಡಿರುವರು.

ಸತ್ಯಾಸತ್ಯವನ್ನು ನೀವು ವಿಮರ್ಶೆಮಾಡದೇ ಈ ರೀತಿಯಾಗಿ ಅನುಸರಿಸುತ್ತಿರುವುದು ಅನುಚಿತವಲ್ಲವೇ? ನೀವು ಪೂಜ್ಯವೆಂತಲೂ, ಪವಿತ್ರವೆಂತಲೂ ಹೇಳುತ್ತಿರುವ ವೇದಗಳಂತೂ ಅಸತ್ಯವಾದವುಗಳು. ಇನ್ನಾದರೂ ನೀವು ತುಂಬಾ ವಿಚಾರಮಾಡಿ ನೋಡಿರಿ. ನಾವು ಹೇಳುವುದು ನಿಜವೆಂದು ನಿಮಗೆ ತೋರಿಬಂದರೆ, ನಮ್ಮ ಪವಿತ್ರ ಗ್ರಂಥಗಳನ್ನು ಅಧ್ಯಯನಮಾಡಿ ಸಕಲೈಶ್ವರ್ಯವನ್ನು ಪಡೆಯಿರಿ. ಪಾಪವೆಂಬುವದೂ, ಪರಲೋಕವೆಂಬುವದೂ ಕಲ್ಪಿತ ಕಥೆಯಾಗಿದೆ. ಪುರಾಣವೇದಾಂತ ಶ್ರವಣವು ಮಾನವನನ್ನು ದುರ್ಬಲನನ್ನಾಗಿ ಮಾಡುವುದಾಗಿದೆ. ರಾಕ್ಷಸ ಕುಲಶಿರೋಮಣಿಗಳೇ! ನಿಮ್ಮಲ್ಲಿ ವನಿತಾ ಸ್ರಕ್‌ಚಂದನಾದಿ ಭೋಗ್ಯ ಸಂಪತ್ತು ಸಾಕಷ್ಟು ಇದೆ. ಅದನ್ನೆಲ್ಲ ಅನುಭವಿಸದೇ ಈ ಸಮಯದಲ್ಲಿ ಬೈರಾಗಿಗಳಂತೆ ಬೂದಿಬಡಿದುಕೊಂಡು ತಿರುಗುತ್ತಿರುವ ನಿಮ್ಮನ್ನು ನೋಡಲಾರದೇ ಕನಿಕರಪಟ್ಟು ನಾವಾಗಿಯೇ ಬಂದಿದ್ದೇವೆ. ಆದರೂ ಹಿಂದಿನ ಮೂಢನಂಬಿಕೆಯು ನಿಮ್ಮನ್ನು ಬಿಡಲೊಲ್ಲದು. ಈ ವರೆಗೂ ನಾವು ಹೇಳಿದುದೆಲ್ಲ ನಿಜವೆಂದು ನಂಬಿ ಯಾರು ನಡೆಯುವರೋ! ಅವರೇ ನಮಗೆ ಶಿಷ್ಯರಾಗಲು ಯೋಗ್ಯರು, ಅಂಥವರಿಗೆ ನಾವು ಅವರ ಇಷ್ಟಾರ್ಥವನ್ನು ಈಡೇರಿಸುವೆವು." ಎಂಬುದಾಗಿ ಮನ ಒಲಿಯುವಂತೆ ರಸಭರಿತವಾಗಿ ಅವರಿಗೆ ದುರ್ಬೋಧೆಮಾಡಿದರು.

"ವಿನಾಶನಾಲೇ ವಿಪರೀತ ಬುದ್ಧಿಃ" ಎಂಬಂತೆ ರಾಕ್ಷಸರಾದರೋ ಪೂರ್ವಾಪರವಾಗಿ ಏನೂ ವಿಚಾರಿಸಲಿಲ್ಲ. ಇವರು ಹೇಳುವುದೆಲ್ಲವೂ ನಿಜವೆಂದು ನಂಬಿವರು. ಆಗಲೇ ಎಲ್ಲರೂ ಕೊರಳಲ್ಲಿ ಧರಿಸಿದ ಶಿವಲಿಂಗವನ್ನು ಕಿತ್ತುದೂರ ಬಿಸುಟಿದರು. ಭಸ್ಮವನ್ನು ಹೊಳೆಗೆ ಹಾಕಿದರು. ಶಿವಸ್ತೋತ್ರ ಮಾಡಿದ ನಾಲಿಗೆಯಲ್ಲಿ ಶಿವನಿಂದೆ ನರ್ತನಮಾಡಹತ್ತಿತು. ಎಲ್ಲಿ ನೋಡಿದರಲ್ಲಿ ಅನ್ಯಾಯ ಅತ್ಯಾಚಾರ ಅವಿವೇಕತನ ಇತ್ಯಾದಿ ಕುಕರ್ಮಗಳೆಂಬ ಕಾರ್ಮೋಡ ಕವಿಯಿತು. ಪುರುಷರ ಸ್ಥಿತಿಯು ಹೀಗಿರುವಾಗ ರಾಕ್ಷಸ ಸ್ತ್ರೀಯರಾದರೋ ಆ ಉಭಯ ಬಿಕ್ಷುಕರ ರೂಪುಲಾವಣ್ಯಕ್ಕೂ ವಾಕ್‌ಚಾತುರ್ಯಕ್ಕೂ ಮರುಳಾಗಿ ಚಿತ್ತ

ಚಾಂಚಲ್ಯ ಹೊಂದಿ ಜಾರಿಣಿಯರಾದರು. ಅರಿಷಡ್ವರ್ಗವನ್ನು ಜಯಿಸಿದ ಆ ರಾಕ್ಷಸರು ಪುನಃ ಅವುಗಳ ಗೆಳೆತನ ಕಟ್ಟಿದರು. ಕಾಮಕ್ರೋಧಾದಿಗಳು ಒಂದರ ಹಿಂದೊಂದು ಆ ರಾಕ್ಷಸರ ಮನಸ್ಸನ್ನು ಅತಿಕ್ರಮಿಸಿ ತಮ್ಮ ಶಕ್ತಿಯನ್ನು ತೋರಿಸತೊಡಗಿದವು. ಆಗ ಭಕ್ತಿಜ್ಞಾನಗಳು ಕೂಡಲೇ ಆ ಪಟ್ಟಣವನ್ನು ಬಿಟ್ಟು ಹೊರಟುಹೋದವು.

ಹೀಗೆ ವಿಷ್ಣು-ನಾರದರು ಅವರಿಗೆ ಪರಮೇಶ್ವರನಲ್ಲಿ ವೈರಭಾವವನ್ನೂ, ವೇದಗಳಲ್ಲಿ ಅವಿಶ್ವಾಸವನ್ನೂ ಹುಟ್ಟಿಸಿ ಶಿವನಲ್ಲಿ ಭಕ್ತಿಹೀನರನ್ನಾಗಿ ಮಾಡಿದರು. ತಾವು ಕೈಕೊಂಡ ಕಾರ್ಯವು ಸಫಲವಾಯಿತೆಂದು ಆನಂದ ಪಡುತ್ತಾ ಯಾರಿಗೂ ತಿಳಿಯದಂತೆ ಆ ತ್ರಿಪುರಗಳನ್ನು ಬಿಟ್ಟು ತಮ್ಮ ಸ್ಥಾನಕ್ಕೆ ಬಂದರು.

ಆಗ ವಿಷ್ಣುವಿಗೆ ಜ್ಞಾನೋದಯವಾಗಿ ತಾವು ಈ ವರೆಗೂ ಮಾಡಿದುದೆಲ್ಲ ಮಹಾಪರಾಧವೆಂದೂ, ಶಿವಭಕ್ತರನ್ನು ಶಿವನಿಂದಕರನ್ನಾಗಿ ಮಾಡಿದುದರಿಂದ ಪರಶಿವನ ಪ್ರಕೋಪಕ್ಕೆ ಪಾತ್ರನಾಗಿರುವೆನೆಂದೂ ಆಲೋಚನೆಯೊಳಗಾಗಿ ನಾರದನೊಡನೆ ಇದರ ಪ್ರಾಯಶ್ಚಿತ್ತವೇನೆಂದು ವಿಚಾರಿಸತೊಡಗಿದನು. ಆಗ ಅಶರೀರವಾಣಿಯು- "ಎಲೈ ವಿಷ್ಣು-ನಾರದರೇ! ನೀವು ಶಿವನ ಅಪ್ಪಣೆಯಿಲ್ಲದೇ ದೇವತೆಗಳ ಅನುಮತಿಯಂತೆ ಶಿವಭಕ್ತರನ್ನೆಲ್ಲ ದುರ್ಮಾರ್ಗಿಗಳನ್ನಾಗಿ ಮಾಡಿ ಮಹಾಪರಾಧಿಗಳಾಗಿರುವಿರಾದ್ದರಿಂದ ಇಂದ್ರಾದಿ ದೇವತೆಗಳೊಡನೆ ಮಾನಸ ಸರೋವರದಲ್ಲಿ ಸ್ನಾನವನ್ನಾಚರಿಸಿ, ತಪವಂಗೈದು, ಶಿವನ ದಿವ್ಯದರ್ಶನ ಪಡೆಯಿರಿ. ಇಲ್ಲವಾದರೆ ನೀವು ಮುಂದಿನ ಮಾರ್ಗವನ್ನು ಕಾಣಲಾರಿರಿ" ಎಂದು ನುಡಿಯಿತು.

ಆಗ ವಿಷ್ಣುನಾರದರು ಸಕಲ ದೇವತೆಗಳೊಡನೆ ಸ್ನಾನದಿಂದ ಪರಿಶುದ್ಧರಾಗಿ ಶಿವನನ್ನು ಕುರಿತು ಶತಸಂವತ್ಸರಗಳವರೆಗೂ ಕಠಿಣತರ ತಪಸ್ಸನ್ನಾಚರಿಸಿದರು. ಆಗ ದಯಾನಿಧಿಯಾದ ಶಂಕರನು ಅವರೆಲ್ಲರಿಗೂ ಪ್ರತ್ಯಕ್ಷನಾಗಿ ಶಿವಭಕ್ತಿಯನ್ನು ಉಪದೇಶಮಾಡಿದನು. ಆಗ ಅವರೆಲ್ಲರೂ "ದೇವಾ! ಇನ್ನು ಮೇಲಾದರೂ ಆ ಕ್ರೂರ ದೈತ್ಯರನ್ನು ಸಂಹರಿಸಿ ನಮ್ಮೆಲ್ಲರನ್ನೂ ಉದ್ಧಾರ ಮಾಡು; ಈ ಕಾರ್ಯವು ನಿನ್ನಿಂದಲ್ಲದೇ ಬೇರೆ ಯಾರಿಂದಲೂ ಸಾಧ್ಯವಾಗಲಾರದು" ಎಂದು ಬೇಡಿಕೊಳ್ಳಲು, ಶಂಕರನು ನಂದೀಶನನ್ನು ಕರೆದು-

"ತ್ರಿಪುರವಿಜಯ ಯಾತ್ರೆಗೆ ಸರ್ವವೂ ಸಿದ್ಧವಾಗಲಿ" ಎಂದು ಅಪ್ಪಣೆಯಿತ್ತನು. ಆ ಪ್ರಕಾರವಾಗಿ ನಂದೀಶನು ತಾನು ಚತುರಂಗಬಲವನ್ನೂ, ಶಿವನ ಆರೋಹಣಕ್ಕಾಗಿ ದಿವ್ಯರಥವನ್ನೂ ಸಿದ್ಧಪಡಿಸಿರುವುದನ್ನು ಆ ಕ್ಷಣವೇ ಶಂಕರನಿಗೆ ಅರಿಕೆ ಮಾಡಿಕೊಂಡನು. ಆಗಲೇ ಪರಶಿವನು ಸಕಲಸೇನಾಪರಿವೃತನಾಗಿ ತ್ರಿಪುರಗಳ ಸಮೀಪಕ್ಕೆ ಬಂದು ಯುದ್ಧಸೂಚಕವಾದ ಭೇರಿಯನ್ನು ಹೊಡಿಸಿದನು. ಇದನ್ನು ನೋಡಿ ಮದೋನ್ಮತ್ತರಾದ ರಾಕ್ಷಸರು– "ದೇವಸೈನ್ಯವು ತಮ್ಮ ತ್ರಿಪುರಗಳನ್ನು ಮುತ್ತಲು ಬಂದಿರುವುದೆಂದು" ರಾಕ್ಷಸತ್ರಯರಿಗೆ ಅರಿಕೆ ಮಾಡಿಕೊಂಡರು. ಆಗ ತಾರಕಾಕ್ಷ–ಕಮಲಾಕ್ಷ–ವಿದ್ಯುನ್ಮಾಲಿ ಈ ಮೂವರು ತಮ್ಮ ಚತುರಂಗ ಸೇನಾಪರಿವೃತರಾಗಿ ಬಂದು ದೇವಸೈನ್ಯವನ್ನು ಎದುರಿಸಿದರು. ಇಕ್ಕೆಡೆಯವರಿಗೂ ಅನೇಕ ಕಾಲ ಕಾಳಗ ನಡೆಯಿತು. ದೇವತೆಗಳು ತಮ್ಮ ತಮ್ಮ ದಿವ್ಯಾಸ್ತ್ರಗಳನ್ನು ಅಭಿಮಂತ್ರಿಸಿ ಬಿಡುತ್ತಿದ್ದರು. ರಾಕ್ಷಸರಾದರೋ ತಮ್ಮ ಶಂಬರೀ ವಿದ್ಯಾಬಲದಿಂದ ಕಣ್ಣಿಗೆ ಕಾಣಿಸಿಕೊಳ್ಳದವರಾಗಿ ಶಿಲೆಗಳನ್ನೂ, ಪರ್ವತಶ್ರೇಣಿಗಳನ್ನೂ, ವೃಕ್ಷಗಳನ್ನೂ ಮಳೆಯಂತೆ ಸುರಿಸುತ್ತ ಕಪಟತನದಿಂದ ಕಾದಾಡುತ್ತಿದ್ದರು. ದೇವತೆಗಳು ಅವುಗಳನ್ನು ತಮ್ಮ ದಿವ್ಯಾಸ್ತ್ರಗಳಿಂದ ಕತ್ತರಿಸುತ್ತ ರಾಕ್ಷಸರ ಅಂಗಪ್ರತ್ಯಂಗಗಳಲ್ಲಿ ನಡುವಂತೆ ಬಾಣಗಳನ್ನು ಬಿಡುತ್ತಿದ್ದರು. ಹೀಗೆ ಉಭಯ ಪಕ್ಷದವರೂ ಜಯಾಪಜಯವನ್ನು ಕಾಣದವರಾಗಿ ಹಲವು ಕಾಲದ ವರೆಗೂ ಹೋರಾಡಿದರು. ಕೊನೆಗೆ ಸತ್ಯಸಂಧರಾದ ದೇವತೆಗಳ ತೀಕ್ಷ್ಣ ಬಾಣಗಳಿಗೆ ಲೆಕ್ಕವಿಲ್ಲದಷ್ಟು ರಾಕ್ಷಸರು ಆಹುತಿಯಾದರು. ಹೊಳೆಯಂತೆ ಹರಿಯುತ್ತಿರುವ ರಕ್ತಪ್ರವಾಹದಲ್ಲಿ ರಾಕ್ಷಸರ ವಿಕಲ ದೇಹಗಳು ತೇಲಾಡಹತ್ತಿದವು.

ಇತ್ತ ಪರಶಿವನು ತನ್ನ ದಿವ್ಯ ಧನುಸ್ಸಿನಲ್ಲಿ ವಿಷ್ಣುವೇ ಬಾಣವಾಗಿರುವ ಪಾಶುಪತಾಸ್ತ್ರವನ್ನು ಏರಿಸಿ ಕರ್ಣಾಂತವಾಗಿ ಜಗ್ಗಿ ತ್ರಿಪುರಗಳ ನಿಲ್ಲುವಿಕೆಯನ್ನೇ ಏಕದೃಷ್ಟಿಯಿಂದ ನಿರೀಕ್ಷಿಸುತ್ತಿದ್ದನು. ಆಗ ದೇವ ಸಹಸ್ರ ಸಂವತ್ಸರಗಳು ಗತಿಸಲಾಗಿ ಬ್ರಹ್ಮನ ವರದಂತೆ ಆ ತ್ರಿಪುರಗಳು ತಿರುಗುವಿಕೆಯನ್ನು ಬಿಟ್ಟು ನಿಂತವು. ಕೂಡಲೇ ಪಶುಪತಿಯು ತನ್ನ ಪಾಶುಪತಾಸ್ತ್ರವನ್ನು ಪ್ರಯೋಗಿಸಲು, ಅದು ಬ್ರಹ್ಮಾಂಡವನ್ನು ಭೇದಿಸುವಂತೆ ಅಗ್ನಿಕಣಗಳನ್ನು ಸುರಿಸುತ್ತ ತೀವ್ರ ಗತಿಯಿಂದ ಹೋಗಿ ಆ ತ್ರಿಪುರಗಳ ಕೀಲವನ್ನು ಕತ್ತರಿಸಿ

ಭೂಮಿಗೆ ಉರುಳಿಸಿತು. ಪಾಶುಪತಾಸ್ತ್ರದ ಜ್ವಾಲೆಗೆ ಸಿಕ್ಕ ತ್ರಿಪುರಗಳು ಕ್ಷಣಾರ್ಧದಲ್ಲಿಯೇ ಸುಟ್ಟು ಭಸ್ಮವಾದವು. ಇದನ್ನೆಲ್ಲ ಮೇಘದ ಮರೆಯಲ್ಲಿ ನಿಂತು ನೋಡುತ್ತಿದ್ದ ದೇವತೆಗಳು ಜಗತ್ಪಾಲಕನಾದ ಶಂಕರನಿಗೆ ಪುಷ್ಪವೃಷ್ಟಿ ಗರೆದರು.

ಈ ಪ್ರಕಾರವಾಗಿ ತ್ರಿಪುರಗಳ ದಹನವನ್ನೂ, ತಮ್ಮ ಸರ್ವನಾಶವನ್ನೂ ನೋಡಿ ತಾರಕಪುತ್ರರು ಭಯಭಕ್ತಿಯುತರಾಗಿ ಶಂಕರನ ಸನ್ನಿಧಿಗೆ ಬಂದು ಸಾಷ್ಟಾಂಗ ಪ್ರಣಾಮವನ್ನು ಮಾಡಿ- ದೇವಾ! ನಾವು ಯಾವಾಗಲೂ ನಿನ್ನನ್ನೇ ಆರಾಧಿಸಿ ಸುಖಿಗಳಾಗಿದ್ದೆವು. ಬೌದ್ಧ ಭಿಕ್ಷುಕರ ದುರ್ಬೋಧೆಗೆ ದುರ್ಮಾರ್ಗ ಪ್ರವೃತ್ತರಾದೆವು. ಅಜ್ಞಾನವಶಾತ್ ಹಾದಿ ತಪ್ಪಿದವರಾಗಿ ನಿನ್ನ ಅವಕೃಪೆಗೆ ಕಾರಣರಾದೆವು. ನಾವು ಮಾಡಿದ ಶತಾಪರಾಧವನ್ನು ಕ್ಷಮಿಸ ಬೇಕು. ಈಗ ನಿನ್ನ ದಿವ್ಯ ದರ್ಶನದಿಂದ ಧನ್ಯರಾದೆವು. ನಮ್ಮನ್ನು ನಿನ್ನ ಕೈಲಾಸದ ದ್ವಾರಪಾಲಕರನ್ನಾಗಿ ಪರಿಗೃಹಿಸಬೇಕು. ಅಡಿಗಡಿಗೆ ತಮ್ಮ ದರ್ಶನ ದಿಂದ ನಾವು ಪುನೀತರಾಗುವೆವು ಎಂದು ದೈನ್ಯದಿಂದ ಬೇಡಿಕೊಂಡರು. ಆಗ ದಯಾನಿಧಿಯಾದ ಶಂಕರನು ಅವರಿಷ್ಟದಂತೆ 'ತಥಾಸ್ತು' ಎಂದು ಕೈಲಾಸ ವನ್ನು ಸೇರಿದನು.

ಈ ಪ್ರಕಾರವಾಗಿ ಜಗತ್ಪತಿಯಾದ ಶಂಕರನು ಕಾರ್ತಿಕ ಶುದ್ಧ ಪೌರ್ಣ ಮೆಯ ದಿನ ತ್ರಿಪುರ ಸಂಹಾರವನ್ನು ಮಾಡಿ ಜಗತ್ತಿಗೆ ಶಾಂತಿಯನ್ನುಂಟು ಮಾಡಿದನು. ಆ ಸ್ಮಾರಕವಾಗಿ ಅಂದಿನ ದಿವಸಕ್ಕೆ ತ್ರಿಪುರೀ ಪೌರ್ಣಿಮಾ ಎಂಬ ಹೆಸರು ಬಂದಿದೆ. ಕರ್ನಾಟಕದ ಅನೇಕ ಶಿವಾಲಯಗಳಲ್ಲಿ ಈ ದಿವಸ ಶಿವನ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿರಿಸಿ ದೊಡ್ಡ ಉತ್ಸವವನ್ನು ಆಚರಿ ಸುವರು. ಮತ್ತು ಅನೇಕ ಕಡೆಯಲ್ಲಿ ಈ ಪೌರ್ಣಿಮೆಯ ಐದು ದಿವಸ ಪೂರ್ವ ದಲ್ಲಿಯೇ ಓಣಿ ಓಣಿಗಳಲ್ಲಿ ಸುಂದರವಾದ ಮಂಟಪವನ್ನು ರಚಿಸಿ ಅಲ್ಲಿ ಕಾಶೀ ದೇವಿಯ ಮೂರ್ತಿಯನ್ನು ಇರಿಸಿ ಅಲಂಕರಿಸಿ ಪೂಜಿಸುವುದುಂಟು. ಈ ಕೊನೆಯ ದಿನವಾದ ಪೌರ್ಣಿಮೆಯ ದಿವಸ ಗೌರೀ ಪೂಜೆಯನ್ನು ವೈಭವ ದೊಡನೆ ಪೂಜಿಸಿ ವಿಸರ್ಜಿಸುವರು. ಈ ಶರತ್ಕಾಲದ ಬೆಳದಿಂಗಳಲ್ಲಿ ತರುಣಿಯರು ತಮ್ಮ ಮನೆಯ ಮುಂದಿನ ಅಂಗಣದಲ್ಲಿ ತಂಡೋಪತಂಡವಾಗಿ ಸೇರಿ ಗೌರೀ

ಗಾಢವನ್ನು ಮನದಣಿಯುವಂತೆ ಹಾಡಿ, ರಾತ್ರಿಯೆಲ್ಲ ತರತರದ ಆಟ ಪಾಟ ಗಳನ್ನಾಡಿ ಹಿರಿ ಹಿರಿ ಹಿಗ್ಗುವರು. ಆಗ ಬೆಳದಿಂಗಳು ದೇಹಕ್ಕೆ ಹಿತಕರವಾಗಿರುವುದು. ಯಾಕಂದರೆ ವರ್ಷಾಕಾಲದಲ್ಲಿ ಮೇಘಗಳು ಗಾಢವಾಗಿ ಕವಿಯುತ್ತವೆ. ಶರತ್ ಕಾಲದಲ್ಲಿ ಮೇಘಗಳು ಇಲ್ಲದಾಗುವುದರಿಂದ ಸೂರ್ಯನ ಕಿರಣಗಳು ಏಕ ಕಾಲದಲ್ಲಿಯೇ ಪ್ರಖರವಾಗುತ್ತವೆ. ಮತ್ತು ನೀರಿನಲ್ಲಿಯೂ ಧಾನ್ಯಾದಿಗಳಲ್ಲಿ ಆಮ್ಲತೆಯಿರುವುದರಿಂದಲೂ ಪಿತ್ತವು ಪ್ರಕೋಪ ಹೊಂದುವುದು. ಆದ್ದರಿಂದ ರಾತ್ರಿ ದೇಹಕ್ಕೆ ಬೆಳದಿಂಗಳ ಭೋಜನ ಮಾಡಿಸುವುದರಿಂದ ಪಿತ್ತ ಶಮನವಾಗಿ ಆರೋಗ್ಯ ವುಂಟಾಗುವದು. ಹೀಗೆ ಈ ತಿಂಗಳು ಹಬ್ಬಗಳನ್ನಾಚರಿಸಿ ಭಕ್ಷ್ಯ-ಭೋಜ್ಯಾದಿ ಪದಾರ್ಥಗಳನ್ನು ಸೇವಿಸುವುದಾದರೂ ಪಿತ್ತೋಪ ಶಮನಕ್ಕಾಗಿಯೇ ಇದೆ. "ಕಷಾಯತಿಕ್ತ ಮಧುರಃ ಪಿತ್ತಮನ್ಯೈತು ಕುರ್ವತೇ" ಎಂಬ ವಾಕ್ಯವೇ ಇದಕ್ಕೆ ಸಾಕ್ಷಿಯಾಗಿದೆ. ಆ ತಿಂಗಳು ಜನತೆಯು ಸುಖವಾಗಿ ಉಂಡು ನಲಿದು ನರ್ತಿಸಲು ಹಬ್ಬಗಳು ಕಾರಣವಾಗಿದ್ದರೂ, ಅದರ ಜೊತೆಗೆ ಆಗಿನ ಋತುಮಾನವೂ ಆನಂದಕ್ಕೆ ಅವಕಾಶ ಕೊಟ್ಟಿದೆ. ಹೇಗೆಂದರೆ– ಇಲ್ಲಿಗೆ ಮಳೆಗಾಲ ಮುಗಿಯಿತು. ಹಬ್ಬದ ಸುಗ್ರಾಸ ಭೋಜನದಿಂದ ವಾತಾವರಣವು ತಂಪಾಗಿಯೂ, ಮಳೆಗಾಲ ಕೊನೆಗಾಣುವುದರಿಂದ ತಂಪಾಗಿಯೂ, ಪಕ್ವವಾದ ಮುಂಗಾರಿ ಬೆಳೆಯಿಂದ ಸಂಪಾಗಿಯೂ ಇದೆ. ಸಮಸ್ತ ನದನದಿಗಳ ಪ್ರವಾಹವು ಇಳಿದು ತಿಳಿಯಾಗಿ ಜಲವು ನಾರಿಕೇಲ ನೀರಿನಂತೆ ಶುಭ್ರವೂ, ರುಚಿಕರವೂ ಆಗಿರುವುದು. ಎಲ್ಲ ಗಿಡಬಳ್ಳಿಗಳು ಸೃಷ್ಟಿಸೌಂದರ್ಯವನ್ನು ನೋಡಿ ನಗುತ್ತಿರುವಂತೆ ಪ್ರಫುಲ್ಲ ಕುಸುಮಗಳಿಂದಲೂ, ಅರಳಿದ ಮೊಗ್ಗೆಗಳಿಂದಲೂ ಮನೋಹರವಾಗಿ ಶೋಭಿಸುತ್ತಿರುವವು. ಹಣ್ಣು ಕಾಯಿಗಳ ಭಾರದಿಂದ ಬಗ್ಗಿದ ಹಲವಾರು ತರುಮರಗಳು, ಮಂದಮಾರುತನಿಂದ ಕಿಂಚಿತ್ ಕಂಪಿಸಲ್ಪಟ್ಟವುಗಳಾಗಿ ದಾರಿಕಾರರಿಗೆ ಫಲಪ್ರದಾನ ಮಾಡಲು ಕೈಬೀಸಿ ಕರೆಯುವಂತೆ ಕಾಣುತ್ತಿರುವವು. ವರ್ಷಾಕಾಲದ ಮೇಘಗಳು ಅಹೋರಾತ್ರಿಯಾಗಿ ಬಿಡುವಿಲ್ಲದೆ ತಿರುಗಿತಿರುಗಿ ಬೇಸತ್ತು ವಿಶ್ರಾಂತಿಗಾಗಿ ಸಮುದ್ರಶಯ್ಯಾದಲ್ಲಿ ಸುಪ್ತಾವಸ್ಥೆಯನ್ನು ಹೊಂದುವವು. ಆಗ ಮೇಘಗಳ ಹೊದಿಕೆಯಿಂದ ಹೊರಬಿದ್ದು ಸೂರ್ಯನು ಭೂರಮೆಗೆ ತನ್ನ ಬಿಸಿಲೆಂಬ ಹೊಸ ಶೀರೆಯನ್ನು ಹೊದಿಸುವನು. ಚಂದ್ರನಾದರೋ ಇರುಳು ರಾತ್ರಿದೇವಿಗೆ

ಶುಭ್ರವಸ್ತ್ರವನ್ನುಡಿಸಿ ಶೃಂಗರಿಸುವನು. ತರುಗುಲ್ಮಾದಿಗಳು ತಾವು ಬಾಳಿ ಬೆಳೆವುದಕ್ಕೆ ಜೀವಾಳವಾಗಿರುವ ಧರಣೀದೇವಿಗೆ ನಿತ್ಯ ಉಷಃಕಾಲದಲ್ಲಿ ಹೊಸ ಹೊಸ ಕುಸುಮಗಳನ್ನು ಸಮರ್ಪಿಸಲು ಸಿದ್ಧವಾಗಿ ನಿಂತಿರುವವು. ಈ ಕಾರ್ತಿಕ ಮಾಸದ ಕೊನೆಯಲ್ಲಿ ಮುಂಗಾರೀ ಪೀಕು ಬಲಿತು ಬೆಳೆಗಾಗಿರುವುದು. ಮುಂಗಾರಿ ಜೋಳದ ದೇಂಟುಗಳು ಮುತ್ತಿನ ತೆನೆಗಳನ್ನು ತಲೆಯ ಮೇಲೆ ಹೊತ್ತುಕೊಂಡು ತಮ್ಮನ್ನು ಬೆಳೆಸಿ ಬಲಿಸಿದ ಭೂದೇವಿಗೆ ಬಾಗಿ ನಮಸ್ಕರಿಸುವಂತೆ ಕಂಗೊಳಿಸುತ್ತಿರುವವು. ತರತರದ ವನಸ್ಪತಿಗಳು ಪ್ರಾತಃಕಾಲದ ಸುಮಧುರ ಶೀತಲ ಜಲಪಾನದಿಂದ ಪರರ ಹಿತಕ್ಕಾಗಿ ಪುಷ್ಟ ದೇಹಿಗಳಾಗಿ, ಋಗ್ಣಾಲಯದ ಯಾತ್ರೆಗೆ ವೈದ್ಯರ ಆಮಂತ್ರಣಕ್ಕೆ ಸಿದ್ಧವಾಗಿರುವವು. ಹೀಗೆ ಸೃಷ್ಟಿದೇವಿಯ ಮಹೋತ್ಸವವನ್ನು ಜಡವಸ್ತುಗಳು ಆದರದಿಂದ ಆಚರಿಸುತ್ತಿರುವಾಗ, ಮಾನವನು ಈಗ ಸುಮ್ಮನಿರುವುದು ಸರಿಯಲ್ಲವೆಂದು ಭಾವಿಸಿ ತಾವಾದರೂ ಈ ಶರತ್ಕಾಲದ ಸುವರ್ಣಸಮಯದಲ್ಲಿ (ಕಾರ್ತಿಕ ಮಾಸದಲ್ಲಿ) ಒಂದೊಂದು ದಿನಕ್ಕೆ ಹಲವಾರು ದೀಪಗಳನ್ನು ಸಾಲುಸಾಲಾಗಿರಿಸಿ ಬೆಳಗುವನು. ತಮ್ಮ ಕರ್ತವ್ಯ ಮುಗಿಸಿ ಕಡಲಕಡೆಗೆ ಕತ್ತಲಲ್ಲಿ ಹೊರಟಿರುವ ಮೇಘಗಳಿಗೆ ಮುಂದಿನ ಮಾರ್ಗ ಕಾಣಲೆಂದು ಆಕಾಶ ದೀಪಗಳನ್ನು ಬಿಡುವನು. ರಾತ್ರಿ ಸೃಷ್ಟಿದೇವಿಯ ಸೌಂದರ್ಯವನ್ನು ಸರ್ವಾಂತರ್ಯಾಮಿಯು ಸಂದರ್ಶನ ಮಾಡಿಕೊಳ್ಳಲೆಂದು ಗುಡಿಯಮುಂದೆ ನೂರಾರು ಅಡಿ ಎತ್ತರವುಳ್ಳ ದೀಪಸ್ತಂಭದಲ್ಲಿ ಸಹಸ್ರಾರು ದೀಪಗಳನ್ನು ಹಚ್ಚಿ ಉಜ್ವಲಗೊಳಿಸುವನು.

## ಕಾರ್ತಿಕ ಮಾಸ–ದೀಪಾವಳೀ ಮಹೋತ್ಸವ

ಈ ಹಬ್ಬವು ಯಾವ ಕಾಲದಿಂದ ಪ್ರಾರಂಭವಾಯಿತೆಂದು ನಿಶ್ಚಿತವಾಗಿ ಹೇಳಲು ಶಕ್ಯವಿಲ್ಲ. ಆದರೆ ಪೌರಾಣಿಕ ಕಾಲದಲ್ಲಿ, ಶಿವ, ವಿಷ್ಣು ಮೊದಲಾದ ದೇವತೆಗಳ ಲೀಲಾತಿಶಯವನ್ನು ಜನರು ಅರಿತು ಅಂದಿನಿಂದಲೂ, ಈ ಹಬ್ಬವನ್ನು ಆಚರಿಸುತ್ತ ಬಂದಿರುವರೆಂಬುದು ನಿರ್ವಿವಾದವಾಗಿದೆ. 'ಆಲ್ಬುರೇನೀ' ಎಂಬ ಸಂಶೋಧಕನು ೧೧ನೇ ಶತಮಾನದಲ್ಲಿ ಪರದೇಶದಿಂದ ಹಿಂದುಸ್ತಾನಕ್ಕೆ ಬಂದಿದ್ದನು. ಅವನು ತನ್ನ ಇತಿಹಾಸದಲ್ಲಿ, ಹಿಂದೂ ಜನರ ಆಚಾರ, ವಿಚಾರ, ರಾಜಕೀಯ ಹಾಗೂ ಸಾಮಾಜಿಕ ಸ್ಥಿತಿಯನ್ನು ವಿವರಿಸಿದ್ದಾನೆ. ಮತ್ತು ಆಗ

ಈ ದೇಶದಲ್ಲಿ ಆಚರಿಸುತ್ತಿರುವ ದೀಪಾವಳೀ ಹಬ್ಬದ ವಸ್ತುಸ್ಥಿತಿಯನ್ನು ತಾನು ಬರೆದ ಇತಿಹಾಸದಲ್ಲಿ ವರ್ಣಿಸಿದ್ದಾನೆ. ಆ ಆಧಾರದ ಮೇಲಿಂದ ಈ ಹಬ್ಬವು ೯೦೦ ವರುಷಗಳ ಹಿಂದೆಯೂ ಆಚರಣೆಯಲ್ಲಿದ್ದುದಾಗಿ ತಿಳಿದುಬರುವುದು.

ಈ ಹಬ್ಬವನ್ನಾಚರಿಸಲು ದೇವರ ವಿಧವಿಧವಾದ ಲೀಲೆಗಳು ಕಾರಣ ವಾಗಿವೆ. ಕಾರ್ತಿಕ ಮಾಸದಲ್ಲಿ ಒಂದು ತಿಂಗಳದ ವರೆಗೆ ದೀಪೋತ್ಸವವನ್ನು ಆನಂದದೊಡನೆ ಆಚರಿಸುವರು. ಚಿತ್ರವಿಚಿತ್ರ ಬಣ್ಣದ ಹಾಳೆಗಳಿಂದ ಆಕಾಶ ಬುಟ್ಟಿಗಳನ್ನು ರಚಿಸಿ ಅದರಲ್ಲಿ ದೀಪವನ್ನಿರಿಸಿ ಸರ್ವರೂ ಶಿವನಿಗೆ ಬೆಳಗುವರು. ಮಠ ಮಂದಿರಗಳಲ್ಲಿಯೂ, ರಾಜಬೀದಿಗಳಲ್ಲಿಯೂ ಸಾಲು ಸಾಲಾಗಿ ದೀಪ ಗಳನ್ನು ಹಚ್ಚಿ ದೇವರನ್ನು ಪೂಜಿಸುತ್ತಿರುವುದರಿಂದ, ಈ ಹಬ್ಬಕ್ಕೆ 'ದೀಪಾವಳಿ ಹಬ್ಬವೆಂಬ' ಹೆಸರು ಬಂದಿದೆ.

ಒಮ್ಮೆ ಶಿವಸುತನಾದ ಷಣ್ಮುಖನು, ಲೋಕಕಂಟಕನಾದ 'ತಾರಕಾ ಸುರ'ನನ್ನು ಸಂಹರಿಸಿ ದೇವಾನುದೇವರ ಶೆರೆ ಬಿಡಿಸಿ ಸರ್ವರಿಗೂ ಸುಖ ವನ್ನುಂಟು ಮಾಡಿದನು. ಆಗ ಪರಮ ಹರ್ಷಿತಳಾದ ಪಾರ್ವತಿಯು, ಕುಮಾರ ನಿಗೆ ಅಕ್ಕರದಿಂದ ಆರತಿ ಬೆಳಗಿದಳು. ಇದೇ ಕಾರ್ತಿಕಮಾಸ ಬಂಗಾಲ ದೇಶದಲ್ಲಿ ಅನೇಕಾನೇಕ ಆಸ್ತಿಕ ಜನರು ಕಾರ್ತಿಕಶುದ್ಧ ಪಂಚಮಿಯಿಂದ ಪ್ರತಿ ದಿವಸ ರಾತ್ರಿ ಪ್ರಹರಪ್ರಹರದಲ್ಲಿಯೂ, ಈ ಕಾರ್ತಿಕೇಯ (ಷಣ್ಮುಖ) ನನ್ನು ಅಮಾವಾಸ್ಯೆಯ ವರೆಗೂ ಭಕ್ತಿಯಿಂದ ಪೂಜಿಸುತ್ತಿರುವರು. ಹೀಗೆಯೇ ಮಹಾರಾಷ್ಟ್ರ ಕರ್ನಾಟಕ ಮೊದಲಾದ ಪ್ರಾಂತಗಳಲ್ಲಿಯೂ, ಈ ತಿಂಗಳು ಸಂಭ್ರಮದೊಡನೆ ದೀಪೋತ್ಸವವನ್ನು ಮಾಡುವರು. ಉಜ್ಜಯನಿಯ ಜಗದ್ಗುರು ಸದ್ಧರ್ಮಪೀಠದ ಅಧಿದೇವತೆಯಾದ "ಸಿದ್ಧೇಶ್ವರನನ್ನು" ಈ ತಿಂಗಳ ವರೆಗೂ ದೀಪಗಳಿಂದಲಂಕರಿಸಿ ವೈಭವದೊಡನೆ ಪೂಜಿಸುತ್ತಿರುವರು. ಕೊನೆಯ ದಿವಸ ಸುತ್ತುಮುತ್ತಲಿನ ಸಹಸ್ರಾರು ಜನರು ಆ ದೇವರ ಗುಡಿಗೆ ಶಿಖರದಿಂದ ಸಹಸ್ರಾರು ಡಬ್ಬಿ ಎಣ್ಣೆಯನ್ನು ಅಭಿಷೇಕ ಮಾಡಿ, ಅಂದು ರಾತ್ರಿ ಆನಂದದೊಡನೆ ದೀಪೋತ್ಸವ ಮಾಡುವರು. ಹೀಗೆಯೇ ದಕ್ಷಿಣ ದೇಶದಲ್ಲಿ ಮುಖ್ಯ ಮುಖ್ಯ ದೇವಸ್ಥಾನಗಳಲ್ಲಿ ಸಂಭ್ರಮದೊಡನೆ ದೀಪೋತ್ಸವವು ಜರ ಗುತ್ತಿರುವ ವಿಷಯ ಸುಪ್ರಸಿದ್ಧವಾಗಿದೆ. ಈ ದೀಪಾವಳಿಯ ಮಹೋತ್ಸವದಲ್ಲಿ

ಮುಂಬೈ ನಗರವು, ಇಂದ್ರನ ರಾಜಧಾನಿಯಾದ ಅಮರಾವತೀ ಪಟ್ಟಣವನ್ನು ನೆನಪಿಗೆ ತಂದುಕೊಡುತ್ತದೆ. ಜಪಾನ ದೇಶದಲ್ಲಿ ತಾವು, ಕಾನ್‌ಫ್ಯೂಸಿಯಸನ್, ಬೌದ್ಧ ಹೀಗೆ ಮೂರು ಪಂಥಗಳಿವೆ. ಇವುಗಳಲ್ಲಿ 'ತಾವೂ' ಧರ್ಮದವರು ಈ ಕಾರ್ತಿಕ ಮಾಸದಲ್ಲಿ ಒಂದು ದೊಡ್ಡ ಹರಿವಾಣದಿಂದ ದೀಪವನ್ನು ತಯಾರಿಸಿ, ತಮ್ಮ ಮನೆಯ ಮೇಲಿನ ಕುಂಬಿಯ ಮೇಲಿರಿಸಿರುತ್ತಾರೆ. ಆ ದೀಪವು ಆರದಂತೆ ರಾತ್ರಿಯೆಲ್ಲ ದಕ್ಷತೆಯಿಂದ ಕಾಯುತ್ತ ಕೂಡ್ರುವರು. ಹೀಗಿರುವಲ್ಲಿ ಆ ದೀಪವು ಆಕಸ್ಮಾತ್ ಆರಿತೆಂದರೆ, ಒಂದು ವರುಷದ ವರೆಗೂ ಆ ಮನೆತನಕ್ಕೆ ಅಶುಭವೆಂತಲೂ, ದೀಪವು ರಾತ್ರಿಯೆಲ್ಲ ಆರದಂತೆ ಪ್ರಜ್ವಲಿಸಿದರೆ, ಆ ವರುಷ ಸುಖಸಮೃದ್ಧಿಯೆಂತಲೂ ಭಾವಿಸುವರು. ಈ ದೀಪಾವಳಿಗೆ 'ದಿವಾಲಿ' ಎಂತಲೂ ಅನ್ನುವುದು ಉತ್ತರ ಭಾರತದಲ್ಲಿ ವಿಶೇಷವಿದೆ. ಇದಕ್ಕೊಂದು ಸುಂದರವಾದ ಉದಂತವಿದೆ.

ಒಮ್ಮೆ ಭಗವಾನ್ ಶಂಕರನು ಪಾರ್ವತಿಯೊಡನೆ ಪಗಡಿಯ ಜೂಜಾಟ ಆಡುತ್ತಿರುವಾಗ ತನ್ನ ಸಕಲ ಸಂಪತ್ತನ್ನು ಅವಳಿಗೆ ಸೋತು ಗಂಗಾದಡದಲ್ಲಿ ದುಃಖದಿಂದ ವಾಸಿಸಹತ್ತಿದನು. ಈ ವಿಷಯವು ಷಣ್ಮುಖನಿಗೆ ತಿಳಿಯಿತು. ಆಗ ಅವನು ತಾಶ ಚಲ್ಲುವುದರಲ್ಲಿ ನೈಪುಣ್ಯ ಪಡೆದು, ತಾಯಿಯಾದ ಪಾರ್ವತಿಯನ್ನು ಪಗಡಿ ಆಟದಲ್ಲಿ ಸೋಲಿಸಿ, ಅವಳಿಂದ ಶಿವನ ಸಕಲಸಿರಿಯನ್ನು ಕಸಿದುಕೊಂಡುಹೋಗಿ ಶಂಕರನಿಗೆ ಅರ್ಪಿಸಿದನು. ಆಗ ದುಃಖಿಯಾದ ಪಾರ್ವತಿಯು ಪರ್ವತವನ್ನು ಸೇರಿದಳು. ಇದನ್ನು ಕೇಳಿದ ಗಣಪತಿಯು ತಾನೂ ಕೂಡ ತಾಶ ಚಲ್ಲುವುದರಲ್ಲಿ ಕುಶಲತೆ ಪಡೆದು, ಪಗಡಿಯ ಜೂಜಾಟದಲ್ಲಿ ಷಣ್ಮುಖನನ್ನು ಸೋಲಿಸಿದನು. ಆಗ ಶಂಕರನು, ತನ್ನಲ್ಲಿಗೆ ಪಾರ್ವತಿಯನ್ನು ಕರೆತರಲು, ಗಣೇಶನಿಗೆ ಹೇಳಿದನು. ಶಿವನ ಅಪ್ಪಣೆಯಂತೆ ಗಣಪತಿಯು ಇಲಿಯ ವಾಹನನಾಗಿ ಪಾರ್ವತಿಯನ್ನು ಹುಡುಕಲು ಹೊರಟನು. ಈ ಯಾವತ್ತೂ ವಿಷಯವನ್ನರಿತ ಕಿಡಿಗೇಡಿ ನಾರದನು, ಭಗವಾನ್ ವಿಷ್ಣುವಿನಲ್ಲಿಗೆ ಹೋಗಿ, ಅವನಿಗೆ ಶಿವನ ಸಮಾಚಾರವನ್ನೆಲ್ಲ ಅರಿಕೆಮಾಡಿಕೊಂಡನು. ಆಗ ವಿಷ್ಣುವು ತಾನೇ ತಾಶಗಳರೂಪವನ್ನು ಧರಿಸಿದನು. ಮುಂದೆ ಶಿವ, ಷಣ್ಮುಖ, ಪಾರ್ವತಿ, ಗಣಪತಿ, ಇವರೆಲ್ಲರಿಗೂ ತುರಿಸಿನ ಪಗಡಿ ಜೂಜಾಟವು ನಡೆಯಿತು. ಸಾಕ್ಷಾತ್

ವಿಷ್ಣುವೇ ತಾಶಗಳರೂಪ ಧರಿಸಿದ್ದರಿಂದ, ಪಾರ್ವತಿ ಎಷ್ಟು ಪ್ರಯತ್ನ ಮಾಡಿದರೂ ತಾಶಗಳು ತನಗೆ ಪ್ರತಿಕೂಲವಾಗಿಯೇ ಉರುಳುತ್ತಲಿದ್ದವು. ಕಡಿಗೆ ಪಾರ್ವತೆಮ್ಮ ಆಟದಲ್ಲಿ ಸೋತಳು. ಆದರೆ ವಿಷ್ಣುವಿನ ಚಮತ್ಕಾರವು ದೇವಿಗೆ ತಿಳಿಯಿತು. ಆಗ ಅವಳು ಸಿಟ್ಟಿಗೆದ್ದು ವಿಷ್ಣುವಿಗೆ ಶಾಪ ಕೊಡಲು ಸಿದ್ಧಳಾದಳು. ಇದನ್ನು ನೋಡಿ ಶಿವನು ವಿನೋದವಾಕ್ಯಗಳಿಂದ ಪಾರ್ವತಿಯ ಕೋಪವನ್ನಿಳಿಸಿದನು. ಆಗ ಪಾರ್ವತಿ ಪ್ರಸನ್ನಳಾಗಿ "ಯಾರು ಪ್ರತಿವರುಷ ಈ ದಿವಸ ಪಗಡಿ ಆಟವನ್ನಾಡುವರೋ, ಅವರು ವರುಷದ ವರೆಗೂ ಸಕಲ ಸೌಭಾಗ್ಯಸಂಪನ್ನರಾಗುವರೆಂದು" ಆಶೀರ್ವದಿಸಿದಳು. ಅದರ ಸ್ಮಾರಕ ವಾಗಿಯೇ ಜನರು ಇಂದಿಗೂ ಅಂದು ಆನಂದದಿಂದ ಪಗಡಿ ಆಟ ಆಡುತ್ತಿರುವು ದಾಗಿ ತಿಳಿದುಬರುವದು.

ದೀಪಾವಳಿ ಹಬ್ಬವು ಆಶ್ವಿನ ಬಹುಳ ತ್ರಯೋದಶಿಯಿಂದ ಪ್ರಾರಂಭ ವಾಗಿ ಐದು ದಿವಸಗಳವರೆಗೆ ಜರುಗುವುದಾಗಿದೆ. ಆಶ್ವಿನ ಬಹುಳ ತ್ರಯೋ ದಶಿಗೆ ನೀರು ತುಂಬುವ ಹಬ್ಬ ವೆನ್ನುವರು. ಅಂದು ಎಲ್ಲರೂ ತಮ್ಮ ತಮ್ಮ ಮನೆ–ಮಂದಿರಗಳನ್ನು ಸ್ವಚ್ಛಮಾಡಿ ಅವುಗಳನ್ನು ಮನೋಹರವಾದ ಚಿತ್ರ ಪಟಗಳಿಂದಲೂ, ತಳಿರುತೋರಣಗಳಿಂದಲೂ ಶೃಂಗರಿಸುವರು. ತಮ್ಮ ಮನೆ ಗಳಲ್ಲಿರುವ ಹಂಡೆ, ಕೊಳಗ ಇವುಗಳನ್ನು ಹೊಳೆಯುವಂತೆ ಬೆಳಗಿ, ಅವುಗಳಲ್ಲಿ ಅಂದು ನೀರು ತಂದು ತುಂಬಿಕೊಳ್ಳುವರು. ಈ ಕಾರಣದಿಂದಲೇ ನೀರು ತುಂಬುವ ಹಬ್ಬ ವೆನ್ನಬಹುದೇನು ? ಪ್ರತಿಯೊಂದು ಮಂಗಲ ಕಾರ್ಯಗಳ ಲ್ಲಿಯೂ ಗಂಗೆಯನ್ನು ಮೊದಲು ಆರಾಧಿಸುವುದುಂಟು ಹಾಗೆಯೇ ಜಲ ದಿಂದಲೇ ವ್ಯವಹಾರಿಕ ಸರ್ವ ಕರ್ಮಗಳು ಸುಗಮವಾಗಿ ಸಾಗುವವು. ಜಲ ದಲ್ಲಿ ಶೀತಗುಣವೂ, ಅಭಾಸ್ವರ ಶುಕ್ಲರೂಪವೂ ಇರುವುದುಂಟು. ಕವಿಯು, ಜಲದ ಧವಲ ರೂಪವನ್ನೂ, ಶೈತ್ಯತೆಯನ್ನೂ ಕೀರ್ತಿಗೆ ಮನದಣಿಯುವಂತೆ ಉಣಿಸಿ, ಬೆಳೆಸುವನು. ಜಲದಲ್ಲಿರುವ ಸ್ನೇಹ ಗುಣವು, ಒಡೆದು ಪುಡಿಯಾದ ವಸ್ತುವನ್ನು ಒಂದುಗೂಡಿಸುವುದು. ಅಂತೆಯೇ ತಾರ್ಕಿಕರು "ಚೂರ್ಣಾದಿ ಪಿಂಡೀಭಾವ ಹೇತುರ್ಗುಣಃ ಸ್ನೇಹಃ" ಎಂದು ಹೇಳಿರುವರು. ಈ ಸ್ನೇಹ ಗುಣವನ್ನು ಆಯುರ್ವೇದವು ವಾತಶಮನಕ್ಕಾಗಿ ಉಪಯೋಗಿಸಿಕೊಂಡಿದೆ. "ಸ್ನೇಹದಿಂದ ಸರ್ವವೂ ಸಂಘಟಿಸಬಹುದಲ್ಲವೇ! ಪಂಚ ಮಹಾಭೂತಗಳಲ್ಲಿ

ಜಲವೂ ಒಂದು ಪ್ರಧಾನ ತತ್ವವಾಗಿದೆ. ಇದು ಉಳಿದ ನಾಲ್ಕು ತತ್ವಗಳಲ್ಲಿ ಕೂಡಿಕೊಂಡು (ಸಹಕಾರಿಯಾಗಿ) ಜಗತ್ತಿಗೆ ಮಹೋಪಕಾರ ಮಾಡುತ್ತಿರುವುದರಿಂದ ಆಯುರ್ವೇದವು ಇದಕ್ಕೆ "ಯೋಗವಾಹಿ ದ್ರವ್ಯ" ಎಂದು ಹೇಳುತ್ತಿದೆ. ಜಲತತ್ವದಲ್ಲಿರುವ ಮಧುರರಸವು ತರುಗುಲ್ಮಾದಿಗಳನ್ನಾಶ್ರಯಿಸಿ ಸಕಲ ಜೀವಿಗಳ ಜೀವಾಧಾರವಾಗಿದೆ. ಅಂತೆಯೇ 'ಅಮರಸಿಂಹ ಕವಿಯು' ಈ ಜಲಕ್ಕೆ "ಅಮೃತಂ, ಜೀವನಂ, ವನಂ, ಎಂದು ಹೇಳಿರುವನು. ಈ ಗಂಗೆಗೆ ಆರ್ಯ ಧರ್ಮವು ದೇವರೆಂದು ಸ್ತುತಿಸುವುದು. 'ಪರ್ಶಿಯನ್‌ರು' ಮುಖ್ಯ ಗಂಗಾ ದೇವಿಯ ಉಪಾಸಕರಾಗಿರುವರು. ಗಂಗೆಯನ್ನು ಬಿಟ್ಟರೆ ಪ್ರಾಣ ಉಳಿಯಲಾರದು. ಮೊದಲು ಮನೆ ತೊಳೆಯಲು ನೀರು ಬೇಕು. ಮನಸ್ಸಿನ ಮಲಿನತೆ ದೂರಾಗುವುದಕ್ಕೆ ಕಾರಣವಾದ ಸ್ನಾನಕ್ಕೆ ನೀರು ಬೇಕು. ಸಂಕಲ್ಪಕ್ಕೆ ನೀರು ಬೇಕು. ಹೀಗೆ ಸರ್ವ ಕರ್ಮಕ್ಕೂ ನೀರು ಆಧಾರವಾಗಿದೆ. ಐದು ದಿವಸಗಳ ವರೆಗೂ ಸತತವಾಗಿ ಜರಗುತ್ತಿರುವ ಈ ದೀಪಾವಳಿ ಮಹೋತ್ಸವಕ್ಕೆ ಮೊದಲ ದಿವಸ ನೀರನ್ನು ಹೆಚ್ಚಾಗಿ ಸಂಗ್ರಹಿಸಿಡುವುದು, ಮುಂದಿನ ಕಾರ್ಯಕ್ಕೆ ಉಪಕಾರಕವಾಗಿದೆ. ಆ ಕಾರಣದಿಂದ ಅಂದು ನೀರು ತುಂಬುವ ಹಬ್ಬವಾಗಿರಬಹುದಲ್ಲವೇ! ಮತ್ತು ಇಂದಿನ ದಿವಸಕ್ಕೆ ಧನತ್ರಯೋದಶಿ ಎಂತಲೂ ಅನ್ನುವರು. ಈ ಧನತ್ರಯೋದಶಿಯ ಸಂಬಂಧವಾಗಿ ಒಂದು ಪೌರಾಣಿಕ ಕಥೆಯಿದೆ.

ಒಮ್ಮೆ ಧರ್ಮರಾಜನು ಓಲಗದಲ್ಲಿ ಕುಳಿತಾಗ ತನ್ನ ದೂತರನ್ನುದ್ದೇಶಿಸಿ — "ನನ್ನ ಅಪ್ಪಣೆಯಂತೆ ನೀವು ನನ್ನಲ್ಲಿಗೆ ಜೀವವನ್ನೆಳೆದು ತರುವ ಕರ್ತವ್ಯ ಮಾಡುತ್ತಿರುವಾಗ ನಿಮಗೆಂದಾದರೂ ದಯೆಯುಂಟಾಗಿತ್ತೇ"? ಎಂದು ಕೇಳಿದನು. ಆಗ ದೂತರು ತಮಗೆ ಘಟಿಸಿದ ಪ್ರಸಂಗವೊಂದನ್ನು ಅವನೆದುರು ಪ್ರಸ್ತಾಪಿಸಿದರು. ಅದು ಯಾವುದೆಂದರೆ—

ಇಂದ್ರಪ್ರಸ್ಥ ಪಟ್ಟಣಕ್ಕೆ ಒಡೆಯನಾದ ಹಂಸರಾಜನು, ಒಮ್ಮೆ ತನ್ನ ಸೈನಿಕರೊಡನೆ ಬೇಟೆಯಾಡಲು ಅರಣ್ಯಕ್ಕೆ ತೆರಳಿದನು. ಅಲ್ಲಿ ಅವನು ಬೇಟೆಯಾಡುತ್ತ ಆಡುತ್ತ ಕೊನೆಗೆ ಒಂದು ಹೆಣ್ಣು ಚಿಗರೆಯ ಬೆನ್ನು ಹತ್ತಿದನು. ಆ ಚಿಗರೆಯು ಅವನನ್ನು ಒಂದು ಘೋರವಾದ ಅರಣ್ಯಕ್ಕೆ ಕರೆದೊಯ್ದು ಕಾಣ

ದಾಯಿತು. ಆ ನೃಪತಿ ನಿರುಪಾಯನಾಗಿ ಕುದುರೆಯ ಮೇಲಿಂದ ಕೆಳಗಿಳಿದು ಬಿಸಿಲಿನ ಪ್ರಖರತೆಯಿಂದ ನೀರಡಿಸಿದವನಾಗಿ ಕುದುರೆಯ ಲಗಾಮನ್ನು ಕೈಯಲ್ಲಿ ಹಿಡಿದುಕೊಂಡು ಕಾಲ್ನಡಿಗೆಯಿಂದ ನಡೆಯುತ್ತ, ನೀರಿನ ಶೋಧನೆಗಾಗಿ ಅತ್ತಿತ್ತ ಸಂಚರಿಸಹತ್ತಿದನು. ಆಗ ಅವನಿಗೆ ಅಕಸ್ಮಾತ್ತಾಗಿ ಒಂದು ರಮ್ಯವಾದ ಸರೋವರವು ಕಣ್ಣಿಗೆ ಕಂಡಿತು. ಅವನು ಆನಂದಭರಿತನಾಗಿ ಕೂಡಲೇ ಅಲ್ಲಿಗೆ ಹೋಗಿ, ಮೊದಲು ಕುದುರೆಗೆ ನೀರು ಕುಡಿಸಿ ತಾನೂ ಮನದಣಿಯುವಂತೆ ನೀರು ಕುಡಿದನು. ಮತ್ತು ತನ್ನ ಕುದುರೆಯನ್ನು ಅಲ್ಲಿರುವ ಆಲದ ಮರಕ್ಕೆ ಕಟ್ಟಿ ತಾನೂ ನೆರಳಲ್ಲಿ ವಿಶ್ರಾಂತಿಗಾಗಿ ಕುಳಿತುಕೊಂಡನು. ಅಷ್ಟರಲ್ಲಿ ಒಬ್ಬ ಜಾಲಗಾರನು ಮೀನ ಹಿಡಿಯುವದಕ್ಕಾಗಿ ಆ ಸರೋವರಕ್ಕೆ ಬಂದು ತಲ್ಪಿದನು. ಅವನನ್ನು ನೋಡಿ, ರಾಜನು — "ಇಲ್ಲಿ ಸನಿಹದಲ್ಲಿ ಯಾವುದಾದರೊಂದು ಊರಿರುವದೋ"? ಎಂದು ಕೇಳಿದನು. ಅದಕ್ಕೆ ಜಾಲಗಾರನು ಇಲ್ಲಿಂದ ಎರಡು ಮೈಲಿನ ಮೇಲೆ ಒಂದು ಪಟ್ಟಣವಿದೆ. ಅಲ್ಲಿ ಸದಾಚಾರ ಸಂಪನ್ನನಾದ "ಹೈಮನೆಂಬ" ರಾಜನು ರಾಜ್ಯವಾಳುತಿದ್ದು, ತನ್ನಲ್ಲಿಗೆ ನಿತ್ಯವೂ ಬರುತ್ತಿರುವ ಅತಿಥಿ ಅಭ್ಯಾಗತರ ಸತ್ಕಾರ ಮಾಡುವದರಲ್ಲಿ ಅವನು ಸುಪ್ರಸಿದ್ಧನು ಇರುವನು." ಎಂದು ಹೇಳಿದನು. ಇದನ್ನು ಕೇಳಿದೊಡನೆಯೇ ಹಂಸರಾಜನು ಅಲ್ಲಿಂದ ಹೊರಟು ಸ್ವಲ್ಪಹೊತ್ತಿನಲ್ಲಿಯೇ ಆ ಪಟ್ಟಣವನ್ನು ಮುಟ್ಟಿ ಹೈಮರಾಜನನ್ನು ಭೆಟ್ಟಿಯಾದನು. ಮೀನಗಾರನ ಮಾತಿನಂತೆಯೇ ಅವನಿಗೆ ಅಲ್ಲಿ ಒಳ್ಳೇ ಆದರಾತಿಥ್ಯವಾಯಿತು. ಅದೇ ಸಮಯಕ್ಕೆ ಹೈಮರಾಜನಿಗೆ ಪ್ರಥಮ ಪುತ್ರೋತ್ಸವವಾಗಿ ಅಂದಿಗೆ ಆರು ದಿವಸಗಳು ಸಂದಿಸಿದ ಕಾರಣ ಷಾಷ್ಟಿಕ ಪೂಜೆಯು ಒಳ್ಳೇ ವಿಜೃಂಭಣೆಯಿಂದ ನಡೆದಿತ್ತು. ಅಷ್ಟರಲ್ಲಿಯೇ ಅಕಸ್ಮಾತ್ತಾಗಿ ಅಲ್ಲಿ ಷಷ್ಟಿದೇವಿಯು ಪ್ರಕಟಳಾಗಿ— "ಎಲೈ ಹೈಮರಾಜನೇ, ಈ ನಿನ್ನ ಮಗನ ಲಗ್ನವಾದ ನಾಲ್ಕನೆಯ ದಿವಸಕ್ಕೇನೇ ಇವನು ಸರ್ಪದಂಶದಿಂದ ಮರಣ ಹೊಂದುವ"ನೆಂದು ಭವಿಷ್ಯವನ್ನು ಹೇಳಿ, ಆ ಕ್ಷಣದಲ್ಲಿಯೇ ಅದೃಶ್ಯಳಾದಳು. ಈ ಪ್ರಕಾರವಾದ ದೇವಿಯ ವಾಕ್ಯವನ್ನು ಕೇಳಿ ಎಲ್ಲರಿಗೂ ಸಖೇದಾಶ್ಚರ್ಯವಾಯಿತು.

ಹೈಮರಾಜನು ಉಪಾಯಗಾಣದವನಾಗಿ ಕೇವಲ ಪ್ರಾರಬ್ಧದ ಮೇಲೆಯೇ ಹೊಣೆಹಾಕಿ ಪುತ್ರನ ರಕ್ಷಣೆಗಾಗಿ ಜಪತಪಾದಿ ದೈವಿಕ ಉಪಾಯ

ಗಳನ್ನೇ ಮಾಡಹತ್ತಿದನು. ಇದೆಲ್ಲವನ್ನೂ ಅಲ್ಲಿ ಇದ್ದು ನೋಡಿದ ಹಂಸ ರಾಜನು ಮರುದಿವಸ ಪ್ರಾತಃಕಾಲದಲ್ಲಿ ಎದ್ದು, ಹೈಮರಾಜನ ಅಪ್ಪಣೆಪಡೆದು ತನ್ನ ರಾಜಧಾನಿಯಾದ ಇಂದ್ರ ಪ್ರಸ್ಥಕ್ಕೆ ತೆರಳಿದನು. ತನ್ನ ಪಟ್ಟಣಕ್ಕೆ ಬಂದ ನಂತರ ಹಂಸರಾಜನು, ಹೈಮಪುತ್ರನನ್ನು ಅಪಮೃತ್ಯುವಿನಿಂದ ತಪ್ಪಿಸಬೇಕೆಂಬ ನಿರ್ಧಾರಮಾಡಿ, ಯಮುನಾ ನದಿಯ ಪ್ರವಾಹ ಮಧ್ಯದಲ್ಲಿ ಒಂದು ನೊಣಕ್ಕೂ ಸಹ ಪ್ರವೇಶ ಇಲ್ಲದಂಥ ಒಂದು ಸುಂದರವಾದ ಕಲ್ಲಿನ ಅರಮನೆ ಯನ್ನು ಕಟ್ಟಿಸಿ, ಹೈಮರಾಜನನ್ನು ಸಹಕುಟುಂಬ ಪರಿವಾರವಾಗಿ ತನ್ನಲ್ಲಿಗೆ ಕರೆದುಕೊಂಡುಬಂದು, ಆ ಅರಮನೆಯಲ್ಲಿರಿಸಿ; ಅಲ್ಲಿ ಅವನಿಗೆ ಯೋಗ್ಯ ಪ್ರಕಾರವಾದ ವ್ಯವಸ್ಥೆ ಮಾಡಿದನು. ಹೀಗೆಯೇ ಹದಿನಾರು ವರುಷಗಳು ಸಂದಿದ ಮೇಲೆ ಹಂಸರಾಜನು, "ಸಂಜಯನೆಂ"ಬ ಹೆಸರಿನ ಓರ್ವ ರಾಜನ ಮಗಳೊಡನೆ ಹೈಮ ಪುತ್ರನ ವಿವಾಹವನ್ನು ನೆರವೇರಿಸಿದನು. ನಾಲ್ಕು ದಿವಸ ಲಗ್ನ ಸಮಾರಂಭವು ಅತ್ಯಂತ ವಿಜೃಂಭಣೆಯಿಂದ ಜರುಗಿದ ನಂತರ "ಲಲಾಟಲಿಖಿತಾರೇಖಾಲಂಘಿತುಂ ನೈವ ಶಕ್ಯತೇ", ದೈವಗತಿಯು ಮೀರಲ ಸಾಧ್ಯವಾದುದರಿಂದ ತಮ್ಮ ಅಪ್ಪಣೆಯ ಮೇರೆಗೆ ನಾವು ಅಲ್ಲಿಗೆ ಹಾಜರ ಆದೆವು. ಅಷ್ಟರಲ್ಲಿಯೇ ಆ ರಾಜನ ಆಪ್ತನೊಬ್ಬನು ತಾನು ತಂದಿದ್ದ ಪುಷ್ಪಮಾಲೆ ಯನ್ನು ಹೈಮ ಪುತ್ರನ ಕೊರಳಲ್ಲಿ ಹಾಕಿ, ಪುಷ್ಪಗುಚ್ಛವನ್ನು ಅವನ ಕೈಯಲ್ಲಿ ಕೊಟ್ಟು ಹಿಂದಕ್ಕೆ ಸರಿದನು. ರಾಜಪುತ್ರನು ಆ ಪುಷ್ಪಗುಚ್ಛವನ್ನು ಆಘ್ರಾಣಿ ಸುವಷ್ಟರಲ್ಲಿಯೇ, ಅದರಲ್ಲಿ ಅಡಗಿಕೊಂಡಿದ್ದ ಮಿಡಿನಾಗರವು ರಾಜಪುತ್ರ ನನ್ನು ಕಚ್ಚಲು ಅವನು ತತ್ಕಾಲವೇ ಮೃತಪಟ್ಟನು. ಇಂಥ ಸಮಯದಲ್ಲಿ ಮಾತ್ರ ನಮಗೆ ದಯೆಯು ಬಂದಿತು. ಯಾಕಂದರೆ–"ಅಲಭ್ಯಂ ಮಾನುಷಂ ಜನ್ಮ" ಮಾನವಜನ್ಮ ಲಭಿಸುವದೇ ಕಠಿಣ. ಅದರಲ್ಲಿ ರಾಜಪುತ್ರ, ತಥಾಪಿ ಏಕಮೇವ ಪುತ್ರ. ಹಾಗೂ ವಿಹಾಹ ಮಹೋತ್ಸವವು, ಈ ಸುಸಮಯದಲ್ಲಿ ಆ ರಾಜಪುತ್ರನ ಪ್ರಾಣೋತ್ಕ್ರಮಣಮಾಡುವುದೆಂದರೆ ಎಂಥ ಶೋಚನೀಯ ಸಂಗತಿಯು ! ದೇವ, ಯಮರಾಜನೇ ! ಇಂಥ ಅಪಮೃತ್ಯುವು ಯಾರ ಮೇಲೆಯೂ ಎಂದೂ ಆಗಬಾರದು. ಇದಕ್ಕೆ ಏನಾದರೊಂದು ಉಪಾಯ ವಿದ್ದರೆ ಹೇಳುವ ಕೃಪೆಯಾಗಬೇಕು" ಎಂದು ಯಮದೂತರು, ಯಮಧರ್ಮ ರಾಜನಿಗೆ ಕರಜೋಡಿಸಿಕೊಂಡು ವಿನಯಾನ್ವಿತರಾಗಿ ಬೇಡಿಕೊಂಡರು. ಆಗ

ಯಮಧರ್ಮರಾಜನು—"ದೂತರೇ ಆಶ್ವಿನ ವದ್ಯ ತ್ರಯೋದಶಿಯಿಂದ ಕಾರ್ತಿಕ ಶುದ್ಧ ದ್ವಿತೀಯಾ ವರೆಗೂ ಅಂದರೆ ಐದು ದಿವಸಗಳ ಪರ್ಯಂತ ಪ್ರದೋಷ ಕಾಲದಲ್ಲಿ ಯಾರು ತಮ್ಮ ತಮ್ಮ ಮಠ, ಮಂದಿರಗಳಲ್ಲಿ ದೀಪೋತ್ಸವವನ್ನು ಮಾಡುವರೋ ! ಅವರಿಗೆ ನಿಮ್ಮ ಇಚ್ಛೆಯಂತೆ ಅಪಮೃತ್ಯುವು ಸಂಭವಿಸ ಲಾರದು" ಈ ಪ್ರಕಾರವಾದ ಯಮವಾಕ್ಯವನ್ನು ಕೇಳಿ ಸರ್ವರೂ ಸಂತೋಷ ಭರಿತರಾದರು. ಅಂಥ ಆನಂದದ ಸ್ಮಾರಕವೇ ಈಗಿನ ದೀಪಾವಳೀ ಹಬ್ಬದ ಮಹೋತ್ಸವವಾಗಿದೆ.

## ನರಕ ಚತುರ್ದಶಿ

ಆಶ್ವಿನ ಬಹುಳ ಚತುರ್ದಶಿಗೆ ನರಕಚತುರ್ದಶಿ ಎಂಬ ಹೆಸರು ಬಂದಿದೆ. ದ್ವಾಪರ ಯುಗದಲ್ಲಿ ಭಗವಾನ್ ಶ್ರೀಕೃಷ್ಣನು ತನ್ನ ಧರ್ಮಪತ್ನಿಯಾದ ಸತ್ಯ ಭಾಮೆಯಿಂದ ಕ್ರೂರನಾದ ನರಕಾಸುರನನ್ನು ಕೊಲ್ಲಿಸಿದ್ದು ಇದೇ ದಿವಸ. ಆ ರಾಕ್ಷಸನು ತಾನು ಸಾಯುವಾಗ್ಗೆ ತನ್ನ ಆಯುಷ್ಯದಲ್ಲಿ ಮಾಡಿದ ಪಾಪಗಳ ಅರಿವು ಉಂಟಾಗಿ ಭಗವಂತನಿಗೆ ಕ್ಷಮೆ ಬೇಡಿದನು. "ನಾನು ಮಡಿದ ದಿವಸ ಸರ್ವರೂ ಅಭ್ಯಂಗ ಸ್ನಾನಮಾಡಬೇಕು. ನನ್ನಂತೆ ಪಾಪ ಮಾಡಿದವರು ಇಂದಿನ ದಿವಸ ಪಾಪಮುಕ್ತರಾಗಲಿ" ಎಂದು ಭಗವಂತನಿಂದ ವರವನ್ನು ಕೇಳಿಕೊಂಡನು. ಆ ಸ್ಮಾರಕವಾಗಿ ಈಗಲೂ ಎಲ್ಲರೂ ಸ್ನಾನಾದಿ ಕರ್ಮ ಗಳನ್ನು ಆಚರಿಸುತ್ತಿರುವರು. ಮತ್ತು ನರಕಚತುರ್ದಶಿಯ ಸಂಬಂಧವಾಗಿ, ವಾಲಖಿಲ್ಯ ಋಷಿಪ್ರೋಕ್ತವಾದ ಭವಿಷ್ಯೋತ್ತರ ಪುರಾಣದಲ್ಲಿ ಹೇಳಿದ ಬೇರೊಂದು ಕಥೆಯ ಆಧಾರವೂ ಹೀಗಿದೆ.

"ಆಶ್ವಿನಾಸಿತೇಪಕ್ಷೇ ತ್ರಯೋದಶ್ಯಾದಿ ತ್ರಿಷು ।
ಕ್ರಮಾತ್ವಾದ್ಯೈ ಸ್ತ್ರೀಭಿರ್ವಿಷ್ಣು ರಗ್ರಹಿದ್ಭುವನತ್ರಯಂ ॥
ಮಹಾರಾಜೋಬಲಿಃ ಪ್ರೋಕ್ತಸ್ತುಷ್ಟೇನ ಹರಿಣಾತತಃ ।
ವರಂಯಾಚಸ್ವ ಭದ್ರಂತೇಯದ್ಯನ್ಮನಸಿ ವರ್ತತೇ" ॥

ತ್ರೇತಾಯುಗದಲ್ಲಿ ತಾನು ದಾನವೀರನೆಂಬ ದರ್ಪದಿಂದ ಮೆರೆಯುತ್ತಿ ರುವ ಬಲಿಚಕ್ರವರ್ತಿಯು ಮೂರು ಲೋಕಗಳನ್ನು ಪಾದಾಕ್ರಮಣಮಾಡಿ, ಇಂದ್ರಾದಿದೇವತೆಗಳನ್ನು ಶಿರೆಯಲ್ಲಿಟ್ಟು ತನ್ನ ದಾಸಾನುದಾಸರನ್ನಾಗಿ ಮಾಡಿ

ಕೊಂಡಿದ್ದನು. ಆಗ ಭಗವಾನ್ ವಿಷ್ಣುವು ವಾಮನರೂಪಿಯಾಗಿ, ಬಲಿ ಚಕ್ರವರ್ತಿಯ ತ್ರೈಲೋಕ್ಯದ ರಾಜ್ಯವನ್ನು ಕಪಟತನದಿಂದ ಅಪಹರಿಸಿ, ಅವನನ್ನು ಪಾತಾಳಲೋಕಕ್ಕೆ ಕಳುಹಿಸಿದನು. ಆಗ ಭಗವಾನ್ ವಿಷ್ಣುವು "ಎಲೈ ಬಲಿಚಕ್ರವರ್ತಿಯೇ ! ನಿನ್ನ ಔದಾರ್ಯಾದಿಗುಣಗಳನ್ನು ನೋಡಿ ನಾನು ಸಂತುಷ್ಟನಾದೆನು. ಅದಕ್ಕಾಗಿ ನೀನು ಇಚ್ಛಿತ ವರವನ್ನು ಕೇಳಿಕೋ" ಎಂದು ನುಡಿಯಲು ಬಲಿಯು ಭಯಭಕ್ತಿಯುತನಾಗಿ — "ಪ್ರಭುವೇ ನಾನು ಬೇಡತಕ್ಕುದು ಯಾವುದೂ ಉಳಿದಿರುವುದಿಲ್ಲ. ನಿನ್ನ ದರ್ಶನಮಾತ್ರದಿಂದಲೇ ನಾನು ಕೃತಾರ್ಥನಾಗಿರುವೆನು. ನೀನು ಮೆಚ್ಚಿ ವರಕೊಡಬೇಕೆಂಬುವ ಅಪೇಕ್ಷೆ ನಿನಗಿದ್ದುದಾದರೆ ಲೋಕೋಪಕಾರಾರ್ಥವಾಗಿ ಬೇಡಿಕೊಳ್ಳುವೆನು" ಎಂದು ಬಿನ್ನವಿಸಿಕೊಂಡನು. ಮತ್ತು ಆ ಬಲಿಯು—ಸ್ವಾಮಿ ! ತಮಗೆ ನಾನು ಪೃಥ್ವಿಯನ್ನು ದಾನಮಾಡಲು, ಅದನ್ನು ತಾವು ಮೂರು ಪಾದಗಳಿಂದ ಯಾವ ಮೂರು ದಿವಸಗಳಲ್ಲಿ ಆಕ್ರಮಿಸಿಕೊಂಡಿರುವಿರೋ ! ಆ ಮೂರು ದಿವಸಗಳ ವರೆಗೆ ಯಾವ ಜನರು ದೀಪೋತ್ಸವ ಮಾಡುವರೋ ! ಅವರ ಮನೆಯಲ್ಲಿ ತಮ್ಮ ಸತಿಯಾದ ಲಕ್ಷ್ಮೀದೇವಿಯು ಅಖಂಡವಾಗಿ ವಾಸಿಸಲಿ. ಅದೇ ಪ್ರಕಾರವಾಗಿ ನರಕ ಚತುರ್ದಶಿಯ ದಿವಸ ನರಕ ಸ್ಥಾನದಲ್ಲಿ ಯಾರು ದೀಪೋತ್ಸವವನ್ನು ಮಾಡುವರೋ ಅವರ ಪಿತೃಗಳು ನರಕದಿಂದ ಉದ್ಧಾರವಾಗಲಿ ಹಾಗೂ ಅವರಿಗೆ ಸ್ವರ್ಗಸುಖವು ಲಭಿಸಲಿ. ನನ್ನ ಆರಸೊತ್ತಿಗೆಯ ಮೂರು ದಿನಗಳಲ್ಲಿ ಯಾವತ್ತೂ ಪ್ರಜೆಗಳು ಪ್ರಸನ್ನಚಿತ್ತರಾಗಿ ಇರಬೇಕು. ಆಲಸ್ಯವನ್ನೂ, ಶೋಕವನ್ನೂ ಹೊಂದ ಬಾರದು"ಎಂದು ಬೇಡಿಕೊಂಡನು. ಆಗ ಭಗವಂತನು ಅದಕ್ಕೆ "ತಥಾಸ್ತು" ಎಂದನು. "ರಾಜಾ ಪ್ರತ್ಯಕ್ಷ ದೇವತಾ"ಎಂಬ ನಾಣ್ಣುಡಿಯ ಅರ್ಥವನ್ನರಿತ ರಾಜನಿಷ್ಠ ಪ್ರಜೆಗಳು ಈ ನರಕ ಚತುರ್ದಶಿಯ ದಿವಸ ಉಷಃಕಾಲದಲ್ಲೆದ್ದು ಸ್ನಾನದಿಂದ ಶುಚಿರ್ಭೂತರಾಗಿ, ಸಾಮ್ರಾಟ ಬಲಿರಾಜನ ಸ್ವಾಗತ ಮಾಡಿ, ಅವನನ್ನು ಷೋಡಶೋಪಚಾರಗಳಿಂದ ಪೂಜಿಸಿ ಪ್ರತಿಪದದ ರಾತ್ರಿ ಅವನನ್ನು ತಿರುಗಿ ಕಳಿಸುವರು; ಹಾಗೂ ಎಲ್ಲೆಡೆಗೂ ದೀಪೋತ್ಸವವನ್ನು ಮಾಡುವರು.

ಯುಗ ಯುಗಾಂತರದಲ್ಲಿ ದಾನವರ ಸಂಹಾರವಾಗುವವರೆಗೂ ಹೋರಾಡಿದ ದೇವಾನುದೇವತೆಗಳು, ಯುದ್ಧದಲ್ಲಿ ಆದ ತಮ್ಮ ಮೈ ಕೈ

ನೋವಿನ ನಿವಾರಣೆಗಾಗಿ ತೈಲಾಭ್ಯಂಗವನ್ನು ಮಾಡಿಸಿಕೊಂಡು, ಉಷ್ಣೋದಕದಿಂದ ಸ್ನಾನ ಮಾಡಿದರು. ಆ ಸ್ನಾನದ ಸ್ಮಾರಕವನ್ನು 'ನರಕ ಚತುರ್ದಶಿಯ ಶುಭ ದಿವಸದಲ್ಲಿ ಇಂದಿಗೂ ಆಚರಿಸುತ್ತಿರುವರು.

ಈ ದೀಪಾವಳಿ ಹಬ್ಬವು ಪ್ರಾರಂಭವಾಗುವದಕ್ಕಿಂತ ಒಂದೆರಡು ದಿವಸ ಪೂರ್ವದಲ್ಲಿ, ಎಲ್ಲರೂ ತಮ್ಮ ತಮ್ಮ ಮನೆ, ಮಠಗಳ ಸ್ವಚ್ಛತೆಗಾಗಿ ಹೆಚ್ಚು ಕೆಲಸಮಾಡಿ ಆಯಾಸಹೊಂದುವುದುಂಟು. ಆಶ್ರಮವನ್ನು ಅಭ್ಯಂಗ ಸ್ನಾನದಿಂದ ಅಂದು ನಿವಾರಿಸಿಕೊಂಡು ಮರುದಿವಸ ಅಮಾವಾಸ್ಯೆಯ ಸುಗ್ರಾಸ ಭೋಜನಕ್ಕೆ ಸಿದ್ಧರಾಗುವರು.

### ಅಮಾವಾಸ್ಯೆ

ದೀಪಾವಳಿ ಹಬ್ಬದ ಮೂರನೇ ದಿವಸವೆಂದರೆ ಆಶ್ವಿನ ಬಹುಳ ಅಮಾವಾಸ್ಯೆ. ಈ ದಿವಸ ಬಲಿಚಕ್ರವರ್ತಿಯ ಬಂಧನದಿಂದ ಎಲ್ಲರೂ ಬಿಡುಗಡೆ ಹೊಂದಿ, ಆತ್ಯಾನಂದದಲ್ಲಿದ್ದವರಾದುದರಿಂದ ಸುಖಶಾಂತಿಗಳಿಗೆ ಕಾರಣಳಾದ ಲಕ್ಷ್ಮಿಯನ್ನು ಪ್ರದೋಷಕಾಲದಲ್ಲಿ ವೈಭವದೊಡನೆ ಪೂಜಿಸಿದರು. ಅದರ ಸ್ಮಾರಕವಾಗಿ ಈಗಲೂ ಪೂಜಿಸುವುದು ವಾಡಿಕೆಯಾಗಿದೆ

"ತತಃ ಪ್ರದೋಷಸಮಯೇ ದೀಪಾನ್‌ದದ್ಯಾನ್ ಮನೋಹರಾನ್ ।
ಬ್ರಹ್ಮ ವಿಷ್ಣು ಶಿವಾದೀನಾಂ ಮಠೇಷು ಭವನೇಷುಚ"॥

ಎಂಬಂತೆ ಈ ಅಮಾವಾಸ್ಯೆ ಪ್ರದೋಷಸಮಯದಲ್ಲಿ ಯಾವತ್ತೂ ಮಠ, ಮನೆಗಳಲ್ಲಿ ಮನೋಹರವಾದ ದೀಪೋತ್ಸವವನ್ನು ಮಾಡಬೇಕು.

ಯಾವುದಾದರೊಂದು ರಾಜ್ಯ ಕ್ರಾಂತಿಯಾಗಿ ವಿಜಯದೊರೆತಾಗ ಎಲ್ಲ ಕಡೆಗೂ ದೀಪೋತ್ಸವ ಮಾಡುವುದು ಸಂತೋಷ ಸೂಚಕವಾಗಿದ್ದರೂ, ಸೋತು ಹೋದ ಶತ್ರುಗಳು ಪುನಃ ಕತ್ತಲಲ್ಲಿ ಬಂದು ಮಠ ಮಂದಿರಗಳಲ್ಲಿ ಅಡಗಿಕೊಂಡು ಪುನಃ ದಾಳಿಯನ್ನಾರಂಭಿಸುವುದನ್ನು ಅದು ನಿವಾರಣೆ ಮಾಡುವುದರಲ್ಲಿ ಸಹಾಯ ಮಾಡುವದಾಗಿತ್ತು. ಈ ಕಾರಣದಿಂದಲೂ ಪೂರ್ವ ಕಾಲದಲ್ಲಿ ದೀಪಾವಳಿಯ ಸಮಯಕ್ಕೆ ಅಲ್ಲಲ್ಲಿ ಸಾಲುಸಾಲಾಗಿ ದೀಪಗಳನ್ನೂ, ಆಕಾಶ ದೀಪಗಳನ್ನೂ ಹಚ್ಚಿರಬೇಕು.

ಒಂದು ವೇಳೆ ಸೋತು ಹೋದ ರಾಕ್ಷಸರು ತಿರುಗಿ ಬಾರದಿದ್ದರೂ ಅವರ ಹೆಸರಿನಲ್ಲಿ ಕೆಲವು ಧೂರ್ತ ಜನರು, ಮಠ-ಮಂದಿರಗಳಲ್ಲಿಯೂ, ಸಂದಿಗೊಂದಿ ಗಳಲ್ಲಿಯೂ, ತೋಟಗಳಲ್ಲಿಯೂ, ಗುಪ್ತಸ್ಥಾನಗಳಲ್ಲಿ ಅಡಗಿಕೊಂಡು, ಕೈಗೆ ಸಿಕ್ಕ ಸಾಮಾನುಗಳನ್ನು ಲೂಟಿ ಮಾಡಿಕೊಂಡು ಹೋಗುತ್ತಿದ್ದರು. ಇಂಥ ಅಪಾಯ ತಪ್ಪಿಸಲು ಆಗಿನ ಕಾಲಕ್ಕೆ ಹಲವು ದಿವಸಗಳವರೆಗೂ ದೀಪೋತ್ಸವ ವನ್ನು ಮಾಡಿರಲು ಬೇಕು. ಅದರ ಸ್ಮಾರಕವಾಗಿ ಕಾರ್ತಿಕ ಮಾಸ ಒಂದು ತಿಂಗಳಲ್ಲಿ ಈಗಲೂ ಸರ್ವತ್ರ ದೀಪ ಹಚ್ಚುವದು ಒಂದುವಿಧ ಪರಿಪಾಠವಿದೆ.

## ಪ್ರತಿಪದೆ ( ಪಾಡ್ಯ )

ಅಮವಾಸ್ಯೆಯ ದಿವಸ ಎಲ್ಲರೂ ಸಂಭ್ರಮದಿಂದ ಲಕ್ಷ್ಮೀ ಪೂಜೆಯನ್ನು ನೆರವೇರಿಸಿ ಮರುದಿವಸ ಅಂದರೆ ಪ್ರತಿಪದೆಯಲ್ಲಿ ಉಬ್ಬಿನಿಂದ ಹಬ್ಬವನ್ನಾಚರಿ ಸುವರು. ಇಂದಿನ ದಿವಸಕ್ಕೆ ವರುಷದ ಹೊಸ ದಿವಸವೆಂದು ಹೆಸರು ಬಂದಿದೆ. ಕಲಿಯುಗದಲ್ಲಿ ಭಾರತದ ಮೇಲೆ ದಾಳಿ ಮಾಡಲು ಬಂದ ಶಕರನ್ನು ವಿಕ್ರ ಮಾದಿತ್ಯನೆಂಬ ಸಾರ್ವಭೌಮನು ಸೋಲಿಸಿ, ಈ ಪ್ರತಿಪದೆಯ ದಿವಸ ಆನಂದೋತ್ಸವವನ್ನು ಆಚರಿಸಿದನು. ಅದರ ಸ್ಮಾರಕವಾಗಿ ನಮ್ಮ ದೇಶದಲ್ಲಿ ವಿಕ್ರಮ ಶಕೆಯು ಸ್ಥಾಪಿಸಲ್ಪಟ್ಟಿತು. ಈ ಶಕೆಯು ವಿಶೇಷವಾಗಿ ಉತ್ತರ ಭಾರತದಲ್ಲಿ ಈಗಲೂ ಪ್ರಚಾರದಲ್ಲಿರುವುದು. ಅಲ್ಲಿಯ ವ್ಯಾಪಾರಸ್ಥರು ಇಂದು ಹೊಸ ವರುಷ ಪ್ರಾರಂಭವಾಯಿತೆಂದು ಹೊಸ ಖಾತೆ ಕಿರ್ದಿಗಳನ್ನು ಪೂಜಿಸಿ ಹಿಸಾಬ ಬರೆಯಲು ಪ್ರಾರಂಭಿಸುವರು. ಮತ್ತು ಅಲ್ಲಿಯ ಜನರು ಪ್ರತಿ ದಿವಸ ಪೂಜಾ ಸಂಕಲ್ಪದಲ್ಲಿ ವಿಕ್ರಮಾದಿತ್ಯನ ನಾಮೋಚ್ಚಾರ ಮಾಡುತ್ತಿರುವರು. ಇಂದಿಗೂ ಅವರು ಕಾಲಗಣನೆಗಾಗಿ ವಿಕ್ರಮ ಶಕವನ್ನೇ ಹಿಡಿಯುತ್ತಿರುವರು.

ದ್ವಾಪರ ಯುಗದಲ್ಲಿ ಕೌರವರು ತಮಗೆ ವಿರೋಧಿಗಳಾದ ಪಾಂಡವರನ್ನು ಜೂಜಿನ ಪಗಡಿ ಆಟಕ್ಕೆ ಕರೆತಂದು, ಕಪಟತನದಿಂದ ಸೋಲಿಸಿ, ಅವರ ಸಕಲ ಸಂಪತ್ತನ್ನು ಅಪಹರಿಸಿ, ಅವರನ್ನು ಅರಣ್ಯಕ್ಕೆ ಅಟ್ಟಿದ್ದು ಇದೇ ದಿವಸ. ಅದರ ಸ್ಮಾರಕವಾಗಿ ನಮ್ಮಲ್ಲಿ ಈಗಲೂ ಅಂದು ಪಾಂಡವರ ಪೂಜೆ ಮಾಡುತ್ತಿ ರುವರು. ಮತ್ತು ಮೋಜಿಗಾಗಿ ಜೂಜು ಆಡುತ್ತಿರುವರು.

ತ್ರೇತಾಯುಗದಲ್ಲಿ ಶ್ರೀ ರಾಮಚಂದ್ರನು ತನ್ನ ವೈರಿಯಾದ ಲಂಕೆಯ ರಾವಣನೊಡನೆ ಹೋರಾಡಿ, ಅವನನ್ನು ಸಂಹರಿಸಿ, ಅಯೋಧ್ಯೆಗೆ ಬಂದು, ಇಂದು ಸಿಂಹಾಸನಾರೋಹಣ ಮಾಡಿದನೆಂದು ರಾಮಾಯಣ ಹೇಳುತ್ತಿದೆ.

## ಗೋವರ್ಧನ ಪ್ರತಿಪದ

ಕಾರ್ತಿಕ ಶುದ್ಧ ಪ್ರತಿಪದೆಯ ದಿವಸ ಶ್ರೀ ಕೃಷ್ಣನು ಇಂದ್ರನ ಪ್ರಕೋಪ ದಿಂದುಂಟಾದ ಅತಿವೃಷ್ಟಿಯನ್ನು ತಡೆಯುವುದಕ್ಕಾಗಿ ತನ್ನ ಬೆರಳಿನಿಂದ ಗೋವರ್ಧನ ಗಿರಿಯನ್ನು ಎತ್ತಿಹಿಡಿದು ಗೋಪಾಲಕರನ್ನು ರಕ್ಷಿಸಿದನಂತೆ. ಅದ ಕ್ಕಾಗಿ ಇಂದಿನ ದಿವಸಕ್ಕೆ ಗೋವರ್ಧನ ಪ್ರತಿಪದವೆಂಬ ಹೆಸರು ಬಂದಿದೆ.

## ಯಮದ್ವಿತೀಯಾ

ದೀಪಾವಳಿ ಹಬ್ಬದ ಕೊನೆಯ ದಿವಸವಾದ ಅಂದರೆ ಕಾರ್ತಿಕ ಶುದ್ಧ ದ್ವಿತೀಯಾಕ್ಕೆ ಯಮದ್ವಿತೀಯಾ ಅನ್ನುವರು. ಯಾರು ಈ ದಿವಸ ಯಮುನಾ ನದಿಯಲ್ಲಿ ಸ್ನಾನಮಾಡಿ ಅಪರಾಹ್ನದಲ್ಲಿ ಷೋಡಶೋಪಚಾರಗಳಿಂದ ಯಮ ನನ್ನು ಆರಾಧಿಸುವರೋ! ಅವರು ಯಮಲೋಕಕ್ಕೆ ಹೋಗುವದಿಲ್ಲವಂತೆ. ಯಾಕಂದರೆ– ಆ ದಿವಸ ಯಮುನೆಯು ತನ್ನ ಅಣ್ಣನಾದ ಯಮಧರ್ಮ ರಾಜನನ್ನು ಆದರದಿಂದ ತನ್ನ ಮನೆಗೆ ಕರೆತಂದು, ಅವನಿಗೆ ಸುಗ್ರಾಸ ಭೋಜನ ಮಾಡಿಸಿ, ಅವನಿಂದ ವರವನ್ನು ಪಡೆದುಕೊಂಡಿರುವಳಂತೆ. ಅದರ ಸ್ಮಾರಕವಾಗಿಯೇ ಅಂದಿನ ದಿವಸ ಅನೇಕರು ಸ್ವಗೃಹದಲ್ಲಿ ಭೋಜನ ಮಾಡದೇ, ತಮ್ಮ ತಮ್ಮ ಸಹೋದರಿಯರ ಮನೆಗೆ ಹೋಗಿ, ಅವರಿಂದ ಆದರಾತಿಥ್ಯ ಪಡೆದು ಅವರಲ್ಲಿಯೇ ಭೋಜನ ಮಾಡುವುದುಂಟು.

## ಕಾರ್ತಿಕ ಮಾಸದ ಆಹಾರ ವಿಹಾರ ವಿಚಾರ

ಕಾರ್ತಿಕ ಮಾಸವು ಸುಮಾರು ನವಂಬರ ತಿಂಗಳಲ್ಲಿ ಬರುತ್ತದೆ. ಆಗ ಶರತ್ಕಾಲದ ಸಮಯ

"ಶರದುಷ್ಣಾ ಪಿತ್ತಕರ್ತ್ರೀ ನೃಣಾಂ ಮಧ್ಯಬಲಾವಹಾ ।"

ಶರದೃತುವು– ಉಷ್ಣವೂ, ಪಿತ್ತವರ್ಧಕವೂ, ಬಲದಾಯಕವೂ ಆಗಿದೆ. ಹಿಂದಿನ ವರ್ಷಾಋತುವಿನಲ್ಲಿ ಆಮ್ಲಪಾಕವುಳ್ಳ ನೀರಿನಿಂದಲೂ, ಧಾನ್ಯ

ಗಳಿಂದಲೂ ಪಿತ್ತವು ಸಂಚಯವಾಗಿ ಈ ಶರದೃತುವಿನಲ್ಲಿ ಪ್ರಕೋಪ ಹೊಂದುತ್ತದೆ. ಈಗ ಪ್ರಕೋಪ ಹೊಂದಿದ ದೋಷವನ್ನು ಇದೇ ಋತುವಿನಲ್ಲಿಯೇ ಶಮನ ಮಾಡಬೇಕೆಂದು ಆಯುರ್ವೇದ ಹೇಳುತ್ತಿದೆ. ಅದಕ್ಕೆ ತಕ್ಕ ಚಿಕಿತ್ಸೆ ಮಾಡದಿದ್ದರೆ ಮುಂದೆ ಅದು ರೋಗಕ್ಕೆ ಆಸ್ಪದವಾಗುವುದು. ಋತುಮಾನಗಳಲ್ಲಿ ಪ್ರಕೋಪವಾಗುತ್ತಿರುವ ವಾತಾದಿ ದೋಷಗಳನ್ನು ಪೂರ್ವಕಾಲದಲ್ಲಿ ಜನರು ಆಹಾರ ವಿಹಾರಗಳಿಂದಲೂ, ಉಪವಾಸಾದಿ ವ್ರತಗಳಿಂದಲೂ ಸರಿಪಡಿಸಿಕೊಳ್ಳುತ್ತಿದ್ದರೆಂಬ ವಿಷಯವು, ಆಯಾಯ ಋತುವಿನಲ್ಲಿ ಬರುತ್ತಿರುವ ಹಬ್ಬಗಳ ಆಹಾರ ವಿಹಾರಗಳಿಂದಲೇ ತಿಳಿದುಬರುತ್ತದೆ. ಹೇಗೆಂದರೆ– ಪಿತ್ತದ ಶಾಂತಿಗಾಗಿ ಸ್ನಿಗ್ಧ, ಮಧುರ, ಶೀತ ಗುಣಯುಕ್ತ ಆಹಾರ ಸೇವಿಸಲು ಆರೋಗ್ಯ ಶಾಸ್ತ್ರ ಹೇಳುವುದು. ಕಾರ್ತಿಕ ಮಾಸದಲ್ಲಿ (ಶರದೃತುವಿನಲ್ಲಿ) ಪಿತ್ತ ಪ್ರಕೋಪತೆ ಹೊಂದುವದೆಂದು ನಾವು ಇಷ್ಟರಲ್ಲಿಯೇ ಹೇಳಿದೆವಷ್ಟೇ! ಈ ಪಿತ್ತದ ಶಾಂತ್ಯರ್ಥವಾಗಿಯೇ, ಅಶ್ವಿನ ವದ್ಯ ತ್ರಯೋದಶಿಯಿಂದ ಐದು ದಿವಸಗಳ ವರೆಗೂ ಜರಗುತ್ತಿರುವ ದೀಪಾವಳೀ ಮಹೋತ್ಸವದಲ್ಲಿ, ಸುಗಂಧ ತೈಲದಿಂದ ಅಭ್ಯಂಗ ಸ್ನಾನ ಮಾಡುವರು. ಮತ್ತು ಸುರಳೀ ಹೋಳಿಗೆ, ಕರಚೀಕಾಯಿ ಮೊದಲಾದ ಭಕ್ಷ್ಯ, ಭೋಜ್ಯಾದಿ ಪದಾರ್ಥಗಳನ್ನು ಸೇವಿಸುವರು ಮತ್ತು ಘಟಾಕಿ, ಧಡಲ್‌ಬಾಜಿ ಮೊದಲಾದ ಮದ್ದಿನ ಸಾಮಾನುಗಳನ್ನು ಸುಟ್ಟು ಸಂತೋಷಿಸುವುದೂ, ಸಂಗೀತಾದಿ ಶ್ರವಣದಿಂದ ಸುಖಪಡುವುದೂ ಪಿತ್ತೋಪಶಾಮಕ ನಿಸರ್ಗ ಚಿಕಿತ್ಸೆಯಾಗಿದೆ. ಈ ಕಾರ್ತಿಕ ಮಾಸವು ಚಾತುರ್ಮಾಸಕ್ಕೆ ಕೊನೆಯದಾಗಿದೆ. ಚಾತುರ್ಮಾಸವು ಕೆಲವು ಪದಾರ್ಥಗಳನ್ನು ಸೇವಿಸಲು ನಿಷೇಧಿಸುತ್ತಿರುವುದು. ಈ ನಿಯಮವಾದರೂ ಆರೋಗ್ಯ ಶಾಸ್ತ್ರಕ್ಕೆ ಹೊಂದಿಕೊಂಡಿರುವುದಾಗಿದೆ. ಹೀಗೆ ಕಾರ್ತಿಕ ಮಾಸದಲ್ಲಿ ಜರಗುವ ಕಾರ್ತಿಕ ಸ್ನಾನ, ಅನ್ನ ವಸ್ತ್ರಾದಿಗಳ ದಾನ, ಪುರಾಣ ಶ್ರವಣ, ಬಲಿ ಪೂಜಾ, ಗೋ ಪೂಜಾ, ಗೋ ಕ್ರೀಡಾ, ದ್ಯೂತ ಕ್ರೀಡಾ, ಇತ್ಯಾದಿ ಉತ್ಸವಗಳಿಂದ ಮನುಷ್ಯನು ಉತ್ಸಾಹ ಭರಿತನಾಗುವನು. 'ಆನಂದವು ಆರೋಗ್ಯಕ್ಕೆ ಸಾಧನವಾಗಿದೆ'. 'ಆರೋಗ್ಯದಿಂದ ಮನಸ್ಸು ನಿರ್ಮಲವಾಗಿರುವುದು' ನಿರ್ಮಲ ಚಿತ್ತವುಳ್ಳವನು ಪುಣ್ಯ ಕಾರ್ಯಗಳಲ್ಲಿ ಪ್ರವೃತ್ತನಾಗುವನು. ಒಟ್ಟನಲ್ಲಿ ಹಬ್ಬಗಳು ಮನುಷ್ಯನಿಗೆ ಆರೋಗ್ಯ

ವನ್ನೂ, ಪುಣ್ಯವನ್ನೂ, ಒದಗಿಸಿಕೊಡುವವು. ಹೀಗೆಯೇ ಮಾನವರು ಆತ್ಮೋದ್ಧಾರಕ್ಕೆ ಪ್ರಾಚೀನ ಕಾಲದಿಂದಲೂ ಈ ಕಾರ್ತಿಕ ಮಾಸದಲ್ಲಿ ಇನ್ನೂ ಅನೇಕ ಹಬ್ಬಗಳನ್ನು ಆಚರಿಸುತ್ತಾ ಬಂದಿರುವರು.

ಕಾರ್ತಿಕ ಶುದ್ಧ ಷಷ್ಠೀ ದಿವಸ ಬಿಹಾರ ಪ್ರಾಂತದಲ್ಲಿಯ ಜನರು ಸೂರ್ಯನ ಪೂಜೆಯನ್ನು ಒಳ್ಳೇ ವೈಭವದಿಂದ ಆಚರಿಸುತ್ತಾರೆ. ಶುದ್ಧ ನವಮಿ ತಿಥಿಯಲ್ಲಿ ಸತ್ಯಯುಗದ ಪ್ರಾರಂಭ ದಿವಸವನ್ನಾಗಿ ಆಚರಿಸುತ್ತಾರೆ. ಸೋನ ಪುರದ ಸಮೀಪಕ್ಕೆ 'ಗಂಗಾ ಮತ್ತು ಗಂಡಕೀ' ನದಿಗಳ ಸಂಗಮದಲ್ಲಿ ವಿರಾಜಿಸುವ ಹರಿಹರನಾಥ ಕ್ಷೇತ್ರದಲ್ಲಿ ಕಾರ್ತಿಕ ಪೌರ್ಣಿಮಿಯ ನಿಮಿತ್ತವಾಗಿ ಒಂದು ತಿಂಗಳವರೆಗೆ ದೊಡ್ಡ ಜಾತ್ರೆಯು ಜರಗುವದು. ಆಗ ಅಲ್ಲಿ ಜಾನವರಗಳ ಮೇಲಾ ಹೆಚ್ಚಿನ ಪ್ರಮಾಣದಲ್ಲಿ ಕೂಡುವುದು. ಈ ಮೇಲಾದಲ್ಲಿ ಆನೆ, ಒಂಟೆ, ಕುದುರೆ, ಗೋ, ಮಹಿಷ ಮೊದಲಾದ ಪ್ರಾಣಿಗಳನ್ನೂ ಚಿರ್ಚ, ಹುಲಿ ಮೊದಲಾದ ಹಿಂಸ್ರ ಮೃಗಗಳನ್ನೂ ಮಾರಾಟಕ್ಕಾಗಿ ತಂದು ಸಾಲುಸಾಲಾಗಿ ನಿಲ್ಲಿಸುತ್ತಿರುವ ರಮಣೀಯ ದೃಶ್ಯವು ಮನುಷ್ಯನನ್ನು ಮುಗ್ಧನನ್ನಾಗಿ ಮಾಡುತ್ತದೆ. ಉತ್ತರ ಭಾರತದಲ್ಲಿ ದೂರ ದೂರ ಭಾಗಗಳಿಂದಲೂ ಜನರು ಪ್ರಾಣಿಗಳ ಕ್ರಯ ವಿಕ್ರಯಕ್ಕಾಗಿ ಅಲ್ಲಿಗೆ ಹೋಗುವುದುಂಟು. ಇಂಥ ಜಾನವರುಗಳ ದೊಡ್ಡ ಜಾತ್ರೆ ಭಾರತದಲ್ಲಿ ಆದರ ಹೊರ್ತಾಗಿ ಮತ್ತೆಲ್ಲಿಯೂ ಆಗುವುದಿಲ್ಲ. ಕಾರ್ತಿಕ ಶುದ್ಧ ಏಕಾದಶಿಯ ದಿವಸ ಭಗವಾನ್ ವಿಷ್ಣುವಿನ ನಿದ್ರೆಯು ಪರಿಸಮಾಪ್ತಿಯಾದುದರಿಂದ ಆ ದಿವಸಕ್ಕೆ 'ಬೋಧಿನೀ ಏಕಾದಶಿ ಎಂದು ಅನ್ನುವರು. ಅಂದು ಪಂಡರ ಪುರದಲ್ಲಿ ದೊಡ್ಡ ಜಾತ್ರೆಯಾಗುವುದು. ಶುದ್ಧ ದ್ವಾದಶಿಯ ದಿವಸ ತುಲಸೀ ವಿವಾಹ ಮತ್ತು ಧಾತ್ರೀ ಪೂಜೆ ಯಿರುತ್ತದೆ. ಅಂದೇ ಚಾತುರ್ಮಾಸ ವ್ರತ ಸಮಾಪ್ತಿಯಿದೆ. ಕಾ. ಶು. ಚತುರ್ದಶಿಗೆ ವೈಕುಂಠ ಚತುರ್ದಶಿ ಅನ್ನುವರು. ಕಾರ್ತಿಕ ಶುದ್ಧ ಪೌರ್ಣಿಮಿಗೆ ತ್ರಿಪುರಾ ಪೌರ್ಣಿಮಾ ಅನ್ನುವರು. ಮತ್ತು ಕಾರ್ತಿಕ ಪೌರ್ಣಿಮೆಗೆ ಅಂದು ಭಗವಾನ್ ಶಂಕರನು ತ್ರಿಪುರಾಸುರನನ್ನು ಸಂಹರಿಸಿರುವನು. ವ್ಯಾಸಪೂರ್ಣಿಮಾ ಎಂತಲೂ ಅನ್ನುವರು. ಹದಿನೆಂಟು ಪುರಾಣಗಳನ್ನು ರಚಿಸಿದ ವ್ಯಾಸಮಹರ್ಷಿಯನ್ನು ಗುರುವೆಂದು ಭಾವಿಸಿ ಅನೇಕರು ಅಂದು ಭಕ್ತಿಯಿಂದ ಪೂಜಿಸುವರು. ಕಾರ್ತಿಕ ಬಹುಳ ಅಮಾವಾಸ್ಯೆಯ ದಿವಸ ಕಾರ್ತಿಕೇಯ (ಷಣ್ಮುಖ) ಸ್ವಾಮಿಯ ಸ್ಮರಣಾರ್ಥ

ವಾಗಿ ಕೊನೆಯ ಕಾರ್ತಿಕ ದೀಪೋತ್ಸವವನ್ನು ನೆರವೇರಿಸುವರು. ಕರ್ನಾಟಕದ ದೊಡ್ಡ ದೊಡ್ಡ ಮಠ ಮಂದಿರಗಳಲ್ಲಿಯೂ ಕ್ಷೇತ್ರಗಳಲ್ಲಿಯೂ ಒಳ್ಳೇ ಸಂಭ್ರಮದಿಂದ ಕೊನೆಯ ಕಾರ್ತಿಕ ಮಹೋತ್ಸವವನ್ನು ನೆರವೇರಿಸುವರು.

## ಮಾರ್ಗಶಿರ ಮಾಸ

ಮಾರ್ಗಶಿರ ಮಾಸವು ಹೇಮಂತ ಋತುವಿನಲ್ಲಿ ಬರುತ್ತದೆ. ಈ ಋತುವಿನಲ್ಲಿ–

"ಪ್ರಾತರ್ಭೋಜನ ಮಾಮ್ಲ ಪಿಷ್ಟಲವಣಾನಭ್ಯಂಗ ಘರ್ಮಶ್ರಮಾನ್।" ಎಂಬಂತೆ ಪ್ರಾತಃಕಾಲದಲ್ಲಿ ಭೋಜನ ಮಾಡಬೇಕು. ಆಮ್ಲ, ಕಟುರಸ ಪ್ರಧಾನವಾದ ಆಹಾರವನ್ನು ಸೇವಿಸಬೇಕು. ಹಾಗೂ ಗೋದಿ, ಬೆಲ್ಲ, ಸಕ್ಕರೆ, ಅಕ್ಕಿ, ಉದ್ದು, ಎಳ್ಳು ಇವುಗಳಿಂದ ಸಿದ್ಧವಾದ ಆಹಾರವನ್ನು ಸೇವಿಸಬೇಕು. ಈ ಋತುವಿನಲ್ಲಿ ಬಿಸಿನೀರಿನ ಸ್ನಾನವು ಉತ್ತಮ. ಕಸ್ತೂರಿ, ಕೇಸರ, ಕೃಷ್ಣಾಗರು ಇತ್ಯಾದಿಗಳಿಂದ ತಯಾರಿಸಿದ ಚಂದನವನ್ನು ಲೇಪಿಸಿಕೊಳ್ಳು ವುದರಿಂದ ಆರೋಗ್ಯ ವೃದ್ಧಿಯಾಗುತ್ತದೆ. ಈ ಋತುವಿನಲ್ಲಿ ಬರತಕ್ಕ ಹಬ್ಬ ಗಳು ಕೆಳಗೆ ವಿವರಿಸಿದಂತಿವೆ.

ಮಾರ್ಗಶಿರ ಶುದ್ಧ ಪೌರ್ಣಿಮೆಯಲ್ಲಿ ಎಲ್ಲಮ್ಮದೇವಿಯ ಕಂಕಣ ಮಾಂಗಲ್ಯ ಸೂತ್ರವಿಸರ್ಜನೋತ್ಸವ. ಗೊಡಚಿ ವೀರಭದ್ರೇಶ್ವರ ರಥೋತ್ಸವ. ಮಾರ್ಗಶಿರ ಬ. ೧ಂರಲ್ಲಿ ಶ್ರೀ ದತ್ತಾತ್ರೇಯ ಜಯಂತಿ.

## ಯಲ್ಲಮ್ಮ ದೇವಿಯ ಜಾತ್ರೆ

### ( ಮಾರ್ಗಶಿರ ಶು। ಪೌರ್ಣಿಮೆ )

ಯಲ್ಲಮ್ಮನ ಗುಡ್ಡವು ಸವದತ್ತಿಯ ಆಗ್ನೇಯ ದಿಕ್ಕಿಗೆ ಐದು ಮೈಲಿನ ಮೇಲೆ ಇರುತ್ತದೆ. ಕರ್ನಾಟಕದಲ್ಲಿಯೇ ಇದು ಹೆಸರಾದ ದೇವಸ್ಥಾನವು. ಯಲ್ಲಮ್ಮನ ಗುಡಿಯು ಒಂದು ವಿಸ್ತಾರವಾದ ಗುಡ್ಡದ ಮೇಲೆ ಸ್ವಲ್ಪ ತಗ್ಗಾದ ಪ್ರದೇಶದಲ್ಲಿ ಸಣ್ಣ ಸರೋವರದ ಪಾತ್ರದಲ್ಲಿ ಇರುತ್ತದೆ. ಈ ಸರೋವರಕ್ಕೆ ಪೂರ್ವದಲ್ಲಿ ಸರಸ್ವತೀ ಹೊಳೆಯೆಂದು ಅನ್ನುತ್ತಿದ್ದರು. ದೇವಿಯ ಗುಡಿಯು ಸಂಪೂರ್ಣ ಶಿಲೆಯಿಂದ ನಿರ್ಮಿಸಲ್ಪಟ್ಟುದಾಗಿದೆ. ಗರ್ಭಗುಡಿಯು ಸಣ್ಣದಿದೆ.

ಅದರ ಮುಂದೆ ದರ್ಶನ ಮಂಟಪವಿರುವದಲ್ಲದೆ ಎರಡು ಸಭಾಮಂಟಪಗಳೂ ಇವೆ. ಗುಡಿಯ ಸುತ್ತಲೂ ವಿಸ್ತಾರವಾದ ಪ್ರದಕ್ಷಿಣಾಂಗಣವನ್ನು ಬಿಟ್ಟು ಸುತ್ತಲೂ ಗಚ್ಚಿನ ಪೌಳಿಯನ್ನು ಕಟ್ಟಿದ್ದಾರೆ. ಪೌಳಿಯ ಒಂದು ಸ್ಥಳದಲ್ಲಿ ಗಣಪತಿಯ ಮೂರ್ತಿಯು ಸ್ಥಾಪಿಸಲ್ಪಟ್ಟಿದೆ. ಆವಾರದ ಹೊರಗೆ ಹೋಗಲಿಕ್ಕೆ ಪಶ್ಚಿಮಕ್ಕೂ, ಉತ್ತರಕ್ಕೂ ಮಹಾದ್ವಾರಗಳುಂಟು. ಪಶ್ಚಿಮದ ಬಾಗಿಲಿನ ಮೇಲೆ ನಗಾರಿಖಾನೆ ಇದೆ. ಇದನ್ನು ವಿಜಯನಗರದ ಕೃಷ್ಣರಾಜನ ಕಾಲಕ್ಕೆ ಶಕೆ ೧೪೩೭ರಲ್ಲಿ ಬಾಗಿ ಬೊಮ್ಮಪ್ಪ ನಾಯಕನು ಕಟ್ಟಿಸಿರುವನೆಂದು ಅಲ್ಲಿರುವ ಶಿಲಾಲಿಪಿಯಿಂದ ತಿಳಿದುಬರುತ್ತದೆ. ಯಲ್ಲಮ್ಮನ ದೇವಸ್ಥಾನವು ೨೫೦೦ ವರುಷಕ್ಕಿಂತ ಪುರಾತನವಾದುದೆಂದು ಹೇಳುತ್ತಾರೆ. ಕೆಲವು ಇಮಾರತುಗಳು ಆರು, ಏಳು ನೂರು ವರುಷಗಳ ಹಿಂದೆ ಕಟ್ಟಿಸಿದವುಗಳೂ, ಕೆಲವು ನೂರಾರು ವರುಷಗಳ ಹಿಂದೆ ಕಟ್ಟಿಸಿದಂಥವುಗಳೂ ಇರುತ್ತವೆ. ಈ ಎಲ್ಲ ಇಮಾರತುಗಳಲ್ಲಿ ನೋಡತಕ್ಕ ಸೌಂದರ್ಯವೇನೂ ಇಲ್ಲ. ವೃಕ್ಷಗಳಿಂದ ರಮಣೀಯವಾದ ಪರ್ವತವಾಗಲಿ, ನಿರ್ಮಲವಾದ ಸರೋವರವಾಗಲೀ ಇಲ್ಲಿ ಇರುವದಿಲ್ಲ. ಗುಡ್ಡದ ಮೇಲೆ ಕೆಲವು ವನಸ್ಪತಿಗಳು ಮಾತ್ರ ಸಿಕ್ಕುತ್ತವೆ. ಯಲ್ಲಮ್ಮದೇವಿಗೆ 'ಜತ್ತಕಮಾಯೆ' ಎಂಬ ಹೆಸರು ಇರುವದಾಗಿ ಅಲ್ಲಿರುವ ಲಿಪಿಯೊಂದರಿಂದ ತಿಳಿದು ಬರುತ್ತದೆ. 'ಜತ್ತ' ಎಂಬ ಹೆಸರಿನಿಂದ ಇದು ದ್ರಾವಿಡ ದೇವತೆ ಎಂದು ಕೆಲವರ ಅಭಿಪ್ರಾಯವಿದೆ. ಯಲ್ಲಮ್ಮ ದೇವಿಯ ಪ್ರತಿಮೆಯು ಒಂದು ಹಲಗಿಯಾದ ಕಲ್ಲಿನ ಮೇಲೆ ಕೆತ್ತಲ್ಪಟ್ಟಿದೆ. ಬೇರೆ ಹಿಂದು ಗುಡಿಗಳಲ್ಲಿರುವ ಹೆಣ್ಣು ದೇವತೆಗಳ ಕೈಗಳಲ್ಲಿ ಆಯುಧಗಳಿರುವಂತೆ ಈ ದೇವಿಯ ಕೈಗಳಲ್ಲಿ ಆಯುಧಗಳಿರುವದಿಲ್ಲ.

ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಭಾಗದ ಎಷ್ಟೋ ಜನರು ಈ ದೇವಿಗೆ ನಡೆದುಕೊಳ್ಳುತ್ತಾರೆ. ದೇವಿಗೆ ಬೇಡಿಕೊಂಡ ಕೆಲವು ಭಕ್ತರು ಕಾಲು ನಡಿಗೆಯಿಂದಲೂ, ಕೆಲವರು ಸವಾರಿ ಚಕ್ಕಡಿಯ ಮೂಲಕವಾಗಿಯೂ, ವಾದ್ಯ ವೈಭವದೊಡನೆ, ಬಂಧುಬಾಂಧವರೊಂದಿಗೆ ಜಾತ್ರೆಗೆ ಹೋಗುತ್ತಾರೆ. ಮುಖ್ಯವಾಗಿ ಬಿಳುಪು, ಹುರುಕು, ಕಜ್ಜಿ, ಗಲತ್‌ಕುಷ್ಠ ಮೊದಲಾದ ಅಸಹ್ಯ ರೋಗಗಳನ್ನು ಈ ದೇವತೆಯು ವಾಸಿ ಮಾಡುವಳೆಂಬ ಜನರ ನಂಬಿಕೆ ಇದೆ. ಸುಮಾರು ೭೫, ೮೦ ವರುಷಗಳ ಹಿಂದೆ ದೇವತೆಗೆ ಹರಿಕೆ ಹೊತ್ತ ಹೆಂಗಸರು

ಬೇವಿನ ಉಡುಗರೆ ಉಟ್ಟು ದೇವಿಯ ದರ್ಶನಕ್ಕೆ ಹೋಗುತ್ತಿದ್ದರಂತೆ. ಈಗ ಹಾಗಿರುವದಿಲ್ಲ. ಯಾತ್ರಿಕರು ತಮ್ಮ ತಮ್ಮ ಸವಾರಿ ಚಕ್ಕಡಿಗಳಿಗೆ ಸ್ವಲ್ಪ ಬೇವಿನ ತಪ್ಪಲನ್ನು ಕಟ್ಟಿಕೊಂಡು ಹೋಗುವರು. ಕಾಲಿನಿಂದ ನಡೆದು ಹೋಗುವವರು ತಮ್ಮ ತಲೆಗಂಟಿನಲ್ಲಿ ಬೇವಿನ ತಪ್ಪಲನ್ನು ಇಟ್ಟುಕೊಂಡು ಗುಡ್ಡಕ್ಕೆ ಹೋಗುತ್ತಾರೆ. ಪೂರ್ವಕಾಲದಲ್ಲಿ ಹರಿಕೆ ಹೊತ್ತ ಭಕ್ತರು ದೇವಿಯ ಗುಡಿಯ ಮುಂದೆ ಶಿಡೀ ಆಡುತ್ತಿದ್ದರು. ಸನ್ ೧೮೩೪ರಲ್ಲಿ ಸರಕಾರದವರು ಅದಕ್ಕೆ ಕಟ್ಟು ಹಾಕಿದರು. ಆ ವರುಷ ೧೭೫ ಜನರು ಶಿಡೀ ಆಡಿದರೆಂದು ಐತಿಹ್ಯವಿದೆ. ಭಕ್ತರು ಪ್ರತಿ ಹುಣ್ಣಿವೆಗೆ ಯಲ್ಲಮ್ಮನ ದರ್ಶನಕ್ಕೆ ಹೋಗುವುದುಂಟು. ಆದರೂ ಶೀಗೆ ಹುಣ್ಣಿವೆ (ಆಶ್ವೀನ) ಗೌರೀಹುಣ್ಣಿವೆ (ಕಾರ್ತಿಕಮಾಸ) ಹೊಸ್ತಲಹುಣ್ಣಿವೆ (ಮಾರ್ಗಶಿರಮಾಸ) ಬನದ ಹುಣ್ಣಿವೆ (ಪುಷ್ಯಮಾಸ) ಭಾರತ ಹುಣ್ಣಿವೆ (ಮಾಘಮಾಸ) ಈ ಐದು ಹುಣ್ಣಿವೆಗಳಲ್ಲಿ ಹರಿಕೆಹೊತ್ತವರು ಯಲ್ಲಮ್ಮನ ಗುಡ್ಡಕ್ಕೆ ಬಹಳವಾಗಿ ಹೋಗುತ್ತಾರೆ.

ಮಾರ್ಗಶಿರ ಶು। ಹೊಸ್ತಲ ಹುಣ್ಣಿವಿಗೆ ರಂಡಿ ಹುಣ್ಣಿವೆಯೆನ್ನುವರು; ಆಗ ಜಾತ್ರೆಯಲ್ಲಿ ಯಲ್ಲಮ್ಮನ ಕೈಯೊಳಗಿನ ಬಳೆಗಳನ್ನು ತೆಗೆದು ರಂಡಿತನ ಬಂದಂತೆ ತೋರಿಸುವರು.

ಪೂರ್ವ ಕಾಲದಲ್ಲಿ ಜಮದಗ್ನಿಯೆಂಬ ಪರಮ ತಪಸ್ವಿ ಇದ್ದನು; ಅವನಿಗೆ ರೇಣುಕಾದೇವಿ (ಯಲ್ಲಮ್ಮ) ಸತಿಯಾಗಿದ್ದಳು. ಅವಳು ಪತಿಯಲ್ಲಿ ಅಚಲವಾದ ಭಕ್ತಿಯುಳ್ಳವಳಾಗಿ ಹಾವಿನ ಸಿಂಬೆಯನ್ನು ಮಾಡಿ, ಉಸುಕಿನ ಕೊಡವನ್ನು ಹೊತ್ತು, ಮಲಪ್ರಭಾ ನದಿಯಿಂದ ಪ್ರತಿದಿನ ಪತಿಯ ಪ್ರಾತಃ ಪೂಜೆಗೆ ನೀರು ತರುತ್ತಿದ್ದಳು. ಹೀಗಿರಲು ಒಂದು ದಿನ ಅವಳು ನದಿಗೆ ನೀರಿಗೆ ಹೋದಾಗ ಗಂಧರ್ವ ದಂಪತಿಗಳೀರ್ವರು ಜಲಕ್ರೀಡೆಯಾಡುವುದನ್ನು ಕಂಡಳು. ಆನಂದಕರವಾದ ಅವರ ಆಟ ನೋಡುತ್ತ ಅವಳು ಮೈಮರೆತು ನಿಂತಿರಲು, ಸೂರ್ಯೋದಯವಾಯಿತು. ತತ್‌ಕ್ಷಣ ಅವಳಿಗೆ ಅರವುಉಂಟಾಗಿ, ಕೊಡಕ್ಕೆ ಕೈ ಹಾಕಿದಳು, ಅದು ಕಲ್ಲಾಯಿತು; ಸರ್ಪ ಸಿಟ್ಟಗೆದ್ದಿತು.

ಅತ್ತ ಜಮದಗ್ನಿ ಪ್ರಾತಃಪೂಜೆಗೆ ವಿಘ್ನವುಂಟಾಯಿತೆಂದು ಕ್ರೋಧಾಗ್ನಿಯಿಂದ ತಪ್ತನಾಗಿ, ಅವಳ ದಾರಿಯನ್ನೇ ನೋಡುತ್ತಿರುವಷ್ಟರಲ್ಲಿ ಮ್ಲಾನ

ಮುಖವುಳ್ಳ ರೇಣುಕಾದೇವಿ ಆಶ್ರಮಕ್ಕೆ ಬಂದು, ಪತಿಗೆ ವಂದಿಸಿ, ನಿಜ ಸಂಗತಿಯನ್ನು ಅರಿಕೆ ಮಾಡಿಕೊಂಡಳು. ಆದರೂ ಮುನಿಯ ಸಿಟ್ಟು ಶಮನವಾಗಲಿಲ್ಲ. "ಕುಷ್ಠ ರೋಗಿಯಾಗೆಂದು" ಅವಳಿಗೆ ಶಾಪಕೊಟ್ಟು, ಆಶ್ರಮದಿಂದ ಹೊರಗೆ ಹಾಕಿದನು. ಅವಳು ಪತಿಯ ಶಾಪದಿಂದ ಕುಷ್ಠ ರೋಗಿಯಾಗಿ ಕಂಗೆಟ್ಟು ತಿರುಗುತ್ತಿರುವುದನ್ನು, ಎಕ್ಕಯ್ಯ-ಜೋಗಯ್ಯ ಎಂಬ ಇಬ್ಬರು ಶಿವಶರಣರು ನೋಡಿ, ಅವಳ ಮೈಗೆ ಹಳದಿ ಬಣ್ಣದ ಮಣ್ಣನ್ನು ಹಚ್ಚಿ, ಉಪಚರಿಸಿ, ರೋಗ ಮುಕ್ತಳನ್ನಾಗಿ ಮಾಡಿದರು. ಅವಳು 'ಎಕ್ಕಯ್ಯ-ಜೋಗಯ್ಯ ಉಘೇ' ಎನ್ನುತ್ತ ಪುನಃ ತನ್ನ ಪತಿಯ ಆಶ್ರಮಕ್ಕೆ ಬಂದಳು.

ಹೀಗಿರುವ ತನ್ನ ಹೆಂಡತಿಯನ್ನು ನೋಡಿ ಜಮದಗ್ನಿ ಮತ್ತಿಷ್ಟು ಸಿಟ್ಟಿಗೆದ್ದು ತನ್ನ ಮಕ್ಕಳಾದ ಬೃಹಲ್ಲೋಚನ, ವಿಲೋಚನ, ಸುಲೋಚನರೆಂಬವರನ್ನು ಕರೆದು, 'ಆಕೆಯ ಶಿರಚ್ಛೇದನ ಮಾಡಬೇಕೆಂದು' ಅಪ್ಪಣೆಯನ್ನಿತ್ತನು. ಅವರು ಸ್ತ್ರೀ ಹತ್ಯಕ್ಕೆ ಒಪ್ಪದಿರಲು, ಚಿಕ್ಕವನಾದ ಪರಶುರಾಮನಿಗೆ ಆಜ್ಞಾಪಿಸಿದನು. ಪರಶುರಾಮ ತಂದೆಯ ಅಪ್ಪಣೆಯ ಮೇರೆಗೆ ಕೂಡಲೇ ತಾಯಿಯ ರುಂಡವನ್ನು ಹಾರಿಸಿದನು. ಪುನಃ ತಂದೆಯ ಕೃಪೆಯಿಂದ ಮಾತೆಗೆ ಪ್ರಾಣದಾನವನ್ನು ಮಾಡಿಸಿದನು.

ಜಮದಗ್ನಿ ಋಷಿಯ ಆಶ್ರಮಕ್ಕೆ ಒಮ್ಮೆ ಮಾಹಿಷ್ಮತೀ ನಗರದ ಅರಸನಾದ ಸಹಸ್ರಾರ್ಜುನನು (ಕಾರ್ತವೀರ್ಯನೆಂತಲೂ ಅನ್ನುವದುಂಟು. ಇವನಿಗೆ ಸಹಸ್ರ ಜನರ ಸಾಮರ್ಥ್ಯವಿತ್ತು.) ಸೇನಾ ಸಮೇತನಾಗಿ ಬಂದನು. ಋಷಿಯು ತನ್ನಲ್ಲಿರುವ ಕಾಮಧೇನುವಿನ ಸಹಾಯದಿಂದ ಅವರೆಲ್ಲರಿಗೂ ಮೃಷ್ಟಾನ್ನಭೋಜನ ಮಾಡಿಸಿದನು; ಅರಸನಿಗೆ ಆಶ್ಚರ್ಯವಾಯಿತು. ಇದೆಲ್ಲವೂ ಕಾಮಧೇನುವಿನ ಪ್ರಭಾವವೆಂದು ಅರಿತುಕೊಂಡು, ಋಷಿಯನ್ನು ಕುರಿತು:– " ಈ ಕಾಮಧೇನುವನ್ನು ನನಗೆ ಕೊಡಬೇಕೆಂದು" ಆಗ್ರಹಪೂರ್ವಕ ಕೇಳಿಕೊಂಡನು. ಆ ಮಾತಿಗೆ ಜಮದಗ್ನಿ ಒಪ್ಪದಿರಲು, ರಾಜನು ಒಂದು ದಿನ ತನ್ನ ಅಸಂಖ್ಯವಾದ ಸೈನ್ಯಸಮೇತನಾಗಿ ಬಂದು ಬಲಾತ್ಕಾರವಾಗಿ ಕಾಮಧೇನುವನ್ನು ಬಂಧಿಸಲು ಪ್ರಯತ್ನಿಸಿದನು. ಕಾಮಧೇನು ಅನೇಕ ಸೈನಿಕರನ್ನು ಗಾಯಗೊಳಿಸಿ, ಕೋಡುಗಳಿಂದ ರಾಜನಿಗೆ ತಿವಿದು, ಅವನನ್ನು

ನೆಲಕ್ಕೆ ಕೆಡವಿ ಸ್ವರ್ಗಕ್ಕೆ ಹೊರಟುಹೋಯಿತು. ರಾಜನು ಅಪಮಾನ ಹೊಂದಿದವನಾಗಿ, ಸೇಡುತೀರಿಸಿಕೊಳ್ಳುವದಕ್ಕಾಗಿ ಜಮದಗ್ನಿಯ ಮೇಲೆ ಏರಿ ಹೋಗಿ, ಮರಣೋನ್ಮುಖನಾಗುವಂತೆ ಗಾಯಗೊಳಿಸಿದನು. ಆದರಿಂದ ಋಷಿಯು ಮೂರ್ಛಿತನಾಗಿ ನೆಲಕ್ಕೆ ಒರಗಿದನು. ಆ ಸಮಯದಲ್ಲಿ ಪರಶು ರಾಮ ಆಶ್ರಮದಲ್ಲಿದ್ದಿಲ್ಲ.

ಈ ಘಟನೆ ನಡೆದುದು ಮಾರ್ಗಶಿರ ಶುದ್ಧ ಪೌರ್ಣಿಮೆ. ಈ ಹುಣ್ಣಿವೆ ಯಲ್ಲಿ ಯಲ್ಲಮ್ಮನ ಗುಡ್ಡದಲ್ಲಿ ದೇವಿಯ ಕೈಯಲ್ಲಿಯ ಬಳೆಗಳನ್ನು ತೆಗೆದು ರಂಡಿತನ ಬಂತೆಂದು ಹೇಳುತ್ತಾರೆ.

ರೇಣುಕಾದೇವಿಯು ಮೂರ್ಛಿತನಾದ ಪತಿಯನ್ನು ಉಪಚರಿಸುತ್ತ ಪರಶುರಾಮನನ್ನು ಸ್ಮರಿಸಿದಳು. ಆ ಕ್ಷಣದಲ್ಲಿಯೇ ಪರಶುರಾಮ ಧಾವಿಸಿ ಬಂದು ದುರ್ದೆಶೆಗೀಡಾದ ತಂದೆಯನ್ನು ನೋಡಿದನು. ಅವನ ಮೈಮೇಲೆ ಇಪ್ಪತ್ತೊಂದು ಗಾಯಗಳಾಗಿದ್ದವು. ಆಗ ಅವನು ತಾಯಿಗೆ:— "ಅಮ್ಮ ನಿನ್ನ ಪಾದಸಾಕ್ಷಿಯಾಗಿ ಇಂದಿನಿಂದ ಇಪ್ಪತ್ತೊಂದು ಸಾರೆ ಕ್ಷತ್ರಿಯ ಕುಲವನ್ನು ನಾಶಮಾಡುವೆ" ಎಂದು ವೀರ ಪ್ರತಿಜ್ಞೆಗೈದು ಹೊರಟು ಹೋದನು.

ಆ ಪ್ರಕಾರವಾಗಿ ಸಹಸ್ರಾರ್ಜುನನೊಡನೆ ನಾಲ್ಕು ತಿಂಗಳವರೆಗೆಯುದ್ಧ ಮಾಡಿ ಕೊನೆಗೆ ಅವನ ರುಂಡವನ್ನು ಕತ್ತರಿಸಿಕೊಂಡು ಆಶ್ರಮಕ್ಕೆ ಬಂದನು. ಭಗವಂತನ ಅನುಗ್ರಹದಿಂದ ಪುನಃ ತಂದೆಯ ಪ್ರಾಣವನ್ನು ಪಡೆದನು.

ಇದು ಜರುಗಿದ್ದು ಚೈತ್ರ ಶುದ್ಧದವನದ ಹುಣ್ಣಿವೆ ಇದಕ್ಕೆ ಮುತ್ತೈದೆ ಹುಣ್ಣಿವೆಯೆನ್ನುವರು. ಆಗ ಜಾತ್ರೆಯಲ್ಲಿ ದೇವತೆಯ ಕೈಗಳಲ್ಲಿ ಬಳೆಗಳ ನ್ನಿಡಿಸುವರು.

ಈ ಜಾತ್ರೆಗೆ ಬಹುದೂರದಿಂದ ಲಕ್ಷಾಂತರ ಜನರು ದೇವತೆಯ ದರ್ಶನ ಕ್ಕಾಗಿ ಬರುವರು. ಯಾತ್ರಿಕರು ದೇವತೆಗೆ ನೈವೇದ್ಯಕ್ಕಾಗಿ ಹಣ್ಣು, ಸಕ್ಕರೆ ಪಕ್ವಾನ್ನಗಳನ್ನರ್ಪಿಸುವರು. ಮದ್ಯ, ಮಾಂಸ ಮೊದಲಾದ ಅಪವಿತ್ರ ವಸ್ತುಗಳಿಗೆ ಆಸ್ಪದವಿಲ್ಲ. ದೇವತೆಗೆ ಭಕ್ತರು ವಿಶೇಷವಾಗಿ ತೆಂಗಿನಕಾಯಿಗ

ಳನ್ನು ಒಡಿಸುವರು. ಭಂಡಾರ, ಕುಂಕುಮ ಇವುಗಳನ್ನು ದೇವಿಯ ಪ್ರಸಾದವೆಂದು ಎಲ್ಲರೂ ಪೂಜಾದಿಗಳಿಂದ ಪಡೆದುಕೊಳ್ಳುವರು.

ಯಲ್ಲಮ್ಮನ ಪೂಜಾರಿಗಳು ಪ್ರಾಚೀನಕಾಲದಿಂದಲೂ ವೀರಶೈವರಿದ್ದಾರೆ. ಅವರಿಗೆ ಸಾವಿರಾರು ರೂಪಾಯಿಗಳ ಆದಾಯವಿದೆ. ಇದಲ್ಲದೆ ದೇವತೆಗೆ ಅರ್ಪಿಸಿದ ಬೆಲೆಯುಳ್ಳ ಸೀರೆ, ಕುಪ್ಪಸ, ಆಭರಣ ಆದಿ ಮುಡುಪಿನ ಆದಾಯ ಬೇರೆ ಇದೆ. ಯಲ್ಲಮ್ಮ ದೇವಿಗೆ ಇನಾಮ ಗ್ರಾಮಗಳಾಗಲೀ, ಭೂಮಿಯಾಗಲಿ ಇರುವದಿಲ್ಲ. ಮೊದಲಿನಿಂದಲೂ ಈ ದೇವಸ್ಥಾನದಲ್ಲಿ ನೀರಿನ ಸೌಕರ್ಯವಿರುವದಿಲ್ಲ. ದೇವಿಯ ಸನಿಹದ ಗುಡ್ಡದ ಪಡೆಯೊಳಗಿಂದ ಸೆಲೆಯು ಹೊರಡುವದು. ಅದಕ್ಕೆ ಎಣ್ಣೆಗೊಂಡವೆಂಬ ಹೆಸರು. ನೀರು ಎಣ್ಣೆ ಮಿಶ್ರಮಾಡಿದಂತಿರುವುದರಿಂದ ಎಣ್ಣೆಗೊಂಡವೆಂಬ ಹೆಸರು. ಇಲ್ಲಿ ತೈಲದ ಖನಿ ಇರಬಹುದೆಂದು ಭೂಸಂಶೋಧಕರ ಅಭಿಪ್ರಾಯವಿದೆ. ಈ ನೀರಿನಿಂದ ಬಹುಜನ ಯಾತ್ರಿಕರಿಗೆ ಮಲೇರಿಯಾ ಅಂಟಿಕೊಳ್ಳುವುದುಂಟು. ಇದರ ಹೊರತಾಗಿ ಬೇರೆ ನೀರು ಇಲ್ಲಿ ಸಿಗುತ್ತಿದ್ದಿಲ್ಲ. ಇತ್ತಿತ್ತಲಾಗಿ ಸರಕಾರದವರು ಭಾವಿಯನ್ನು ತೆಗೆಯಿಸಿದರು. ಆದರೂ ನೀರಿನ ಕೊರತೆ ಕಡಿಮೆಯಾಗಲಿಲ್ಲ. ಕೆಲವು ದಿವಸಗಳ ಹಿಂದೆ ಸರಕಾರದವರು ಮಲಪ್ರಭಾ ನದಿಯಿಂದ ಗುಡ್ಡದ ಮೇಲೆ ನೀರನ್ನು ತೆಗೆದುಕೊಂಡು ಅಲ್ಲಲ್ಲಿ ನಳಗಳನ್ನು ಕೂಡ್ರಿಸಿದ್ದಾರೆ. ದೇವಿಯ ಜಾತ್ರೆಯ ವ್ಯವಸ್ಥೆಯು ಸವದತ್ತಿಯ ಮುನಸಿಪಾಲಿಟಿಯವರಿಂದಲೇ ಮಾಡಲ್ಪಡುತ್ತದೆ. ಪ್ರತಿಯೊಬ್ಬ ಯಾತ್ರಿಕನಿಂದ ೭ ಆಣೆ ತೆರಿಗೆ ತೆಗೆದುಕೊಳ್ಳಲಾಗುತ್ತದೆ. ಅಲ್ಲದೆ ಮಾಲಿನ ಮೇಲೆಯೂ ಜಕಾತಿಯನ್ನು ವಸೂಲ ಮಾಡುವರು. ಈ ಹಣವನ್ನು ಲೈನ ಮಾರ್ಗದ ದುರಸ್ತಿಗೂ, ನೀರಿನ ಪೂರೈಕೆಗೂ ಇನ್ನಿತರ ಸಾರ್ವಜನಿಕ ಕಾರ್ಯಗಳಿಗೂ ಸದ್ವಿನಿಯೋಗ ಮಾಡುವರು.

## ದತ್ತಾತ್ರೇಯ ಜನ್ಮ

ಮಾರ್ಗಶೀರ್ಷ ಬಹುಳ ದಶಮಿಯ ದಿವ್ಸ ದತ್ತಾತ್ರೇಯ ಜನ್ಮ ಆಚರಿಸುವದುಂಟು. ದತ್ತಾತ್ರೇಯನಿಗೆ ಮೂರು ಮುಖಗಳು, ಆರು ಕೈಗಳು ಇರುವವು. ಬ್ರಹ್ಮ ವಿಷ್ಣು ಮಹೇಶ ಈ ತ್ರಿಮೂರ್ತಿಗಳು ದತ್ತಾತ್ರೇಯ ಜನ್ಮ ತಾಳಿದರೆಂದು ಪೌರಾಣಿಕ ಕಥೆಯುಂಟು.



ದತ್ತಾತ್ರೇಯ ಜನ್ಮ

ಒಂದಾನೊಂದು ಕಾಲದಲ್ಲಿ ಬ್ರಹ್ಮನ ಹೆಂಡತಿಯಾದ ಸರಸ್ವತಿ, ವಿಷ್ಣುವಿನ ಹೆಂಡತಿಯಾದ ಲಕ್ಷ್ಮಿ, ಶಿವನ ಹೆಂಡತಿಯಾದ ಪಾರ್ವತಿ ಈ ಮೂವರಿಗೂ ತಮ್ಮ ತಮ್ಮ ಪಾತಿವ್ರತ್ಯದ ಬಗ್ಗೆ ಅಹಂಕಾರ ಉತ್ಪತ್ತಿಯಾಯಿತು.

ಸರಸ್ವತಿಯು ನಾನು ಸೃಷ್ಟಿಕರ್ತನಾದ ಬ್ರಹ್ಮನ ಸತಿಯಾಗಿದ್ದೇನೆ. ನನ್ನ ಸಮಾನ ಪತಿವ್ರತೆಯು ಬೇರೆ ಯಾವ ಸ್ತ್ರೀಯಲ್ಲೂ ಇಲ್ಲವೆಂದು ಜಂಭ ಕೊಚ್ಚಿಕೊಳ್ಳಹತ್ತಿದಳು. ಇದೇ ಪ್ರಕಾರವಾಗಿ ವಿಷ್ಣುವಿನ ಹೆಂಡತಿಯಾದ ಲಕ್ಷ್ಮಿ, ಮಹೇಶ್ವರನ ಸತಿಯಾದ ಮಹಾದೇವಿ ಇವರೆಲ್ಲರೂ ಹೀಗೆ ಅಹಂಕಾರ ದಿಂದ ಕಣ್ಮುಚ್ಚಿ ಬಾಯಿಬಿಚ್ಚಿ ಎಲ್ಲ ಸ್ತ್ರೀಯರನ್ನೂ ಹಳಿಯತೊಡಗಿದರು. "ದೊಡ್ಡವರು ಅಡ್ಡದಾರಿ ಹಿಡಿದರೆ ಜಗತ್ತಿನ ಪ್ರಲಯವೆಂದೇ ತಿಳಿಯಬೇಕು" ಈ ಮೂವರ ಅಹಂಕಾರದಿಂದ ಬಹುದೇವತೆಗಳಿಗೆ ಬೇಸರಿಕೆ ಬಂದಿತು. ಈ ತ್ರಿಮೂರ್ತಿ ಪತ್ನಿಯರ ಅಹಂಕಾರವು ಮೇರೆ ತಪ್ಪಿತು. ಇದನ್ನು ನಾರದನು ನೋಡಿ ಚಿಂತೆಗೊಳಗಾಗಿ "ಇವರ ಅಹಂಕಾರವನ್ನು ನಾಶಮಾಡದಿದ್ದರೆ ಅನರ್ಥವಾಗುವ"ದೆಂದು ಯೋಚಿಸಿದನು.

ಮೊದಲು ಪಾರ್ವತಿಯ ಬಳಿಗೆ ಹೋಗಿ ನಮಸ್ಕರಿಸಿ ತಾಯೀ ನಾನು ವಿಶ್ವಸಂಚಾರಿಯು, ಅನೇಕ ಲೋಕಗಳನ್ನು ತಿರುಗುತ್ತ ಭೂಲೋಕಕ್ಕೆ ಬಂದು ಅಲ್ಲಿ ಅನೇಕ ರಮ್ಯ ಸ್ಥಳಗಳನ್ನೂ, ಪುಣ್ಯಕ್ಷೇತ್ರಗಳನ್ನೂ ನೋಡಲು ಸಂಚರಿ ಸುತ್ತಿರುವಾಗ ಅಕಸ್ಮಾತ್ ಅತ್ರಿ ಮುನಿಯ ಆಶ್ರಮಕ್ಕೆ ಹೋದೆನು. ಅಲ್ಲಿ ಅತ್ರಿ ಮುನಿಯ ಪತ್ನಿಯಾದ ಅನಸೂಯೆಯು ಪರಮ ಪತಿವ್ರತೆಯೂ ಆಗಿದ್ದಾಳೆ. ಅಂಥ ಸಾಧ್ವೀಮಣಿಯನ್ನೂ ಸುಶೀಲೆಯನ್ನೂ ನಾನು ಯಾವ ಲೋಕ ದಲ್ಲಿಯೂ ಕಾಣಲಿಲ್ಲ ಎಂದನು. ಪಾರ್ವತಿಗೆ ಪ್ರಶಂಸೆಯು ಸಹನವಾಗಲಿಲ್ಲ. ನಾರದನು ಅಲ್ಲಿಂದ ಹೊರಟು ಹೋದ ಮೇಲೆ ಪಾರ್ವತಿಯು ಶಿವನನ್ನು ಕುರಿತು ಪತಿದೇವ ! ನಾರದನು ಆಡಿದ ಮಾತನ್ನು ಕೇಳಿದಿರಾ! ಜಗತ್ತಿನಲ್ಲಿ ಅನಸೂಯೆಯಂಥ ಪತಿವ್ರತೆಯು ಯಾರೂ ಇಲ್ಲವಂತೆ. ನಾನೇನು ಸಾಮಾ ನ್ಯಳೇ ? ನಾರದನು ನನ್ನ ಪ್ರಭಾವವನ್ನು ಅರಿಯದವನಂತೆ ನನ್ನಮುಂದೆ ಅನಸೂಯೆಯ ಚರಿತ್ರೆಯನ್ನು ಪ್ರಶಂಸಿಸಿದ್ದು ಸೂರ್ಯನಮುಂದೆ ಹೊನ್ನೆ ಹುಳ (ಇಂದ್ರಗೋಪ) ವನ್ನು ಹಾರಿಬಿಟ್ಟಂತೆ ಸರಿ. ಇದು ನನಗೆ ಅಪಮಾನ

ವಾಗಿದೆ. ಈಗ ನೀನು ಅತ್ರಿಮುನಿ ಸತಿಯಾದ ಅನಸೂಯೆಯನ್ನು ಪರೀಕ್ಷಿಸಲೇಬೇಕು. ಅವಳ ಶೀಲಭಂಗವಾಗುವಂತೆ ಮಾಡಬೇಕು. ಇಲ್ಲವಾದರೆ ನನಗೆಂದಿಗೂ ಸಮಾಧಾನವಿಲ್ಲ ಎಂದು ನುಡಿದಳು.

ನಾರದನು ತಾನು ಹೊತ್ತಿಸಿದ ಬೆಂಕಿಯು ಭಯಾನಕವಾಗಿಯೇ ತೀರುವದೆಂದು ವಿಚಾರಿಸುತ್ತ ಕೈಲಾಸದಿಂದ ಕಾಲ್ದೆಗೆದು ಸತ್ಯಲೋಕವನ್ನು ಹೊಂದಿ, ತಂದೆಯಾದ ಬ್ರಹ್ಮನಲ್ಲಿಗೆ ಹೋಗಿ, ತಾಯಿಯಾದ ಸರಸ್ವತಿಯ ಮುಂದೆ ಅನಸೂಯೆಯ ಪ್ರಶಂಸೆಯನ್ನು ಮಾಡತೊಡಗಿದನು. ಸರಸ್ವತಿಗೆ ಅನಸೂಯೆಯ ಪ್ರಶಂಸೆಯ ಅಸೂಯೆಯನ್ನುಂಟುಮಾಡಿತು. ಸರಸ್ವತಿಯಾದರೂ ತನ್ನ ಪತಿಯಾದ ಬ್ರಹ್ಮನಿಗೆ ಅನಸೂಯೆಯ ಪಾತಿವ್ರತ್ಯ ಭಂಗಮಾಡಬೇಕೆಂದು ಆಗ್ರಹ ಮಾಡಿದಳು.

ನಾರದನು ತಾನು ಬಂದ ಕೆಲಸ ಕೈಗೂಡಿತೆಂದು ವಿಚಾರಿಸುತ್ತ ಲಕ್ಷ್ಮಿಯ ಬಳಿಗೆ ಹೋಗಿ ಅದೇ ಪ್ರಕಾರ ಅನಸೂಯೆಯ ಪುರಾಣವನ್ನು ಬಿಚ್ಚಿದನು. ಲಕ್ಷ್ಮಿಗೆ ಅನಸೂಯೆಯ ವರ್ಣನೆಯು ಸರಿದೋರದೇ ತನ್ನ ಪತಿಯಾದ ವಿಷ್ಣುವಿಗೆ ಅನಸೂಯೆಯ ಸಚ್ಚಾರಿತ್ರ್ಯವನ್ನೂ ಅವಳ ಧರ್ಮವನ್ನೂ ತೀವ್ರ ಭ್ರಷ್ಟಗೊಳಿಸಬೇಕೆಂದು ಕೇಳಿಕೊಂಡಳು.

ಬ್ರಹ್ಮ-ವಿಷ್ಣು-ಮಹೇಶ ಈ ಮೂವರೂ ತಮ್ಮ ತಮ್ಮ ಸತಿಯರಿಂದ ಪ್ರೇರಿತರಾಗಿ ಅನಸೂಯೆಯನ್ನು ಧರ್ಮಭ್ರಷ್ಟಳನ್ನಾಗಿ ಮಾಡಲೋಸುಗ ಅತ್ರಿಮುನಿಯ ಆಶ್ರಮದ ಕಡೆಗೆ ಹೊರಟರು.

ಮೂವರೂ ದೇವತೆಗಳು ಸನ್ಯಾಸಿಯ ವೇಷಧಾರಿಗಳಾಗಿ ಅತ್ರಿಮುನಿಯ ಪರ್ಣಕುಟಿಯ ದ್ವಾರದಲ್ಲಿ ನಿಂತು "ಭವತಿ ಭಿಕ್ಷಾಂದೇಹಿ"ಎಂದು ಕೂಗಿದರು. ಅನುಸೂಯೆಯು ಭಿಕ್ಷೆಯನ್ನು ತೆಗೆದುಕೊಂಡು ಬಂದಳು. ಆದರೆ ಅವರು ಭಿಕ್ಷೆಯನ್ನು ನೀಡಿಸಿಕೊಳ್ಳಲಿಲ್ಲ. ಅಮ್ಮಾ ನಮಗೆ ಬಹಳ ಹಸಿವೆಯಾಗಿದೆ. ನಾವು ಇಲ್ಲಿಯೇ ಕುಳಿತು ಇಚ್ಛಾನುಸಾರ ಭೋಜನ ಮಾಡುವೆವೆಂದು ನುಡಿದರು. ಅನುಸೂಯೆಯು ಆ ಮಾತಿಗೂ ಸಹ ಒಪ್ಪಿಕೊಂಡಳು. ತಾವು ನದಿಗೆಹೋಗಿ ಸ್ನಾನ ತೀರಿಸಿಕೊಂಡು ಬನ್ನಿರಿ, ಅಷ್ಟರಲ್ಲಿ ನಾನು ಅಡಿಗೆ ತಯಾರಿಸುವೆ ಎಂದು ನುಡಿದಳು.

ಸನ್ಯಾಸಿ ವೇಷಧಾರಿಗಳಾದ ತ್ರಿಮೂರ್ತಿಗಳು ನದಿಗೆ ಹೋಗಿ ಸ್ನಾನ ತೀರಿಸಿಕೊಂಡು ಬಂದನಂತರ, ಅನಸೂಯೆಯು ಅವರನ್ನು ಭೋಜನ ಶಾಲೆಯಲ್ಲಿ ಕುಳ್ಳಿರಿಸಿ ಊಟಕ್ಕೆ ಬಡಿಸಹತ್ತಿದಳು. ಆಗ ತ್ರಿಮೂರ್ತಿಗಳು ಅನಸೂಯೆಯನ್ನು ಕುರಿತು ನೀನು ದಿಗಂಬರಳಾಗಿ ನಮಗೆ ಊಟಕ್ಕೆ ಬಡಿಸಿದರೆ ನಾವು ಭೋಜನ ಮಾಡುವೆವು, ಇಲ್ಲವಾದರೆ ಹೊರಟು ಹೋಗುವೆವು ಎಂದು ನುಡಿದರು. ಈ ಮಾತು ಅನಸೂಯೆಗೆ ಘೃಣಾ ಅನಿಸಿತು. ಮೊದಲು ಸಿಟ್ಟಿಗೆದ್ದಳು. ಆದರೆ ಅವಳು ಮನದಲ್ಲಿ ಸ್ವಲ್ಪ ವಿಚಾರಮಾಡಿದ ಮೇಲೆ ಇದು ದೇವತೆಗಳ ಕಪಟ ಕೃತಿಯೆಂದು ನಿಶ್ಚಯಿಸಿ ಅವರಿಗೆ 'ಪೂಜ್ಯರೇ ತಾವು ಸ್ವಲ್ಪ ಹೊತ್ತು ಇಲ್ಲಿಯೇ ಕುಳಿತುಕೊಳ್ಳಬೇಕೆಂದು ಅರಿಕೆ ಮಾಡಿಕೊಂಡಳು.

ಅನುಸೂಯೆಯು ಪತಿಯ ಬಳಿಗೆ ಹೋದಳು. ಪತಿಯ ಪಾದಗಳನ್ನು ತೊಳೆದುಕೊಂಡು ಆ ಜಲವನ್ನು ತಂದು ತ್ರಿಮೂರ್ತಿಗಳ ಮೈಮೇಲೆ ಸಂಪ್ರೋಕ್ಷಿಸಿದಳು. ಪಾದೋದಕದ ಪ್ರಭಾವದಿಂದ ಬ್ರಹ್ಮ-ವಿಷ್ಣು-ಮಹೇಶ ಈ ಮೂವರೂ ಕ್ಷಣದಲ್ಲಿಯೇ ಮೊಲೆಯುಣ್ಣುವ ಶಿಶುಗಳಾದರು. ಆಗ ಅನುಸೂಯೆಯು ದಿಗಂಬರಳಾಗಿ ಒಂದೊಂದೇ ಶಿಶುವನ್ನು ಎತ್ತಿಕೊಂಡು ಯಥೇಷ್ಟವಾಗಿ ಮೊಲೆಯುಣಿಸಿ ಮೂರೂ ಶಿಶುಗಳನ್ನು ತೊಟ್ಟಿಲಲ್ಲಿ ಮಲಗಿಸಿ ತೂಗಹತ್ತಿದಳು.

ಎಷ್ಟೋ ದಿವಸಗಳು ಉರುಳಿದವು. ತ್ರಿಮೂರ್ತಿಗಳಲ್ಲಿ ಒಬ್ಬನಾದರೂ ತಮ್ಮ ಸ್ಥಾನಕ್ಕೆ ತಿರುಗಲಿಲ್ಲ. ಸರಸ್ವತಿ, ಲಕ್ಷ್ಮಿ, ಪಾರ್ವತಿ ಎಲ್ಲರೂ ಏಕತ್ರ ಕೂಡಿದರು. ತಮ್ಮ ತಮ್ಮ ಪತಿಗಳಿಗೆ ಏನಾಗಿರಬಹುದೆಂದು ಚಿಂತಿಸಿದರು. ಏನು ತಿಳಿಯದೇ ಬಿಕ್ಕಿ ಬಿಕ್ಕಿ ಅತ್ತರು ಎಲ್ಲರೂ ತಮ್ಮ ತಮ್ಮ ಪತಿಯನ್ನು ನೆನೆಸುತ್ತ ಹುಚ್ಚರಂತೆ ಹುಡುಕ ಹತ್ತಿದರು. ಎಲ್ಲಿಯೂ ಸುಳುವೇ ಹತ್ತಲಿಲ್ಲ, ಆಗ ತ್ರಿಲೋಕ ಸಂಚಾರಿಯಾದ ನಾರದನು ಎದುರು ಬಂದನು. ಈ ಮಹಾರಾಯನಿಗೆ ಏನಾದರೂ ವಿಷಯವು ತಿಳಿದಿರಲಿಕ್ಕೆ ಬೇಕು, ಎಂದು ಮೂವರು ಅಂದುಕೊಂಡು ಮೂವರು ಅಪ್ಪ ನಾರದರೇ! ನಮ್ಮ ಪತಿಯು ಹೋಗಿ ಎಷ್ಟೋ ದಿವಸಗಳಾದವು ತಿರುಗಿ ನಮ್ಮ ಸ್ಥಾನಕ್ಕೆ ಬರಲೇಇಲ್ಲ. ನಾವು ಅವರನ್ನು ಹುಡುಕಲು ಹೊರಟಿದ್ದೇವೆ, ನಿಮಗೇನಾದರೂ ಅವರ ಸಮಾ

ಚಾರವು ಗೊತ್ತಿದ್ದರೆ ತಿಳಿಸಿದರೆ ಬಹಳ ಉಪಕಾರವಾಗುವದು ಎಂದು ಕೇಳಿಕೊಂಡರು. ನಾರದನಿಗೆ ಎಲ್ಲವೂ ಗೊತ್ತಿತ್ತು ಆದರೂ ಅವನು ಪುರಾಣದ ಗಂಟು ಬಿಚ್ಚಲಿಲ್ಲ. ಅಮ್ಮ ನಾನೇನೂ ತ್ರಿಮೂರ್ತಿಗಳನ್ನು ಕಾಣಲಿಲ್ಲ. ಆದರೆ ಕೆಲವು ದಿವಸಗಳ ಹಿಂದೆ ಒಂದು ದಿವಸ ಮುಂಜಾನೆ ಅವರು ಅತ್ರಿ ಮುನಿಯ ಆಶ್ರಮದ ಸಮೀಪಕ್ಕೆ ಹೋಗುತ್ತಿರುವದನ್ನು ಮಾತ್ರ ನೋಡಿದೆನು ಎಂದು ನುಡಿದು ಮುಂದಕ್ಕೆ ಸಾಗಿದನು.



ಸರಸ್ವತಿ–ಲಕ್ಷ್ಮಿ–ಪಾರ್ವತಿ ಈ ಮೂವರು ಅತ್ರಿಮುನಿಯ ಆಶ್ರಮಕ್ಕೆ ತೆರಳಿದರು. ಅಲ್ಲಿ ಅನಸೂಯೆಯನ್ನು ಕಂಡು 'ಅಮ್ಮ ಇಲ್ಲಿ ಏನಾದರೂ ನಮ್ಮ ಪತಿಗಳು ಬಂದಿರುವರೇ? ಎಂದು ಪ್ರಶ್ನೆ ಮಾಡಲು ಅನುಸೂಯೆಯು ತೊಟ್ಟಿಲ ಕಡೆಗೆ ಕೈಮಾಡಿ ತೋರಿಸಿ ಅಗೋ ಅಲ್ಲಿ ನಿಮ್ಮ ಪತಿಗಳು ಸಣ್ಣ ಕೂಸುಗಳಾಗಿ ತೊಟ್ಟಿಲಲ್ಲಿ ಮಲಗಿರುವರು ನೀವೆ ನಿಮ್ಮ ನಿಮ್ಮ ಪತಿಯನ್ನು ಗುರ್ತಿಸ

ಬಹುದು ಎಂದು ನುಡಿದಳು. ಮೂರೂ ಕೂಸುಗಳು ಒಂದೇ ಸ್ವರೂಪವುಳ್ಳವು ಗಳಾಗಿದ್ದವು ಆದ್ದರಿಂದ ಗುರ್ತಿಸುವದು ಅವರಿಗೆ ಬಹಳ ಕಠಿಣವಾಯಿತು. ಆದರೂ ಲಕ್ಷ್ಮಿಯು ಬಹಳ ಸೂಕ್ಷ್ಮವಾಗಿ ಲಕ್ಷಿಸಿ ಅವುಗಳಲ್ಲಿ ಒಂದು ಕೂಸನ್ನು ವಿಷ್ಣುವೆಂದು ನಿಶ್ಚಯಿಸಿ ಎತ್ತಿಕೊಂಡಳು; ಪೆಟ್ಟಗೆಯು ಬದಲ ಆಯಿತು ವಿಷ್ಣುವಿನ ಬದಲಾಗಿ ಶಿವನನ್ನು ಎತ್ತಿಕೊಂಡದ್ದು ತನಗೆ ಅಪಹಾಸ್ಯ ವಾಯಿತು.

ಈ ಪ್ರಕಾರ ದುರ್ದಶೆಗೀಡಾದ ಸರಸ್ವತಿ–ಲಕ್ಷ್ಮಿ–ಪಾರ್ವತಿ–ಇವರು ನಿರಾಶೆ ಹೊಂದಿ ಬೇರೆ ಗತಿಗಾಣದೆ ಅನಸೂಯೆಗೆ ಪತಿಪ್ರದಾನ ಮಾಡ ಬೇಕೆಂದು ಪ್ರಾರ್ಥನೆ ಮಾಡತೊಡಗಿದರು. ಅನಸೂಯೆಯು ಲಕ್ಷ್ಮಿ ಮೊದಲಾದವರಿಗೆ ಪ್ರಸನ್ನಳಾಗಿ ಈ ತ್ರಿಮೂರ್ತಿಗಳು ನನ್ನ ಮೊಲೆಹಾಲು ಕುಡಿದದ್ದರಿಂದ ಯಾವದಾದರೊಂದು ರೂಪದಿಂದ ಇವರು ನನಗೆ ಮಕ್ಕಳಾಗಿ ಉಳಿಯಬೇಕಾಗುವದು ಎಂದು ನಿಶ್ಚಯಿಸಿದಳು.

ಬ್ರಹ್ಮ–ವಿಷ್ಣು–ಮಹೇಶ ಇವರು ಒಂದೇ ಸಂಯುಕ್ತಸ್ವರೂಪಧಾರಣ ಮಾಡಿದರು. ಇದೇ ದತ್ತಾತ್ರೇಯ ಜನ್ಮವಾಯಿತು. ಆ ಮೇಲೆ ಅನುಸೂಯೆಯು ತನ್ನ ಪತಿಯ ಪಾದಗಳನ್ನು ತೊಳೆದು ಅದೇ ಜಲವನ್ನು ತಿರುಗಿ ಅವರ ಮೇಲೆ ಸಿಂಪಡಿಸಿದಳು. ಆಗ ತ್ರಿಮೂರ್ತಿಗಳು ತಮ್ಮ ತಮ್ಮ ಪೂರ್ವದ ರೂಪವನ್ನು ಧಾರಣ ಮಾಡಿದರು.

## ಪುಷ್ಯಮಾಸ

ಪುಷ್ಯಮಾಸವು ಹೇಮಂತಋತುವಿನಲ್ಲಿ ಬರುತ್ತದೆ. ವರ್ಷಾಋತುವಿನಿಂದ ಹೇಮಂತ ಋತುವಿನ ವರೆಗೆ ದಕ್ಷಿಣಾಯನ ಕಾಲವಿರುತ್ತದೆ. ಪವಿತ್ರ ದಿನವಾದ ಮಕರ ಸಂಕ್ರಾಂತಿಯು ಈ ಪುಷ್ಯಮಾಸದಲ್ಲಿ ಬರುತ್ತದೆ. ಮಕರ ಸಂಕ್ರಾಂತಿಯಿಂದ ಆರು ತಿಂಗಳ ವರೆಗೆ ಉತ್ತರಾಯಣ ಕಾಲವಿರುತ್ತದೆ. ಇಲ್ಲಿಂದ ಸೂರ್ಯನ ಕಿರಣಗಳು ಪ್ರಖರವಾಗುತ್ತ ಹೋಗುತ್ತವೆ. ಈ ಮಕರ ಸಂಕ್ರಾಂತಿಯ ಕಾಲವು ಮಾನವನಿಗೆ ಅತ್ಯಂತ ಆನಂದದಾಯಕವಾಗಿರುತ್ತದೆ. ಮುಂಗಾರಿಯ ಪೀಕು ಪರಿಪೂರ್ಣತೆ ಹೊಂದಿರುವ ಕಾರಣ ಮನೆಯಲ್ಲಿ ಧಾನ್ಯ

ದವಸಗಳು ತುಂಬಿ ಜನರು ಶಿರಿವಂತರಾಗಿರುವರಲ್ಲದೆ ಅವರು ಮುಂಬರುವ ಹಿಂಗಾರಿಯ ಪೀಕಿನಿಂದ ಹಸರು ವರ್ಣವುಳ್ಳ ಹೊಲಗಳನ್ನು ಕಣ್ತುಂಬ ನೋಡಿ, ಮನದುಂಬಿ ಮೈಯುಬ್ಬಿ ನಲಿನಲಿದಾಡಿ ಹಾಡುತ್ತಿರುವರು. ಇಂಥ ಸಮಯಕ್ಕೆ ಮಕರ ಸಂಕ್ರಾಂತಿಯು ಹಬ್ಬವೆಂದರೆ ಸರ್ವರಿಗೂ ಉಬ್ಬು.

## ಮಕರ ಸಂಕ್ರಾಂತಿ

ಈ ಹಬ್ಬವು ಋತುಮಾನಕ್ಕೆ ಸಂಬಂಧಿಸಿದುದಾಗಿದೆ. ಮೂರು ದಿನಗಳ ವರೆಗೆ ಜನರು ಮಕರ ಸಂಕ್ರಾಂತಿಯನ್ನು ಆಚರಿಸುವುದುಂಟು. ಮೊದಲನೆಯ ದಿನವನ್ನು ಭೋಗಿ ಹಬ್ಬವೆಂತಲೂ, ಎರಡನೆಯ ದಿನವನ್ನು 'ಸಂಕ್ರಾಂತಿ' ಯೆಂದೂ; ಮೂರನೆಯ ದಿನವನ್ನು 'ಕುನುಮಾ' ಎಂದೂ ಅನ್ನುವುದುಂಟು.

ಮಕರ ಸಂಕ್ರಾಂತಿಯೆಂದರೆ ಸೂರ್ಯನ ಉತ್ತರಾಯಣ ಕಾಲ "ಅಯನಂ ವರ್ತ್ಮಮಾರ್ಗಾಧ್ವ" ಎಂಬ ಅಮರಸಿಂಹನ ಉಕ್ತಿಯಂತೆ ಅಯನಕ್ಕೆ ಮಾರ್ಗವೆಂದು ಹೆಸರು. ಈ ಮಕರಸಂಕ್ರಾಂತಿಯ ದಿನ ಸೂರ್ಯನು ಉತ್ತರ ದಿಕ್ಕಿನ ಮಾರ್ಗಗತಿಯುಳ್ಳವನಾಗುವನು. ಸಹಸ್ರಾರು ವರ್ಷಗಳ ಹಿಂದೆ ಆರ್ಯರು ಉತ್ತರ ಧೃವ ಪ್ರದೇಶದಲ್ಲಿ ವಾಸಿಸುತ್ತಿದ್ದಾಗ ಅಲ್ಲಿ ಆರು ತಿಂಗಳ ಕಾಲ ಹಗಲು, ಆರು ತಿಂಗಳ ಕಾಲ ರಾತ್ರಿಯೂ ಇತ್ತು. ಅವರು ತಮ್ಮ ಎಲ್ಲ ಕೆಲಸಗಳನ್ನು ಹಗಲಿನಲ್ಲಿಯೇ ಮಾಡಿಕೊಳ್ಳುತ್ತಿದ್ದರು. ಸೂರ್ಯೋದಯ ವಾಗುತ್ತಿರುವಾಗ ಮೇಷರಾಶಿಯೂ, ಸೂರ್ಯಾಸ್ತ ಸಮಯದಲ್ಲಿ ತುಲಾ ರಾಶಿಯೂ ಕೂಡುತ್ತಿತ್ತು. ಈ ಸಮಯದಲ್ಲಿ ಸೂರ್ಯನ ಉತ್ತರದಲ್ಲಿ ಸಂಚಾರ ಮಾಡುವ ಆರು ತಿಂಗಳ ಕಾಲವನ್ನು ಉತ್ತರಾಯಣವೆಂತಲೂ, ಉಳಿದ ಆರು ತಿಂಗಳ ರಾತ್ರಿಯ ಕಾಲವನ್ನು ದಕ್ಷಿಣಾಯನ ಕಾಲವೆಂತಲೂ ಗೊತ್ತುಪಡಿಸಿ ದ್ದರು. ಉತ್ತರಾಯಣ ಕಾಲವನ್ನು ಶ್ವೇತಗತಿಯೆಂತಲೂ, ದಕ್ಷಿಣಾಯನ ಕಾಲವನ್ನು ಪ್ರೇತಗತಿಯೆಂತಲೂ ಕರೆದರು. ಅವರು ಪಿತೃಕಾರ್ಯವನ್ನು ರಾತ್ರಿ ಕಾಲದಲ್ಲಿ ನೆರವೇರಿಸುತ್ತಿದ್ದಿಲ್ಲ. ಅಂತೇ ಭೀಷ್ಮನು ಶರಶಯ್ಯನದಲ್ಲಿ ದ್ದಾಗ ಉತ್ತರಾಯಣವು ಬರುವ ವರೆಗೆ ತನ್ನ ಜೀವವನ್ನು ಧರಿಸಿಕೊಂಡಿದ್ದನು. ಈ ವಿಚಾರದ ಪ್ರಕಾರ ಸೂರ್ಯನು ಮೇಷರಾಶಿಯಲ್ಲಿರುವಾಗ ಉತ್ತರಾಯಣ ಆರಂಭವೆಂತಲೂ, ತುಲಾರಾಶಿಯಲ್ಲಿರುವಾಗ ದಕ್ಷಿಣಾಯನದ ಆರಂಭವೆಂತಲೂ

ಆಗುವದು. ಆದರೆ ಮಕರರಾಶಿಗೆ ಸೂರ್ಯನು ಬಂದಾಗ ಉತ್ತರಾಯಣ ಹಾಗೂ ಕರ್ಕರಾಶಿಗೆ ಬಂದಾಗ ದಕ್ಷಿಣಾಯನಕಾಲವೂ ಈಗ ಆಚರಣೆಯಲ್ಲಿದೆ. ಇಷ್ಟರಿಂದಲೇ ಮಕರ ಸಂಕ್ರಾಂತಿಗೆ ಬೆಲೆ ಬರುತ್ತಿದ್ದಿಲ್ಲ. ಇದಕ್ಕೆ ಮಾರ್ಮಿಕ ವಾದ ಒಂದು ಪೌರಾಣಿಕ ಕಥೆಯುಂಟು. ಅದು ಏನಂದರೆ—

ಪೂರ್ವದಲ್ಲಿ ತಿಲಾಸುರನೆಂಬ ರಾಕ್ಷಸನಿದ್ದನು. ಅವನು ಬ್ರಹ್ಮನ ವರದಾನದಿಂದ ಉನ್ಮತ್ತನಾಗಿ ರಾಕ್ಷಸೀ ಕೃತಿಯಿಂದ ದೇವಾಧಿದೇವತೆಗಳಿಗೂ ತಪೋನಿರತರಾದ ಋಷಿಗಳಿಗೂ, ನಿರಪರಾಧಿಗಳಾದ ಸ್ತ್ರೀ–ಪುರುಷರಿಗೂ ಪರಿ ಪರಿಯಾಗಿ ಪೀಡಿಸುತ್ತಿದ್ದನಲ್ಲದೆ ತ್ರಿಲೋಕ ಕಂಟಕನಾದನು. ಅವನ ಉದ್ಧಟತನಕ್ಕೆ ಎಲ್ಲರೂ ಬೇಸತ್ತು ಉಪಾಯಗಾಣದೆ ಸೂರ್ಯದೇವನಿಗೆ ಮೊರೆಹೊಕ್ಕು ತ್ರಾಹಿ ತ್ರಾಹಿ ಎಂದು ಬೇಡಿಕೊಂಡರು. ಆಗ ಪ್ರಸನ್ನನಾದ ಸೂರ್ಯನಾರಾಯಣನು ಕರ್ಕ ಮತ್ತು ಮಕರ ಎಂಬ ಈರ್ವರು ಸ್ತ್ರೀಯರನ್ನೂ ಅವರ ಸಹಾಯಕ್ಕಾಗಿ ಹತ್ತು ಜನ ಪರಿವಾರದವರನ್ನು ತನ್ನ ಮಂತ್ರಶಕ್ತಿಯಿಂದ ಸೃಷ್ಟಿಸಿ, ತಿಲಕಾಸುರನನ್ನು ಸಂಹರಿಸಬೇಕೆಂದು ಅವರಿಗೆ ಅಪ್ಪಣೆಯನ್ನಿತ್ತನು. ಆ ಪ್ರಕಾರವಾಗಿ ಅವರು ತಿಲಕಾಸುರನೊಡನೆ ತುಮುಲವಾದ ಯುದ್ಧವನ್ನಾ ಲಂಭಿಸಿದರು. ದೇವತೆಗಳು ಎಷ್ಟು ಸಾಹಸಪಟ್ಟರೂ ರಾಕ್ಷಸನು ಸಾಯಲಿಲ್ಲ. ಕೊನೆಗೆ ಮಕರ ದೇವತೆಯು ತನ್ನ ಭಲ್ಲೆಯಿಂದ ಆ ರಾಕ್ಷಸನ ಹೊಟ್ಟೆಗೆ ಸಿಟ್ಟಿ ಗೆದ್ದು ಇರಿಯಲಾಗಿ ಅವನ ಹೊಟ್ಟೆಯಲ್ಲಿ ಎಳ್ಳಿನ ಸಂಗ್ರಹವು ಕಂಡುಬಂತು. ಅದನ್ನು ದೇವತೆಯು ಹೊರಗೆ ತೆಗೆಯಲಾಗಿ ರಾಕ್ಷಸನು ಮರಣ ಹೊಂದಿದನು. ಎಲ್ಲ ದೇವತೆಗಳು ಮಕರ ದೇವತೆಯನ್ನು ಆನಂದದೊಡನೆ ಸ್ವಾಗತಿಸಿದರು. ಸೂರ್ಯನಾರಾಯಣನು ಸಂತುಷ್ಟನಾಗಿ "ದೇವೀ! ನಿನ್ನನ್ನು ಭಕ್ತಿಯಿಂದ ಪೂಜಿಸಿದವರಿಗೆ ಸಂಪದಭಿವೃದ್ಧಿಯಾಗಲಿ; ನೀನು ಶೋಧಿಸಿದ ಎಳ್ಳು ಅಮೃತ ದಂತೆ ಪರಿಣಮಿಸಲಿ. ನಿನ್ನ ಕೀರ್ತಿಯು ನಾನಿರುವವರೆಗೆ ಅಜರಾಮರವಾಗಿ ಉಳಿಯಲಿ'' ಎಂದು ವರವನ್ನಿತ್ತನು. ಅದರ ಸ್ಮಾರಕವಾಗಿ ಮಕರ ಸಂಕ್ರಮ ಣದ ಹಬ್ಬವು ಆಚರಿಸಲ್ಪಡುತ್ತದೆ. ಮಕರ ಸಂಕ್ರಮಣದ ದಿನದಂದು ಲೋಕ ಕಂಟಕನ ವಧೆಯಾಗಿ ಸುಖಶಾಂತಿಗಳು ಒದಗಿದ್ದರಿಂದ ತೀರ್ಥಸ್ನಾನ ದಾನಧರ್ಮ ಮೊದಲಾದ ಪುಣ್ಯ ಕರ್ಮಗಳನ್ನು ಆಗಿನ ಕಾಲದವರು

ಆಚರಿಸಿ ಮಾರ್ಗದರ್ಶನ ಮಾಡಿಕೊಟ್ಟಂತೆ ಈಗಲೂ ಆಚರಿಸಲಾಗುತ್ತದೆ. ಇಂದಿನ ದಿನ ಅನೇಕ ಕಡೆಗಳಲ್ಲಿ ಜಾತ್ರೆಗಳು ಜರಗುತ್ತವೆ. ಅನೇಕ ಕಡೆಯಲ್ಲಿ ಜನರು ತಂಡೋಪತಂಡವಾಗಿ ತೀರ್ಥಗಳಿಗೆ ಸ್ನಾನಕ್ಕೆ ಹೋಗುವರು. ಈ ಹಬ್ಬದಲ್ಲಿ ಎಳ್ಳಿಗೆ ಪ್ರಾಧಾನ್ಯತೆ ಇದೆ. ಉತ್ತರ ಭಾರತದಲ್ಲಿ ಕಾಶೀ, ಪ್ರಯಾಗ ಮೊದಲಾದ ಪುಣ್ಯಕ್ಷೇತ್ರಗಳಲ್ಲಿ ಜನರು ಇಂದು ಎಳ್ಳು ಎಣ್ಣೆಯನ್ನು ದೇಹಕ್ಕೆ ಮಾಲೀಶ್ ಮಾಡಿಸಿಕೊಂಡು ತೀರ್ಥಸ್ನಾನ ಮಾಡಿ ಯಥೋಚಿತವಾಗಿ ದಾನ ಮಾಡುವರು. ಎಳ್ಳಿನಿಂದ ತಯಾರಿಸಿದ ಪಕ್ವಾನ್ನಗಳನ್ನು ಸೇವಿಸುವರು. ವಿಜಯಾದಶಮಿಯಂದು 'ಬನ್ನಿಯು, ಬಂಗಾರವೆಂಬ ಅಭಿಧಾನದಿಂದ ಪರಸ್ಪರರಲ್ಲಿ ಅರ್ಪಿಸಲ್ಪಡುವಂತೆ ಮಕರ ಸಂಕ್ರಾಂತಿಯ ದಿನ ಪರಸ್ಪರರಲ್ಲಿ ಎಳ್ಳು ಬೆಲ್ಲ ಅರ್ಪಿಸಲ್ಪಡುತ್ತದೆ. ಲೋಕ ವ್ಯವಹಾರದಲ್ಲಿ ಪರಸ್ಪರರಲ್ಲಿ ವೈಮನಸ್ಸುವುಂಟಾಗಿದ್ದರೆ, ಇಂದಿನ ದಿನ ಅದನ್ನು ಮರೆತು "ನಾವಿಬ್ಬರೂ ಎಳ್ಳುಬೆಲ್ಲದಂತೆ ಇರೋಣವೆಂ"ದು ಅನ್ನುತ್ತ ಎಳ್ಳುಬೆಲ್ಲವನ್ನರ್ಪಿಸುತ್ತ ಪರಸ್ಪರರನ್ನು ಬಿಗಿದಪ್ಪಿಕೊಳ್ಳುವರು. ಇದು ಈ ಹಬ್ಬದ ವೈಶಿಷ್ಟ್ಯವಾಗಿದೆ. ಎಳ್ಳಿನಲ್ಲಿ ಸ್ನೇಹ (ಸ್ನಿಗ್ಧ) ಗುಣವಿದೆ. ಬೆಲ್ಲದಲ್ಲಿ ಮಾಧುರ್ಯವಿದೆ. ಇವೆರಡರ ಸಮ್ಮಿಲನವು ಅಮೃತದಂತೆ ರುಚಿಕರವಾಗಿದೆ. ಅದರಂತೆಯೇ ಅಗಲಿದ ಎರಡು ವ್ಯಕ್ತಿಗಳು ಏಕತ್ರ ಕೂಡಿದರೆ ವ್ಯವಹಾರದಲ್ಲಿ ಅನೇಕ ಕಾರ್ಯಗಳು ಸುಗಮವಾಗಿ ನಡೆಯುತ್ತವೆ. ಐಕ್ಯತೆಯಿಂದ ಮಾನವನು ಘನತರ ಕಾರ್ಯವನ್ನು ಸಾಧಿಸುವನು. ಅಂತೇ ಹಿರಿಯರು ಈ ಹಬ್ಬ ಆಚರಣೆಯಿಂದ ಹೆದ್ದಾರಿಯನ್ನು ತೋರಿಸಿಕೊಟ್ಟಿರುವರು.

## ಸೊಲ್ಲಾಪುರದ ಸಿದ್ಧರಾಮೇಶ್ವರ ಜಾತ್ರೆ

ಜಗದ ಜನರನ್ನು ಜಾಗ್ರತಗೊಳಿಸಿ ಚಿರಸುಖವನ್ನೀಯಲು ದಯಾಮಯನಾದ ಪರಮಾತ್ಮನು ಮೇಲೆ ಮೇಲೆ ಅವತಾರವೆತ್ತಿಬರುವನೆಂಬ ಮಾತನ್ನು ಆಸ್ತಿಕ ಶಿಖಾಮಣಿಗಳು ನೆರೆನಂಬಿರುವರಷ್ಟೇ !

ಜ|| ರೇಣುಕಾಚಾರ್ಯ, ಜ|| ಶಂಕರಾಚಾರ್ಯ ಮೊದಲಾದ ಮತಸ್ಥಾಪಕರನ್ನು, ರಾಮಕೃಷ್ಣ ಪರಮಹಂಸ, ಪುರಂದರದಾಸ, ಕನಕದಾಸ ಇತ್ಯಾದಿ ಸಂತಶ್ರೇಷ್ಠರನ್ನು ನೆನಪಿಗೆ ತಂದುಕೊಂಡಾಗ ಮೇಲಿನಮಾತು ಎಂಥ

ನಾಸ್ತಿಕನನ್ನಾದರೂ ಧರ್ಮದತ್ತ ಒಯ್ಯಬಹುದು. ಪೆಟ್ಟಿಗೆಯಲ್ಲಿಟ್ಟ ಕರ್ಪೂರವು ಕರಗಿಹೋದರೂ ಅದರ ಸುಗಂಧವು ದೀರ್ಘ ಕಾಲದವರೆಗೆ ಉಳಿಯುವಂತೆ ಅವತಾರವೆತ್ತಿದ ಪುರುಷರ ಪಾರ್ಥಿವ ಶರೀರವು ನಶಿಸಿ ಹೋದರೂ ಅವರ ಕೀರ್ತಿಯು ಅಮರವಾಗಿರುತ್ತದೆ. ಅಂಥವರ ಪುಣ್ಯ ನಾಮಸ್ಮರಣೆಯಿಂದ ಮಾನವನಿಗೆ ಅಂಟಿಕೊಂಡ ಅಜ್ಞಾನವು ದೂರಾಗುತ್ತದೆ. ಹಾಗೂ ಮಹಾತ್ಮರ ಅನುದಿನ ಉಪಾಸನೆಯಿಂದ ಕೀಟಭ್ರಮರ ನ್ಯಾಯದಂತೆ ಸಾಮಾನ್ಯ ಪುರುಷನು ಶಿವಯೋಗಿಯಾಗುತ್ತಾನೆ.

ಕೀಟೋಭ್ರಮರಯೋಗೇನಭ್ರಮರೋಭವತಿ ಧೃವಂ ।
ಮಾನವಃ ಶಿವಯೋಗೇನ ಶಿವೋಭವತಿ ನಿಶ್ಚಯಸಿ ॥

ಕೀಡೆಯು ಕುರಡೀಕುಕ್ಕಾರಿಯ ಸಂಬಂಧದಿಂದ ಅದು ಕುರಡೀಕುಕ್ಕಾರಿಯಾಗುವುದು. ಮಾನವನು ಶಿವಯೋಗಿಯ ಸಹವಾಸದಿಂದ ಅವನು ನಿಶ್ಚಯವಾಗಿ ಶಿವನಾಗುತ್ತಾನೆ, ಭಾರತ ಭೂಮಿಯಲ್ಲಿ ಅಸಂಖ್ಯ ಪ್ರಮಾಣದಲ್ಲಿ ಆಗಿ ಹೋಗಿರುವರು. ಆ ಅವತಾರಿ ಪುರುಷರ ಶ್ರೇಣಿಯಲ್ಲಿ ಸೋಲಾಪುರದ ಶ್ರೀ ಸಿದ್ಧರಾಮ ಶಿವಯೋಗಿಗಳು ಒಬ್ಬ ದಿವ್ಯ ಜ್ಯೋತಿಯಂತಿರುವರು. ಈ ಮಹಾತ್ಮರು ಮೊದಲಿನಿಂದಲೂ ಸೋಲಾಪುರದಲ್ಲಿ ಸಮಸ್ತರಿಂದಲೂ ಪೂಜಿಸಲ್ಪಡುವವರಾಗಿರುವರು. ಅಲ್ಲದೇ ಇಂದಿಗೂ ಈ ಮಹಿಮರ ಜಾತ್ರೆಯು ಮಕರ ಸಂಕ್ರಾಂತಿಯ ದಿನ ಅತ್ಯಂತ ವೈಭವ ಪೂರ್ಣವಾಗಿ ಜರಗುತ್ತದೆ. ಅಂದಿನ ದಿನದಲ್ಲಿ ಸ್ಥಾನಿಕ ಜನರಲ್ಲದೆ ಲಕ್ಷಾಂತರ ಜನರು ಹೊರವಲಯದಿಂದ ಬಂದು ಆ ಮಹಾ ಮಹಿಮನ ದರ್ಶನಹೊಂದಿ ಧನ್ಯರಾಗುವುದುಂಟು.

ಸೊಲಾಪುರವು ಪುಣ್ಯ ಕ್ಷೇತ್ರಗಳಲ್ಲಿ ಹೆಸರಾಗಿದೆ. ಅಲ್ಲಿ ಸಿದ್ಧರಾಮೇಶ್ವರ ಕ್ಷೇತ್ರ, ರೇವಣಸಿದ್ಧೇಶ್ವರರ ಮಂದಿರ, ತೀರ್ಥ ಮಲ್ಲಿಕಾರ್ಜುನ ಸ್ವಾಮಿಯ ಮಂದಿರ ಇವುಗಳು ೧೧ ನೆಯ ಶತಮಾನದಿಂದ ಮಾನವ ಕೋಟಿಗೆ ಮುಕ್ತಿ ದಾಯಕವಾಗಿವೆ.

## ಶ್ರೀ ಸಿದ್ಧರಾಮನ ಜನ್ಮ

ಶ್ರೀ ಸಿದ್ಧರಾಮೇಶ್ವರನ ಜನನ, ಅವನ ಪವಾಡ ಮೊದಲಾದವುಗಳು 'ಸಿದ್ಧರಾಮೇಶ್ವರ ಚರಿತ್ರಾಮೃತದ ಆಧಾರದಿಂದ ಕೆಳಗೆ ವಿವರಿಸಿದಂತೆ ಸಿದ್ಧ

ಪಡಿಸಲಾಗುತ್ತದೆ—ಹದಿನಾರು ಗ್ರಾಮಗಳಿಂದ ಒಳಗೊಂಡ ಪಟ್ಟಣವು ಸೋಲಾಪುರವೆಂದು ಪ್ರಸಿದ್ಧವಾಗಿದೆ. ಸುಮಾರು ಕ್ರಿ.ಶ. ೧೧ ರ ಆದಿಯಲ್ಲಿ ಶ್ರೀ ಬಾಳೇಹೊನ್ನೂರು ವೀರ ಸಿಂಹಾಸನದ ಶಾಖಾನುವರ್ತಿಯೂ, ಮಾಹೇಶ್ವರ (ಜಂಗಮ) ಕುಲೋತ್ಪನ್ನನೂ ಆದ ಸೋಮದೇವನೆಂಬವನು ಆ ಹದಿನಾರು ಗ್ರಾಮಗಳ ಬೃಹನ್ಮಠಾಧೀಶನಾಗಿದ್ದನಲ್ಲದೇ ಸರ್ ದೇಸಾಯಿಯೆಂದು ಹೆಸರಾಗಿದ್ದನು. ಆದುದರಿಂದ ಅವರು ಜಂಗಮರಾಗಿದ್ದರೂ 'ಗೌಡ' ಎಂಬುವ ಪದವೂ ಅವರಿಗೆ ಭೂಷಣಾಸ್ಪದವಾಗಿತ್ತು. ಆ ಸೋಮದೇವನಿಗೆ ಮುದ್ದದೇವ ಅಥವಾ ಮುದ್ದಗೌಡನೆಂಬ ಸುಪುತ್ರನಿದ್ದನು. ಅವನಿಗೆ ಮಂಗಳ ವೇಡಿಯ ಪಂಚವಣ್ಣಿಗಿ ಮಠದ ಶ್ರೀ ಶಾಂತವೀರಯ್ಯನ ಮಗಳಾದ ಸುಗ್ಗಲಾದೇವಿಯು ಧರ್ಮಪತ್ನಿಯಾಗಿದ್ದಳು.

.ಆ ಕಾಲದಲ್ಲಿ ಶ್ರೀಮದ್ರಂಭಾಪುರಿ ವೀರ ಸಿಂಹಾಸನಾಧೀಶ್ವರರಾದ ಜಗದ್ಗುರು ರೇವಣಸಿದ್ಧಯೋಗಿಗಳು ಸೋಲಾಪುರದ ಸನಿಹದಲ್ಲಿ ಪ್ರಶಾಂತವಾದ ತಮ್ಮ ಶಿವಯೋಗಾಶ್ರಮದಲ್ಲಿ ತಪೋನುಷ್ಠಾನ ನಿರತರಾಗಿದ್ದರು. ಸದಾಚಾರ ಸಂಪನ್ನರೂ ರಾಜಮನೆತನದವರೂ ಆದ ಮುದ್ದಗೌಡ ಸುಗ್ಗಲಾದೇವಿಯವರು ಜಗದ್ಗುರು ರೇವಣಸಿದ್ಧೇಶ್ವರರಲ್ಲಿ ಭಕ್ತಿವಿಶ್ವಾಸವುಳ್ಳವರಾಗಿ ಅವರ ಅನುಷ್ಠಾನಕ್ಕೆ ಏನೂ ತೊಂದರೆಯಾಗದಂತೆ ನೋಡಿಕೊಳ್ಳುತ್ತಿದ್ದರು. ಆ ಜಂಗಮ ದಂಪತಿಗಳು ಒಂದು ದಿನ ಆ ಗುರುಪುಂಗವನ ದರ್ಶನಕ್ಕೆ ಹೋದಾಗ್ಗೆ ಶ್ರೀ ಜ. ರೇವಣಸಿದ್ಧೇಶ್ವರರು ಕೃಪಾವೃಷ್ಟಿಯಿಂದ ಸುಗ್ಗಲಾದೇವಿಯರನ್ನು ಕುರಿತು– "ಮಗಳೇ! ನಿನ್ನ ಉದರದಿಂದ ಎವೆಯಿಕ್ಕದ, ಉಸಿರಿಕ್ಕದ, ಉಣ್ಣದ, ಶಿವಯೋಗನಿಷ್ಠನಾದ ಸುಪುತ್ರನು ಉದಯಿಸಿ, ನಿಮ್ಮನ್ನು ಉದ್ಧರಿಸುವನು;" ಇತ್ಯಾದಿಯಾಗಿ ಅವರಿಗೆ ಶುಭಾಶೀರ್ವಾದವನ್ನಿತ್ತರು.

ಇಷ್ಟರಲ್ಲಿಯೇ ಇಬ್ಬರು ಗಂಡು ಮಕ್ಕಳಿಗೂ ಐದು ಜನ ಹೆಣ್ಣು ಮಕ್ಕಳಿಗೂ ಜನ್ಮವಿತ್ತ ಸುಗ್ಗಲಾದೇವಿಯು ಶ್ರೀ ಜ. ರೇವಣಸಿದ್ಧೇಶ್ವರರ ಶುಭಾಶೀರ್ವಾದ ಪ್ರಭಾವದಿಂದ ಗರ್ಭವತಿಯಾಗಿ ಪೂರ್ಣಾವಸ್ಥೆಯನ್ನು ಹೊಂದಿ, ಮುಂದೆ ಶಾಲಿವಾಹನ ಶಕೆ೧೦೧೦ (ಕ್ರಿ.ಶ. ೧೦೮೮) ವಿಭವನಾಮ ಸಂವತ್ಸರ ಮಕರ ಸಂಕ್ರಾಂತಿಯ ಪುಣ್ಯ ಕಾಲದ ಸೋಮವಾರ ಪ್ರಭಾತ ಸಮಯದಲ್ಲಿ

ಗಂಡು ಮಗುವಿಗೆ ಜನ್ಮವಿತ್ತಳು. ಮುದ್ದದೇವನು ಈ ಸುದ್ದಿಯನ್ನು ತಿಳಿದು ಆನಂದಪರವಶನಾಗಿ ಶ್ರೀ ಜ. ರೇವಣಸಿದ್ಧೇಶ್ವರರ ಸನ್ನಿಧಿಗೆ ಪುತ್ರ ಪ್ರಾಪ್ತಿಯ ಸಂಗತಿಯನ್ನು ಅರಿಕೆ ಮಾಡಿಕೊಂಡು, ಅವರನ್ನು ತನ್ನ ಅರಮನೆಗೆ ಸಕಲ ರಾಜ ಮರ್ಯಾದೆಯೊಡನೆ ಬರಮಾಡಿಕೊಂಡು ಅವರ ಪಾದಾರವಿಂದಗಳಲ್ಲಿ ಆ ಶಿಶುವನ್ನಿರಿಸಿ, ವೀರಶೈವ ಧರ್ಮ ಪದ್ಧತಿಯಂತೆ ಶ್ರೀ ಜಗದ್ಗುರುಗಳ ಅಮೃತ ಹಸ್ತದಿಂದ ಜಾತಕರ್ಮ, ಇಷ್ಟಲಿಂಗ ಧಾರಣ ಮಾಡಿಸಿ, ಗುರು ಕೃಪೆಯನ್ನು ಪಡೆದುಕೊಂಡನು. ಮುಂದೆ ಆ ಶಿಶುವಿಗೆ 'ಸಿದ್ಧರಾಮ' ಎಂದು ನಾಮಕರಣವನ್ನು ಮಾಡಿಸಿದನು.

ಸಿದ್ಧರಾಮನು ಶೈಶವಾವಸ್ಥೆಯನ್ನು ಕಳೆದು ಎಂಟು ವರುಷದ ಬಾಲಕನಾದರೂ ಪರರೊಡನೆ ಮಾತಾಡಲಿಲ್ಲ. ಅನಿಮಿಷನಾಗಿಯೂ ಅಂದರೆ ರೆಪ್ಪೆ ಬಡೆಯದಿರುವ ನೇತ್ರವುಳ್ಳವನಾಗಿಯೂ, ಹಸಿವೆ ನೀರಡಿಕೆಯಿಲ್ಲದವನಾಗಿಯೂ ಆಗಿದ್ದನು, ಅವನ ಅಸಾಧಾರಣ ವ್ಯಕ್ತಿತ್ವವನ್ನರಿಯದ ತಂದೆ-ತಾಯಿಗಳು ಆಕಳು ಕಾಯುವವರೊಡನೆ ಅವನನ್ನು ಅಡವಿಗೆ ಕಳುಹಿಸುತ್ತಿದ್ದರು. ಹೀಗಿರಲು ಲೋಕ ಪಾಲಕನಾದ ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಯು ಸಿದ್ಧರಾಮನ ಅದ್ಭುತ ಶಕ್ತಿಯನ್ನು ಜಗತ್ತಿಗೆ ತೋರಿಸಬೇಕೆಂದು ಅಪೇಕ್ಷಿಸಿ, ಒಂದು ದಿನ ಅಡವಿಗೆ ಜಂಗಮ ವೇಷದಿಂದ ಬಂದು ಸಿದ್ಧರಾಮನಿಗೆ ದರ್ಶನವಿತ್ತನು. * ಮಲ್ಲಿಕಾರ್ಜುನನು ಮುಗ್ಧಭಾವದ ಬಾಲಕನಿಂದ ಅರ್ಪಿಸಲ್ಪಟ್ಟ ಸೀತೆನೆಯ ಬೆಳೆಸಿಯನ್ನು ಸವಿದು ಮೊಸರು-ಬೋನವನ್ನು ತರಲು ಅವನನ್ನು ಮನೆಗೆ ಕಳುಹಿದನು. ಸಿದ್ಧರಾಮನು ಮನೆಗೆ ಹೋಗಿ ಮೊಸರು-ಬೊನ ತರುವಷ್ಟರಲ್ಲಿಯೇ ಇತ್ತ ಮಲ್ಲಿಕಾರ್ಜುನ ಸ್ವಾಮಿಯು ಅದೃಶ್ಯನಾಗಿದ್ದನು. ಜಂಗಮ ಮೂರ್ತಿಯು ಅಲ್ಲಿ ಇಲ್ಲದಿರುವುದನ್ನು ಕಂಡು ಅವನು ಹಂಬಲಿಸುತ್ತ ಅತ್ತಿತ್ತ ಹುಡುಕುತ್ತ "ಸ್ವಾಮೀ ! ನೀನು ಎಲ್ಲಿಗೆ ಹೋದಿ ! ಹೀಗೇಕೆ ಮಾಡಿದಿ ! ನನಗೆ ದರ್ಶನ ಕೊಡುವದಿಲ್ಲವೇ" ! ಎಂದು ಹಟದಿಂದ ಹುಡಿಯಲ್ಲಿ ಹೊರಳಾಡ ಹತ್ತಿದನು.

---

* ಸೊನ್ನಲಗಿಯ ಅಡವಿಯಲ್ಲಿ ಶ್ರೀಗಿರಿಯ ಮಲ್ಲಿಕಾರ್ಜುನನು ಸಿದ್ಧರಾಮನಿಗೆ ದರ್ಶನ ಕೊಟ್ಟ ಸ್ಥಾನಕ್ಕೆ "ಗುರುಭೆಟ್ಟ" ಎಂದು ಇಂದಿಗೂ ಅನ್ನುವದುಂಟು.

ಶ್ರೀಶೈಲಕ್ಕೆ ಹೋಗುತ್ತಿದ್ದ ಪರಶಿ ಜಂಗಮರು ಹೀಗಿರುವ ಮುಗ್ಧ ಮನಸ್ಸಿನ ಎಳೆ ಮಗುವನ್ನು ನೋಡಿ ಬೆರಗಾಗಿ, ಮರಮರನೆ ಮರುಗಿ, ಅವನನ್ನು ಎತ್ತಿ ಮೈದಡವಿ, "ಮಗು ! ನಡೆ ನಮ್ಮೊಡನೆ; ನಿನಗೆ ಆ ಮಲ್ಲಯ್ಯನನ್ನು ತೋರಿಸುತ್ತೇವೆಂದು" ಸಂತೈಸಿ ಅವನನ್ನು ಶ್ರೀಶೈಲಕ್ಕೆ ಕರದೊಯ್ದು ಅಲ್ಲಿ ದೇವಾಲಯದಲ್ಲಿರುವ ಮಲ್ಲಿಕಾರ್ಜುನ ಲಿಂಗಮೂರ್ತಿಯನ್ನು ಅವನಿಗೆ ದರ್ಶನ ಮಾಡಿಸಿ, "ನಿನ್ನ ಮಲ್ಲಯ್ಯನು ಇಲ್ಲಿದ್ದಾನೆ. ಇವನೇ ಮಲ್ಲಿಕಾರ್ಜುನ ಸ್ವಾಮಿಯು" ಎಂದು ಹೇಳಿದರು. ಸಿದ್ಧರಾಮನು ತನಗೆ ಅಡವಿಯಲ್ಲಿ ಭೆಟ್ಟಿಯಾದ ಮಲ್ಲಿಕಾರ್ಜುನನು ಇವನಲ್ಲ ! ಅವನನ್ನು ತೋರಿಸಿ ಕೊಡಬೇಕೆಂದು ಹಠಹಿಡಿದು ದೇವಾಲಯದಿಂದ ಹೊರಬಿದ್ದು ಅತ್ತಿತ್ತ ಅಲೆದಾಡುತ್ತ ಮಲ್ಲಯ್ಯನನ್ನು ಕಾಣದವನಾಗಿ, ಹುಡುಕುತ್ತ ಬಾಯ್ಬಿಡುತ್ತ, ಒಂದು ಆಳವಾದ ಕೊಳ್ಳದ ಸನಿಹಕ್ಕೆ ಬಂದು ಮಲ್ಲಯ್ಯಾ ! ಮಲ್ಲಯ್ಯಾ ಬಾ ! ಎಂದು ಎಡಬಿಡದೆ ಕೂಗುತ್ತಿರಲು ಆ ಭೀಕರವಾದ ಕೊಳ್ಳದೊಳಗಿಂದ ಪ್ರತಿಧ್ವನಿಯು ಹೊರಟಿತು; ಆಗ ಅವನು ಓಹೊ ! ನನ್ನ ಮಲ್ಲಯ್ಯನು ಈ ಕೊಳ್ಳದಲ್ಲಿ ಬಿದ್ದಿರುವನೆಂದು ಭಾವಿಸಿ, ತಾನೂ ಆ ಕೊಳ್ಳದಲ್ಲಿ ಒಮ್ಮೆಲೇ ಹಾರಿಕೊಂಡನು. ಆಗ ದಯಾಮಯನಾದ ಮಲ್ಲಿಕಾರ್ಜುನನು ತಾನು ಹಿಂದೆ ಅಡವಿಯಲ್ಲಿ ತೋರಿದ ಜಂಗಮಾಕಾರದಿಂದ ಪ್ರತ್ಯಕ್ಷನಾಗಿ, ಅಂತರದಲ್ಲಿಯೇ ಅವನನ್ನು ಎತ್ತಿಕೊಂಡು ಬಂದು ಒಂದು ಹಾಸುಗಲ್ಲಿನ ಮೇಲೆ ಕೂಡ್ರಿಸಿ, "ಇಗೋ ! ಮಗುವೇ ! ನಿನ್ನ ಹತ್ತಿರದಲ್ಲಿರುವೆ, ಆತುರಪಡಬೇಡವೆಂದು" ಸಂತೈಸಿದನು. ಶ್ರೀಶೈಲದಲ್ಲಿ ಈ ಘಟನೆ ಸಂಭವಿಸಿದ ಕೊಳ್ಳಕ್ಕೆ 'ಸಿದ್ಧರಾಮ ಕೊಳ್ಳವೆಂದು' ಈಗಲೂ ಅನ್ನುವುದುಂಟು.

ಶ್ರೀ ಮಲ್ಲಿಕಾರ್ಜುನನು ಗುರುರೂಪಧಾರಿಯಾಗಿ ಶ್ರೀಶೈಲದ ಸೂರ್ಯ ಸಿಂಹಾಸನಾಧಿಪತಿಗಳಾದ ಕಪಿಲ ಸಿದ್ಧಮಲ್ಲಿಕಾರ್ಜುನ ಪಂಡಿತಾರಾಧ್ಯರಿಂದ ವಿಧ್ಯುಕ್ತವಾಗಿ ಸಿದ್ಧರಾಮನಿಗೆ ಕ್ರಿಯಾದೀಕ್ಷೆಯನ್ನು ಮಾಡಿಸಿ, ಶ್ರೀ ಜ. ರೇವಣಸಿದ್ಧಯೋಗಿಗಳು ಅವನ ಜನನವಾದನಂತರ ಜಾತಕರ್ಮದೊಡನೆ ಮಸ್ತಕದಲ್ಲಿ ಧರಿಸಿದ ಇಷ್ಟಲಿಂಗವನ್ನು ಸಿದ್ಧರಾಮನಿಗೆ ಧರಿಸಿ, ಶಿವಪಂಚಾಕ್ಷರಿ ಮಹಾಮಂತ್ರವನ್ನುಪದೇಶಿಸಿ ಮಸ್ತಕದ ಮೇಲೆ ತನ್ನ ಅಮೃತ ಹಸ್ತವನ್ನಿರಿಸಿ "ಸಿದ್ಧರಾಮಾ ! ನೀನು ಅಷ್ಟಸಿದ್ಧಿಗಳಲ್ಲಿ 'ಈಶತ್ವ' ಸಿದ್ಧಿಯೊಂದನ್ನುಳಿದು ಸಪ್ತ

ಸಿದ್ಧಿಗಳನ್ನು ಹೊಂದುವವನಾಗು” ಎಂದು ಅನುಗ್ರಹಿಸಿ ಅವನನ್ನು ಸೊನ್ನಲಾಪುರಕ್ಕೆ ಕಳುಹಿದನು.

ಸಿದ್ಧರಾಮನು ಶ್ರೀ ಗುರುವಿನ ಅಪ್ಪಣೆಯ ಮೇರೆಗೆ ಸೊನ್ನಲಾಪುರಕ್ಕೆ ಬಂದು ಅಲ್ಲಿ ಶ್ರೀ ಜ। ರೇವಣಸಿದ್ಧ ಯೋಗಿಗಳ ಸನ್ನಿಧಿಯಲ್ಲಿ ಶ್ರೀ ಜ। ಕಪಿಲ ಸಿದ್ಧ ಮಲ್ಲಿಕಾರ್ಜುನ ಪಂಡಿತಾರಾಧ್ಯರಿಂದ ಷಟ್‌ಸ್ಥಲ ಬ್ರಹ್ಮೋಪದೇಶವನ್ನು ಪಡೆದು, ಸಕಲೈಶ್ವರ್ಯಸಂಪನ್ನನಾಗಿ, ಸಕಲ ಪ್ರಾಣಿಗಳಲ್ಲಿಯೂ ಸಮಭಾವ ವನ್ನಿರಿಸಿ, ಬಡವರು ಬಲ್ಲಿದರೆಂಬ ಭೇದವನ್ನಳಿದು, ದಾನ-ಧರ್ಮಾದಿ ಸತ್ಕರ್ಮಾಸಕ್ತನಾಗಿ, ಶಿವತಪೋನುಷ್ಠಾನವೇ ಏಕೈಕ ಧ್ಯೇಯವುಳ್ಳವನಾಗಿ, ಪರೋಪಕಾರಕ್ಕಾಗಿ ಅನೇಕ ಮಠ-ಮಂದಿರಗಳನ್ನು ಸ್ಥಾಪಿಸಿ, ಕೆರೆ-ಭಾವಿ-ತೋಟ ಮೊದಲಾದವುಗಳನ್ನು ನಿರ್ಮಿಸಿ, ಲೋಕಕ್ಕೆ ಸನ್ಮಾರ್ಗ ಬೋಧಕ ನಾದನು.

ಸಿದ್ಧರಾಮೇಶ್ವರನ ತಪಃಪ್ರಭಾವವು ದೇಶದೇಶಗಳಲ್ಲಿ ವ್ಯಾಪಿಸಿತು. ಎಷ್ಟೋ ಜನರು ಅವನಿಂದ ಶಿವದೀಕ್ಷಾಸಂಪನ್ನರಾಗಿ, ಲಿಂಗಧಾರಿಗಳಾಗಿ ಕೃತಾರ್ಥರಾದರು.

ಅಲ್ಲಮನು ಕೆಲವು ಕಾಲ ‘ಕಾಮಲತೆ’ ಎಂಬ ವೇಶ್ಯೆಯೊಡನೆ ಕೂಡಿ ಕೊಂಡಿದ್ದನು. ಅವಳು ವಿಷಮಜ್ವರದಿಂದ ಒಂದು ದಿವಸ ಮೃತಳಾದಳು. ಅವಳ ವಿರಹದಿಂದ ಭ್ರಮಿಷ್ಟನಾದ ಅಲ್ಲಮನು ದೇಶದೇಶಗಳನ್ನು ಸಂಚರಿಸುತ್ತ ವಿಶ್ರಾಂತಿಯಿಲ್ಲದೆ, ಭವರೋಗವನ್ನು ನಿವಾರಿಸಲು ಸಮರ್ಥನಾದ ಸದ್ಗುರು ವಿನ ಶೋಧ ಮಾಡುತ್ತ ಸೊನ್ನಲಿಗಿಗೆ ಬಂದು ಅನಿಮಿಷಯೋಗಿಯೆಂದು ಹೆಸರಾದ ಶ್ರೀ ಸಿದ್ಧರಾಮೇಶ್ವರನ ಸನ್ನಿಧಿಗೆ ಹೋಗಿ ಇವನೇ ನನಗೆ ಯೋಗ್ಯ ಗುರುವೆಂದು ನಂಬಿ ಅವನೆದುರು ಕೈಜೋಡಿಸಿಕೊಂಡು ದೀನ ಮುದ್ರೆಯಿಂದ ಪ್ರಾರ್ಥಿಸಿದುದೇನಂದರೆ—

“ಶ್ರೀಮನ್ ಅನಿಮಿಷಯೋಗಿಯೇ ಗುರುವರ ಶ್ರೀ ಸಿದ್ಧರಾಮೇಶನೇ ।
ಸ್ವಾಮಿನ್‌ಕಾರಣರುದ್ರನೇ ಶ್ರಿತಜನೋದ್ಧಾರೈಕ ನಿಷ್ಠಾತ್ಮನೇ ॥
ಧೀಮನ್ ನಾನತಿ ದೀನನಾಗಿ ನಿಮಗೀ ಸದ್ಭಕ್ತಿಯನ್ನರ್ಪಿಸಿ ।
ಪ್ರೇಮಾನುಗ್ರಹ ಪೊಂದಲಾಗಮಿಸಿದೀ ಶಿಷ್ಯೋತ್ತಮಂ ರಕ್ಷಿಸೈ ॥”

ಹೀಗೆ ಪರಮವಿನೀತನಾಗಿ ಪ್ರಾರ್ಥಿಸುತ್ತಿರುವ ಅಲ್ಲಮನನ್ನು ಶ್ರೀ ಸಿದ್ಧ ರಾಮ ಯೋಗಿಯು ಕೃಪಾದೃಷ್ಟಿಯಿಂದವಲೋಕಿಸಿ, ಶ್ರೀ ಜ। ರೇಣುಸಿದ್ಧೇಶ್ವರ ಮೊದಲಾದ ಆಚಾರ್ಯರನ್ನು ಬರಮಾಡಿಕೊಂಡು, ಪಂಚಕಲಶ ಸ್ಥಾಪನಾ ಪೂರ್ವಕವಾಗಿ ಅವನಿಗೆ (ಅಲ್ಲಮನಿಗೆ) ಶಿವದೀಕ್ಷೆಯನ್ನಿತ್ತು ಇಷ್ಟಲಿಂಗವನ್ನು ಧಾರಣ ಮಾಡಿದನು.

ಹೀಗೆ ಅಲ್ಲಮನು ಸುಮಾರು ಕ್ರಿ. ಶ. ೧೧೫೩ರಲ್ಲಿ ಶ್ರೀ ಸಿದ್ಧರಾಮೇಶ ನಿಂದ ಶಿವದೀಕ್ಷಾಸಂಪನ್ನನಾಗಿ ಶ್ರೀಗುರು ನಾಮಸ್ಮರಣೆಯನ್ನು ಮಾಡುತ್ತ ಕಲ್ಯಾಣದಲ್ಲಿರುವ ಬಸವಣ್ಣನಲ್ಲಿಗೆ ಹೋಗಿ, ಅಲ್ಲಿ ನೆರೆದ ಶರಣಸಮೂಹಕ್ಕೆ ಶಿವಯೋಗಿ ಸಿದ್ಧರಾಮೇಶ್ವರನ ತಪಃಪ್ರಭಾವವನ್ನು ಬೋಧಿಸುತ್ತಿರುವಾಗ ಬಸವಣ್ಣನು "ಅಕ್ಕನಾಗಮ್ಮನ ಮಗನಾದ ೮ ವರುಷದ ಚನ್ನಬಸವನಿಗೆ ಶ್ರೀ ಸಿದ್ಧರಾಮೇಶ್ವರರಿಂದ ಶಿವದೀಕ್ಷೆಯು ಲಭಿಸುವಂತೆ ಮಾಡಬೇಕೆಂದು" ಅಲ್ಲಮನಿಗೆ ಕೇಳಿಕೊಂಡನು. ಆಗ ಅಲ್ಲಮನು ಚನ್ನಬಸವನನ್ನು ಸೊನ್ನಲಿಗಿ ಸಿದ್ಧರಾಮೇಶ್ವರರಲ್ಲಿಗೆ ಕರೆದೊಯ್ದು, ಬಸವಣ್ಣನ ಅಪೇಕ್ಷೆಯನ್ನು ಶ್ರೀ ಗುರುಗಳಿಗೆ ತಿಳಿಸಲು, ಸಿದ್ಧರಾಮೇಶ್ವರನು ಪಂಚಕಲಶಗಳನ್ನು ಸ್ಥಾಪಿಸಿ, ಆ ಕ್ಷೇತ್ರದಲ್ಲಿರುವ ಪಂಚಮಹಾಮಠಾಧೀಶ್ವರರ ಸನ್ನಿಧಿಯಲ್ಲಿ ವಿಧ್ಯುಕ್ತವಾಗಿ ಚನ್ನಬಸವಣ್ಣನಿಗೆ ಶಿವದೀಕ್ಷೆಯನ್ನಿತ್ತು ಇಷ್ಟಲಿಂಗವನ್ನು ಧರಿಸಿ, ಶಿವಾಧಿಕ್ಯವನ್ನು ಬೋಧಿಸಿ, ಅಲ್ಲಮನೊಡನೆ ಕಲ್ಯಾಣಕ್ಕೆ ಕಳುಹಿದನು. *

---

* ಚನ್ನಬಸವನು ಶಿವದೀಕ್ಷೆ ಹೊಂದುವ ಸಮಯಕ್ಕೆ ೮ನೆಯ ವಯಸ್ಸಿನಲ್ಲಿದ್ದನು. ಸಿದ್ಧರಾಮನಿಗೆ ೬೬ ವರುಷಗಳ ವಯಸ್ಸಾಗಿತ್ತು. ಮತ್ತು ಅಲ್ಲಮನು ಚನ್ನಬಸವನಿಗಿಂತ ಮೊದಲೇ ಸಿದ್ಧರಾಮೇಶ್ವರರಿಂದ ಶಿವದೀಕ್ಷಾ ಸಂಪನ್ನನಾಗಿದ್ದಾನೆ. ಇತ್ಯಾದಿ ವಿಷಯಗಳಿಂದ ಚನ್ನಬಸವನಿಂದ ಸಿದ್ಧರಾಮೇಶ್ವರರು ಶಿವದೀಕ್ಷೆ ಹೊಂದಿದರೆಂದು ಕೆಲವರು ಹೇಳುವುದು ಅಪಸ್ವರವಾಗಿದೆ. ಒಂದು ವೇಳೆ ಅಲ್ಲಮನು ಶಿವದೀಕ್ಷೆ ಹೊಂದುವಾಗ್ಗೆ ಚನ್ನಬಸವನು ಅಷ್ಟೊಂದು ಯೋಗ್ಯತಾ ಸಂಪನ್ನನಾಗಿದ್ದರೆ, ಅರ್ಥಾತ್ ಸಿದ್ಧರಾಮನಿಗೆ ಗುರುವಾಗಿದ್ದರೆ, ಅಲ್ಲಮನು ಅನಿಮಿಷ ಯೋಗಿಯೆಂದು ಹೆಸರಾದ, ತಪೋನಿಧಿಯಾದ ಸಿದ್ಧರಾಮೇಶ್ವರನನ್ನು ಹುಡುಕುತ್ತ ಹುಡುಕುತ್ತ ಸೊನ್ನಲಿಗಿಗೆ ಹೇಗೆ ಹೋಗುತ್ತಿದ್ದನು ? ಎಂಬ ಪ್ರಶ್ನೆ ಪುಟದೇಳುವುದಿಲ್ಲವೇ !

ಅಲ್ಲಮನು ಸಿದ್ಧರಾಮೇಶ್ವರನ ಅನುಗ್ರಹ ಪಡೆದುಕೊಂಡು ಕಲ್ಯಾಣಕ್ಕೆ ಬಂದ ನಂತರ, ಬಸವಣ್ಣನು ತಾನು ಕಟ್ಟಿಸಿದ ಮಠಕ್ಕೆ ಅಧಿಕಾರಿಯನ್ನಾಗಿ ಮಾಡಿ ಪ್ರಭುದೇವನೆಂದು ಹೆಸರಿಟ್ಟನು. ಅಲ್ಲಮನು ಶ್ರೀಗುರು ಸಿದ್ಧರಾಮೇಶ್ವರನ ಅಪ್ಪಣೆಯಂತೆ ಕಲ್ಯಾಣದಲ್ಲಿ ಶರಣ ಜನರಿಗೆ ಲಿಂಗ ತತ್ತ್ವೋಪದೇಶವನ್ನೂ ಶಿಲಾಧಿಕ್ಯವನ್ನೂ ಬೋಧಿಸುತ್ತಿದ್ದನು. ಅವನ ಉಪದೇಶ ಪ್ರಭಾವದಿಂದಾಗಿ ಕಲ್ಯಾಣವಷ್ಟೇ ಅಲ್ಲ, ಎಲ್ಲೆಡೆಯಲ್ಲಿಯೂ ಶಿವಭಕ್ತಿ ಪ್ರಚಾರವಾಯಿತು. ಇದೆಲ್ಲಕ್ಕೂ ಶ್ರೀ ಸಿದ್ಧರಾಮೇಶ್ವರನೇ ಕಾರಣನು.

ಶ್ರೀ ಸಿದ್ಧರಾಮೇಶ್ವರನ ಜನನವು ಶಾ. ಶ. ೧೦೧೦ ವಿಭವನಾಮ ಸಂವತ್ಸರ (ಕ್ರಿ. ಶ. ೧೦೮೮) ಮಕರಸಂಕ್ರಾಂತಿ ಸೋಮವಾರ ಉಷಃಕಾಲದಲ್ಲಿ ಆಗಿದೆ. ಅವನ ಜನನದಿಂದ ಅಲ್ಲಮಪ್ರಭು ತಾಪತ್ರಯದಿಂದ ನಿವೃತ್ತನಾದನು. ಚನ್ನಬಸವನಂಥ ವಿಭೂತಿಪುರುಷರು ದಿವ್ಯಜ್ಞಾನವನ್ನು ಕಂಡರಲ್ಲದೇ ಅವನ ಉಪದೇಶ ಪ್ರಭಾವದಿಂದ ಸಹಸ್ರಾರು ಶರಣರು ಗಣಪದವಿಯನ್ನೇರಿದರು. ನೂರಾರು ಶತಮಾನಗಳ ಹಿಂದೆ ಆಗಿಹೋದ ಶ್ರೀ ಅನಿಮಿಷ ಸಿದ್ಧರಾಮೇಶ್ವರನು ಇಂದಿಗೂ ಅಮರನಾಗಿದ್ದಾನೆ. ಅಂತೇ ಭಾರತಭೂಮಿಯಲ್ಲಿ ವಿಶೇಷತಃ ಸೋಲಾಪುರದಲ್ಲಿ ಸರ್ವರಲ್ಲಿಯೂ ಅವನನಾಮಾಮೃತವು ನಾಲಿಗೆಯಲ್ಲಿ ನೃತ್ಯ ಮಾಡುತ್ತಿದೆ. ಎಲ್ಲರೂ ಅಂದಿನ ಪುಣ್ಯಕಾಲದಲ್ಲಿ ಅವನ ಜಯಂತಿಯನ್ನು ಆನಂದದೊಡನೆ, ಆಚರಿಸಿ ಧನ್ಯರಾಗಬೇಕು.

## ಮಾಘಮಾಸ

ಮಾಘಮಾಸವು ಶಿಶಿರ ಋತುವಿನಲ್ಲಿ ಬರುತ್ತದೆ
"ಶಿಶಿರೇ ಶೀತಮಧಿಕಂ ರೌಕ್ಷ್ಯಂ ಚಾದಾನಕಾಲಜಂ" ।

ಅಂದರೆ ಶಿಶಿರ ಋತುವು ಅತ್ಯಂತ ಶೀತವಾಗಿರುತ್ತದೆ. ಈ ಋತುವಿನಲ್ಲಿ ವಿಶೇಷವಾಗಿ ಹೇಮಂತ ಋತುವಿನಲ್ಲಿ ಹೇಳಿದ ಪ್ರಕಾರ ಆಹಾರ ವಿಹಾರವನ್ನು ಆಚರಿಸಬೇಕು. ಈ ತಿಂಗಳಲ್ಲಿ– ಶುದ್ಧ ೯ ಮಾಧ್ವನವಮಿ ಶುದ್ಧ ೧೫ರಲ್ಲಿ ಭಾರತ ಹುಣ್ಣಿವೆ. ಅಂದು ಮೈಲಾರ ಜಾತ್ರೆ. ಮಾಘ ಬ. ೨ ಗರಗದ ಮಡಿವಾಳ ಸ್ವಾಮಿಗಳ ಪುಣ್ಯದಿನ. ಬ. ೯ ರಾಮದಾಸರ ಪುಣ್ಯ ದಿನಾಚರಣೆ.

ಬ. ೧೨ ಶ್ರೀ ಕೊಟ್ಟೂರೇಶ್ವರ ರಥೋತ್ಸವ. ಬಹುಳ ೧೪ ವೀರಶೈವ ಮತ ಸ್ಥಾಪಕರಾದ ಶ್ರೀ ಜಗದ್ಗುರು ಕಾಶೀ ವಿಶ್ವಾರಾಧ್ಯ ಜಯಂತಿ ಹಾಗೂ ಶ್ರೀ ಜಗದ್ಗುರು ಪಂಡಿತಾರಾಧ್ಯರ ಜಯಂತಿ. ಮಾಘ ಬಹುಳ ಮಹಾಶಿವರಾತ್ರಿ ಅಮಾವಾಸ್ಯೆ ಶ್ರೀಶೈಲಮಲ್ಲಿಕಾರ್ಜುನ ಜಾತ್ರೆ. ಗೋಕರ್ಣ ಮಹಾಬಲೇಶ್ವರ ಜಾತ್ರೆ. ಕುರವತ್ತಿ ಜಾತ್ರೆ. ಶ್ರೀ ಮದ್ರಂಭಾಪುರಿ ಜಗದ್ಗುರು ಪ್ರಸನ್ನ ರೇಣುಕ ವೀರಗಂಗಾಧರ ಶಿವಯೋಗಿಗಳ ತಪೋಭೂಮಿಯಾದ ಮುಕ್ತಿ ಮಂದಿರದ ಜಾತ್ರೆ.

## ಶ್ರೀ ಮಾಧ್ವನವಮಿ

(ಮಾಘ ಶುದ್ಧ ೯)



ಮಂಗಳೂರು ಪ್ರಾಂತದಲ್ಲಿ ಉಡುಪಿ ಕ್ಷೇತ್ರಕ್ಕೆ ೨-೩ ಮೈಲು ಅಂತರದ ಮೇಲೆ 'ವೆಲಲಿ' ಎಂಬ ಗ್ರಾಮವಿದೆ. ಅಲ್ಲಿ ಭಾರ್ಗವ ಗೋತ್ರೀಯನಾದ ನಾರಾಯಣಭಟ್ಟನ ಧರ್ಮಪತ್ನಿ ವೇದವತಿಯ ಗರ್ಭದಲ್ಲಿ 'ವಾಸುದೇವ'ನೆಂಬ ವನು ಕ್ರಿ. ಶ. ೧೨ರಲ್ಲಿ (ವಿಕ್ರಮ ಸಂವತ್ ೧೦೭೫ ಮಾಘ ಶುದ್ಧ ೯)ದಲ್ಲಿ

ಜನಿಸಿದನು. ಈ ಮಹಾತ್ಮನೇ ಮುಂದೆ ಮಧ್ವಾಚಾರ್ಯನೆಂದು ಪ್ರಖ್ಯಾತನಾದನು. ಅವನ ಜನ್ಮವು ಅಶ್ವೀಜ ಶುಕ್ಲ ದಶಮಿಯಲ್ಲಿ ಆಯಿತೆಂದು ಕೆಲವರ ಅಭಿಪ್ರಾಯವಿದೆ ಆದರೆ ಆ ದಿವಸ ಅವರಿಗೆ ವೇದಾಂತ ಸಾಮ್ರಾಜ್ಯದ ಪಟ್ಟಾಭಿಷೇಕವಾಯಿತೆಂದು ಗೋರಖಪುರ ಕಲ್ಯಾಣ ಪತ್ರಿಕೆಯ 'ಸಂತ' ಅಂಕಿನ ೭೩೪ನೆಯ ಪುಟದಲ್ಲಿ ಉಲ್ಲೆಖಿಸಲ್ಪಟ್ಟಿದೆ. ವಾಸುದೇವನು ಸಣ್ಣ ಮಗುವಿರುವಾಗ ಅವನ ತಂದೆ-ತಾಯಿಗಳು ಅನಂತೇಶ್ವರ ದೇವಾಲಕ್ಕೆ ಹೋಗಿ ಮಧ್ಯ ರಾತ್ರಿಯಲ್ಲಿ ಹಿಂತಿರುಗಿ ಅರಣ್ಯದೊಳಗಿಂದ ಹಾಯ್ದು ಬರುತ್ತಿದ್ದರು ಆಗ ಅವರ ಸಂಗಡ ಇದ್ದ ಒಬ್ಬ ಮನುಷ್ಯನಿಗೆ ಬ್ರಹ್ಮರಾಕ್ಷಸ ಪ್ರವೇಶಿಸಿ, ರಕ್ತ ಕಾರಿ, ಸಾಯುವ ಅವಸ್ಥೆಗೆ ಬಂದನಂತರ ನುಡಿದುದೇನಂದರೆ:—"ಸಾಕ್ಷಾತ್ ವಾಯುದೇವನ ಅವತಾರಿಯಾದ ಈ ಕೂಸಿನ ಮಹಿಮೆಯಿಂದ ನಿಮ್ಮೆಲ್ಲರನ್ನು ಬಿಟ್ಟಿರುವೆನೆಂದು ಹೇಳಿದನು.

ಒಂದು ದಿವಸ ತಾಯಿಯು ಆ ಬಾಲಕನನ್ನು ಅಕ್ಕನಿಗೆ ಒಪ್ಪಿಸಿ ಬೇರೆ ಬಂಧುಗಳ ಮನೆಗೆ ಪ್ರಯಾಣ ಮಾಡಿದ್ದಳು ಆ ಪುಟ್ಟ ಹುಡುಗ ವಿಪರೀತವಾಗಿ ಅಳುಹತ್ತಿತು ಅವಳು ಸಮಾಧಾನ ಪಡಿಸಲಾರದೇ ಎತ್ತಿಗಾಗಿ ಕುದಿಸಿ ಇಟ್ಟ ಹುರಳೀ ಗುಗ್ಗರಿಯನ್ನು ಅವನಿಗೆ ಯಥೇಷ್ಟವಾಗಿ ತಿನಿಸಿ ಸಾಕಷ್ಟು ನೀರು ಕುಡಿಸಿದಳು. ಆ ಬಾಲಕನು ನಿರಾಯಾಸವಾಗಿಯೇ ಅದನ್ನು ಜೀರ್ಣಿಸಿಕೊಂಡನು. ಒಂದಾನೊಂದು ದಿವಸ ಅವನ ತಂದೆಯು ಒಂದು ಎತ್ತನ್ನು ಖರೀದಿಗೆ ತೆಗೆದುಕೊಂಡಿದ್ದನು, ಎತ್ತಿನವನು ತನ್ನ ಹಣಕ್ಕಾಗಿ ಊಟಕ್ಕೂ ಸಹ ಆಸ್ಪದ ಕೊಡದೇ ಧರಣಿ ಕುಳಿತಿರುವಾಗ ವಾಸುದೇವನು ಹುಣಸೀ ಬೀಜಗಳನ್ನು ತನ್ನ ಬೊಗಸಿಯಲ್ಲಿ ತೆಗೆದುಕೊಂಡು, ಅವುಗಳನ್ನು ರೂಪಾಯಿಗಳನ್ನಾಗಿ ಮಾಡಿ, ಅವನಿಗೆ ಕೊಟ್ಟು ಕಳುಹಿದನು. ವಾಸುದೇವನು ಇಂಥ ಅನೇಕ ಲೀಲೆಗಳನ್ನು ಮಾಡುತ್ತಾ ಬಾಲ್ಯಾವಸ್ಥೆಯನ್ನು ಕಳೆದನು. ಮುಂದೆ ಉಪನಯನ ಸಂಸ್ಕಾರವಾದ ಮೇಲೆ ಅವನಿಗೆ ಓದುಬರಹಗಳಲ್ಲಿ ಆಸಕ್ತಿ ಇರಲಿಲ್ಲ. ಓಡುವುದು, ಹಾರುವುದು, ಜಿಗಿಯುವುದು, ಈಸುವುದು ಕುಸ್ತಿ ಆಡುವುದು ಇತ್ಯಾದಿ ಕಸರತ್ತಿನ ಕೆಲಸಗಳಲ್ಲಿಯೇ ಕಾಲಕಳೆಯುತ್ತಿರುವನು. ಇದನ್ನು ನೋಡಿ ಹಲವರು 'ವಾಸುದೇವ' ಎಂಬ ಹೆಸರಿನ ಬದಲಾಗಿ 'ಭೀಮನೆಂದು' ಕರೆಯಹತ್ತಿದರು. ಆದರೆ 'ಅವತಾರಿ ಪುರುಷನು ಕೇವಲ ಇದಕ್ಕಾ

ಗಿಯೇ ಹುಟ್ಟಿರುವುದಿಲ್ಲ' ತಾನು "ಯಾವ ಕಾರ್ಯಕ್ಕಾಗಿ ಜನ್ಮ ತಾಳಿದೆ" ಎಂಬ ಅರಿವು ಅವನಿಗೆ ಒಮ್ಮೆ ಉಂಟಾಯಿತು ಆಗ ಆಟ-ಪಾಟಗಳು ಮಾಯ ವಾದವು ವೇದಶಾಸ್ತ್ರ ವ್ಯಾಸಂಗದಲ್ಲಿ ಅಭಿರುಚಿಯುಂಟಾಗಿ "ತೋಟಂ ತಿಲ್ಲಾಯ" ಎಂಬ ಬ್ರಾಹ್ಮಣನಲ್ಲಿ ಗುರುಸೇವೆ ಮಾಡುತ್ತ ಅಧ್ಯಯನಮಾಡಿ ಪಾಂಡಿತ್ಯವನ್ನು ಪಡೆದನು. ಮುಂದೆ ವಾಸುದೇವಾಚಾರ್ಯನು ಗ್ರಹಸ್ಥಾಶ್ರಮಕ್ಕೆ ಮನಸ್ಸು ಮಾಡಲಿಲ್ಲ. ಸರ್ವ ಆಶ್ರಮಗಳಲ್ಲಿ ಸನ್ಯಾಸಾಶ್ರಮವೇ ಶ್ರೇಷ್ಠವೆಂದು ಅರಿತುಕೊಂಡಿದ್ದನು. ಇವನ ಈ ತರಹದ ಅಭಿಪ್ರಾಯಕ್ಕೆ ಸೇರದೇ ತಂದೆ-ತಾಯಿಗಳು ಅನೇಕ ವಿಘ್ನವನ್ನುಂಟು ಮಾಡಿದರು. ಆದರೂ ಅವನು ಕೇಳದೇ ತನ್ನ ೧೧ನೆಯ ವಯಸ್ಸಿನಲ್ಲಿಯೇ ಅದ್ವೈತ ಮತದ ಸನ್ಯಾಸಿ ಯಾದನು. ಅಚ್ಯುತ ಪಕ್ಷಾಚಾರ್ಯನಿಂದ ಸನ್ಯಾಸವನ್ನು ಸ್ವೀಕರಿಸಿ "ಪೂರ್ಣ ಪ್ರಜ್ಞರೆಂಬ" ನಾಮವನ್ನು ಹೊಂದಿದರು. ಸನ್ಯಾಸ ಗ್ರಹಣ ಮಾಡಿದನಂತರ ಅವರು ವೇದಾಂತ ಶಾಸ್ತ್ರವನ್ನು ಆಳವಾಗಿ ಅಭ್ಯಾಸಮಾಡಿ ದಕ್ಷಿಣ ಭಾರತದಲ್ಲಿ ಅದ್ವಿತೀಯ ಪಂಡಿತರಾದರು. ಕೆಲವು ದಿವಸಗಳಾದಮೇಲೆ ಅವರು ಭಗವದ್ಭಕ್ತಿ ವೇದಗಳ ಪ್ರಾಮಾಣಿಕತೆ, ಮಾಯಾವಾದ ಖಂಡನೆ, ಧರ್ಮರಕ್ಷಣೆ, ಇವುಗಳ ಪ್ರಚಾರಕ್ಕಾಗಿ ಯಾತ್ರೆಯನ್ನು ಕೈಕೊಂಡು, ಎದುರು ಬಂದ ವಿದ್ವಾಂಸರನ್ನು ವಾದದಲ್ಲಿ ಜಯಿಸುವುದಲ್ಲದೇ ತಾರ್ಕಿಕನಾದ ವಿದ್ಯಾಸಾಗರನನ್ನೂ, ಮಾಯಾ ವಾದಿಯಾದ 'ವಾದಿ ಸಿಂಹನನ್ನು' ಕೇವಲ ಅನುಮಾನದಿಂದಲೇ ಜಯಿಸಿದರು. ಆ ಕಾರಣದಿಂದ ಅವರಿಗೆ "ಅನುಮಾನ ತೀರ್ಥ"ರೆಂಬ ನಾಮವು ಪ್ರಾಪ್ತ ವಾಯಿತು.

ಶ್ರೀಮದಾಚಾರ್ಯರ ಪ್ರತಿಭಾಶಕ್ತಿಗೆ ಮೆಚ್ಚಿದ ಅಚ್ಯುತ ಪಕ್ಷಾಚಾರ್ಯರು ಅವರಿಗೆ "ಶ್ರೀ ಮದಾನಂದ ತೀರ್ಥರೆಂಬುವ ಅಭಿಧಾನವನ್ನಿತ್ತು ವೇದಾಂತ ಸಾಮ್ರಾಜ್ಯಕ್ಕೆ ಪಟ್ಟಾಭಿಷಿಕರನ್ನಾಗಿ ಮಾಡಿದರು. ಅಸಂಖ್ಯ ವಿದ್ವಾಂಸರು ಅವರೊಡನೆ ಶಾಸ್ತ್ರಾರ್ಥಮಾಡಿ, ಪರಾಜಿತರಾಗಿ ಮಾಧ್ವ ಸಿದ್ಧಾಂತವನ್ನಂಗೀಕರಿಸಿದರು. ಒಂದು ಸ್ಥಾನದಲ್ಲಿ ಅವರು ಐತರೇಯ ಸೂಕ್ತದ ಅರ್ಥದ ವಿಷಯ ಕವಾಗಿ ವಾದ ಮಾಡುತ್ತಿರುವಾಗ ವೇದ, ಮಹಾಭಾರತ, ವಿಷ್ಣು ಸಹಸ್ರ ನಾಮ ಇವುಗಳಿಗೆ ಅನುಕ್ರಮವಾಗಿ ಮೂರು-ಹತ್ತು, ನೂರು ಅರ್ಥಗಳಿವೆ ಎಂದು ಪ್ರತಿಜ್ಞಾಪೂರ್ವಕ ವ್ಯಾಖ್ಯಾ ಮಾಡಿ ತೋರಿಸಿ "ಸರ್ವಜ್ಞರೆಂ"ದು

ಹೆಸರಾದರು. ಗೀತಾ ಭಾಷ್ಯವನ್ನು ರಚಿಸಿದ ಮೇಲೆ ಬದರೀ ನಾರಾಯಣ ಯಾತ್ರೆಗೆ ಹೋಗಿ ಅಲ್ಲಿ ವೇದವ್ಯಾಸ ಮಹರ್ಷಿಗೆ ತಮ್ಮ ಭಾಷ್ಯವನ್ನು ತೋರಿಸಿದರು. ವೇದವ್ಯಾಸನು ಸಂತುಷ್ಟನಾಗಿ ಜನತೆಯ ಉದ್ಧಾರಕ್ಕಾಗಿ ಉಪದೇಶ ಗ್ರಂಥಗಳನ್ನು ನಿರ್ಮಿಸಲು ಅವರಿಗೆ ಅಪ್ಪಣೆಯನ್ನಿತ್ತನು. (ವೇದವ್ಯಾಸ ಮಹರ್ಷಿಯು ದ್ವಾಪರಯುಗದವನು, ಅವನು ೧೩ನೆಯ ಶತಮಾನದಲ್ಲಿ ಮಧ್ವಾಚಾರ್ಯರಿಗೆ ಭೆಟ್ಟಿಯಾಗಿದ್ದನೆಂಬಂಶವನ್ನು ಪ್ರಾಚ್ಯವಸ್ತು ಸಂಶೋಧಕರ ಪಾಲಿಗೆ ಬಿಟ್ಟುಕೊಟ್ಟಿದ್ದೇವೆ.) ಶ್ರೀ ಮಧ್ವಾಚಾರ್ಯರು ದಿಗ್ವಿಜಯ ಕಾರ್ಯವನ್ನು ಕೈಕೊಂಡಾಗ ಬೇತಾಳಸಿದ್ಧಿಯ ಪ್ರಭಾವದಿಂದ ಭೂತಗ್ರಸ್ತ ಸಂಸಾರಿಗಳಿಗೆ ಶಾಂತಿಯನ್ನುಂಟು ಮಾಡುವುದಲ್ಲದೇ ಅನೇಕ ರಾಜರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡರು. ಯೋಗಶಾಸ್ತ್ರದ ಬಲದಿಂದ ಅನೇಕ ಸಿದ್ಧಿಗಳನ್ನು ಪಡೆದುಕೊಂಡು ಸಮಯ ಸಮಯದಲ್ಲಿ ಅವುಗಳನ್ನು ಪ್ರಕಟ ಪಡಿಸುತ್ತಿದ್ದರು. ಅವರು ದಕ್ಷಿಣ ದೇಶದಲ್ಲಿ ಸಂಚರಿಸುತ್ತಿರುವಾಗ "ವಿಷ್ಣುಮಂಗಳಂ" ಎಂಬ ಗ್ರಾಮದಲ್ಲಿ ಒಂದು ದಿವಸ ಭೋಜನ ಮುಗಿಸುವಷ್ಟರಲ್ಲಿ ಒಬ್ಬ ಶಿಷ್ಯನು ಅವರ ಶಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ೨೦೦ ಬಾಳೇ ಹಣ್ಣುಗಳನ್ನು ಕೊಡಲು, ಅವುಗಳನ್ನು ಅನಾಯಾಸವಾಗಿಯೇ ಅವರು ಭುಂಜಿಸಿ ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿದರು. ಒಂದು ಸಾರೆ ಅವರು ಗೋವಾ ಪಟ್ಟಣದಲ್ಲಿದ್ದಾಗ ಓರ್ವ ರಾಜನು ಪರೀಕ್ಷಿಸುವುದಕ್ಕಾಗಿ ನಾಲ್ಕು ಸಾವಿರ ಬಾಳೆಯ ಹಣ್ಣುಗಳನ್ನೂ, ಒಂದು ಕೊಡ ಹಾಲನ್ನೂ ಕುಡಿಯಲು ಕೊಟ್ಟನು. ಶ್ರೀ ಮಧ್ವಾಚಾರ್ಯರು ಅವುಗಳನ್ನೆಲ್ಲ ಸೇವಿಸಿ ಸರ್ವರಿಗೂ ಅತ್ಯಾಶ್ಚರ್ಯವನ್ನುಂಟು ಮಾಡಿದರು. ಹೀಗೆ ಅವರಿಂದ ಮಾಡಲ್ಪಟ್ಟ ಅನಂತ ಪವಾಡಗಳು ಗಮನಾರ್ಹವಾಗಿವೆ. ಶ್ರೀ ಮಧ್ವಾಚಾರ್ಯರ ಅಮೃತಹಸ್ತದಿಂದ ಸ್ಥಾಪಿಸಲ್ಪಟ್ಟ ಅನೇಕ ಮೂರ್ತಿಗಳು ಅಲ್ಲಲ್ಲಿ ಈಗಲೂ ವಿದ್ಯಮಾನವಾಗಿವೆ. ಬದರೀ ನಾರಾಯಣನಲ್ಲಿ ವ್ಯಾಸಮಹರ್ಷಿಯು ಅವರಿಗೆ ಮೂರು ಶಾಲಿಗ್ರಾಮ ಮೂರ್ತಿಗಳನ್ನು ಅನುಗ್ರಹಿಸಿದನು. ಅವುಗಳನ್ನು ತೆಗೆದುಕೊಂಡು 'ಸುಬ್ರಹ್ಮಣ್ಯ, ಉಡುಪಿ, ಮಧ್ಯತಲಕ್ಕೆ ದಯಮಾಡಿಸಿದರು. ಒಂದು ಸಾರೆ ಒಬ್ಬ ವ್ಯಾಪಾರಿಯ ಹಡಗವು ದ್ವಾರಕಾದಿಂದ ಮಲಬಾರಕ್ಕೆ ಹೋಗುತ್ತಿರುವಾಗ ಅದು ತುಲುಬದ ಹತ್ತರ ಮುಳುಗಿತು. ಅದರಲ್ಲಿ ಗೋಪೀಚಂದನದಿಂದ

ಮುಚ್ಚಲ್ಪಟ್ಟ ಸುಂದರವಾದ ಒಂದು ಶ್ರೀ ಕೃಷ್ಣನ ಮೂರ್ತಿ ಇತ್ತು. ಅದು ಇಂದಿನ ತರುಣರಿಗೂ ಸಹ ಎತ್ತಲು ಬಾರದಷ್ಟು ಭಾರವುಳ್ಳದ್ದಿತ್ತು. ಅಂಥ ಮೂರ್ತಿಯನ್ನು ಶ್ರೀ ಮಧ್ವಾಚಾರ್ಯರು ಒಬ್ಬರೇ ಎತ್ತಿಕೊಂಡು ಬಂದು ಉಡುಪಿಯಲ್ಲಿ ಸ್ಥಾಪಿಸಿದರು. ಅಂದಿನಿಂದ ಉಡುಪಿಯು ಪುಣ್ಯ ಕ್ಷೇತ್ರವೆಂದು ಪ್ರಸಿದ್ಧವಾಯಿತು. ಒಂದಾನೊಂದು ದಿವಸ ಒಬ್ಬ ವ್ಯಾಪಾರಿಯ ಹಡಗವು ನೀರಿನಲ್ಲಿ ಮುಳುಗುತ್ತಿರುವುದನ್ನು ಶ್ರೀ ಮಧ್ವಾಚಾರ್ಯರು ಉಳಿಸಿದರು ಪ್ರಭಾವಕ್ಕೊಳಗಾದ ಆ ವ್ಯಾಪಾರಿಯು ತನ್ನ ಅರ್ಧ ಸಂಪತ್ತನ್ನೇ ಅವರಿಗೆ ಅರ್ಪಿಸಿದನು. ಆದರೆ ರೋಮ ರೋಮಗಳಲ್ಲಿ ಭಗವದ್ಭಕ್ತಿ, ವೈರಾಗ್ಯ, ಇವುಗಳಿಂದ ಆವರಿಸಲ್ಪಟ್ಟ ಆಚಾರ್ಯವರ್ಯರು ನಶ್ವರವಾದ ಆ ಸಂಪತ್ತನ್ನು ಇಚ್ಛಿಸಲಿಲ್ಲ, ಅವರ ಜೀವನದಲ್ಲಿ ಇಂಥ ಅನೇಕ ಘಟನೆಗಳು ನಡೆದುಹೋದವು ಅವರ ಅಮಲ ಕೀರ್ತಿವಲ್ಲರಿಯು ಶಾಖೋಪಶಾಖೆಯಾಗಿ ದಿಗಂತವನ್ನೆಲ್ಲ ಹಬ್ಬಿತು. ಸೇರಲಾರದವರಾದರೂ ಅವರಿಗೆ ಕಡಿಮೆ ಇದ್ದಿಲ್ಲ ಕುಹಕರು ಹಲವು ಬಗೆಯ ಆಪತ್ತುಗಳನ್ನು ತಂದೊಡ್ಡಿದರು ಅವರು ಬರೆದ ಅನೇಕ ಗ್ರಂಥಗಳನ್ನು ಅಪಹರಿಸಿದರು. ಆದರೂ ಶ್ರೀ ಮಧ್ವಾಚಾರ್ಯರು ಕ್ಷುಭಿತರಾಗದೇ ಅಂಥವರಿಗೂ ಶುಭವನ್ನೇ ಕೋರಿದರು ಅನ್ಯರ ತಪ್ಪುಗಳನ್ನು ಮನ್ನಿಸಿ ಕರುಣೆಯಿಂದ ಕಾಪಾಡಿದರು. ಅವರು ನಿರಂತರ ಭಗವಂತನ ಚಿಂತನೆಯಲ್ಲಿಯೇ ಲೀನರಾಗಿದ್ದರು. ಹೊರಗಿನ ಕಾರ್ಯಕ್ರಮವನ್ನು ಭಗತ್ಸಂಬಂಧದಿಂದ ಕೇವಲ ಲೋಕಶಿಕ್ಷಣಕ್ಕಾಗಿ ಮಾಡುತ್ತಿದ್ದರು. ಪ್ರತಿದಿವಸಬ್ರಾಹ್ಮೀಮುಹೂರ್ತದಲ್ಲಿಯೇ ಎದ್ದು ಶೌಚಾದಿಕ್ರಿಯೆಗಳನ್ನಾಚರಿಸಿ, ಸ್ನಾನ, ಧ್ಯಾನ, ಶಾಂತಿಪಾಠ ಇತ್ಯಾದಿ ಪ್ರಾತರ್ವಿಧಿಯನ್ನು ನಿತ್ಯ ನೆರವೇರಿಸುತ್ತಿದ್ದರು. ಅಪರಾಹ್ಣದಲ್ಲಿ ಸ್ನಾನ, ದೇವತಾರ್ಚನೆ, ಭೋಜನಾದಿಗಳನ್ನು ತೀರಿಸಿಕೊಂಡು, ಪಾಠ, ಪ್ರವಚನ ಮೊದಲಾದ ಕರ್ಮಗಳನ್ನು ಶ್ರೀಮನ್ನಾರಾಯಣನ ಪ್ರೀತ್ಯರ್ಥವಾಗಿ ಆಚರಿಸುತ್ತಿದ್ದರು. ಹಾಗೂ ರಾತ್ರಿ ಕಾಲದಲ್ಲಿ ತಮ್ಮ ಶಿಷ್ಯರಿಗೆ ಬಹಳ ಹೊತ್ತಿನವರೆಗೂ ಶ್ರೀ ಮದ್ಭಾಗವತನ್ನು ಬೋಧಿಸುತ್ತಿದ್ದರು.

ಶ್ರೀ ಮಧ್ವಾಚಾರ್ಯರು ಉಡುಪಿಯಲ್ಲಿ ಎಂಟು ಮಂದಿರಗಳನ್ನು ಸ್ಥಾಪಿಸಿದರು. ಅವುಗಳಲ್ಲಿ ಶ್ರೀ ಸೀತಾರಾಮ, ದ್ವಿಭುಜಕಾಲಿಯಾದಮನ, ಚತುರ್ಭುಜಕಾಲಿಯಾದಮನ, ವಿಠ್ಠಲ ಮೊದಲಾದ ಎಂಟು ಮೂರ್ತಿಗಳು ಈಗಲೂ

ಸುಪ್ರಸಿದ್ಧವಾಗಿವೆ. ಇಂದಿಗೂ ನಾನಾ ಭಾಗದ ಜನರು ತಂಡೋಪತಂಡವಾಗಿ ಉಡುಪಿಗೆ ಹೋಗಿ ಶ್ರೀ ಕೃಷ್ಣನ ದರ್ಶನದಿಂದ ಧನ್ಯರಾಗುತ್ತಿರುವರು ಅವರು ತಮ್ಮ ತಪಃಪ್ರಭಾವದಿಂದ ೮೦ ವರುಷಗಳವರೆಗೂ ಒಳ್ಳೇ ಯಶಸ್ಸಿನಿಂದ ಪಟ್ಟವನ್ನು ಆಳಿ, ಅಂತಿಮ ಕಾಲದಲ್ಲಿ ತಮ್ಮ ನಾಲ್ಕು ಜನ ಶಿಷ್ಯರಲ್ಲಿ ಮುಖ್ಯನಾದ ಪದ್ಮನಾಭತೀರ್ಥನಿಗೆ (ಪೂರ್ವಾಶ್ರಮದ ಹೆಸರು ಸೋಹನಭಟ್ಟ) ಪಟ್ಟಗಟ್ಟಿ ತಾವು ಹಿಮಾಲಯದಲ್ಲಿರುವ ಬದರಿಕಾಶ್ರಮಕ್ಕೆ ಶಕೆ ೧೧೯೯ ಮಾಘ ಶುದ್ಧ ನವಮಿಯ ದಿವಸ ತೆರಳಿದರು. ಇಂದಿಗೆ ಅವರು ಅಲ್ಲಿಯೇ ಇರುವರೆಂತಲೂ, ಅವರು ಹನುಮಂತದೇವರ ಅವತಾರಿಗಳೆಂತಲೂ ಮಾಧ್ವಮತದವರ ನಂಬಿಕೆಯುಂಟು.

ಶ್ರೀ ಮಧ್ವಾಚಾರ್ಯರು ಸಂಸ್ಕೃತದಲ್ಲಿ ರಚಿಸಿದ ೩೭ ವೇದಾಂತ ಗ್ರಂಥಗಳು ಈಗಲೂ ಉಂಟು. ಇವುಗಳು ಆಕಾರದಲ್ಲಿ ಚಿಕ್ಕವಾಗಿದ್ದರೂ ಅರ್ಥಗರ್ಭಿತವಾಗಿವೆ. ಅವರು ಪದ್ಮನಾಭ ತೀರ್ಥನಿಗೆ ಪಟ್ಟಗಟ್ಟುವಾಗ ಶ್ರೀ ರಾಮಮೂರ್ತಿಯನ್ನೂ, ವ್ಯಾಸನಿಂದ ಕೊಡಲ್ಪಟ್ಟ ಸಾಲಿಗ್ರಾಮ ಶಿಲೆಯನ್ನೂ ಅವರಿಗೆ ಅನುಗ್ರಹಿಸಿ, ತಮ್ಮ ಮತ ಪ್ರಚಾರ ಮಾಡಬೇಕೆಂದು ಅಪ್ಪಣೆಯನ್ನಿತ್ತರು. ಮಧ್ವಾಚಾರ್ಯರ ತರುವಾಯ ಬಂದ ಅವರ ಶಿಷ್ಯರು ಅನೇಕ ಕಡೆಗಳಲ್ಲಿ ಮಠಗಳನ್ನು ಸ್ಥಾಪಿಸಿರುವರಲ್ಲವೇ ಗ್ರಂಥಗಳನ್ನು ಬರೆದು ಪ್ರಚಾರ ಪಡಿಸಿದರು.

ಶ್ರೀ ಮಧ್ವಾಚಾರ್ಯರ ಬೋಧದ ಸಾರಾಂಶವೇನಂದರೆ —

"ದೇವರನ್ನು ನಿರಂತರ ಸ್ಮರಿಸತಕ್ಕದ್ದು; ಮರಣ ಕಾಲಕ್ಕೆ ಮಾನವನ ದೇಹದಲ್ಲಿ ಸಾವಿರಾರು ಚೇಳು ಕಡಿದಂತೆ ವ್ಯಥೆಯಾಗುತ್ತದೆ; ವಿಕೃತವಾದ ವಾತ, ಪಿತ್ತ, ಕಫ ಇವುಗಳಿಂದ ಕಂಠಾವರೋಧವಾಗುತ್ತದೆ; ನಾನಾ ಪ್ರಕಾರವಾದ ಸಾಂಸಾರಿಕ ಆಪತ್ತಗಳಿಂದ ಧೃತಿಗೆಟ್ಟು ಮರಣಾವಸ್ಥೆಯಲ್ಲಿರುವವನಿಗೆ ವಿಸ್ಮೃತಿಯಾಗುತ್ತದೆ; ಆದ್ದರಿಂದ ಶ್ರೀಮನ್ನಾರಾಯಣನನ್ನು ನಿತ್ಯ ನಿರಂತರ ಸ್ಮರಣೆ ಮಾಡುತ್ತಿರಬೇಕು." ಇತ್ಯಾದ್ಯನಂತ ಅರ್ಥಗರ್ಭಿತವಾದ ತತ್ವವನ್ನು ಶ್ರೀಮದಾಚಾರ್ಯರು ಬೋಧಿಸಿರುವರು. ಆ ಮಹಾತ್ಮರ

ಉಪದೇಶವನ್ನು ಮಾಧ್ವ ನವಮಿಯ ಪರ್ವಕಾಲದಲ್ಲಿ ವೈಷ್ಣವ ಬಾಂಧವರೆಲ್ಲರೂ ಸ್ಮರಿಸಿ ಧನ್ಯರಾಗಬೇಕೆಂದು ಮನವಾರೆ ಕೋರುತ್ತೇವೆ.

## ಮಹಾಶಿವರಾತ್ರಿ ವ್ರತ



ಜ್ಯೋತಿಷ್ಯ ಶಾಸ್ತ್ರದಲ್ಲಿ ಹೇಳಿರುವ ಚೈತ್ರ, ವೈಶಾಖ ಮೊದಲಾದ ಹನ್ನೆರಡು ತಿಂಗಳಲ್ಲಿ ಪ್ರತಿ ತಿಂಗಳ ಕೃಷ್ಣ ಪಕ್ಷದ ಚತುರ್ದಶಿಯ ದಿವಸ ಶಿವರಾತ್ರಿಯು ಇರುವದು. ಇದಕ್ಕೆ 'ಮಾಸ ಶಿವರಾತ್ರಿ'ಯೆಂದು ಅನ್ನುವದುಂಟು. ಅದರಲ್ಲಿ ಮಾಘ ಮಾಸದ ಕೃಷ್ಣ ಪಕ್ಷದ ಚತುರ್ದಶಿಯ ದಿನದಲ್ಲಿರುವ ಶಿವರಾತ್ರಿಯು "ಮಹಾಶಿವರಾತ್ರಿ ವ್ರತದ" ದಿನವಾಗಿದೆ. ಲೋಕ ಕಂಟಕರಿಂದ ಅನೇಕ ಜನ ರಾಕ್ಷಸರ ಸಂಹಾರವು ಅಂದಿನ ದಿನವಾಗಿ ಲೋಕವು ಶಾಂತಿ ಸುಖ ಹೊಂದಿದ್ದರಿಂದಲೂ ಅನೇಕ ಜನ ಪಾಪಿಗಳ ಪಾಪ ಪರಿಹಾರವು ಇಂದಿನ ದಿನವೇ ಆಗಿ ಶಿವಸಾನಿಧ್ಯ ಹೊಂದಿದ್ದರಿಂದಲೂ ಈ ದಿನವು ಅತಿ ಪವಿತ್ರವೆಂದೆನಿಸಿದೆ. ಇದು ಶಿವ ಭಕ್ತರಿಗೆ ಶಿವವ್ರತದ ದಿನವಾಗಿ ಪರಿಣಮಿಸಿದ್ದರೂ ಸಮಸ್ತ ಹಿಂದುಗಳಿಗೆ ದೊಡ್ಡ ಹಬ್ಬವಾಗಿದೆ.

"ಸೌರೋವಾ ವೈಷ್ಣವೋ ವಾನ್ಯೋದೇವತಾಂತರ ಪೂಜಕಃ ।
ನ ಪೂಜಾ ಫಲಮಾಪ್ನೋತಿ ಶಿವರಾತ್ರಿ ಬಹಿರ್ಮುಖಃ ॥

(ಪ. ಪು.)

ಭಾರತದಲ್ಲಿ ಸೌರ, ವೈಷ್ಣವ, ಗಾಣಪತ್ಯ, ಶಾಕ್ತ, ಶೈವ, ಎಂಬೀ ಐದು ಧರ್ಮದವರು ತಮ್ಮ ತಮ್ಮ ಕುಲದೇವತೆಗಳಲ್ಲಿ ಭಕ್ತಿ ತತ್ಪರರಾಗಿದ್ದರೂ ಮಹಾ ಶಿವರಾತ್ರಿ ವ್ರತವನ್ನಾಚರಿಸದಿದ್ದರೆ ಅವರ ಪೂಜಾ ಫಲವು ನಿರರ್ಥಕ ವಾದುದೆಂದು ಪದ್ಮಪುರಾಣದಲ್ಲಿ ಉಕ್ತವಾಗಿದೆ. ಒಟ್ಟಿನಲ್ಲಿ ಈ ವ್ರತಕ್ಕೆ ಭಾರತದ ಮೂಲೆ ಮೂಲೆಯಲ್ಲಿಯೂ ಮಹತ್ವವಿದೆ ಎಂದು ವಿದಿತವಾಗುವುದು.

"ಶಿವರಾತ್ರಿ ವ್ರತ" ಎಂಬ ಪದದಲ್ಲಿ ಪೃಥಕ್ ಪೃಥಕ್ ಇರುವ ಮೂರು ಶಬ್ದಗಳ ಸಾರವನ್ನು, ಈ ಹಬ್ಬದ ವೈಶಿಷ್ಟ್ಯವನ್ನು ಅರಿಯುವುದು ಅವಶ್ಯ.

### ಶಿವ

"ಶೇತೇ ತಿಷ್ಠತಿ ಸರ್ವಂ ಜಗತ್ ಯಸ್ಮಿನ್‌ಸಃ ಶಿವಃ
ಶಂಭುಃ ವಿಕಾರರಹಿತಃ ............................" ।

ಚರಾಚರಾತ್ಮಕವಾದ ಜಗತ್ ಯಾವ ಭಗವಂತನಲ್ಲಿ ಲೀನವಾಗು ವುದೋ ಅವನೇ ಶಿವನು ಆ ಶಿವನು ವಿಕಾರರಹಿತನಾಗಿರುವನು.

"ಶಿವಂಭದ್ರಂ ಕಲ್ಯಾಣಂ ಮಂಗಲಂ ಶುಭಂ" ।

ಎಂಬುದಾಗಿ ಅಮರ ಕೋಶದಲ್ಲಿ ಉಲ್ಲೇಖಿಸಿರುವಂತೆ ಶಿವ ಶಬ್ದವು ಭದ್ರ, ಕಲ್ಯಾಣ, ಮಂಗಲ, ಶುಭಾರ್ಥದ್ಯೋತಕವಾಗಿರುವದು. ಸಕಲಾಧಾ ರನೂ, ಪರಾತ್ಪರನೂ, ಸತ್ಯನೂ ಆದ ಶಿವನು ತನ್ನಲ್ಲಿ ಅವಿನಾಭಾವ ಸಂಬಂಧದಿಂದಿರುವ ಶಕ್ತಿಯ ಲೀಲಾ ಜಾಲದಿಂದ ಜಗತ್ತನ್ನು ರೂಪಗೊಳಿಸಿ ತಾನು ಸರ್ವವ್ಯಾಪಕನಾಗಿರುವನು.

ಪುಷ್ಪದಂತನು ಶಿವಮಹಿಮ್ನ ಸ್ತೋತ್ರದಲ್ಲಿ:

"ತ್ರಯೀಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ
ಪ್ರಭಿನ್ನೇ ಪ್ರಸ್ಥಾನೇ ಪರಮಿದಮದಃ ಪಥ್ಯಮಿತಿಚ ।

ರುಚೀನಾಂ ವೈಚಿತ್ರ್ಯಾದೃಜುಕುಟಿಲ ನಾನಾ ಪಥಜುಷಾಂ ।
ನೃಣಾಮೇಕೋಗಮ್ಯಸ್ತ್ವಮಸಿಪಯಸಾಮರ್ಣವ ಇವ" ॥

ಸೂರ್ಯನ ಕಿರಣಗಳಿಂದ ಆಕರ್ಷಿಸಲ್ಪಟ್ಟ ಸಮುದ್ರದ ನೀರು ವೃಷ್ಟಿ ಗರೆದು ನದೀ ರೂಪದಿಂದ ಪುನರಪಿ ಸಮುದ್ರವನ್ನೇ ಹೊಂದುವಂತೆ ಪ್ರಕೃತಿ ಮಯವಾದ ಈ ಜಗತ್ತು ಶಿವನಿಂದ ಪ್ರಾದುರ್ಭವಿಸಿ, ಅವನಲ್ಲಿಯೇ ಅಡಕ ವಾಗುತ್ತದೆ. ಈ ಪರಶಿವನು ಸರ್ವವ್ಯಾಪಕನೂ, ಸರ್ವ ಶಕ್ತಿಯುಕ್ತನೂ ಆಗಿರುವನಲ್ಲದೇ ವ್ಯಕ್ತ ಅವ್ಯಕ್ತ ರೂಪದಿಂದ ಕ್ರಮವಾಗಿ ಸಗುಣ ಈಶ್ವರನೆಂ ತಲೂ, ನಿರ್ಗುಣ ಬ್ರಹ್ಮನೆಂತಲೂ ಹೇಳಿಸಿಕೊಳ್ಳಲ್ಪಡುವವನಾಗಿ ಜಗ ದಾತ್ಮಾ, ಪರಮಾತ್ಮಾ, ಶಂಭವ, ಮಯೋಭವ, ಶಂಕರ, ಮಯಸ್ಕರ, ಶಿವ, ರುದ್ರ, ಮೊದಲಾದ ನಾಮಗಳಿಂದ ಹೊಗಳಿಸಿಕೊಳ್ಳಲ್ಪಡುವನು. ಮತ್ತು

"ತ್ವಮಾಪಸ್ತ್ವಂ ಸೋಮಃ ............ ।
ನವಿದ್ಮಸ್ತತ್ತತ್ವಂ ವಯಮಿಹತುಯತ್ತತ್ವಂ ನಭವಸಿ" ।

ಭಗವಾನ್ ಶಿವನು ವರ್ಣಾತೀತನಾದಾಗ್ಯೂ ಅನುಭವಗಮ್ಯನಾಗಿದ್ದಾ ನಲ್ಲದೇ ತನ್ನನ್ನು ಭಜಿಸುವ ಭಕ್ತರಿಗೆ ಶೀಘ್ರವಾಗಿ ಅನುಗ್ರಹವನ್ನುಂಟು ಮಾಡುವುದರಿಂದ "ಆಶುತೋಷ"ನೆಂಬ ಬಿರುದನ್ನು ಪಡೆದಿರುವನು. ಸಂಸಾ ರವೆಂಬ ಕಾಡಗಿಚ್ಚಿನಲ್ಲಿ ಬೆಂದು ಬೆಂಡಾದ ಮಾನವನ ತಾಪತ್ರಯಗಳನ್ನು ದೂರು ಮಾಡಿ ಶಾಂತಿ ಸಾಗರವನ್ನು ಹೊಂದಿಸತಕ್ಕವನಾಗಿರುವನು. ಸಕಲ ವಿದ್ಯೆಗಳಿಗೂ, ವೇದಗಳಿಗೂ, ಸಮಸ್ತ ದೇವತೆಗಳಿಗೂ ಉಗಮಸ್ಥಾನನಾ ಗಿದ್ದಾನೆ. ಇಂಥ ಶಿವನನ್ನು ವೇದಗಳು ನಾನಾಪ್ರಕಾರವಾಗಿ ಬಣ್ಣಿಸಿ ಕಡೆಗೆ "ನೇತಿ, ನೇತಿ" ಎಂದು ಹೇಳಿರುವವು.

## ರಾತ್ರಿ

'ರಾ' ದಾನಾರ್ಥಕ ಧಾತುವಿನಿಂದ 'ರಾತ್ರಿ' ಶಬ್ದದವ್ಯುತ್ಪತ್ತಿಯಾಗು ತ್ತದೆ. ರಾತ್ರಿ= ಸುಖಾದಿಗಳನ್ನುಂಟುಮಾಡುವದು

"ಉಪಮಾ ಪೇಶಿಶತ್ತಮಃ ಕೃಷ್ಣಂ ವ್ಯಕ್ತಮಸ್ಥಿತ । ಉಷ
ಋಣೇವಯಾತಯ" ॥

(ಋಗ್ವೇದ ಸಂಹಿತಾ, ರಾ. ಸೂ. ೧೦—೧೨೭—೭)

ಎಂಬುದಾಗಿ ಋಗ್ವೇದ ಸಂಹಿತೆಯು ರಾತ್ರಿಯನ್ನು ವಿಶೇಷವಾಗಿ ವರ್ಣಿಸಿರುತ್ತದೆ. ಸಕಲ ಪ್ರಾಣಿಗಳ ಆರೋಗ್ಯಾಭಿವೃದ್ಧಿ, ಗಿಡಬಳ್ಳಿಗಳ ಬೆಳವಣಿಗೆ ಇತ್ಯಾದಿಗಳು ರಾತ್ರಿಯಿಂದಲೇ ಆಗುತ್ತವೆ. ವೇದವು ರಾತ್ರಿಗೆ "ಸದಾ ಆನಂದದಾಯಿನೀ" ಎಂದು ಹೇಳಿರುವುದು. ರಾತ್ರಿಗೆ ಕೆಲವರು ಶಿವಾ ದೇವಿಯೆಂತಲೂ, ಕಾಲಿದೇವಿಯೆಂತಲೂ ಸ್ತೋತ್ರ ಮಾಡಿದ್ದಾರೆ. ಶ್ರೀ ಮಾಧ ವಾಚಾರ್ಯನು ತನ್ನಿಂದ ರಚಿಸಲ್ಪಟ್ಟ "ಕಾಲಮಾಧವ" ಎಂಬ ಗ್ರಂಥದಲ್ಲಿ ಶಿವರಾತ್ರಿಗೆ ಕೆಳಗೆ ವಿವರಿಸಿದಂತೆ ವ್ಯಾಖ್ಯಾನ ಬರೆದಿದ್ದಾನೆ.

"ಶಿವಸ್ಯ ಪ್ರಿಯಾ ಯಾ ರಾತ್ರಿರ್ಯಸ್ಮಿನ್‌ವ್ರತೇ ಅಂಗತ್ವಾತ್ ವಿಹಿತಾ ತದ್ವ್ರತಂ ಶಿವರಾತ್ರ್ಯಾಖ್ಯಂ" ಶಿವನಿಗೆ ಪ್ರಿಯಕರವಾದ ರಾತ್ರಿಯು ಯಾವ ವ್ರತದಲ್ಲಿ ಅಂಗವಾಗಿರುವುದೋ ಅಂಥ ವ್ರತವು "ಶಿವರಾತ್ರಿ ವ್ರತವು" ಇದು ಮಾಘ ಬಹುಳ ಚತುರ್ದಶಿ ದಿವಸ ಪ್ರಾಪ್ತವಾಗುತ್ತದೆ. ಆ ದಿವಸ ಶಿವ ಪೂಜೆಯನ್ನು ಮಾಡುವುದೇ ಮಹಾವ್ರತವು. ಈ ಶಿವರಾತ್ರಿ ವ್ರತದ ಮಹಿ ಮೆಯು ಸ್ಕಂದ ಪುರಾಣದಲ್ಲಿ ವಿಶೇಷವಾಗಿ ವರ್ಣಿಸಲ್ಪಟ್ಟಿದೆ.

"ಪರಾತ್ಪರತರಂ ನಾಸ್ತಿ ಶಿವರಾತ್ರಿ ಪರಾತ್ಪರಂ ।  
ನ ಪೂಜಯತಿ ಭಕ್ತ್ಯೇಶಂ ರುದ್ರಂ ತ್ರಿಭುವನೇಶ್ವರಂ ॥  
ಜಂತುರ್ಜನ್ಮ ಸಹಸ್ರೇಷು ಭ್ರಮತೇನಾತ್ರ ಸಂಶಯಃ ।  
ಶಿವಂ ತು ಪೂಜಯಿತ್ವಾಯೋ ಜಾಗರ್ತಿ ಚ ಚತುರ್ದಶೀಂ ।  
ಮಾತುಃ ಪಯೋಧರರಸಂ ನಪಿಬೇತ್ಸಕದಾಚನ ।

ಮಹಾಶಿವರಾತ್ರಿ ವ್ರತವು ಎಲ್ಲ ವ್ರತಗಳಲ್ಲಿಯೂ ಅಗ್ರ ಸ್ಥಾನವನ್ನು ಹೊಂದಿರುವದು. ಯಾವನು ಮಾಘ ಬಹುಳ ಚತುರ್ದಶಿಯ ದಿವಸ ಶಿವ ನನ್ನು ಪೂಜಿಸುವುದಿಲ್ಲವೋ ಹಾಗೂ ಜಾಗರಣೆಯನ್ನು ಮಾಡುವುದಿಲ್ಲವೋ ಅವನು ಈ ಭವಸಾಗರದಲ್ಲಿ ಸಾವಿರಾರು ಸಾರೆ ಮರಳಿ ಮರಳಿ ಜನ್ಮ ತಾಳುವನು. ಯಾವನು ಆ ದಿವಸ ಸ್ನಾನಾದಿಕರ್ಮಗಳನ್ನಾಚರಿಸಿ ಭಕ್ತಿ ಯುತನಾಗಿ ಶಿವನನ್ನು ಆರಾಧಿಸುವನೋ ಅವನು ಪುನಃ ತಾಯಿಯ ಎದೆ ಹಾಲನ್ನು ಕುಡಿಯಲಾರನು. ಅರ್ಥಾತ್ ಮುಕ್ತನಾಗುವನು.

....ವ್ರತ ಸಂಬಂಧವಾದ ವಿಷಯವು ಈ ಹಿಂದೆ ಉಲ್ಲೇಖಿಸಲ್ಪಟ್ಟಿದೆ.

## ಮಾಘ ಬಹುಳ ಚತುರ್ದಶೀ

"ಮಾಘ ಕೃಷ್ಣ ಚತುರ್ದಸ್ಯಾಮಾದಿದೇವೋ ಮಹಾನಿಶಿ ।
ಶಿವಲಿಂಗತಯೋದ್ಭೂತಃ ಕೋಟಿ ಸೂರ್ಯ ಸಮಪ್ರಭಃ ॥
ತತ್ಕಾಲವ್ಯಾಪಿನೀಗ್ರಾಹ್ಯಾ ಶಿವರಾತ್ರಿ ವ್ರತೇತಿಥಿಃ ।

ಮಾಘ ಕೃಷ್ಣ ಚತುರ್ದಶಿಯ ರಾತ್ರಿಗೆ 'ಮಹಾ ನಿಶಿ' 'ಮಹಾರಾತ್ರಿ' ಎಂದು ಹೆಸರು ಬಂದಿದೆ. ಯಾಕಂದರೆ ಆ ರಾತ್ರಿಯಲ್ಲಿ ಆದಿ ದೇವನಾದ ಮಹಾದೇವನು ಕೋಟಿ ಸೂರ್ಯರಂತೆ ಪ್ರಕಾಶಮಾನನಾಗಿ ಲಿಂಗರೂಪದಿಂದ ಆವಿರ್ಭವಿಸಿದ್ದಾನೆ. ಆದ್ದರಿಂದ ಅದು "ಮಹಾಶಿವರಾತ್ರಿ" ಎಂದು ಪುರಾಣೋಕ್ತಿಯಿದೆ.

"ಕರ್ಮಣಾ ಕೇನ ಭಗವಾನ್ ವ್ರತೇನ ತಪಸಾऽಪಿ ವಾ ।
ಧರ್ಮಾರ್ಥ ಕಾಮಮೋಕ್ಷಾಣಾಂ ಹೇತುಸ್ತ್ವಂ ಪರಿತುಷ್ಯಸಿ ॥

ಒಂದಾನೊಂದು ದಿವಸ ಪಾರ್ವತಿಯು ಪರಮೇಶ್ವರನನ್ನು ಕುರಿತು:- ಹೇ ಪ್ರಭೋ ! ಧರ್ಮ. ಅರ್ಥ, ಕಾಮ, ಮೋಕ್ಷ ಈ ಚತುರ್ವಿಧ ಪುರುಷಾರ್ಥಗಳಿಗೆ ಕಾರಣನಾದ ನೀನು ಯಾವ ಕರ್ಮದಿಂದ, ಯಾವ ವ್ರತದಿಂದ ತಪಸ್ಸಿನಿಂದ ಪ್ರಸನ್ನನಾಗುವಿ ! ಎಂಬುದಾಗಿ ಪ್ರಶ್ನೆ ಮಾಡಿದಳು ಆಗ ಭಗವಾನ್ ಶಂಕರನು:—

'ಮಾಘೆ ವೈ ಕೃಷ್ಣಪಕ್ಷಸ್ಯ ಯಾ ತಿಥಿಃ ಸ್ಯಾಚ್ಚತುರ್ದಶೀ ।
ತಸ್ಯಾಂ ಯಾ ತಾಮಸೀ ರಾತ್ರಿಃ ಸೋಚ್ಯತೇ ಶಿವರಾತ್ರಿಕಾ ॥
ತತ್ರೋಪವಾಸಃ ಕುರ್ವಾಣಃ ಪ್ರಸಾದಯತಿಮಾಂ ಧೃವಂ ।
ನಸ್ನಾನೇನ ನವಸ್ತ್ರೇಣ ನಧೂಪೇನ ನಚಾರ್ಚಯಾ ॥
ತುಷ್ಯಾಮಿನ ತಥೇ ಪುಷ್ಪೈರ್ಯಥಾ ತತ್ರೋಪವಾಸತಃ ।

"ಮಾಘಕೃಷ್ಣ ಚತುರ್ದಶಿಯಲ್ಲಿ ತಯೋಮಯವಾದ ರಾತ್ರಿಗೆ ಶಿವರಾತ್ರಿ ಯೆಂಬ ಹೆಸರು. ಅಂದು ನನ್ನನ್ನು ಕುರಿತು ಉಪವಾಸ ವ್ರತವನ್ನಾಚರಿಸಿದರೆ, ಪ್ರಸನ್ನನಾಗುವೆನು ಈ ಉಪವಾಸ ವ್ರತದಿಂದ ಪ್ರಸನ್ನನಾದಷ್ಟು ಸ್ನಾನ, ಪತ್ರ, ಪುಷ್ಪ, ಧೂಪದೀಪಾದಿಗಳಿಂದ ಪ್ರಸನ್ನನಾಗಲಾರೆನು" ಎಂದು ಹೇಳಿದನು.

## ಉಪವಾಸ

"ಉಪ ಸಮೀಪೇಯೋವಾಸಃ ಜೀವಾತ್ಮ ಪರಮಾತ್ಮನೋಃ।
ಉಪವಾಸಃ ಸವಿಜ್ಞೇಯಃ.................................."

(ವರಾಹೋಪನಿಷತ್)

ಅಥವಾ "ಉಪಾವೃತ್ತಸ್ಯ ಪಾಪೇಭ್ಯೋಯಸ್ತು ವಾಸೋಗುಣೈಸ್ಸಹ।
ಉಪವಾಸಃ ಸವಿಜ್ಞೇಯಃ ಸರ್ವಭೋಗ ವಿವರ್ಜಿತಃ॥

(ಭವಿಷ್ಯ ಪುರಾಣ)

"ಉಪ – ಸಮೀಪದಲ್ಲಿ (ಶಿವನ ಸಮೀಪದಲ್ಲಿ) ವಾಸಃ – ಇರುವುದು. ಶಿವಜೀವರ ಸಮನ್ವಯ ಹೀಗೆ ಉಪವಾಸ ಶಬ್ದದ ಅರ್ಥವಿದೆ. ಅಥವಾ ಸರ್ವ ಭೋಗ ವಿವರ್ಜಿತನಾಗಿ, ಸಕಲ ಪಾಪಕರ್ಮಗಳಿಂದ ನಿವೃತ್ತನಾಗಿ, ಸದ್ಗುಣ ಸಂಪನ್ನನಾಗಿ ಶಿವನಲ್ಲಿ ಮನವನ್ನಿಡುವುದಕ್ಕೆ ಉಪವಾಸವೆಂದು ಭವಿಷ್ಯ ಪುರಾಣವು ಸಾರುತ್ತಿದೆ.

"ಸರ್ವಭೋಗ ವಿವರ್ಜಿತಃ" ಎಂಬ ಮೇಲಿನ ವಾಕ್ಯದಿಂದ ಅನಶನ ವನ್ನು ಸಹ ಮಾಡಬೇಕೆಂದು ಅರ್ಥವಾಗುವುದು. ಕೆಲವು ಗ್ರಂಥಗಳಲ್ಲಿ "ಆಹಾರ ನಿವೃತ್ತಿರುಪವಾಸಃ" ನಿರಾಹಾರದಿಂದಿದುವಿಕೆಗೂ 'ಉಪವಾಸ'ಎಂದು ಹೇಳಲಾಗಿದೆ. ಆಹಾರ ಅಂದರೇನು ?–ಆಙ್, ಉಪಸರ್ಗಪೂರ್ವಕ ಹೃ, ಧಾತುವಿನಿಂದ ಕರ್ಮವಾಚ್ಯದಲ್ಲಿ 'ಘಞ್' ಪ್ರತ್ಯಯ ಹಚ್ಚಲಾಗಿ ಆಹಾರ, ಶಬ್ದದ ವ್ಯುತ್ಪತ್ತಿಯಾಗುತ್ತದೆ. "ಆಹ್ರಿಯತೇಮನಸಾ ಬುಧ್ಯಾ ಇಂದ್ರಿಯೈರ್ವಾ ಇತಿ ಆಹಾರಃ, ಮನಸ್ಸು, ಬುದ್ಧಿ, ಇಂದ್ರಿಯಗಳಿಂದ ಹೊರಗಿನಿಂದ ಶರೀರದೊಳಗೆ ಸ್ವೀಕರಿಸಲ್ಪಡುವುದಕ್ಕೂ, ಸಂಗ್ರಹಿಸಲ್ಪಡುವುದಕ್ಕೂ "ಆಹಾರವೆಂ"ದು ಹೇಳಲಾಗಿದೆ. ಆದರೆ ಆಹಾರವು ಸ್ಥೂಲವೆಂತಲೂ, ಸೂಕ್ಷ್ಮವೆಂತಲೂ ಎರಡು ವಿಧವಾಗಿದೆ. ಮನಸ್ಸು ಮೊದಲಾದವುಗಳಿಂದ ಸಂಗ್ರಹಿಸಲ್ಪಡುವುದು ಸೂಕ್ಷ್ಮ ಆಹಾರವು. ಪಂಚೇಂದ್ರಿಗಳಿಂದ ಸಂಗ್ರಹಿಸಲ್ಪಡುವ ಶಬ್ದ, ಸ್ಪರ್ಶ. ರೂಪಾದಿಗಳು ಸ್ಥೂಲ ಆಹಾರವು, ಇದಕ್ಕಿಂತ ಭಿನ್ನವಾದ ಅಕ್ಕಿ, ಬೇಳೆಗಳಿಂದ ಸಿದ್ಧವಾದ ಪಾಕ ಫಲ ಮೊದಲಾದುದೂ

ಸ್ಥೂಲ ಆಹಾರವು. ವ್ರತಾಚರಣೆಯಲ್ಲಿ (ಶಿವಚಿಂತನೆಯಲ್ಲಿ) ಮನಸ್ಸು ಲೀನ ವಾದರೆ, ಎರಡು ವಿಧವಾದ ಆಹಾರ ಗ್ರಹಣವು ಸ್ವಾಭಾವಿಕವಾಗಿಯೇ ನಿಂತು ಹೋಗುವುದು. ಈ ತರಹದ ಉಪವಾಸ ವ್ರತವು ಮಹಾಶಿವರಾತ್ರಿ ಯಲ್ಲಿ ವಿಹಿತವಾಗಿದೆ.

## ಮಹಾಶಿವರಾತ್ರಿಯ ದಿವಸ ರಂಭೆಯ ಶಾಪವಿಮೋಚನೆ

ಈ ಮಹಾ ಶಿವರಾತ್ರಿಯಲ್ಲಿ ಈ ತರಹದ ಉಪವಾಸದಿಂದ ಅನೇಕರು ತಮ್ಮ ಕುಕರ್ಮಗಳಿಂದ ಮುಕ್ತರಾಗಿ ಕೈಲಾಸವನ್ನು ಸೇರಿ ನಿತ್ಯಸುಖವನ್ನು ಪಡೆದಿದ್ದಾರೆ. ಕಳೆದ ಕಥೆಗಳಲ್ಲಿ ಮಹಾ ಶಿವರಾತ್ರಿಯ ಆಧಾರಕ್ಕಾಗಿ ಒಂದು ಕಥೆಯನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಬಹಳ ಕಾಲದ ಹಿಂದೆ ದೇವ ದಾನ ವರು ಕೂಡಿ ಸಮುದ್ರ ಮಥನ ಮಾಡುತ್ತಿರುವಾಗ್ಗೆ ಹದಿನಾಲ್ಕು ರತ್ನಗಳು ಹೊರಟವು ಅವುಗಳಲ್ಲಿ ರಂಭೆಯೊಬ್ಬಳು ಸ್ತ್ರೀರತ್ನವಾಗಿದ್ದಳು. ಅವಳ ಅನುಪಮ ರೂಪಲಾವಣ್ಯಾದಿಗಳಿಗೆ ದೇವದಾನವರೆಲ್ಲ ಬೆರಗಾದರು. ಇಂದ್ರನು ಮೋಹಿಸಿ ಮರುಳಾದನು. ರಂಭೆಯು ದೇವೇಂದ್ರನ ಆಶ್ರಯ ಹೊಂದಿ ಹಲವು ವಿಧವಾದ ಸಂಪತ್ ಸುಖವನ್ನು ಪಡೆದಳು. ಹೀಗಿರಲು ಅವಳಿಗೆ ಅತಿ ಸುಖವು ಅತಿರೇಕವಾಗಿ ಸೊಕ್ಕು ಮಿತಿಮೀರಿ, ಅಜ್ಞಾನ, ಅಹಂಕಾರ, ಅವಿವೇಕತನಗಳು ಆವರಿಸಿ ಅರವು ಇಲ್ಲದವಳಾದಳು. ಆದರಿಂದ ರಂಭೆಯು ದೇವೇಂದ್ರನಲ್ಲಿ ಅನಾದರವುಳ್ಳವಳಾಗಿ ಹಿರಣ್ಯನೆಂಬ ದಾನವನ ಸಹವಾಸ ಮಾಡಿದಳು. ದೇವಧರ್ಮನನ್ನು ಧಿಃಕರಿಸಿ ರಾಕ್ಷಸನ ಬೆನ್ನುಬಿದ್ದು ತಾನೂ ರಾಕ್ಷಸರಂತೆಯೇ ಕುಣಿದಾಡಹತ್ತಿದಳು. ಹರಿಹರಾದಿ ದೇವತೆಗಳ ಪೂಜಾಪಾಠಗಳನ್ನೂ, ಶಿವರಾತ್ರಿ, ಸೋಮವಾರ ಮೊದಲಾದ ವ್ರತನಿಯಮ ಗಳನ್ನೂ ಉಲ್ಲಂಘಿಸಿ, ಹೀನ ಪಾಪಕರ್ಮಗಳಲ್ಲಿ ಲೀನಳಾದಳು. ಕೈಲಾಸ ನಾಥನು ಇವಳ ದುರ್ನೀತಿಯನ್ನು ಕಂಡು ಕೋಪಾವೃತನಾಗಿ "ನೀನು ಹಿರಣ್ಯನೊಡನೆ ಭೂಲೋಕಕ್ಕೆ ಹೋಗಿ ಚಿಗರೆಯಾಗಿ ಹುಟ್ಟು" ಎಂಬುದಾಗಿ ಶಾಪವಿತ್ತನು. ಶಿವನು ಪ್ರಕೋಪ ಹೊಂದಿರುವದನ್ನು ಕಂಡು ರಂಭೆ ಭಯ ದಿಂದ ನಡುಗುತ್ತ ಮೂರ್ಛೆ ಹೊಂದಿದಳು. ತುಸು ಹೊತ್ತಿನ ಮೇಲೆ ಪುನರಪಿ ಎಚ್ಚತ್ತು ಪಶ್ಚಾತ್ತಾಪ ಹೊಂದಿ ದೀನ ಮುದ್ರೆಯಿಂದ ಕೈಜೊಡಿಸಿಕೊಂಡು

"ದೇವಾ ! ಈ ಶಾಪದಿಂದ ನಾನು ಮುಕ್ತಳಾಗುವುದು ಎಂದು" ಎಂಬುದಾಗಿ ಹಲವು ವಿಧದಿಂದ ಬೇಡಿಕೊಂಡಳು. ದಯಾನಿಧಿ ಭಕ್ತವತ್ಸಲನಾದ ಭಗವಾನ ಶಂಕರನು "ಇನ್ನು ಹನ್ನೆರಡು ವರುಷ ಕಳೆಯಲು ಶಾಪಮುಕ್ತಳಾಗುವಿ'' ಎಂಬುದಾಗಿ ವರವನ್ನಿತ್ತನು.

## ಬೇಡನೂ, ರಂಭೆಯೂ

ವಿಂಧ್ಯಾಚಲದಲ್ಲಿ ಒಂದು ಸುಪ್ರಸಿದ್ಧವಾದ ಶಿವಾಲಯವಿತ್ತು. ಮಹಾ ಶಿವರಾತ್ರಿಯ ದಿವಸ ಶಿವಭಕ್ತರೆಲ್ಲರೂ ಸೇರಿ ಶಿವನನ್ನು ಅನನ್ಯ ಭಾವದಿಂದ ಆರಾಧಿಸುತ್ತಿರುವಾಗ್ಗೆ ಬೇಟೆಗಾಗಿ ಹೊರಟ ಬೇಡನೊಬ್ಬನು ಅಲ್ಲಿಗೆ ಆಕಸ್ಮಾತ ಬಂದನು. ಅವನು ಮೊದಲೇ ಬೇಡ ಅವನಿಗೆ ಏನೂಬೇಡ, ಹೊಟ್ಟೆತುಂಬ ಊಟ, ಮೈತುಂಬ ಬಟ್ಟೆ, ಕಣ್ತುಂಬ ನಿದ್ರೆ, ಯಥೇಷ್ಟವಾಗಿ ಬೇಟೆಯ ಆಟ ಇವುಗಳ ಹೊರ್ತಾಗಿ ಅವನು ಹೊಸದೇನನ್ನೂ ಕಂಡಿರಲಿಲ್ಲ. ಅವನಿಗೆ ಹೊಸ ದೇನೂ ಸೋಂಕಿರಲಿಲ್ಲ. ಹೀಗಿರುವಲ್ಲಿ ಅವನಿಗೆ ಅಂದಿನ ದಿನದ ಶಿವಪೂಜೆ, ಶಿವಭಜನೆ, ಶಿವಭಕ್ತರ ಕುಣಿದಾಟ, ಧೂಪ, ದೀಪ, ನೈವೇದ್ಯ, ಮಂಗಲ ವಾದ್ಯ, ಝೇಂಕರಿಸುವ ಘಂಟೆ ಜಾಗಟೆಗಳ ನಿನಾದ ಇವುಗಳೆಲ್ಲವೂ ಹುಚ್ಚರ ಆಟವಾಗಿ ಕಂಡವು. ಬೇಡನು ಹಾಸ್ಯದಿಂದ ನಸುನಕ್ಕು ಇದರಿಂದ ತನಗೆ ಏನು ಪ್ರಯೋಜನವೆಂದು ಭಾವಿಸಿ ಬೇಟೆಗಾಗಿ ಮುಂದೆ ನಡೆದನು.

ಅಂದಿನ ದಿವಸ ಬೇಡನು ಎಷ್ಟು ತಿರುಗಿದರೂ ಒಂದೂ ಬೇಟೆ ಸಿಗಲಿಲ್ಲ ವಾದುದರಿಂದ ಕತ್ತಲಲ್ಲಿ ಕಂಗೆಟ್ಟು "ಶಿವಶಿವಾ" ಎನ್ನುತ್ತ ಸನಿಹದಲ್ಲಿರುವ ಬಿಲ್ವ ಮರವನ್ನೇರಿ ಮರೆಮಾಡಿಕೊಂಡು ಕುಳಿತನು. ಅವನಿಗೆ ಮಹಾ ಶಿವರಾತ್ರಿಯ ದಿವಸ ಶಿವಲಿಂಗ ಸಂದರ್ಶನ, ಶಿವಭಜನೆ, ಶಿವಸಂಕೀರ್ತನೆ ಇತ್ಯಾದಿಗಳು ಸಹಜವಾಗಿಯೇ ಲಭಿಸಿದವು. ತತ್ಫಲದಿಂದ ಅವನಿಗೆ ಶಿವನ ನಾಮೋಚ್ಚಾರಣೆಯೂ ಸಾಧಿಸಿತು. ಬೇಡನು ಗಿಡದ ಮೇಲೆ ಕುಳಿತಿರಲು ಮುಂಬರುವ ಬೇಟೆಯು ತನಗೆ ಕಾಣಲೆಂದು ಮರೆಯಾದ ಬಿಲ್ವದಳಗಳನ್ನು ಹರಿದೊಗೆದನು. ಆ ಗಿಡದ ಕೆಳಗೆ ಒಂದು ಶಿವಲಿಂಗವಿದ್ದಿತು. ಆ ದಳಗಳು ಲಿಂಗದ ಮೇಲೆಯೇ ಬೀಳುತ್ತಿದ್ದವು. ಆದ್ದರಿಂದ ಶಿವಪೂಜೆಯೂ ಆಯಿತು.

ಅಲ್ಲಿ ಉಷಃಕಾಲದ ವರೆಗೆ ಕುಳಿತರೂ ಬೇಟೆಯೇ ಬರಲಿಲ್ಲವಾದ್ದರಿಂದ ಊಟವಿಲ್ಲದೇ ಉಪವಾಸವೂ ಆಯಿತು. ಮತ್ತು ಜಾಗರಣೆ ಆಯಿತು. "ಮೂರ್ತಿ ಮೃದಾಬಿಲ್ವದಲೇನ ಪೂಜಾ" ಎಂಬಂತೆ ದೇವನಿಗೆ ಇದಕ್ಕಿಂತಲೂ ಹೆಚ್ಚಿನ ಪೂಜೆ ಇನ್ನಾವುದು ! ಧರ್ಮ ಕರ್ಮ ಸಂಯೋಗದಿಂದ ಬೇಡನಿಗೆ ಎಲ್ಲವೂ ಸಾಧಿಸಿತು. ಪಾಪದೃಷ್ಟಿಯಿಂದ ಮಾಡಿದ ಬೇಡನ ಕರ್ಮವು ಪುಣ್ಯಮಯವಾಗಿ ಪರಿಣಮಿಸಿತು.

ಅಷ್ಟರಲ್ಲಿಯೇ ಚಿಗರಿಯ ರೂಪಿಯಾದ ರಂಭೆಯು ಅಲ್ಲಿಗೆ ಬಂದಳು. ಬೇಡನು ತಾನು ಬಂದ ಕೆಲಸ ಕೈಗೂಡಿತೆಂದು ಸಂತೋಷದಿಂದ ಹಿರಿಹಿರಿಹಿಗ್ಗಿ ಬಾಣ ಬಿಡುವಷ್ಟರಲ್ಲಿ ಆ ರಂಭೆಯುಃ- "ಗರ್ಭವತಿಯಾದ ನನ್ನನ್ನು ಕೊಂದುದಾದರೆ ನಿನಗೆ ಸ್ತ್ರೀಹತ್ಯ ಹಾಗೂ ಶಿಶಹತ್ಯ ಮಾಡಿದ ಮಹತ್ಪಾಪವು ತಗಲುವುದು. ನನಗೆ ಪ್ರಸವಕಾಲ ಸಮೀಪಿಸಿದೆ. ಸ್ವಲ್ಪ ತಾಳು; ಇನ್ನು ತುಸು ಹೊತ್ತಿನಲ್ಲಿಯೇ ನಾನು ಹೆತ್ತು ತಿರುಗಿ ಇಲ್ಲಿಗೆ ಬರುವೆ, ಆಗ ನನ್ನನ್ನು ಕೊಂದು ತೃಪ್ತಿಹೊಂದುವಿಯಂತೆ"ಎಂದು ಅತ್ಯಂತ ಕಳಕಳಿಯಿಂದ ನುಡಿದಳು. ಚಿಗರಿಯು ಮಾತನಾಡುವದನ್ನು ನೋಡಿ ಬೇಡನು ಆಶ್ಚರ್ಯಚಕಿತನಾದನು. ಅವಳ ಪೂರ್ವ ವೃತ್ತಾಂತವನ್ನು ತಿಳಿಯಲು ಆತುರನಾದನು. ಆಗ ಚಿಗರಿಯಾಗಿದ್ದ ರಂಭೆಯು ಎಲ್ಲವನ್ನೂ ಸಾದ್ಯಂತವಾಗಿ ತಿಳಿಸಿದಳು. ಆದರೂ ಬೇಡನಿಗೆ ಕನಿಕರ ಬರಲಿಲ್ಲ. ಚಿಗರೆಯ ಬಗ್ಗೆ ವಿಶ್ವಾಸ ಬರಲಿಲ್ಲವಾದ್ದರಿಂದ ಹಿಂತಿರುಗಿ ಬರುವ ಪ್ರತಿಜ್ಞೆ ತೆಗೆದುಕೊಂಡು ಅದನ್ನು ಬಿಟ್ಟನು.

ಆ ನಂತರ ಗಂಡು ಚಿಗರೆಯ ರೂಪದಲ್ಲಿದ್ದ ಹಿರಣ್ಯ ರಾಕ್ಷಸನೂ ಅಲ್ಲಿಗೆ ಬಂದನು. ಅವನೂ ತನ್ನ ಹೆಂಡರು ಮಕ್ಕಳನ್ನು ಮಾತನಾಡಿಸಿ ಬಂದಮೇಲೆ ತನ್ನನ್ನು ಕೊಲ್ಲಬಹುದೆಂದು ಹಿಂತಿರುಗಿ ಬರುವ ಬಗ್ಗೆ ಆಣೆಮಾಡಿ ಹೋದನು.

ಗಂಡ-ಹೆಂಡರಾಗಿದ್ದ ಅವೆರಡೂ ಚಿಗರೆಗಳು ತುಸು ಹೊತ್ತಿನಲ್ಲಿಯೇ ತಿರುಗಿ ಬಂದು ಬೇಡನ ಎದುರಿಗೆ ನಿಂತು "ಮೊದಲು ನನ್ನನ್ನು ಕೊಲ್ಲು"ಎಂಬುದಾಗಿ ಹೆಣ್ಣು ಚಿಗರಿ ನುಡಿಯಿತು. ಅಷ್ಟರಲ್ಲಿಯೇ ಗಂಡು ಚಿಗರಿ "ಮೊದಲು ನನ್ನನ್ನು ತಿನ್ನು" ಎಂದು ದುಂಬಾಲ ಬಿದ್ದಿತು. ಮೃದು-ಸಭ್ಯ ಸ್ವಭಾವದ ಪ್ರಾಣಿಗಳ ಪ್ರಾಮಾಣಿಕತನವನ್ನು ನೋಡಿ ಬೇಡನಿಗೆ ಅಂತಃಕರಣವು ಮೇರೆ

ದಪ್ಪಿ ಉಕ್ಕೇರಿ ಬಂತು. ತಾನು ಇದು ವರೆಗೆ ತನ್ನ ಜನ್ಮಾರಾಭ್ಯ ಮಾಡಿದ ಪಾಪಕರ್ಮದ ಬಗ್ಗೆ ಅತಿಯಾಗಿ ನೊಂದುಕೊಂಡು ಪಶ್ಚಾತ್ತಾಪ ಹೊಂದಿದ ನಲ್ಲದೆ ನಾನು ಮಾನವನಾಗಿ ಹುಟ್ಟಿ ಇಷ್ಟು ದಿವಸಗಳನ್ನು ವ್ಯರ್ಥವಾಗಿ ಕಳೆದ ನಲ್ಲ ಶಿವ ಶಿವಾ ! ಎಂದು ನಿಟ್ಟುಸಿರಿಟ್ಟನು. ಹಲವು ವಿಧವಾಗಿ ತನ್ನನ್ನು ತಾನೇ ಶಪಿಸಿಕೊಂಡನು. ಈ ಪಶ್ಚಾತ್ತಾಪದ ಪರಿಣಾಮವಾಗಿ ಅವನ ಪಾಪ ವೆಲ್ಲ ಸುಟ್ಟು ಬೂದಿಯಾಯಿತಲ್ಲದೆ ಅವನಿಗೆ ನಿಜವಾದ ಜ್ಞಾನೋದಯವಾ ವಾಯಿತು. ಕೂಡಲೆ ಕೈಲಾಸದಿಂದ ಪಾರ್ವತಿ-ಪರಮೇಶ್ವರ ವಿಮಾನವು ಭಕ್ತನಿಗಾಗಿ ಬಂದಿಳಿಯಿತು. ರಂಭೆ ಮತ್ತು ಹಿರಣ್ಯ ರಾಕ್ಷಸನ ಶಾಪ ವಿಮೋ ಚನೆಯು ಇಂದಿಗೆ ಅಂದರೆ ಈ ಮಹಾಶಿವರಾತ್ರಿಯ ದಿನವೇ ಆಯಿತಾದುದ ರಿಂದ ಅವರು ತಮ್ಮ ಪೂರ್ವ ರೂಪ ಹೊಂದಿದರು. ಎಲ್ಲರೂ ಶಿವಭಜನೆ ಮಾಡುತ್ತ ಕೈಲಾಸಕ್ಕೆ ತೆರಳಿದರು.

ಈ ಶಿವರಾತ್ರಿಯ ವ್ರತವು ವೀರಶೈವ ಸಮಾಜದಲ್ಲಿ ಹಾಗೂ ಶೈವರಲ್ಲಿ ವಿಶೇಷವಾಗಿ ರೂಢಿಯಲ್ಲಿದೆ. ಊರು ಊರುಗಳಲ್ಲಿಯ ಶಿವಾಲಯಗಳಲ್ಲಿ ಮಹಾರುದ್ರಾಭಿಷೇಕಯುಕ್ತವಾದ ಶಿವಾರಾಧನೆ, ಮಹೋತ್ಸವಾದಿಗಳು ಜರಗುವವು. ಲಕ್ಷ್ಮೇಶ್ವರದ ಸಸಿಹದಲ್ಲಿರುವ ಮುಕ್ತಿಮಂದಿರದಲ್ಲಿ ಶ್ರೀ ಬಾಳೇ ಹೊನ್ನೂರು ಸಿಂಹಾನಾಧೀಶ್ವರರಾದ ಜಗದ್ಗುರು ಪ್ರಸನ್ನ ರೇಣುಕ ವೀರ ಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳವರ ಸನ್ನಿಧಿಯಲ್ಲಿ ಸಹಸ್ರ ಕುಂಭಾಭಿಷೇಕ, ಕೋಟಿ ಬಿಲ್ವಾರ್ಚನೆ, ಲಕ್ಷ ದೀಪೋತ್ಸವ ಕೀರ್ತನ, ಜಾಗ ರಣೆ ಇತ್ಯಾದಿಗಳು ಅತ್ಯಂತ ವೈಭವಪೂರ್ಣವಾಗಿಯೂ ಮನಾನಂದಕರ ವಾಗಿಯೂ ಈ ದಿನ ಜರಗುವವು. ಈ ಸಾರೆ ಶಿವರಾತ್ರಿಯ ಸಮಯಕ್ಕೆ ಭಗವಾನ್ ಶಂಕರನ ೧೦೦೮ ನಾಮಗಳ ದ್ಯೋತಕವಾಗಿ ಈ ಮಹಾಗುರು ಪುಂಗವರ ಘನ ಅಧ್ಯಕ್ಷತೆಯಲ್ಲಿ (ಮುಕ್ತಿ ಮಂದಿರದಲ್ಲಿ) ೧೦೦೮ ಪಲ್ಲಕ್ಕಿ ಮಹೋತ್ಸವವು ಧರ್ಮ ಜಾಗರಣೆಗೂ, ವಿಶ್ವ ಶಾಂತಿಗೂ ಆಚರಿಸಲ್ಪ ಡುವುದು. ಈ ಕಾರ್ಯ ಅತ್ಯಂತತ ಸ್ತುತ್ಯವಾಗಿದೆ. ಬಹುತರವಾಗಿ ಕರ್ನಾಟಕದಲ್ಲಿ ಮಠಾಧೀಶ್ವರರು ಇಂದು ಭಕ್ತಿ ಸಂಪನ್ನರಾಗಿ ವ್ರತವನ್ನಾ ಚರಿಸುವರು ಹಾಗೂ ಈ ಶುಭ ದಿವಸದಲ್ಲಿ ಶಿವಭಕ್ತರು ಶಿವಪ್ರೀತ್ಯರ್ಥವಾಗಿ ಫಲದಾನ, ವಸ್ತ್ರದಾನ ಮೊದಲಾದ ಸತ್ಕರ್ಮಗಳನ್ನಾಚರಿಸುವರು.

ಕಲಿಕಾಲ ಪ್ರಭಾವದಿಂದ ಮಾನವನು ನೀತಿ-ಕ್ರಿಯಾ-ಆಚಾರಗಳಿಂದ ಭ್ರಷ್ಟನಾಗಿ, ಹಲವು ಕಷ್ಟಗಳಿಗೆ ಈಡಾಗಿ, ನರಕಯಾತನೆಗೆ ಗುರಿಯಾಗ ಬಾರದೆಂಬ ಸದುದ್ದೇಶದಿಂದಲೂ, ಸದ್ಭಾವನೆ-ಸದ್ವರ್ತನೆಗಳಿಂದ ಬದುಕಿ ಬಾಳ ಲೆಂಬ ಉದಾತ್ತ ತತ್ವದಿಂದಲೂ, ಒಟ್ಟಾರೆ ಮಾನವ ಪ್ರಾಣಿಯ ಉದ್ಧಾರಕ್ಕಾಗಿ ಗುರುಗಳು ಋಷಿಗಳು ದೇವಾದಿದೇವತೆಗಳು ಪೂರ್ವಕಾಲದಲ್ಲಿ ವ್ರತ-ನಿಯಮ ನಿರ್ಬಂಧಗಳನ್ನು ಮಾಡಿಟ್ಟದ್ದಾರೆ ಅದರಂತೆ ಮಹಾಶಿವರಾತ್ರಿಯ ದಿವಸ ಮೂರು ದಳವುಳ್ಳ ಒಂದೇ ಒಂದು ಬಿಲ್ವದಳವನ್ನು ಶಿವಲಿಂಗಕ್ಕೆ ಧರಿಸಿದರೆ ಮೂರು ಜನ್ಮದಲ್ಲಿ ಮಾಡಿದ ಮಹಾಪಾಪವು ನಾಶವಾಗಿ ಸದ್ಗತಿ ಸಿಗುವುದೆಂದು ಶಿವಲೀಲಾಮೃತ ಗ್ರಂಥದಲ್ಲಿ ಉಕ್ತವಾಗಿದೆ. ಮಹಾ ಪಾಪವು ಇಂಥ ಸಣ್ಣ ಬಿಲ್ವದ ಎಲೆಯಿಂದ ನಾಶವಾಗುವುದು ಅಶಕ್ಯವೆಂದೂ, ಗ್ರಂಥೋಕ್ತ ವಾಕ್ಯಗಳು ತೀರ ಅತಿಶಯೋಕ್ತಿಗಳೆಂದೂ ಆಧುನಿಕ ಧರ್ಮನಿವೃತ್ತರು (ಧರ್ಮಲಂಡರು) ಪ್ರತಿಪಾದಿಸುವದುಂಟು. ದೀರ್ಘವಾಗಿ ವಿಚಾರಿಸದ ಸಾಮಾನ್ಯ ಜನರ ಕಲ್ಪನೆಯು ಇದೇ ಬಗೆಯಾಗಿರುತ್ತದೆ. ಆದರೆ ಸುವಿಚಾರವುಳ್ಳವರು ಗ್ರಂಥೋಕ್ತಿಗಳನ್ನೂ ಅವುಗಳಲ್ಲಿ ಹೇಳಿದ ವಿಧಿಕರ್ಮಗಳನ್ನೂ ನಂಬಲೇಬೇ ಕೆಂದು ಸಿದ್ಧಮಾಡಿ ತೋರಿಸಬಹುದು ನಡೆ-ನುಡಿಗಳಲ್ಲಿ ಹೆಜ್ಜೆ ಹೆಜ್ಜೆಗೆ ಅಸತ್ಯ-ಅನ್ಯಾಯ ಅಧರ್ಮಗಳಿಂದ ಬೀಳುತ್ತ ಏಳುತ್ತ ನಡೆದಿರುವ ಕಲಿಯು ಗದ ಈಗಿನವರಷ್ಟು ನಮ್ಮ ಪೂರ್ವಿಕರ ಸ್ಥಿತಿಯಾಗಿದ್ದಿಲ್ಲವೆಂದೇ ಕೃತ-ತ್ರೇತಾ ದ್ವಾಪರ ಯುಗಗಳು ಧರ್ಮಯುಗಗಳೆಂದು ಪ್ರಸಿದ್ಧವಾದವು. ಆಗಿನ ಕಾಲಕ್ಕೆ ಅಧರ್ಮ ಕೃತ್ಯಗಳಾಗುತ್ತಿದ್ದುದು ತೀರ ಕಡಿಮೆ ಎಂಬುದಕ್ಕೆ ಘನಘೋರ ಯುದ್ಧದಲ್ಲಿಯೂ ಕೂಡ ಶತ್ರುವು ನಿಃಶಸ್ತ್ರಯಾದರೆ ಪ್ರತಿ ವೈರಿಯು ಶಸ್ತ್ರ ಪ್ರಹಾರ ಮಾಡದೆಯೂ, ನಿಯಮಿತ ಸಮಯದಲ್ಲಿ ಹೊರತು ಇನ್ನಿತರ ವೇಳೆಯಲ್ಲಿ ಕಪಟತನದಿಂದ ಕಾದದೆಯೂ ಆಗಿಹೋದ ಕೌರವ-ಪಾಂಡವರ ಧರ್ಮಯುದ್ಧವೇ ಸಾಕ್ಷಿಯಾಗಿದೆ. ಪಾಪ ಭೀರುಗಳಿಂದ ಪಾಪಕೃತಿಗಳಾಗು ತ್ತಿರುವುದು ತೀರ ಕಡಿಮೆ. ಈ ರೀತಿಯಿಂದ ವಿಚಾರ ಮಾಡಿದರೆ ಪಾಪ ಪುಣ್ಯಗಳ ಯಥಾರ್ಥ ಜ್ಞಾನವಿದ್ದ ಸುಜನರಿಂದ ಕೈತಪ್ಪಿ ಇಲ್ಲವೇ ಕಾಲ ವೈಷಮ್ಯದಿಂದ ಕ್ವಚಿತ್ತಾಗಿ ಪಾಪಕರ್ಮ ಘಟಿಸಬಹುದು. ಅವರ ಪರಿಹಾರ ಕ್ಕಾಗಿ ಶಿವಪೂಜೆ ಅರ್ಥಾತ್ ಒಂದೇ ಒಂದು ಬಿಲ್ವದಳದಿಂದ ಇಷ್ಟಲಿಂಗದ

ಆರಾಧನೆಯೇ ಮಹತ್ಕೃತಿಯೆಂದು ಹೇಳಿದರೂ, ಪ್ರಾಯಶ್ಚಿತ್ತದಿಂದ ಪಾಪ ನಾಶವಾಗುವುದೆಂದು ವಿಚಾರಿಸಿದರೂ ಈ ಸಂಶಯದ ತೊಡಕು ಶಿಥಿಲವಾಗುವುದು.

## ಬಿಲ್ವದಳದಿಂದ ಆರೋಗ್ಯ ಸಾಧನೆ

ಬಿಲ್ವದಳವು ಭವರೋಗ ನಾಶಕವೆಂದು ಇಷ್ಟರಲ್ಲಿಯೇ ಹೇಳಿದ್ದೇವೆ. ಅಷ್ಟೇ ಅಲ್ಲ ಇಹರೋಗ ನಾಶ ಮಾಡುವುದರಲ್ಲಿಯೂ ಅದರ ಕೈಮೇಲು ಅದೆ ಆಯುರ್ವೇದದಲ್ಲಿ ಬಿಲ್ವಕ್ಕೆ ಬಹು ಬೆಲೆ ಇದೆ. ನಿತ್ಯ ಶಿವಪೂಜೆಯ ನಂತರ ಮೂರು ಬಿಲ್ವದಳಗಳನ್ನು ಸೇವಿಸುವುದು ಉತ್ತಮ ಅತಿಸಾರ ರೋಗದಲ್ಲಿ ಬಿಲ್ವದ ಉಪಯೋಗ ಬಹಳ ಅದೆ " ಬೇಲಕಾಮುರಬ್ಬ " ಇದು ಅತಿಸಾರ ರೋಗನಾಶಕವದೆ ಮುರಬ್ಬ ಸಿಗದಿರುವ ಗ್ರಾಮನಿವಾಸಿಗಳು ಬಿಲ್ವದ ಹಣ್ಣನ್ನು ಬೆಂಕಿಯಲ್ಲಿ ಚನ್ನಾಗಿ ಬೇಯಿಸಿ ಮೇಲಿನ ಕರಕು ತೆಗೆದು ಒಂದು ತಾಸು ತಣ್ಣೀರಿನಲ್ಲಿರಿಸಿ ಕಡೆಗೆ ತೆಗೆದುಕೊಂಡು ಒಂಡೆರಡು ಕಪ್ಪು ನೀರಿನಲ್ಲಿ ಕಲಕುಮಾಡಿ ಸೋಸಿಕೊಂಡು ಸಕ್ಕರೆ ಬೆರೆಸಿ ದಿನಕ್ಕೆ ಮೂರು ಸಾರೆ ಸೇವಿಸಿದರೆ ಅತಿಸಾರ ರೋಗವು ನಾಶವಾಗುವುದು. ಉತ್ತರ ಹಿಂದುಸ್ತಾನದಲ್ಲಿ ಮನೆಮನೆಗೆ ಬಿಲ್ವದ ವೃಕ್ಷಗಳನ್ನು ಬೆಳೆಸುವರು. ಅದರ ಹಣ್ಣುಗಳಿಂದ ಬೇಸಿಗೆಯಲ್ಲಿ ಸೀಕರಣೆಯನ್ನು ತಯಾರಿಸಿ ಸೇವಿಸುವರು. ಹಾಗೂ ಮಾವಿನ ಹಣ್ಣಿನಂತೆ ಅದರ ಹಣ್ಣುಗಳನ್ನು ಪ್ರೀತಿಯಿಂದ ತಿನ್ನುವರು.

ನಿತ್ಯ ಮಧುರಾನ್ನದಿಂದ ಸ್ಥೂಲ ಪ್ರಕೃತಿಯವರಿಗೆ ಮಧುಮೇಹರೋಗ ಒದಗುವದು ಸಹಜವಿದೆ. ಅಂಥವರು ಶಿವನಿಗಾಗಿ ಅರ್ಪಿಸಿದ ಬಿಲ್ವ ದಳಗಳನ್ನು ನಿತ್ಯ ಸೇವಿಸುತ್ತ ಹೋದರೆ ಈ ರೋಗಕ್ಕೆ ತುತ್ತಾಗಲಾರರು. ಬಹುಕಾಲ ಮಧುಮೇಹ ರೋಗದಿಂದ ಬಳಲುವವರು ಒಂಡೆರಡು ಕಪ್ಪು ಬಿಲ್ವದಳದ ರಸವನ್ನು ಬಿಡದೆ ಸೇವಿಸುತ್ತಾ ಹೋದರೆ ರೋಗಮುಕ್ತರಾಗುವರು. ಬಿಲ್ವದ ಬೀಜಗಳು ಶಕ್ತಿವರ್ಧಕ ಇವೆ ಮಧುಮೇಹದ ಉಪಾಧಿ ರೋಗಗಳು ಅವುಗಳ ಸೇವನೆಯಿಂದ ಉಪಶಮನ ಹೊಂದುತ್ತವೆ. ಬಿಲ್ವದ ಹಣ್ಣನ್ನು ಬಿಸಿ ನೀರಿನಲ್ಲಿ ಕಲಕಮಾಡಿ ಮಲಿನವಾದ ವಸ್ತ್ರಗಳನ್ನು ಅದ್ದಿ ತೊಳೆದರೆ ಸಾಬೂನದ ಖರ್ಚು ಕಡಿಮೆಯಾಗುವದು.

## ಪಂಡಿತಾರಾಧ್ಯರ ಜಯಂತಿಯು



( ಮಾಘ ಬಹುಳ ೧೪. ಶಿವರಾತ್ರಿ )

ದಕ್ಷಿಣ ಭಾರತದ ಎಲ್ಲ ಪುಣ್ಯ ಕ್ಷೇತ್ರಗಳಲ್ಲಿ'ಶ್ರೀಶೈಲ ಕ್ಷೇತ್ರಕ್ಕೆ ಒಂದು ವಿಶಿಷ್ಟಸ್ಥಾನವಿದೆ "ಶ್ರೀ ಶೈಲಶಿಖರಂ ದೃಷ್ಟ್ವಾ ಪುನರ್ಜನ್ಮನವಿದ್ಯತೇ" ಎಂಬ ಪ್ರಾಚೀನದ ಉಕ್ತಿಯು ಸತ್ಯವಾಗಿದೆ. ಅಲ್ಲಿ, ಪಾತಾಳ ಗಂಗೆಯ ಜೊತೆಗೆ. ಭಕ್ತಿಗಂಗೆ, ಜ್ಞಾಗಂಗೆ, ಇವುಗಳೂ ಸಹ ಹರಿಯುತ್ತಿರುವವು. ಭಗವಾನ್ ಶ್ರೀ ಜ. ರೇಣುಕಾಚಾರ್ಯ ಶ್ರೀ ಜ. ರೇವಣಸಿದ್ದೇಶ್ವರ, ಮೊದಲಾದ ಮಹಾಚಾರ್ಯರೂ, ದೇವರದಾಸಿಮಾರ್ಯ ಸಕಲೇಶ ಮಾದರಸ, ಶಿವಯೋಗಿಮಲ್ಲರಸ, ಮೊದಲಾದ ಶಿವಶರಣರೂ. ಹೇಮರಡ್ಡಿಮಲ್ಲಮ್ಮ, ಅಕ್ಕಮಹಾದೇವಿ ಮೊದಲಾದ ಶಿವಶರಣೆಯರೂ, ಈ ಪವಿತ್ರ ಕ್ಷೇತ್ರದಲ್ಲಿ ತಪವನ್ನಾಚರಿಸಿದ್ದಾರೆ. ಆದ ಕಾರಣ ಶ್ರೀ ಶೈಲಕ್ಕೂ ಶಿವಭಕ್ತಿಗೂ ಅವಿನಾಭಾವ ಸಂಬಂಧವಿದೆಯೆಂದು ಹೇಳಬಹುದು. ಈ ಕ್ಷೇತ್ರದ ಅಧಿಪತಿಯಾದ ಮಲ್ಲಿಕಾರ್ಜುನ ದೇವನ ಲಿಂಗಗರ್ಭದಿಂದ ಶ್ರೀ ಜಗದ್ಗುರು ಪಂಡಿತಾರಾಧ್ಯರು ತೇಜೋ

ಮಯ ಶರೀರಿಯಾಗಿ ವ್ಯಾಘ ಬಹುಳ ೧೪ ರಲ್ಲಿ ಪ್ರಾದುರ್ಭವಿಸಿದರು. ಹಾಗೂ ವೀರಶೈವ ಸಿದ್ಧಾಂತದ ಪಾಲನೆಗಾಗಿ ಅಲ್ಲಿಯೇ ಸೂರ್ಯ ಸಿಂಹಾಸನವನ್ನು ನೆಲೆಗೊಳಿಸಿದರು. ಅನೇಕ ಋಷಿಗಳೂ, ರಾಜರೂ, ಶರಣ, ಶರಣೆಯರೂ, ಈ ಮಹಾಪೀಠದ ಮಹಾಗುರು ಪರಂಪರೆಗೆ ಶಿಷ್ಯರಾಗಿ ವೀರ ಶೈವ ತತ್ವದ ಸದುಪದೇಶವನ್ನು ಪಡೆದು ಚಿರಸುಖಿಗಳಾಗಿ ಕೃತಕೃತ್ಯ ರಾದರು.

ಶ್ರೀ ವ್ಯಾಸಮಹರ್ಷಿಗಳಿಂದ ಪ್ರಣೀತವಾದ ಸ್ಕಂದಪುರಾಣಾಂತರ್ಗತ ಶಂಕರ ಸಂಹಿತೆಯಿಂದಲೂ, ಈ ಪೀಠದ ಅಸ್ತಿತ್ವವನ್ನು ಮನಗಾಣಬಹುದು. ಈ ಪೀಠಾಧಿಪತಿಗಳಾದ ಜಗದ್ಗುರು ಸದಾನಂದ ಶಿವಯೋಗಿಗಳ ವಿಷ ಯವು, ಹಾಗೂ ಅವರಿಂದಾದ ಶಿಷ್ಯೋದ್ಧಾರ ಕಾರ್ಯವು ಈ ಶಂಕರ ಸಂಹಿತೆಯಲ್ಲಿ ವರ್ಣಿತವಾಗಿದೆ ಅದು ಏನೆಂದರೆ. —

" ತಸ್ಮಿಂಚ್ಛ್ರೀ ಪರ್ವತೇ ಪುಣ್ಯೇ ಸಂಸಾರಾಮಯಭೇಷಜೇ ।
ಆಸ್ತೇ ಲಿಂಗಾಂಗ ಸಂಬಂಧೀ ಸದಾನಂದಾಹ್ವಯೋ ಮುನಿಃ ॥೧॥

ಸರ್ವೋಪನಿಷದರ್ಥಜ್ಞಃಶಿವಧ್ಯಾನ ಪರಾಯಣಃ ।
ಭಸ್ಮಾವಲಿಪ್ತ ಸರ್ವಾಂಗೋ ರುದ್ರಾಧ್ಯಾಯ ಜಪಾಶ್ರಯಃ ॥೨॥

ರುದ್ರಾಕ್ಷ ಮಾಲಾಭರಣೋ ಧೃತ ಪಾಶುಪತವ್ರತಃ ।
ಅತಿವರ್ಣಾಶ್ರಮೀಯೋಗೀ ಜೀವನ್ಮುಕ್ತೋ ಜಗದ್ಗುರು ಃ ॥೩॥

ತಂ ಸದಾನಂದ ನಾಮಾನಂ ಶಂಕರ ಧ್ಯಾನ್ಯಲಾಲಸಂ ।
ನಿರಸ್ತಕುಹಕಂವಿಪ್ರಸಹಪುತ್ರೇಣ ಪೂಜಯ ॥೪॥

ತಸ್ಯ ಪ್ರಸಾದಾತ್ತೇಪುತ್ರೋ ಗಚ್ಛೇನ್ನೀರೋಗತಾಂಲಾಂಧ್ರುವಂ ।
ತಸ್ಮಾದುತ್ತಿಷ್ಠ ಗಚ್ಛತ್ವಂ ಶ್ರೀ ಪರ್ವತಮತಂದ್ರಿತಃ ॥೫॥

ಒಂದು ನಗರದಲ್ಲಿ ಶ್ವೇತನೆಂಬ ವೀರಶೈವ ಬ್ರಾಹ್ಮಣನು ವಾಸವಾಗಿ ದ್ದನು. ಅವನಿಗೆ ಮಹಾದುರಾಚಾರಿಯೂ ನೀಚವೃತ್ತಿಯುಳ್ಳವನೂ ಆದ

ಪಿಂಗಳನೆಂಬ ಮಗನಿದ್ದನು. ತನ್ನ ದುಷ್ಕೃತ್ಯಗಳ ಫಲವಾಗಿ ಆ ಪಿಂಗಳನಿಗೆ ಗಲತ್ಕುಷ್ಠರೋಗವು ಪ್ರಾಪ್ತವಾಯಿತು. ಇದರಿಂದ ಶ್ವೇತನು ಬಹಳ ಚಿಂತಾ ಕ್ರಾಂತನಾಗಿ ದುಃಖಿಸುತ್ತಿದ್ದನು. ಆಗ ಹರಪ್ರಿಯನೆಂಬ ಮಹನೀಯನು ಶ್ವೇತನೆಡೆಗೆ ಬಂದು ಅಯ್ಯಾ ನೀನು ಅಳಲದಿರು ಶ್ರೀಶೈಲ ಮಹಾಕ್ಷೇತ್ರದಲ್ಲಿ ಲಿಂಗಾಂಗಿಯೂ, ಅತಿ ವರ್ಣಾಶ್ರಮಿಯೂ, ಜೀವನ್ಮುಕ್ತನೂ, ಶಿವಧ್ಯಾನ ಪರನೂ, ಭಸ್ಮರುದ್ರಾಕ್ಷಧಾರಕನೂ, ಆದ ಜಗದ್ಗುರು ಸದಾನಂದನೆಂಬ ಶಿವಯೋಗೀಶ್ವರನಿದ್ದಾನೆ. ಅವನ ಸನ್ನಿಧಿಗೆ ನಿನ್ನ ಮಗನನ್ನು ಕರೆದುಕೊಂಡು ಹೋಗಿ ಶರಣಾಗತನಾಗು. ಅಂದರೆ ನಿನ್ನ ಮಗನು ರೋಗಮುಕ್ತನಾಗುವನು. ಈಗಲೇ ನೀನು ಶ್ರೀಶೈಲಕ್ಕೆ ಹೊರಡು ಎಂದು ಹೇಳಿದನು, ಕೂಡಲೇ ಶ್ವೇತನು ಶ್ರೀಶೈಲಕ್ಷೇತ್ರಕ್ಕೆ ಮಗನೊಂದಿಗೆ ಪ್ರಯಾಣ ಮಾಡಿ ಜಗದ್ಗುರುಗಳವರ ದರ್ಶನಕ್ಕೆ ಪಾತ್ರನಾದನು. ದಯಾಮಯರಾದ ಶ್ರೀ ಸದಾನಂದರವರು ಪಿಂಗಳನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿ ಅವನನ್ನು ತಮ್ಮ ಕೃಪಾದೃಷ್ಟಿಯಿಂದ ರೋಗಮುಕ್ತನನ್ನಾಗಿ ಮಾಡಿದರು.

ಇದಲ್ಲದೇ ಪುರಾತನ ಕಾಲದಲ್ಲಿ ಈ ಸೂರ್ಯಪೀಠಕ್ಕೆ ಅಧಿಪತಿಗಳಾಗಿದ್ದ ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯ ಮಹಾಸ್ವಾಮಿಗಳವರ ಸಂಕ್ಷಿಪ್ತ ಚರಿತ್ರವು ನನ್ನೆ ಚೋಡನೆಂಬ ಮಹಾಕವಿಯಿಂದ ವಿರಚಿತವಾಗಿರುವ ಆಂಧ್ರ ಕುಮಾರ ಸಂಭವವೆಂಬ ಕಾವ್ಯದಿಂದ ತಿಳಿದು ಬರುವದು. ಆಂಧ್ರ ಕುಮಾರ ಸಂಭವ ಗ್ರಂಥಕಾರನಾದ ನನ್ನೆಚೋಡದೇವ ಮಹಾರಾಜನು ಕ್ರಿ. ಶ. ೧೧೪೦ ರಲ್ಲಿ ಕ್ರಿಷ್ಣಾನದಿ ತೀರದಲ್ಲಿರುವ ವರಯೂರ ಎಂಬ ಪಟ್ಟಣವನ್ನು ಆಳುತ್ತಿದ್ದನು. ಅವನು ರಾಜನಾಗಿದ್ದರೂ ಕವಿಕುಲಲಲಾಮನೆನಿಸಿದ್ದನು. ಕರ್ನಾಟಕ ದೇಶದಲ್ಲಿ ವಿದ್ವತ್ ಕವಿಯಾದ ಷಡಕ್ಷರದೇವನ ಕವಿತೆಗೆ ಪ್ರಾಶಸ್ತ್ಯವಿರುವಂತೆ ಆಂಧ್ರದಲ್ಲಿ ನನ್ನೆಚೋಡದೇವನ ಕವಿತೆಗೆ ಪ್ರಾಶಸ್ತ್ಯ ವಿರುತ್ತದೆ. ಇಂತಹ ಮಹಾಕವಿಯು ಕುಮಾರಸಂಭವ ಮಹಾ ಕಾವ್ಯವನ್ನು ಬರೆದು ಅದನ್ನು ಪೂರ್ವಪರಂಪರೆಯಿಂದ ತನ್ನ ವಂಶ ಗುರುಗಳಾಗಿರುವ ಶ್ರೀ ಜಗದ್ಗುರು ಜಂಗಮ ಮಲ್ಲಿಕಾರ್ಜುನ ಶಿವಯೋಗೀಶ್ವರರ ಚರಣಾರವಿಂದಗಳಲ್ಲಿ ಸಮರ್ಪಿಸಿದ್ದಾನೆ ಇದು ಮಹಾಕವಿಯ ಗುರು ಭಕ್ತಿಗೆ ನೈಜನಿದರ್ಶನವಲ್ಲವೇ!

ಬಸವಣ್ಣನವರಿಗಿಂತಲೂ ೧೨ ವರುಷ ಪೂರ್ವದಲ್ಲಿಯೇ ವೀರಶೈವ ಮತಪ್ರಸಾರ ಕಾರ್ಯವನ್ನು ಕೈಕೊಂಡು ವಚನಗಳ ರಚನೆಯನ್ನು ಮಾಡಿದ ದೇವರದಾಸಿಮಾರ್ಯನು ಶ್ರೀಶೈಲಜಗದ್ಗುರು ಪರಂಪರೆಯಿಂದಲೇ ಅನುಗ್ರಹವನ್ನು ಪಡೆದು ಧನ್ಯನಾದನು.

ಸದ್ಯಃ ಶ್ರೀ ಶೈಲಕ್ಷೇತ್ರದ ಮತ್ತು ಶ್ರೀ ಶೈಲಪೀಠದ ಪುನರುದ್ಧಾರವು ಸೂರ್ಯಸಿಂಹಾಸನಾಧೀಶ್ವರರಾದ ಶ್ರೀ ಜಗದ್ಗುರು ವಾಗೀಶಪಂಡಿತಾರಾಧ್ಯ ಮಹಾಸ್ವಾಮಿಗಳವರ ಸನ್ನಿಧಾನದಿಂದ ನಡೆದಿವೆ ಶ್ರೀ ಮಹಾಸ್ವಾಮಿಗಳವರು ಶ್ರೀ ಶೈಲವೀರಶೈವಮಹಾಸಭೆಯ ಸಂಸ್ಥಾಪಕರೂ ಅ. ಭಾ. ವೀರಶೈವ ಮಹಾಸಭೆಯ ಅಧ್ಯಕ್ಷರೂ. ವಿದ್ವಾಂಸರೂ ಆಗಿರುವರು ಹಾಗೂ, ಗುಂತಕಲ್ ಮತ್ತು ಸಂತೆಬೆನ್ನೂರಲ್ಲಿ ವಿದ್ಯಾ ಸಂಸ್ಥೆಗಳನ್ನು ಕಟ್ಟಿ ಶೈಕ್ಷಣಿಕ ಕ್ಷೇತ್ರದಲ್ಲಿಯೂ ತುಂಬ ಕೆಲಸಮಾಡಿರುವರು ಇನ್ನೂ ಹಲವಾರು ಸಂಸ್ಥೆಗಳಿಗೆ ಉದಾರವಾಗಿ ದಾನಮಾಡಿದ್ದಾರೆ. ಇದಕ್ಕೆಲ್ಲ ಜಗದ್ಗುರು ಪಂಡಿತಾರಾಧ್ಯರ ಕೃಪೆಯೇ ಮೂಲಕಾರಣವಾಗಿದೆ. ಇಂಥ ಗುರುಸಾರ್ವಭೌಮರ ಜಯಂತಿಯನ್ನು ಆಚರಿಸುವದು ವೀರಶೈವರ ಆದ್ಯಕರ್ತವ್ಯವಾಗಿದೆ.

ಭರತಖಂಡದ ಸಕಲ ಪವಿತ್ರ ಕ್ಷೇತ್ರಗಳಲ್ಲಿ ವಾರಾಣಸಿಯು ಮಸ್ತಕಮಣಿಯಂತಿದೆ. ಈ ಕ್ಷೇತ್ರದ ಅಧಿದೇವನಾದ ಶ್ರೀ ವಿಶ್ವನಾಥನ ಲಿಂಗಗರ್ಭದಿಂದ ಶ್ರೀ ಜಗದ್ಗುರು ವಿಶ್ವಾರಾಧ್ಯರವರು ಮಾಘ ಬಹುಳ ೧೪ ರಲ್ಲಿ ವೀರಶೈವ ಧರ್ಮದ ರಕ್ಷಣೆಗಾಗಿ ವಾರಾಣಾಸಿಯಲ್ಲಿಯೇ ಜ್ಞಾನಸಿಂಹಾಸನವನ್ನು ಸ್ಥಾಪಿಸಿದರು. ಜ್ಞಾನಮೂರ್ತಿಯಾದ ಷಣ್ಮುಖನು ಈ ಪೀಠದ ಗೋತ್ರ ಪುರುಷನಾಗಿದ್ದಾನೆ. ಈ ಸ್ಥಾನವು ಅತ್ಯಂತ ಪವಿತ್ರವಾದುದು. ಪೌರಾಣಿಕ ಕಾಲದಲ್ಲಿ ಇದು ಆನಂದಕಾನನವೆಂದು ಕರೆಯಲ್ಪಡುತ್ತಿದ್ದಿತು ಕಾಶಿ–ವೈಹರ–ಮೈಸೂರು—ರೀವಾ—ಮೊದಲಾದ ಮಹಾರಾಜರು ಈ ಪೀಠಕ್ಕೆ ಹೆಚ್ಚಿನ ಸೇವೆಯನ್ನು ಸಲ್ಲಿಸಿರುತ್ತಾರೆ ಇವಲ್ಲದೇ ಹುಮಾಯೂನ ಅಕಬರ– ಜಹಾಂಗೀರ, ಷಹಾಜಹಾನ, ಈ ಮೊಗಲ ಚಕ್ರವರ್ತಿಗಳೂ ಸಹ ದಾನಶಾಸನಗಳನ್ನು ಕೊಟ್ಟಿರುವರು. ಇವುಗಳಲ್ಲಿ ಕಾಶೀನರೇಶನಾದ ಜಯನಂದದೇವನು ಕ್ರಿ. ಶ —೫೭೪ ರಲ್ಲಿ ಕೊಟ್ಟಿರುವ ದಾನ ಶಾಸನವು ಬಹಳ ಮೊದಲಿನದಾಗಿದೆ.

## ಶ್ರೀ ಜಗದ್ಗುರು ವಿಶ್ವಾರಾಧ್ಯರ ಜಯಂತಿ



ಮಾಘ ಬಹುಳ ೧೪

ಪ್ರಾಚೀನ ಕಾಲದಿಂದಲೂ ವಾರಾಣಸಿಯು ವಿದ್ಯಾಕೇಂದ್ರವಾಗಿ ವಿಖ್ಯಾತವಾಗಿದೆ. ಕಾರಣ ಭಾರತದ ಎಲ್ಲ ಭಾಗಗಳಿಂದ ಬಂದಿರುವ ವಿದ್ಯಾರ್ಥಿಗಳ ಸಂಖ್ಯೆ ಇಲ್ಲಿ ಯಾವಾಗಲೂ ವಿಪುಲವಾಗಿರುತ್ತದೆ. ದಕ್ಷಿಣ ದೇಶದ ವೀರಶೈವರ ವಿದ್ಯಾರ್ಜನೆಗಾಗಿ ಶ್ರೀ ಪೀಠದಲ್ಲಿ ಉಚಿತ ಪ್ರಸಾದನಿಲಯವು ಸದಾ ನಡೆಯುತ್ತ ಬಂದಿರುವುದು. ಈಗಿನ ಮತ್ತು ಹಿಂದಿನ ಸುಪ್ರಸಿದ್ಧರಾದ ಗುರು, ವಿರಕ್ತ ಸ್ವಾಮಿಗಳವರೂ, ಪಂಡಿತರೂ ಇಲ್ಲಿಯೇ ಇದ್ದು ವಿದ್ಯಾಸಂಪನ್ನರಾಗಿದ್ದಾರೆ. ಈ ಪೀಠಕ್ಕೆ ಜಂಗಮವಾಡಿ ಮಠ ಎಂಬ ನಾಮಾಂತರವೂ ಉಂಟು. ಈ ಪೀಠದ ಜಗದ್ಗುರುಗಳವರು ಪರಮ ಯೋಗಿಗಳೂ ವಿದ್ಯಾಪಕ್ಷಪಾತಿಗಳೂ ಆಗಿ ಧರ್ಮದ ವಿಜಯ ಧ್ವಜವನ್ನು ಹಾರಿಸುತ್ತಲೇ ಬಂದಿರುತ್ತಾರೆ. ಕೆಲವು ಕಾಲಗಳ ಹಿಂದೆ ಪಂಚಮ ಜಾರ್ಜನ ಪಟ್ಟಾಭಿಷೇಕವು ಲಂಡನ್ ನಗರದಲ್ಲಿ ಪರಮ ವೈಭವದಿಂದ ನಡೆಯಿತಷ್ಟೇ?

ಆ ಸಮಯದಲ್ಲಿ ಭಾರತವು ಯೋಗಿಗಳ ದೇಶವಾದುದರಿಂದ ಓರ್ವ ಯೋಗೀಶ್ವರರ ಮಹೋತ್ಸವವನ್ನು ನೆರವೇರಿಸಲು ನಿರ್ಧರಿಸಲಾಗಿದ್ದಿತು. ಆಗಿನ ಬ್ರಿಟಿಶ ಸರಕಾರದವರು ಎಲ್ಲ ಪ್ರಮುಖರ ಅಭಿಪ್ರಾಯದ ಮೇರೆಗೆ ಆಗಿನ ಕಾಲದಲ್ಲಿ ಜ್ಞಾನ ಸಿಂಹಾಸನಾಧೀಶ್ವರರೂ, ಪರಮಯೋಗೀಶ್ವರರೂ ಆದ ಶ್ರೀ ಜಗದ್ಗುರು ರಾಜೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರನ್ನು ಮಹಾ ವೈಭವದಿಂದ ತಿರ್ಯಗಾಂದೋಲಿಕೆಯಲ್ಲಿ ಮೆರೆಸಿದರು. ಈ ಪೀಠದ ಆಧೀನದಲ್ಲಿ, ೧೨ ಗ್ರಾಮಗಳಿದ್ದವು. ಇದಲ್ಲದೇ ಗೌದೌಲಿಯಾದಿಂದ ಹಿಡಿದು ದಕ್ಷಿಣಕ್ಕೆ ಸುಮಾರು ಒಂದು ಮೈಲಿನವರೆಗೆ ಮತ್ತು ಪೂರ್ವ ದಿಕ್ಕಿನಲ್ಲಿ ಅಗಸ್ತ್ಯಕುಂಡದಿಂದ ಹಿಡಿದು ಪಶ್ಚಿಮದಲ್ಲಿ ರಾಮಪುರದವರೆಗೆ ಇರುವ ಎಲ್ಲ ಸ್ಥಾನವು ಜಂಗವಾಡೀ ಮೊಹಲ್ಲಾ ಎಂದು ಈಗಲೂ ಸಹ ಕರೆಯಲ್ಪಡುವುದು. ಇದರಲ್ಲಿಯ ಬಹು ಭಾಗವು ಈ ಪೀಠದುದೇ ಆಗಿದೆ. ಮತ್ತು ಮಾನಸ ಸರೋವರ, ಧನಕಾಮೇಶ್ವರ ಹಾಗೂ ಮನಃಕಾಮೇಶ್ವರ ಅಲ್ಲದೇ ಸಾಕ್ಷಿ ವಿನಾಯಕನ ಮುಂಭಾಗದ ಸ್ಥಳ ಇವೆಲ್ಲವುಗಳು ಮಠದ ಆಧೀನದಲ್ಲಿಯೇ ಇವೆ, ಮಠವು ಶಿವಲಿಂಗಗಳಿಂದ ತುಂಬಿಹೋಗಿದೆ. ಹರಿಶ್ಚಂದ್ರನ ಮಗನಾದ ರೋಹಿತಾಶ್ವನನ್ನು ಯಾವ ಸ್ಥಳದಲ್ಲಿ ಸರ್ಪವು ಕಚ್ಚಿತ್ತೋ ಆ ಉಪವನವೂ ಸಹ ಆ ಮಠದ ಆವರಣದಲ್ಲಿಯೇ ಇರುವದು. ಒಟ್ಟಾರೆ ಕಾಶಿಯಲ್ಲಿ ಈ ಮಹಾಮಠವು ಎಲ್ಲಕ್ಕಿಂತಲೂ ಪ್ರಾಚೀನವೂ ಐತಿಹಾಸಿಕವೂ ಮತ್ತು ದರ್ಶನೀಯವೂ ಆಗಿರುವದಲ್ಲದೇ ಹಿಂದೂ ಮತದ ವಿರೋಧಿಯಾದ ಔರಂಗಜೇಬನು :–ಹಿಂದೂ ಸಂಸ್ಕೃತಿಯ ಕೇಂದ್ರವಾದ ಈ ಪೀಠವನ್ನು ಹಾಳುಮಾಡಬೇಕೆಂದು ದಂಡೆತ್ತಿ ಬಂದಾಗ ಆ ಪೀಠದ ಪ್ರಭಾವದಿಂದ ಔರಂಗಜೇಬನಿಗೂ ಆತನ ದಂಡಿಗೂ ನಾನಾಬಗೆಯ ತೊಂದರೆಗಳಾಗಲು ಔರಂಗಜೇಬನು ಗರ್ವದಿಂದ ದೂರನಾಗಿ ಉರ್ದು ಭಾಷೆಯಲ್ಲಿ ಒಂದು ಶಾಸನವನ್ನು ಬರೆದು ಸಹಿ ಮಾಡಿ ಪೀಠಕ್ಕೆ ಸಲ್ಲಿಸಿದ್ದಾನೆ. ಆ ಶಾಸನದಲ್ಲಿ ಔರಂಗಜೇಬನು: "ನಾನು ಜಂಗಮವಾಡೀ ಮಠಕ್ಕೆ ಹೋದ ಕೂಡಲೇ ಆ ಮಠದ ಮೂರ್ತಿಯು ನನ್ನ ಕಣ್ಣೆದುರಿಗೆ ಕಾಣಿಸಿಕೊಂಡಿತು. ಆ ಮೂರ್ತಿಯು ಕಪ್ಪಾಗಿಯೂ ಪ್ರಲಯಾಗ್ನಿಯಂತೆ ಕೆಂಪು ಕಣ್ಣು ಗಳುಳ್ಳದಾಗಿಯೂ ಕುರಿಯ ಕೂದಲುಗಳಂತೆ ಮಸ್ತಕದಲ್ಲಿ ಉಂಗುರಗೂದಲು

ಗಳುಳ್ಳದಾಗಿಯೂ, ಆಕಾರದಲ್ಲಿ ಚಿಕ್ಕದಾಗಿದ್ದರೂ ಭೂಮಿಗೂ ಆಕಾಶಕ್ಕೂ ಏಕಾಕಾರವಾಗಿ ನಿಂತಿರುವುದನ್ನು ಕಂಡು ಭಯಗೊಂಡು ಶರಣಾಗತನಾಗಿ ಭಕ್ತಿಯಿಂದ ಇಂತಿಷ್ಟು ದಾನ ಮಾಡಿರುವೆನು" ಇತ್ಯಾದಿ ಬರೆದಿರುವನು ಇಂತು ಮುಂತಾದ ಅನೇಕ ಲೀಲೆಗಳು ಶ್ರೀ ಜಗದ್ಗುರು ವಿಶ್ವಾರಾಧ್ಯ ಭಗವತ್ಪಾದರ ತಪಃ ಪ್ರಭಾವದಿಂದ ಈ ವರೆಗೂ ನಡೆಯುತ್ತಲೇ ಇವೆ.

ಮಾಘ ಬ॥ ೧೪ ಮತ್ತು ೧೫ ರಂದು ಶ್ರೀ ವಿಶ್ವಾರಾಧ್ಯ ಭಗವತ್ಪಾದ ಪೀಠದಲ್ಲಿ ದೊಡ್ಡ ಜಾತ್ರೆಯು ನೆರವೇರುತ್ತದೆ. ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮೊದಲಾದ ದೇಶ ವಾಸಿಗಳು ಶ್ರೀ ಗುರು ಪೀಠದ ಸಂದರ್ಶನಾ ಲಾಭಿಷಿಗಳಾಗಿ ಆಗಮಿಸುವರು. ಶಿವರಾತ್ರಿಯ ದಿವಸ ಶ್ರೀ ಜಗದ್ಗುರು ವಿಶ್ವಾರಾಧ್ಯ ಮೂರ್ತಿಯ ಉತ್ಸವವು ಸಕಲ ಬಿರುದಾವಳಿಗಳೊಡನೆ ವೈಭವ ಪೂರ್ಣವಾಗಿ ಜರುಗುವುದು. ಸಾಯಂಕಾಲ ಮಹಾರುದ್ರಾಭಿಷೇಕ, ಭೂ ರುದ್ರಗಣಾರಾಧನೆ ಜರಗುವದಲ್ಲದೇ ಸಮಸ್ತ ಯಾತ್ರಿಕರಿಗೂ ಶ್ರೀ ಮಠದಿಂದ ಅನ್ನಸಂತರ್ಪಣೆ ಜರಗುವದು. ಸಾಯಂಕಾಲ ಕೀರ್ತನೆ, ಭಜನೆ, ವಿದ್ವತ್ಸಭೆ ಜರುಗುವುದು. ಈ ಪೀಠದಲ್ಲಿ ಸದ್ಯಃ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ವಿರಾಜಮಾನರಾಗಿದ್ದಾರೆ. ಈ ಪೀಠದ ಸಾವಿರಾರು ಶಾಖಾ ಮಠಗಳು ಆಂಧ್ರ, ಮಹಾರಾಷ್ಟ್ರ, ಕರ್ನಾಟಕ ದೇಶಗಳಲ್ಲಿಯೂ. ಪ್ರಯಾಗ, ನೇಪಾಲ, ಮೊದಲಾದ ದೇಶಗಳಲ್ಲಿಯೂ. ಸಂಪದ್ಭರಿತವಾಗಿ ಕಂಗೊಳಿಸುತ್ತವೆ. ಇಂತಹ ಮಹಾಮಹಿರಾದ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರು ಪುಂಗವರ ಜಯಂತಿ ಮಹೋತ್ಸವವನ್ನು ಮಾಘ ವದ್ಯ ೧೪ ರಲ್ಲಿ ಆಚರಿಸುವುದು ಮಾನವನ ಆದ್ಯ ಕರ್ತವ್ಯವಾಗಿದೆ.

## ಫಾಲ್ಗುಣ ಮಾಸ

ಫಾಲ್ಗುಣ ಮಾಸವು ಶಿಶಿರ ಋತುವಿನಲ್ಲಿ ಬರುತ್ತದೆ. ಆಹಾರ ವಿಹಾರವು ಸಾಮಾನ್ಯವಾಗಿ ಮಾಘ ಮಾಸದಂತೆಯೇ ಇರುತ್ತದೆ. ಈ ತಿಂಗಳಲ್ಲಿ ಶು॥ ೧ ರಾಮಕೃಷ್ಣ ಪರಮಹಂಸರ ಪುಣ್ಯ ದಿನಾಚರಣೆ ಶು॥ ೮ ಸೊಗದಲದ ಶ್ರೀ ಸೋಮೇಶ್ವರ ಜಾತ್ರೆ. ಶು॥ ೧೩ ವೀರಶೈವ ಮತ ಸ್ಥಾಪಕರಾದ

ಶ್ರೀ ಜಗದ್ಗುರು ರೇಣುಕಾಚಾರ್ಯರ ಜಯಂತಿ. ಶು। ೧೫ ಹೋಳಿಹುಣ್ಣಿವೆ-ಯಮನೂರು ಜಾತ್ರೆ. ಬ। ೫ ರಂಗಪಂಚಮಿ. ಕಲಬುರ್ಗಿ ಶ್ರೀ ಶರಣಬಸವೇಶ್ವರ ರಥೋತ್ಸವ ಫಾಲ್ಗುಣ ಬಹುಳ ಯುಗಾದಿ ಅಮಾವಾಸ್ಯೆ. ಭಾರತಿ ಶಕೆ ಸಮಾಪ್ತಿ. ಶಿರಸಂಗಿ ಕಾಳಿಕಾದೇವಿ ಜಾತ್ರೆ.

## ಶ್ರೀ ಜಗದ್ಗುರು ರೇವಣಸಿದ್ಧಯೋಗೀಶ್ವರರ ಜಯಂತಿ



(ಫಾಲ್ಗುಣ ಶುದ್ಧ ೧೩)

" ಪ್ರವಕ್ಷ್ಯಾಮಿ ಭವಿತ್ರೂಂಶ್ಚ ಶೃಣು ತಜ್ಜನನಕ್ರಮಂ।
ಶ್ರೀಮದ್ರೇವಣಸಿದ್ಧಸ್ಯಕೊಲ್ಲಿಪಾಕಿ ಪುರೋತ್ತಮೇ ॥
ಸೋಮೇಶ ಲಿಂಗಾಜ್ಜನನ ಮಾವಾಸಃ ಕದಲೀಪುರೇ॥

ಈ ಪ್ರಕಾರವಾಗಿ ಸ್ವಯಂಭುವಾಗಮದಲ್ಲಿ ಉಕ್ತವಾದಂತೆ ಕಲಿಯುಗದಲ್ಲಿ ಶ್ರೀ ಜಗದ್ಗುರು ರೇವಣಸಿದ್ಧ ಭಗವತ್ಪಾದರು ಕುಲ್ಯಪಾಕ ಕ್ಷೇತ್ರದಲ್ಲಿ

ಸೋಮನಾಥ ಲಿಂಗದಿಂದ ಜ್ಯೋತಿರ್ಮಯ ಶರೀರಿಗಳಾಗಿ ಫಾಲ್ಗುಣ ಶುದ್ಧ ತ್ರಯೋದಶಿಯ ದಿವಸ ಅವತರಿಸಿದ್ದರಿಂದ ಶ್ರೀ ಕೊಲ್ಲಿಪಾಕಿ ಸೋಮನಾಥ ಕ್ಷೇತ್ರದಲ್ಲಿಯೂ, ಮತ್ತು ರಂಭಾಪುರಿ ಕ್ಷೇತ್ರದಲ್ಲಿಯೂ ಭಾರತದ ಬಹುಭಾಗ ದಲ್ಲಿಯೂ ಈ ಮಿತಿಗೆ ಪ್ರತಿ ವರ್ಷ ಆ ಗುರುಪುಂಗವರ ಜಯಂತಿ ಮಹೋತ್ಸ ವವು ಅರ್ಥಾತ ಜಾತ್ರೆಯು-ಬಹು ವೈಭವಪೂರ್ಣವಾಗಿ ಜರುಗುವುದು.

ಶ್ರೀ ರೇವಣಸಿದ್ಧ ಭಗವತ್ಪಾದರು, ಸೋಮನಾಥ ಲಿಂಗೋದ್ಭವರಾಗಿ ಮಲಯಾಚಲದಲ್ಲಿ ಪರಿಶೋಭಿಸುವ ರಂಭಾಪುರಿ ಕ್ಷೇತ್ರದ ( ಚಿಕ್ಕಮಗಳೂರು ಜಿಲ್ಲೆಯ)ಲ್ಲಿ ವೀರಶೈವ ಧರ್ಮರಕ್ಷಣೆಗಾಗಿ ವೀರಸಿಂಹಾಸನವನ್ನು ನೆಲೆಗೊಳಿಸಿ ದರು. ವೀರಭದ್ರದೇವರು ಈ ಪೀಠದ ಗೋತ್ರ ಪುರುಷನಾಗಿರುತ್ತಾನೆ. ಈ ಪುಣ್ಯಸ್ಥಳವು ಭದ್ರಾನದಿಯ ತೀರದಲ್ಲಿ ಪ್ರಕೃತಿಸೌಂದರ್ಯದ ಬೆಡಗಿನಿಂದ ಕಂಗೊಳಿಸುತ್ತದೆ. ಈ ಮಹಾಚಾರ್ಯರು ಶಿವಾವತಾರಿಗಳಾಗಿರುವರಲ್ಲದೇ ಸಕಲಶಾಸ್ತ್ರ ಕೋವಿದರೂ, ಮಹಾಯೋಗಸಿದ್ಧರೂ, ಸಿದ್ಧಕುಲ ಚಕ್ರವರ್ತಿ ಗಳೂ, ಸರ್ವಜ್ಞರೂ ಆಗಿರುವರು. ಇವರ ಪವಿತ್ರ ನಾಮವು ಶಿವಾಗಮಗಳ ಲ್ಲಿಯೂ, ಉಪನಿಷತ್ತುಗಳಲ್ಲಿಯೂ ವಿಶೇಷವಾಗಿ ವರ್ಣಿಸಲ್ಪಟ್ಟಿದೆ. ಮಹಾ ನಾರಾಯಣೋಪನಿಷತ್ತಿಗೆ ಭಾಷ್ಯವನ್ನು ಬರೆದಿರುವ ವೃಷಭ ಪಂಡಿತಾರಾಧ್ಯ ರೆಂಬ ಪ್ರಾಚೀನ ಪಂಡಿತರು ೧೧ ನೆಯ ಅನುವಾಕದಲ್ಲಿರುವ "ಸಹಸ್ರಶೀರ್ಷಂ ದೇವಂ ವಿಶ್ವಾಕ್ಷಂ ವಿಶ್ವಶಂಭುವಂ" ಇತ್ಯಾದಿ ಮಂತ್ರಗಳಿಗೆ ಭಾಷ್ಯವನ್ನು ಬರೆಯುವ ಸಂದರ್ಭದಲ್ಲಿ ಶ್ರೀ ಜಗದ್ಗುರು ರೇವಣಸಿದ್ಧಾದಿ ಪಂಚಾಚಾರ್ಯರ ಭಾಷ್ಯಾಭಿಪ್ರಾಯವನ್ನು ವ್ಯಕ್ತಪಡಿಸಿರುವರು. ಶ್ರೀ ಜ। ರೇವಣಸಿದ್ಧರು ಶ್ರೀ ಶಂಕರಾಚಾರ್ಯರಂಥ ಸಿದ್ಧಯೋಗಿಗಳಿಗೂ, ರಾಜಾಧಿರಾಜರಿಗೂ ಶಿವಸಿದ್ಧಾಂತವನ್ನು ಉಪದೇಶ ಮಾಡಿರುವರು. ತಮ್ಮ ಯೋಗಬಲದಿಂದ ಆಕಾಶಮಾರ್ಗವಾಗಿ ; ಭಾರತದ ಮೂಲೆಮೂಲೆಗಳಲ್ಲಿ ಸಂಚರಿಸುವಾಗ್ಗೆ ಪಾದವಿನ್ಯಾಸ ಮಾಡಿದ ಸ್ಥಳವು ತೀರ್ಥಕ್ಷೇತ್ರವಾಗಿಯೂ, ವಾಸಮಾಡಿದ ಭೂಮಿಯು ಮಹಾಮಂದಿರವಾಗಿಯೂ ಈಗಲೂ ಪರಿಶೋಭಿಸುತ್ತಿರುವುದು. ಈ ಗುರುಪುಂಗವರ ಅಂಥ ಅನೇಕ ತೀರ್ಥಕ್ಷೇತ್ರಗಳಲ್ಲಿ ಕೆಲವನ್ನು ಮಾತ್ರ ಈ ಕೆಳಗೆ ವಾಚಕರ ಅವಗಾಹನೆಗಾಗಿ ಉದಾಹರಿಸಿದ್ದೇವೆ.

(೧) ಪುರಾಣೇತಿಹಾಸ ಪ್ರಸಿದ್ಧವಾದ ಕೊಲ್ಲಿಪಾಕಿ ಕ್ಷೇತ್ರವು ಶ್ರೀ ರೇವಣಸಿದ್ಧರು ಸೋಮನಾಥಲಿಂಗದಿಂದ ಉದ್ಭವಿಸಿದ ಮಹತ್ವದ ಸ್ಥಾನವಾಗಿರುತ್ತದೆ. ಈ ಕ್ಷೇತ್ರವು ನಿಜಾಂಸ್ಟೇಟ್ ನೆಲಗೊಂಡ ಜಿಲ್ಲಾ ಭುವನಗಿರಿ ತಾಲೂಕಿಗೆ ಸೇರಿದ್ದಾಗಿದೆ. ಹ್ಯಾಗೂ ಹೈದರಾಬಾದಿಗೆ ೪೪ ಮೈಲು ದೂರದಲ್ಲಿದ್ದು ಆಲೇರ್ ಸ್ಟೇಶನ್ನಿಗೆ ೪ ಮೈಲು ದೂರದಲ್ಲಿದೆ. ಈ ಕ್ಷೇತ್ರದಲ್ಲಿ ಅನೇಕ ಶಿವಾಲಯಗಳೂ,೧೪ ಮಠಗಳೂ ಇರುತ್ತವೆ. ಇಲ್ಲಿ ಜಗದ್ಗುರು ಪಂಚಾಚಾರ್ಯರು ತಪೋನುಷ್ಠಾನ ಮಾಡಿದ್ದರಿಂದ ಪಂಚಾಚಾರ್ಯರ ಗುಡ್ಡಗಳೆಂದು ಪ್ರತೀತಿ ಇದೆ. ಈ ಕ್ಷೇತ್ರದಲ್ಲಿ ಶ್ರೀ। ಜ। ರೇವಣಸಿದ್ಧರು ಅವತರಿಸಿದ ಸೋಮನಾಥ ಲಿಂಗ ಮೂರ್ತಿಯ ಸುಂದರವಾದ ದೇವಾಲಯವಿದೆ. ಅಲ್ಲಿ ಶ್ರೀಮದಾಚಾರ್ಯರ ಪ್ರಾಚೀನ ಶಿಲಾವಿಗ್ರಹವು ಅನಾದಿಕಾಲದಿಂದಲೂ ವಿರಾಜಿಸುತ್ತಿರುವದು. ಕ್ಷೇತ್ರಾಧಿನಾಥನ ಸೇವೆಯನ್ನು ೧೪ ಕುಲದವರು ಭಕ್ತಿ ಗೌರವದಿಂದ ಮಾಡುತ್ತಾರೆ. ಸೋಮನಾಥ ದೇವಾಲಯಕ್ಕೆ ಸರಕಾರಿ ಇನಾಮ ಭೂಮಿ ಇರುತ್ತದೆ. ದೀಪಾರಾಧನೆಗಾಗಿ ಜಹಗೀರದಾರರಿಂದ ವರ್ಷಾಶನ ದೊರೆಯುತ್ತದೆ. ದೇವಾಲಯದ ನಿತ್ಯಾರ್ಚನಾದಿಗಳನ್ನು ಮಹೇಶ್ವರರು ( ಜಂಗಮರು ) ನೆರವೇರಿಸುತ್ತಾರೆ. ಶ್ರೀ ಜ। ರೇವಣಸಿದ್ಧರ ಜಯಂತಿದಿನವಾದ ಫಾಲ್ಗುಣ ಶು।। ೧೩ ನೆಯ ದಿವಸ ಸೋಮನಾಥನ ರಥೋತ್ಸವವು ಜರಗುವದು. ಇಲ್ಲಿ ಪೂರ್ವಕಾಲದಲ್ಲಿ ವೀರಶೈವರ ವಸತಿಯು ವಿಪುಲವಾಗಿತ್ತೆಂದು ತೋರುತ್ತದೆ.

(೨) ಶ್ರೀ ರೇವಣಸಿದ್ಧೇಶ್ವರ ದೇವಾಲಯ:— ಈ ಕ್ಷೇತ್ರವು ಬೆಳಗಾಂವ ಜಿಲ್ಲಾ ನಿಡವಂದ ಸ್ಟೇಶನ್ನಿಗೆ ೫ ಮೈಲು ದೂರದಲ್ಲಿದೆ. ಇಲ್ಲಿ ಶ್ರೀ ಜ। ರುದ್ರಮುನಿ ಶಿವಾಚಾರ್ಯರ ಭವ್ಯವಾದ ಶಿಲಾ ವಿಗ್ರಹವಿದೆ.

(೩) ರೇವಣಸಿದ್ಧೇಶ್ವರ ಬೆಟ್ಟ:— ಈ ಪರ್ವತವು ಬೆಂಗಳೂರು ತಾಲೂಕಿನ ಸ್ಥಳದಿಂದ ರಾಮನಗರಪೇಟೆ ಸ್ಟೇಶನ್ನಿಗೆ ೭ ಮೈಲು ದೂರದಲ್ಲಿದೆ. ಈ ಪರ್ವತದಲ್ಲಿ ಶ್ರೀಮದಾಚಾರ್ಯರ ಸುಂದರವಾದ ಶಿಲಾವಿಗ್ರಹವಿರುವದು. ಈ ದೇವಾಲಯದ ಸರ್ವಾಧಿಕಾರವು ಮೈಸೂರು ಸರಕಾರಕ್ಕೆ ಸೇರಿದೆ. ನಿತ್ಯಾರ್ಚನೆ ಮೊದಲಾದುದು ಶಾಸ್ತ್ರೋಕ್ತವಾಗಿ ನಡೆಯುತ್ತಿರುವದು. ಮೈಸೂರು ಪ್ರಾಂತದಲ್ಲಿ ಈ ಸ್ಥಾನವು ಸುಪ್ರಸಿದ್ಧವಾಗಿದೆ.

(೪) ಸಿದ್ಧರ ಬೆಟ್ಟ:— ಇದು ತುಮಕೂರು ಜಿಲ್ಲೆಯಲ್ಲಿರುವದು. ಈ ಬೆಟ್ಟದಲ್ಲಿ ಶ್ರೀ ಜ| ರೇವಣಸಿದ್ಧರು ಅನುಷ್ಠಾನ ಮಾಡಿದ್ದರಿಂದ ಆಪೂಜ್ಯರ ಹೆಸರಿನಿಂದ ಸುಪ್ರಸಿದ್ಧವಾಗಿದೆ. ಈ ಪರ್ವತದಲ್ಲಿ ವಿವಿಧ ವನಸ್ಪತಿಗಳು ಸಿಕ್ಕುತ್ತವೆ. ಆ ಪ್ರಾಂತದ ಜನರು ಈ ಬೆಟ್ಟದಲ್ಲಿ ವಾಸವಾಗಿದ್ದು ಅನೇಕ ರೋಗಗಳಿಂದ ಮುಕ್ತರಾಗಿ ಸ್ವಸ್ಥಾನಕ್ಕೆ ತೆರಳುವದುಂಟು.

(೫) ರೇವಣಸಿದ್ಧೇಶ್ವರಗುಡ್ಡ:— ಈ ಪರ್ವತವು ಬೆಳಗಾವಿ ಜಿಲ್ಲೆಗೆ ಸೇರಿದ ಬೆಲ್ಲದ ಬಾಗೇವಾಡಿಯ ಸಸಿಹದಲ್ಲಿರುವ ಪರ್ವತದ ಸಾನು ಪ್ರದೇಶ ದಲ್ಲಿದೆ. ಅಲ್ಲಿ ಶ್ರೀ ಜ| ರೇವಣಸಿದ್ಧೇಶ್ವರರ ಪಾದ ವಿನ್ಯಾಸದ ಗುರುತುಗಳಿವೆ ಹಿಂದಕ್ಕೆ ಶ್ರೀಮದಾಚಾರ್ಯರು ಗೋರಕ್ಷನ ಗರ್ವಹರಣ ಮಾಡುವುದಕ್ಕಾಗಿ ದಯಮಾಡಿಸಿದ ಕಾಲದಲ್ಲಿ ಈ ಪರ್ವತದಲ್ಲಿ ಅನುಷ್ಠಾನ ಮಾಡಿದರೆಂಬ ಐತಿಹ್ಯವಿದೆ.

(೬) ಮದ್ರಾಸ ಇಲಾಖಾ ವೃದ್ಧಾಚಲಂ ಕ್ಷೇತ್ರದಲ್ಲಿ ಶ್ರೀ ರೇವಣ ಸಿದ್ಧರ ಹೆಸರಿನ ದೇವಾಲಯವಿದೆ. ಇದು ತಮಿಳು ನಾಡು. ಈ ಕ್ಷೇತ್ರದಲ್ಲಿ ಈ ಗುರು ಪುಂಗವರು ಅನುಷ್ಠಾನ ಮಾಡಿದರೆಂಬ ವಿಷಯವು ಅವರ ಚರಿತ್ರಾಂಶದಿಂದ ತಿಳಿದುಬರುತ್ತದೆ.

(೭) ದಕ್ಷಿಣ ಭಾರತದಲ್ಲಿ ಸುಪ್ರಸಿದ್ಧವಾದ ಕಾಂಚೀ ಕ್ಷೇತ್ರದಲ್ಲಿ ವರದರಾಜ ವಿಷ್ಣುಮೂರ್ತಿಯು ಚಲಿಸುತ್ತಿದ್ದ ಮಸ್ತಕವನ್ನು ಶ್ರೀ ರೇವಣಸಿದ್ಧ ಭಗವತ್ಪಾದರು ತಮ್ಮ ಮಹಿಮಾ ಪ್ರಭಾವದಿಂದ ನಿಲ್ಲಿಸಿದರು. ಆ ಕಾಲದಲ್ಲಿ ಕಾಂಚೀ ಕ್ಷೇತ್ರದಲ್ಲಿ ಚಕ್ರವರ್ತಿಯಾಗಿದ್ದ ಚೋಳ ಭೂಪಾಲನಿಗೆ ಅನುಗ್ರ ಹಿಸಿ ಅವನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡರು. ಈ ಬಗ್ಗೆ ಚೋಳ ರೇಣುಕ ಸಂವಾದವೆಂಬ ಗ್ರಂಥವು ಸುಪ್ರಸಿದ್ಧವಿದೆ.

ಈ ಕ್ಷೇತ್ರದಲ್ಲಿ ವಿರಾಜಿಸುವ ಏಕಾಮ್ರೇಶ್ವರಲಿಂಗ ಮೂರ್ತಿಯ ಮುಂಭಾಗದ ಭೂಗರ್ಭದಿಂದ ಶ್ರೀ ಜ| ರುದ್ರಮುನಿ ಶಿವಾಚಾರ್ಯರು ಅವತರಿಸಿ ಶ್ರೀ ರೇವಣಸಿದ್ಧ ಭಗವತ್ಪಾದರಿಂದ ದಿವ್ಯ ಜ್ಞಾನವನ್ನು ಪಡೆದುಕೊಂಡರು. ಈ ಕ್ಷೇತ್ರದಲ್ಲಿ ಶ್ರೀಮದಾಚಾರ್ಯರ ಹೆಸರಿನ ದೇವಾ ಲಯವಿರುವುದಾಗಿ ತಿಳಿದುಬರುತ್ತದೆ.

(೮) ಶ್ರೀ ರೇವಣಸಿದ್ಧೇಶ್ವರ ದೇವಾಲಯ:— ಮದ್ರಾಸ ಇಲಾಖಾ ಕೋಯಿಮುತ್ತೂರು ಜಿಲ್ಲಾ ಕೊಳ್ಳೆಗಾಲ ತಾಲೂಕು ಹರಳಿ ಎಂಬ ಗ್ರಾಮಕ್ಕೆ ೧ ಮೈಲು ದೂರದಲ್ಲಿರುವ ಕಾವೇರಿ ನದಿಯ ತೀರದಲ್ಲಿ ಶ್ರೀ ರೇವಣಸಿದ್ಧೇಶ್ವರ ದೇವಾಲಯವಿರುವದು. ಇಲ್ಲಿ ಆ ಪ್ರಾಂತದ ಅನೇಕ ಜನರು ಅನುಷ್ಠಾನ ಮಾಡಿ ಮಂತ್ರ ಸಿದ್ಧಿಯನ್ನು ಪಡೆಯುವರು.

(೯) ನಿಜಾಂ ಇಲಾಖಾ ಗುಲಬುರ್ಗಾ ಜಿಲ್ಹೆಯಲ್ಲಿರುವ 'ಸರಸಂಬ' ಎಂಬ ಗ್ರಾಮದ ಸಮೀಪದಲ್ಲಿ ಶ್ರೀ ಜ। ರೇವಣಸಿದ್ಧೇಶ್ವರ ದೇವಾಲಯವಿದೆ.

(೧೦) ನಿಜಾಂ ಇಲಾಖೆ ಪಡಶಲ ಗ್ರಾಮದಲ್ಲಿ ಶ್ರೀರೇವಣಸಿದ್ಧ ಭಗವತ್ಪಾದರ ಸುಂದರವಾದ ಮಂದಿರವಿದೆ. ಇದನ್ನು ನೋಡಲು ಜನರು ಬಹು ದೂರ ದೂರದಿಂದ ಬರುತ್ತಾರೆ.

(೧೧) ಬಿಜ್ಜಳನ ರಾಜಧಾನಿಯಾದ ಕಲ್ಯಾಣಪಟ್ಟಣದಲ್ಲಿ ರೇವಣ ಸಿದ್ಧ ಭಗವತ್ಪಾದರ ಭವ್ಯವಾದ ಮಂದಿರವಿದೆ.

(೧೨) ರೇವಣಗಿರಿ:– (ಜೇವರಗಿ) ಇದು ನಿಜಾಂ ಪ್ರಾಂತದಲ್ಲಿ ಗುಲ ಬುರ್ಗಾ ಡಿ॥ 'ರಟಗಲ್ಲ' ಗ್ರಾಮಕ್ಕೆ ೨ ಮೈಲು ದೂರದಲ್ಲಿದೆ. ಈ ಪರ್ವತ ದಲ್ಲಿ ಶ್ರೀಮದಾಚಾರ್ಯರು ಪಾದವಿನ್ಯಾಸ ಮಾಡಿದ್ದರಿಂದ ಅಲ್ಲಿ ಅವರ ಹೆಸರಿನ ವಿಶಾಲವಾದ ದೇವಾಲಯವಿದೆ. ನಿಜಾಂ ಪ್ರಾಂತದಲ್ಲಿ ಈ ದೇವಸ್ಥಾ ನವು ಅತ್ಯಂತ ಪ್ರಸಿದ್ಧಿಯನ್ನು ಹೊಂದಿರುವದು. ಬಹು ದೂರದಿಂದ ಜನರು ಸದಾ ಯಾತ್ರೆಗಾಗಿ ಹೋಗುತ್ತಿರುವರು.

(೧೩) ರೇವಣಸಿದ್ಧೇಶ್ವರ ದೇವಾಲಯ:— ಸುಪ್ರಸಿದ್ಧ ಪಟ್ಟಣವಾದ ಸೋಲಾಪುರದಲ್ಲಿ ಈ ದೇವಾಲಯವು ರೇವಣಸಿದ್ಧೇಶ್ವರ ಕೆರೆಯೊಡನೆ ವಿರಾಜಮಾನವಾಗಿದೆ. ಅಲ್ಲಿಯ ಭಕ್ತರು ಅಸಂಖ್ಯ ಹಣವನ್ನು ಖರ್ಚು ಮಾಡಿ ಈ ದೇವಾಲಯದ ಜೀರ್ಣೋದ್ಧಾರ ಮಾಡಿದ್ದಾರೆ. ದೇವಾಲಯವು ಅತ್ಯಂತ ಪ್ರಾಚೀನವಾಗಿದೆ. ಶ್ರೀ ರೇವಣಸಿದ್ಧೇಶ್ವರನನ್ನು ಗ್ರಾಮದೇವತೆಯೆಂದು ಎಲ್ಲರೂ ಅತ್ಯಂತ ಗೌರವಾದರಗಳಿಂದಲೂ, ಭಕ್ತಿಯಿಂದಲೂ ಪೂಜಿಸುತ್ತಿರು ವರು. ಇದು ಮಹಿಮಾ ಸ್ಥಳವಾಗಿದೆ. ಮಹಾರಾಷ್ಟ್ರ, ಕರ್ನಾಟಕ, ಆಂಧ್ರ ದೇಶದ ಜನರು ಅಲ್ಲಿಗೆ ಯಾತ್ರೆಗಾಗಿ ಹೋಗುವರು.

(೧೪) ರೇವಣಸಿದ್ಧೇಶ್ವರ ದೇವಾಲಯ:— ಇದು ಸೋಲಾಪುರ ಜಿಲ್ಲೆ ಮಾಸನೂರ ಹತ್ತಿರ ಇರುವ ಭೀಮಾನದಿಯ ತೀರದಲ್ಲಿ ಅತ್ಯಂತ ಪುರಾತನ ಕಾಲದಿಂದಲೂ ಶೋಭಿಸುತ್ತಲಿದೆ. ಈ ದೇವಸ್ಥಾನದ ಕಟ್ಟಡಕ್ಕಾಗಿ ಲಕ್ಷಾಂತರ ರೂಪಾಯಿಗಳು ಖರ್ಚಾಗಿರಬಹುದು. ಹಿಂದಕ್ಕೆ ಇದೇ ಸ್ಥಳದಲ್ಲಿ ಬಿಜ್ಜಳನು ೧೨ ಸಾವಿರ ಕನ್ನಿಕೆಯರನ್ನು ಬಲಿ ಕೊಡುವಾಗ್ಗೆ ಶ್ರೀ ರೇವಣಸಿದ್ಧರು ಅವರನ್ನು ವಿಮೋಚನ ಮಾಡಿ ಖರ್ಪರ ಎಂಬ ಕುಟಿಲ ಜೋಗಿಯ ಗರ್ವಹರಣ ಮಾಡಿದರು. ಅಲ್ಲದೇ ಲೋಕಕಂಟಕವಾದ ಯಕ್ಷ ಮಿಥುನವನ್ನು ತಮ್ಮ ಹಣೆಗಣ್ಣಿನಿಂದ ಸುಟ್ಟು ಧ್ವಂಸಮಾಡಿದ ಸ್ಥಾನವು ಇದೇ ಆಗಿದೆ. ಈ ದೇವಸ್ಥಾನವು ಮಹಿಮಾಸ್ಥಳವಾಗಿದೆ. ಬ್ರಿಟಿಶ್ ಆಳಿಕೆಯಲ್ಲಿ ಈ ದೇವಾಲಯದ ಅರ್ಚನಾದಿಗಳಿಗೆ ಪ್ರತಿವರುಷ ೧೨೦೦ ರೂಪಾಯಿಗಳು ಸರಕಾರದಿಂದ ದೊರೆಯುತ್ತಿದ್ದವು.

(೧೫) ಮದ್ರಾಸ್ ಇಲಾಖೆ ನಾರ್ಥ ಆರ್ಕಾಟ (ತಮಿಳು ದೇಶ)ದಲ್ಲಿ ತಿರುಮಣ್ಣಾಮಲೆಯ ಕ್ಷೇತ್ರದಲ್ಲಿರುವ ಪರ್ವತದಲ್ಲಿ ಶ್ರೀ ರೇವಣಸಿದ್ಧ ಭಗವತ್ಪಾದರು ವಾಸವಾಗಿದ್ದರು. ಅಲ್ಲಿ ಈ ಮಹಾತ್ಮರ ಹೆಸರಿನ ಒಂದು ಪ್ರಸಿದ್ಧ ದೇವಾಲಯವಿದೆ. ಈ ದೇವಾಲಯದ ಮುಂಭಾಗದಲ್ಲಿ ಒಂದು ಪವಿತ್ರ ತೀರ್ಥವುಂಟು.

(೧೬) ಶ್ರೀ ರೇವಣಸಿದ್ಧೇಶ್ವರ ದೇವಾಲಯ:— ಸೋಲಾಪುರ ಡಿ|| ಪಂಢರಪುರಕ್ಕೆ ೧೨ ಮೈಲಿನಲ್ಲಿ ಈ ದೇವಸ್ಥಾನವು ಪುರಾತನ ಕಾಲದಿಂದಲೂ ವೈಭವದೊಡನೆ ಮೆರೆಯುತ್ತಿದೆ.

(೧೭) ರೇವಣಸಿದ್ಧೇಶ್ವರ ದೇವಾಲಯ :— ಈ ದೇವಸ್ಥಾನವು ಮುಂಬೈ ಪ್ರಾಂತದಲ್ಲಿ ಸಾತಾರಾ ಡಿ|| ವಿಟಾ ತಾಲೂಕಿನಲ್ಲಿರುವ "ರೇಣಾವಿ" ಎಂಬುವ ಗ್ರಾಮದಲ್ಲಿದೆ. ಇದು ಅತ್ಯಂತ ಮಹಿಮಾ ಸ್ಥಳವಾದುದರಿಂದ ಆ ಪ್ರಾಂತದ ಜನರು ಒಳ್ಳೇ ಭಕ್ತಿಯಿಂದ ನಡೆದುಕೊಳ್ಳುತ್ತಿರುವರು.

(೧೮) ಸಿದ್ಧನ ಕೆರೆ:— ಮಂಗಳವೇಢೆಯಿಂದ ೪-೫ ಮೈಲು ದೂರದಲ್ಲಿ 'ಸಿದ್ಧನ ಕೆರೆ' ಎಂಬ ಅತೀವ ರಮ್ಯವಾದ ಗ್ರಾಮವಿದೆ. ಅಲ್ಲಿ ಪೂರ್ವ ಕಾಲದಲ್ಲಿ "ಮಾಯಾವಿ"ಎಂಬೋರ್ವ ಕ್ರೂರರಾಕ್ಷಸಿ ಇದ್ದಳಂತೆ ಅವಳು ತನ್ನ

ಮಂತ್ರಶಕ್ತಿಯಿಂದ ನವನಾಥರನ್ನು ಸಹ ಬಂಧನದಲ್ಲಿಟ್ಟಿದ್ದಳಂತೆ. ಆಗ್ಗೆ ಶ್ರೀ ರೇವಣಸಿದ್ಧರು ಅಲ್ಲಿಗೆ ದಯಮಾಡಿಸಲಾಗಿ ಆ ರಾಕ್ಷಸಿಯು ನವನಾಥರನ್ನು ಪೀಡಿಸಿದಂತೆ ಈ ಗುರುಪುಂಗವರನ್ನು ಪೀಡಿಸುವುದಕ್ಕಾಗಿ ತನ್ನ ಎಲ್ಲ ಶಂಬರೀ ವಿದ್ಯೆಯನ್ನು ಖರ್ಚುಮಾಡಿ ಹತಾಶಳಾದಳು. ಕೊನೆಗೆ ಅವಳು ತನ್ನ ಮಂತ್ರಶಕ್ತಿಯಿಂದ ಆ ಗ್ರಾಮದಲ್ಲಿ ನೀರು ಸಿಗದಂತೆ ಮಾಡಿದಳು. ಆಗ ರೇವಣಸಿದ್ಧರು ಜನಹಿಂಸೆಯಲ್ಲಿ ನಿರತಳಾದ ಆ ರಾಕ್ಷಸಿಯನ್ನು ತಮ್ಮ ತಪಃಪ್ರಭಾವದಿಂದ ಅಂಗಹೀನಳನ್ನಾಗಿ ಮಾಡಿ ಅಲ್ಲಿಂದ ಅವಳನ್ನು ಓಡಿಸಿದರು. ರಾಕ್ಷಸಿಯ ಮಂತ್ರಶಕ್ತಿಯಿಂದ ಆ ಊರವರಿಗೆಲ್ಲ ನೀರು ಸಿಗದಿರಲು ಎಲ್ಲರೂ ಶ್ರೀ ರೇವಣಸಿದ್ಧರಿಗೆ ಮರೆಹೊಕ್ಕು ಬೇಡಿಕೊಂಡರು. ಈ ಗುರುಪುಂಗವರು ನಿರ್ಜಲವಾದ ಆ ಕೆರೆಯಲ್ಲಿ ಪಾದವನ್ನಿಟ್ಟರು. ಅಲ್ಲಿ ಅವರ ಪಾದವು ಮೂಡಿದ ಸ್ಥಾನದಿಂದಲೇ ನೀರು ಕಾರಂಜಿಯಂತೆ ಪುಟಿಯಲಾಗಿ ಆ ಊರಿಗೆ 'ಸಿದ್ಧನಕೆರೆಯೆಂದು' ಹೆಸರು ಒದಗಿತೆಂದು ವೃದ್ಧರು ಪರಂಪರೆಯಾಗಿ ಹೇಳುತ್ತ ಬಂದಿರುವರು.

(೧೯) ರೇವಣತಲಾವ:— ಈ ತೀರ್ಥವು ಹಿಮಾಲಯದಲ್ಲಿ ಶ್ರೀ ಜ॥ ಏಕೋರಾಮಾರಾಧ್ಯರ ಧರ್ಮಪೀಠವಾದ ಉಷಾಮಠಕ್ಕೆ ೨ ಮೈಲು ಸಮೀಪದಲ್ಲಿದೆ. ಶ್ರೀ ರೇವಣಸಿದ್ಧ ಭಗವತ್ಪಾದರು ಹಿಮಾಲಕ್ಕೆ ದಯಮಾಡಿಸಿದಾಗ್ಗೆ ಈ ತೀರ್ಥದಲ್ಲಿ ಸ್ನಾನ ಮಾಡಿದ್ದರಿಂದ ಅದಕ್ಕೆ ಈ ಹೆಸರು ಪ್ರಾಪ್ತವಾಗಿರುವದು.

(೨೦) ಅಕ್ಕಲಕೋಟೆಯ ಸಮೀಪದಲ್ಲಿ ಬರ್ಹಾಣಪುರವೆಂಬ ಗ್ರಾಮವಿದೆ. ಅಲ್ಲಿ ಶ್ರೀ ರೇವಣಸಿದ್ಧರು ಪವಾಡಮಾಡಿದ್ದರಿಂದ ಅವರ ಹೆಸರಿನ ದೇವಾಲಯವಿದೆ ಅದಕ್ಕೆ ಗ್ರಾಮೀಣರು ಸಿದ್ದಯ್ಯಪ್ಪನ ದೇವಾಲುವೆಂದು ಅನ್ನುವದುಂಟು. ಈ ಗ್ರಾಮವು ಮುಸಲ್ಮಾನರ ಜಹಗೀರವಾಗಿತ್ತು. ದುರ್ಬಲರಾದ ವೀರಶೈವರನ್ನು ಬೆದರಿಸಿ ಮುಸಲ್ಮಾನರು ಈ ದೇವಾಲಯವನ್ನು ಒಂದು ಕಾಲದಲ್ಲಿ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ಅಂದಿನಿಂದ ಸಿದ್ದಯ್ಯಪ್ಪನ ದೇವಾಲಯದ ಪೂಜಾರಿಗಳು ಮುಸಲ್ಮಾನರೇ ಇದ್ದಾರೆ. ಆ ಗುಡಿಯಲ್ಲಿರುವ ದೇವರಿಗೆ ವೀರಶೈವರು ಸಿದ್ದಯ್ಯಪ್ಪನೆಂತಲೂ, ಸ್ಮಾರ್ತರು ಅನಂತ

ಚೈತನ್ಯನೆಂತಲೂ, ಮುಸಲ್ಮಾನರು ಅಲ್ಲಾವುದ್ದೀನನೆಂತಲೂ ಕರೆಯುತ್ತಾರೆ. ಎಲ್ಲ ಮತೀಯರೂ ಈ ದೇವರಿಗೆ ಒಳ್ಳೇ ಭಕ್ತಿಯಿಂದ ನಡೆದುಕೊಳ್ಳುವರು. ಈಗ್ಗೆ ಸುಮಾರು ೫೫—೫೬ ವರುಷಗಳ ಹಿಂದೆ ಮುಸಲ್ಮಾನರು ತಮ್ಮ ಧರ್ಮಪದ್ಧತಿಯಂತೆ ಗಂಧವನ್ನು ಧರಿಸಿ ಗಲೀಪಗಳನ್ನು ಹಾಕಿ ದೊಡ್ಡದಾಗಿರಿಸಿ, ಪೂಜಿಸುತ್ತಿರುವಾಗ್ಗೆ ಒಂದು ದಿವಸ ಆಕಸ್ಮಾತ್ ಬೆಂಕಿ ತಾಕಿ ಆ ದೇವರು ಸುಡಲು, ಅದರಲ್ಲಿ ಲಿಂಗಮೂರ್ತಿಯು ಹೊರಬಿದ್ದಿತು. ಈ ದೇವರಿಗೆ ಪ್ರತಿಯೊಬ್ಬರೂ "ಸಿದ್ದಯ್ಯಪ್ಪಕೀ ದೋಸ್ತಕರಾಹೋ ದೀನ್" ಎಂದು ಅನ್ನುವರು. ಆ ಗುಡಿಯಲ್ಲಿ ಒಂದು ಗವಿ ಇದೆ. ಅಲ್ಲಿ ದಂಡ, ಜೋಳಿಗೆ ಇತ್ಯಾದಿಗಳು ಇರುವವು. ಈ ಎಲ್ಲ ವಿವರಣೆಯಿಂದ ಈ ದೇವಾಲಯವು ವೀರಶೈವರದೇ ಎಂಬುವುದರಲ್ಲಿ ಎಳ್ಳನಿತು ಸಂದೇಹವಿಲ್ಲ. ಹೀಗೆ ಪರಧರ್ಮದವರ ದಬ್ಬಾಳಿಕೆಯಿಂದ ಶ್ರೀ ರೇವಣಸಿದ್ಧ ಭಗವತ್ಪಾದರ ಅದೆಷ್ಟು ದೇವಾಲಯಗಳು ಅಲ್ಲಲ್ಲಿ ಲುಪ್ತವಾಗಿರುವವೋ ತಿಳಿಯದು. ಶ್ರೀ ರೇವಣಸಿದ್ಧರ ವಿಷಯಕವಾಗಿ ಈಗ ಹೇಳಿದ ದೇವಾಲಯಗಳು ಯಾವ ಯಾವ ಕಾಲದಲ್ಲಿ ಹೇಗೆ ಹೇಗೆ ಕಟ್ಟಿಸಲ್ಪಟ್ಟವುಗಳೆಂಬ ವಿಷಯವನ್ನು ಗೊತ್ತುಪಡಿಸುವುದು ಸುಲಭವಲ್ಲ. ಯಾಕಂದರೆ—ಮೂಲ ಆಚಾರ್ಯರಾದ ರೇವಣಸಿದ್ಧರ ತರುವಾಯ ಬಾಳೇಹೊನ್ನೂರು ಶ್ರೀ ಮಹಾಪೀಠದಲ್ಲಿ ಅವರ ಹೆಸರಿನವರು ಅನೇಕ ಯೋಗಸಿದ್ಧರು ಆಗಿಹೋಗಿರುವರು. ಕಾಲಗರ್ಭದಲ್ಲಿ ಅಡಗಿದ ಅವರೆಲ್ಲರನ್ನೂ ಮೂಲ ರೇವಣಸಿದ್ಧರಿಗೆ ಹೋಲಿಸಿ ಕೆಲವು ಪಂಡಿತರು ಚರಿತ್ರೆಯನ್ನು ತಪ್ಪುತಪ್ಪಾಗಿ ಬರೆದಿರುವರು. ಮೂಲ ರೇವಣಸಿದ್ಧರು ಕಲಿಯುಗ ಆದಿಭಾಗದಲ್ಲಿ ಕೊಲ್ಲಪಾಕಿ ಸೋಮನಾಥ ಲಿಂಗದಿಂದ ಆವಿರ್ಭವಿಸಿದುದು ಸೂರ್ಯಪ್ರಕಾಶದಷ್ಟು ನಿಚ್ಚಳವಾಗಿದೆ. ಆದರೂ ಆ ಭಗವತ್ಪಾದರು ಬಸವನ ಕಾಲದಲ್ಲಿದ್ದರೆಂದು ಹಲಕೆಲವರು ಉಲ್ಲೇಖಿಸಿದುದುಂಟು. ಅಂಥವರಲ್ಲಿ 'ಚನ್ನಮಲ್ಲಿಕಾರ್ಜುನ ಎಂಬವನೂ ಓರ್ವನಾಗಿರುವನು. ಬಸವ ಪಂಥಿಗಳು ಅವನನ್ನು ಹುರಿದುಂಬಿಸಿ "ಪಂಚಾಚಾರ್ಯರ ಚರಿತ್ರೆ" ಎಂಬ ಹೊತ್ತಿಗೆಯನ್ನು ಹುಟ್ಟಿಸಿದರು. ಆ ಹೊತ್ತಿಗೆಯಲ್ಲಿ ಶ್ರೀ ಜ| ರೇವಣಸಿದ್ಧ ಭಗವಾತ್ಪಾದಕರು ಕುರುಬ ಎಂತಲೂ, ಕುಂಬಾರ ಎಂತಲೂ, ಹುಚ್ಚರಂತೆ ಪೇಚಾಡಿದುದುಂಟು. ಅಂಥವರ ಸಂಶಯ ನಿವಾರಣೆಗಾಗಿ ರೇಣುಕರು ಯಾರು?

ರೇವಣಸಿದ್ಧರು ಯಾರು? ಇವರು ಯಾವ ಯಾವ ಕಾಲದಲ್ಲಿದ್ದರು?ಏನು ಏನು ಕಾರ್ಯ ಮಾಡಿದರು ? ಎಂಬುವದನ್ನು ಇಲ್ಲಿ ಪ್ರಾಸಂಗಿಕವಾಗಿ ವಿವರಿಸಲಾಗಿದೆ.

## ಶ್ರೀ ಜ| ರೇಣುಕಾಚಾರ್ಯರು— ಶ್ರೀ ಜ| ರೇವಣಸಿದ್ಧರು

ಶ್ರೀ ಜಗದ್ಗುರು ರೇಣುಕಾಚಾರ್ಯರು ತ್ರೇತಾ ಯುಗದ ಕೊನೆಗೆ ಅರ್ಥಾತ್ ದ್ವಾಪರ ಯುಗದ ಮೊದಲಿಗರಾಗಿರುವರು. ಅವರು ವಿಭೀಷಣನ ಅಭೀಷ್ಟದಂತೆ ಮೂರು ಕೋಟಿ ಶಿವಲಿಂಗಗಳನ್ನು ಮೂರು ಕೋಟಿ ಗುರು ರೂಪವನ್ನು ಧರಿಸಿ ಏಕಕಾಲದಲ್ಲಿಯೇ ಸ್ಥಾಪಿಸಿದರು. ಅವರು ಮಲಯಾಚಲದಲ್ಲಿರುವ ಅಗಸ್ತ್ಯ ಮಹರ್ಷಿಗೆ ಉಪದೇಶ ಮಾಡಿದವರಾಗಿರುವರು. ಈ ವಿಷಯವನ್ನು ಸುಮಾರು ೨೦೦೦ ವರುಷಗಳ ಹಿಂದೆ ಇದ್ದ ಶಿವಯೋಗಿ ಶಿವಾಚಾರ್ಯರು ತಮ್ಮ ಸಿದ್ಧಾಂತ ಶಿಖಾಮಣಿಯಲ್ಲಿ ಉಲ್ಲೇಖಿಸಿರುವರು. ಬಸವನಿಗಿಂತ ಪೂರ್ವದಲ್ಲಿದ್ದ ಶ್ರೀಪತಿ ಪಂಡಿತರು ತಮ್ಮ ಶ್ರೀಕರ ಭಾಷ್ಯದಲ್ಲಿ ಸಿದ್ಧಾಂತ ಶಿಖಾಮಣಿಯ ವಿಷಯವನ್ನು ಉದಾಹರಣೆಗಾಗಿ ತೆಗೆದುಕೊಂಡಿದ್ದಾರೆ. ಶ್ರೀ ರೇಣುಕಾಚಾರ್ಯರು ರೇವಣಸಿದ್ಧರಾಗಿದ್ದರೆ, ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗಪ್ರದಾನಮಾಡಿದುದನ್ನೂ, ಇನ್ನುಳಿದ ಅವರ ವೃತ್ತಾಂತವನ್ನೂ ಶಿವಯೋಗಿ ಶಿವಾಚಾರ್ಯರು ಸಿದ್ಧಾಂತ ಶಿಖಾಮಣಿಯಲ್ಲಿ ಉಲ್ಲೇಖಿಸದೇ ಬಿಡುತ್ತಿರಲಿಲ್ಲ. ಆದ್ದರಿಂದ ರೇಣುಕಾಚಾರ್ಯರು ರೇವಣಸಿದ್ಧರಿಗಿಂತ ಪೂರ್ವದವರಾಗಿರುವರು. ಶ್ರೀ ಜ| ರೇವಣಸಿದ್ಧರು ಕಲಿಯುಗದಲ್ಲಿ ಕೊಲ್ಲಿಪಾಕಿ ಶ್ರೀ ಸೋಮನಾಥ ಲಿಂಗದಿಂದ ಉದ್ಭವಿಸಿ, ಏಳು ನೂರು ವರುಷ ಗುಪ್ತವಾಗಿಯೂ, ಏಳುನೂರು ವರುಷ ಪ್ರಕಟವಾಗಿಯೂ ಇದ್ದು ಅನೇಕ ಲೀಲೆಗಳನ್ನು ಮಾಡಿರುವರು. ಮೇಲೆ ಹೇಳಿದ ಕೆಲವು ದೇವಾಲಯಗಳು ಈ ಗುರು ಪುಂಗವರಿಗೆ ಸಂಬಂಧಪಟ್ಟವುಗಳಾಗಿರಬೇಕು. ಇವರು ದೇಶ ಸಂಚರಿಸುವಾಗ್ಗೆ ಶ್ರೀ ಶಂಕರಾಚಾರ್ಯರಿಗೆ ಸುಮಾರು ೨೫೦೦ ವರುಷಗಳ ಹಿಂದೆ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದರೆಂದು ಐತಿಹಾಸಿಕ ಆಧಾರದಿಂದ ಧೈರ್ಯದಿಂದ ಹೇಳಬಲ್ಲೆವು.

ವಿಮರ್ಶ ವಿಶಾರದ, ಧರ್ಮ ಸಂಶೋಧನಾಸಕ್ತ ಲಿಂ. ಜಿ. ಟಿ. ಅಕ್ಕಲಯ್ಯ ದೀಕ್ಷಿತ, ಮದನಪಲ್ಲಿ ಈ ಮಹಾಶಯರು:— "ಶ್ರೀ ಜ। ರೇವಣಸಿದ್ಧ ಶಿವಾಚಾರ್ಯರಿಂದ ಶ್ರೀ ಜಗದ್ಗುರು ಆದಿ ಶಂಕರಾಚಾರ್ಯರಿಗೆ ಪ್ರಸಾದಿಸಿದುದು ಅದೇ ಇಂದು ಶೃಂಗೇರಿ ಪೀಠದಲ್ಲಿ ಆರಾಧಿಸಲ್ಪಡುತ್ತಿರುವ ಚಂದ್ರಮೌಲೀಶ್ವರಲಿಂಗ, ಶಂಕರರಿಂದಲೇ ಲಿಂಗಗಳನ್ನು ಸಂಪುಟದಲ್ಲಿಟ್ಟು ಪೀಠಗಳ ಮೇಲಿರಿಸಿ ಪೂಜಿಸುವಿಕೆ ಪ್ರಾರಂಭವಾಗಿರಬೇಕು ಎಂದು ಆಂಧ್ರ ವಿಜ್ಞಾನ ಸರ್ವಸ್ವ (ನಂ. ೨–ಪು. ೫೮) ದಲ್ಲಿ ಹೇಳಿದೆ" ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ. (ಅಖಿಲ ಭಾರತ ವೀರಶೈವ ಮಹಾ ಸಭೆಯ ತ್ರೈಮಾಸಿಕ ಪತ್ರಿಕೆ 'ವೀರಶೈವ' ಪು–೧೨)

ಇದೇ ವಿಷಯವು ಗುರುವಂಶ ಕಾವ್ಯದಲ್ಲಿ ★

"ಶ್ರೀ ಚಂದ್ರಮೌಲೀಶ್ವರಲಿಂಗಮಸ್ಮೈ ಸಪ್ರತ್ನಗರ್ಭಂಗಣನಾಯಕಂಚ ।
ಸವಿಶ್ವರೂಪಾಯ ಸುಸಿದ್ಧದತ್ತಂ ದತ್ವಾನ್ಯಗಾದೀಚ್ಚಿರಮರ್ಚಯೇತಿ ॥೩೩॥
ಸುರೇಶ್ವರಾಚಾರ್ಯ ಸರಸ್ವತೀಂತ್ವಂ ಸಂಪೂಜಯನ್ನಾಸ್ವಚಿರಾದಿಹೇತಿ ।
ದತ್ವಾಭ್ಯನುಜ್ಞಾಂ ವಿನತಾಯತಸ್ಮೈ ಶಿಷ್ಯೈಃ ಸಮಸ್ತೈಃ
ಸಜಗಾಮಕಾಂಚೀಂ ॥೩೪॥

ಶ್ರೀ ಜಗದ್ಗುರು ಶಂಕರಾಚಾರ್ಯರು ಶೃಂಗೇರಿ ಪೀಠಕ್ಕೆ ಸುರೇಶ್ವರಾಚಾರ್ಯನನ್ನು ಪಟ್ಟಗಟ್ಟಿ ತಾವು ಕಾಂಚಿಗೆ ಹೊರಡುವಾಗ

---

★ ಹಲವು ವರುಷಗಳ ಹಿಂದೆ ಶ್ರೀ ಶೃಂಗೇರಿ ಪೀಠಾಧಿಪತಿಗಳಾಗಿದ್ದ ಸಚ್ಚಿದಾನಂದ ಭಾರತೀ ಸ್ವಾಮಿಗಳವರು ತಮ್ಮ ಕಾಲದಲ್ಲಿ ಆಸ್ಥಾನ ಪಂಡಿತರಾಗಿದ್ದ ಕಾಶೀ ಲಕ್ಷ್ಮಣಶಾಸ್ತ್ರಿಗಳೆಂಬ ಕವಿಗಳಿಂದ ಆದ್ಯ ಶಂಕರಾಚಾರ್ಯರಾದಿಯಾಗಿ ಸಕಲ ಸ್ವಾಮಿಗಳವರ ಚರಿತ್ರವನ್ನು "ಗುರುವಂಶ ಕಾವ್ಯ" ಎಂಬ ಹೆಸರಿನಿಂದ ಸಂಸ್ಕೃತ ಭಾಷೆಯಲ್ಲಿ ಪದ್ಯ ರೂಪವಾಗಿ ಬರೆಯಿಸಿದ್ದಾರೆ. ಈ ಗ್ರಂಥವು ಶೃಂಗೇರಿ ಮಠದ ಲೈಬ್ರರಿಯಲ್ಲಿ ದೊರೆತಿದ್ದು, ಮೈಸೂರು ಶ್ರೀಮನ್ ಮಹಾರಾಜರವರ ಆಸ್ಥಾನ ಧರ್ಮಾಧಿಕಾರಿಗಳಾದ ವಿದ್ಯಾವಿಶಾರದ, ವೇ॥ ಶ್ರೀ ಗುಣಿಗಲ ರಾಮಶಾಸ್ತ್ರಿಗಳವರಿಂದ ಪರಿಶೋಧಿತವಾಗಿ ಶ್ರೀರಂಗಪಟ್ಟಣದಲ್ಲಿರುವ ವಾಣೀವಿಲಾಸ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿದೆ.

ಪೂರ್ವದಲ್ಲಿ ತಮಗೆ ರೇವಣಸಿದ್ಧ ಮಹಾಯೋಗಿಯಿಂದ ಅನುಗ್ರಹಿಸಲ್ಪಟ್ಟ ಶ್ರೀ ಚಂದ್ರ ಮೌಲೀಶ್ವರಲಿಂಗವನ್ನೂ ರತ್ನಗರ್ಭ ಗಣಪತಿಯನ್ನೂ ಸುರೇಶ್ವ ರಾಚಾರ್ಯನಿಗೆ ಕೊಟ್ಟು– "ಎಲೈ ಶಿಷ್ಯನೇ ! ನೀನು ಸರಸ್ವತೀ ದೇವಿಯನ್ನು ಪೂಜಿಸುತ್ತ ಚಿರಕಾಲದವರೆಗೆ ಇಲ್ಲಿ ಇರುವವನಾಗು" ಎಂದು ಹೇಳಿದರು ಎಂಬುದಾಗಿ ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ.

ಹೀಗಿದ್ದು ಚನ್ನಮಲ್ಲಿಕಾರ್ಜುನ ಎಂಬವನು ತಾನು ಬರೆದ" ಪಂಚಾಚಾರ್ಯರ ಚರಿತ್ರೆ" ಎಂಬುವ ಹೊತ್ತಿಗೆಯಲ್ಲಿ:— ಶ್ರೀಕಂಠಶಾಸ್ತ್ರಿಗಳೆಂಬವರು ಚಂದ್ರಮೌಲೀಶ್ವರಲಿಂಗವು ಹೇಗೆ ಬಂದಿತೆಂಬುವ ವಿಷಯಕ್ಕೆ ವಿಮರ್ಶೆಮಾಡಿ ಗುರುವಂಶ ಕಾವ್ಯದ ಅಭಿಪ್ರಾಯವನ್ನು ಅಲ್ಲಗಳೆದಿರುವರೆಂ"ದು ಉಲ್ಲೇಖಿಸಿದ್ದಾನೆ ಶ್ರೀಕಂಠಶಾಸ್ತ್ರಿಗಳ ಅಭಿಪ್ರಾಯವೇನಂದರೆ:—

" ಶಾಲಿವಾಹನಶಕೆ ೧೫೫೪ ರಲ್ಲಿ ಕೆಳದಿಯ ರಾಜರಾದ ಸೋಮಶೇಖರಯ್ಯ ನಾಯಕರಯ್ಯರೆಂಬವರ ಕಾಲಕ್ಕೆ ಬಾಳೇಹಳ್ಳಿ ಮಠದ ಗುರುಶಾಂತ ಸ್ವಾಮಿಗಳು ಕೆಳದಿಯ ಸಂಸ್ಥಾನಕ್ಕೆ ಅಪರಾಧ ಮಾಡಿದ್ದಕ್ಕಾಗಿ ಅವರಲ್ಲಿದ್ದ ಚಂದ್ರಮೌಲೀಶ್ವರ ಲಿಂಗ, ಬಲದಶಂಖ, ಏಕಬೆತ್ತ, ಮುಂತಾದವುಗಳನ್ನು ಜಪ್ತಮಾಡಿ ತೆಗೆದುಕೊಂಡು ಆಗಿನ ಕಾಲಕ್ಕೆ ಶೃಂಗೇರಿಪೀಠಕ್ಕೆ ಅಧಿಪತಿಗಳಾಗಿದ್ದ ನೃಸಿಂಹ ಭಾರತೀ ಸ್ವಾಮಿಗಳಿಗೆ ಕೊಟ್ಟರೆಂತಲೂ, ಭೂಚಕ್ರದ ಕೊಡೆ ಮುಂತಾದ್ದನ್ನು ತಾನೇ ಇಟ್ಟುಕೊಂಡನೆಂತಲೂ, ರೇಣುಕಾಚಾರ್ಯರು ಶಂಕರಾಚಾರ್ಯರ ಸಮಕಾಲೀನರಲ್ಲವೆಂತಲೂ" ವಾದಿಸಿರುವರಂತೆ. ಅಸ್ತು ಈ ವಿಷಯದ ತಿರುಳನ್ನು ಒರೆಗಲ್ಲಿಗೆ ಹಚ್ಚಿದರೆ, ಶ್ರೀಕಂಠಶಾಸ್ತ್ರಿಗಳ ವಾದವು ದೋಷದೂಷಿತವಾಗಿದೆಂಬುದನ್ನು ವಾಚಕರು ಅರಿಯದಿರಲಾರರು. ಒಂದನೆಯದಾಗಿ ಶಾಸ್ತ್ರಿಗಳು ಶ್ರೀ ರೇಣುಕಾಚಾರ್ಯರು ಯಾರು ? ಶ್ರೀ ರೇವಣ ಸಿದ್ಧರು ಯಾರು ? ಎಂಬುದನ್ನು ಚನ್ನಾಗಿ ಅರಿತವರಾಗಿದ್ದರೆ ಈ ವಾದದ ಗೋಜಿಗೆ ಹೋಗುತ್ತಿರಲಿಲ್ಲ.

ಎರಡನೆಯದಾಗಿ ಶಾಸ್ತ್ರಿಗಳ ಹೇಳಿಕೆಯಂತೆ ಬಾಳೆಹೊನ್ನೂರಮಠದ ಜಪ್ತಿಯ ಕಾಲಕ್ಕೆ ಚಂದ್ರಮೌಲೀಶ್ವರ ಲಿಂಗವು ಶಾ ಶ. ೧೫೫೪ (ಕ್ರಿ. ಶ. ೧೬೩೨) ರಲ್ಲಿ ಜಪ್ತು ಆದ ಜಂಗಮುಮಾಲಿನೊಡನೆ ಬಂದು ಶೃಂಗೇರಿ ಪೀಠದಲ್ಲಿ

ಸೇರಿಕೊಂಡಿದ್ದರೆ, ಅದು ಪ್ರೇತಲಿಂಗದಂತೆ ಅಪವಿತ್ರವಾಗುವುದು. ಇಂಥ ಲಿಂಗವನ್ನು ಶೃಂಗೇರಿ ಪೀಠಾಧಿಪತಿಗಳು ಸಂಪುಟದಲ್ಲಿಟ್ಟುಕೊಂಡು ಪೂಜಿಸು ತ್ತಿರುವರೆಂದು ಹೇಳುವವಾದರೂ ಶ್ರೀ ಮಠಕ್ಕೆ ಸಾಮಾನ್ಯವಾಗುವುದು.

ಮೂರನೆಯದಾಗಿ ಬಾಳೇಹೊನ್ನೂರು ಮಠದ ಗುರುಶಾಂತ ಸ್ವಾಮಿ ಗಳು ಶಾ. ಶ. ೧೫೫೪ ರಲ್ಲಿ ಕೆಳದಿಯ ರಾಜರಾದ ಸೋಮಶೇಖರ ನಾಯಕ ರಯ್ಯನಿಗೆ ಅಪಮಾನ ಮಾಡಿದರೆಂತಲೂ ಆ ಬಗ್ಗೆ ಶಾಸನವು ಬಾಳೇ ಹೊನ್ನೂರು ಶ್ರೀ ಮಠದಲ್ಲಿಯೇ ಸಿಕ್ಕಿತೆಂತಲೂ ಹೇಳುವ ಮಾತಂತೂ ಗಗನ ಕುಸುಮವೇ ಸರಿ! ಯಾಕಂದರೆ "ಶಿವತತ್ವ ರತ್ನಾಕರ" ಗ್ರಂಥವನ್ನು ರಚಿಸಿದ ಕೆಳದಿಯ ಶ್ರೀ ಬಸವರಾಜನು ಮೇಲಿನ ವಿಷಯವನ್ನು ತನ್ನ ಗ್ರಂಥದಲ್ಲಿ ಉಲ್ಲೇಖಿಸದೆ ಬಿಡುತ್ತಿದ್ದಿಲ್ಲ.

ಈ ಶಿವತತ್ವ ರತ್ನಾಕರ, ಗ್ರಂಥಕಾರನು ಶ್ರೀ- ರೇವಣಸಿದ್ಧರು ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದ ವಿಷಯ ವನ್ನು, ವಿದ್ಯಾರಣ್ಯರಿಂದ ಬರೆಯಲ್ಪಟ್ಟ " ಪಿತಾಮಹಸಂಹಿತೆ " ಮತ್ತು " ಭಾರತೀಕೃಷ್ಣ "ಯತಿಯಿಂದ ವಿರಚಿತವಾದ " ವಿದ್ಯಾರಣ್ಯಕೃತ " ಎಂಬ ಗ್ರಂಥಗಳ ಆಧಾರದ ಮೇಲಿಂದ ಬರೆದಿರುವೆವೆಂದು ೪ನೆಯ ಕಲ್ಲೋಲದ ಕೊನೆಯಲ್ಲಿ–

"ವಿದ್ಯಾರಣ ಕೃತಿಂಚೈವ ಪಿತಾಮಹ ಸುಸಂಹಿತಾಂ ।
ವಿಲೋಕ್ಯಾಽಯಂ ವಿರಚಿತಃ ಕಲ್ಲೋಲೋಽಭೂಚ್ಚತುರ್ಥಕಃ

ಎಂಬುದಾಗಿ ಬರೆದಿದ್ದಾರೆ. ಅಂದಮೇಲೆ ವಿದಾರಣ್ಯರು ಬರೆದ ಪಿತಾ ಮಹ ಸಂಹಿತೆಯಲ್ಲಿಯೂ, ಭಾರತೀಕೃಷ್ಣ ಯತಿಯು ಬರೆದ ವಿದ್ಯಾರಣ್ಯರ ಕೃತಿಯಲ್ಲಿಯೂ ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದ ವಿಷಯವು ವಿಶದವಾಗಿ ಬರೆಯಲ್ಪಟ್ಟಿದೆ ಎಂಬುದು ಸ್ಪಷ್ಟ ವಾಗುವದು.

ಮತ್ತು ಶೃಂಗೇರಿ ಪೀಠಾಧಿಪತಿಗಳು ಬರೆಯಿಸಿದ "ಗುರುವಂಶ ಕಾವ್ಯದ ೫ ಮತ್ತು ೬ ನೆಯ ಸರ್ಗದ ಪದ್ಯಗಳಿಂದ ತಿಳಿದು ಬರುವುದೇನಂದರೆ–

" ಬಲ್ಲಾಳಕ್ಷಿತಿಪಾಲಕೇನ ವಿಜಿತಾ ಯುದ್ಧೇನ ಮಧ್ಯೇ ಮಹಾ
ವಲ್ಲೀಭೃದ್ವಿ ಪಿನಸ್ಯ ಚಕ್ರತು ರಿಮೌ ಶ್ರಾಂತೋಪದೇಶಂಚಿರಂ।
ನಿದ್ರಾಣಃ ಸಹಜಾಂಕಗೋಹರಿಹರ ಕ್ಷೋಣೀಭೃದೇಷಕ್ಷಣಂ
ಭದ್ರಂ ರೇವಣಸಿದ್ಧಯೋಗ್ಯಧಿಗಮಃ ಸ್ವಪ್ನಂ ತದಾಪ್ನೋತ್ತರಾಂ ॥೫॥
(ಗು-ಕಾ. ೫ನೆಯ ಸರ್ಗ.)
ಸ್ವಸ್ತಿ ಶ್ರೀ ಮನ್ನೃಪ ತವಭವೇದ್ವೀರಸಿಂಹಾಸನ ಶ್ರೀ:
ವಿದ್ಯಾರಣ್ಯ ಪ್ರಚುರಕೃಪಯಾ ಸರ್ವ ಸಂವರಕ್ಷಣಾಯ।
ವಿಶ್ವೋತ್ತುಂಗಂ ವಿಬುಧ ಕಲಯೇಶ್ಚಂದ್ರ ಮೌಳೀಶಲಿಂಗಂ
ಭಾವಿಕ್ಷ್ಮೇಶಾಸ್ತ್ರಿಗುಣ ಗಣಿತೈಕಾದಶಾಥತ್ವದಾದ್ಯಾ: ॥೧॥
ಅಗ್ರೇಭಾವೀ ತ್ರಿಭುವನಸುತೋ ವೀರಪೂರ್ವೋ ವಸಂತಃ
ಸರ್ವಾಮುರ್ವೀಂ ಸುಚರ ಮವಿತಾಧಾರ್ಮಿಕಃ ಸರ್ವಥೇತಿ।
ಉಕ್ತ್ವಾ ಸ್ವಪ್ನೇ ಹರಿಹರನೃಪಂ ರೇವಣಾಸಿದ್ಧಯೋಗೀ
ಅಂತರ್ಧಾನಂ ಸಮಭಜದಥ ಪ್ರಾಬುಧತ್ಸೋಪಿ ಭೂಪಃ ॥೨॥

ಅಂದರೆ- ಬಲ್ಲಾಳರಾಜನು, ಅಣ್ಣತಮ್ಮಂದಿರಾದ ಹರಿಹರ ಮತ್ತು ಬುಕ್ಕ, ಇವರಿಬ್ಬರನ್ನು ಯುದ್ಧದಲ್ಲಿ ಸೋಲಿಸಿದನು. ಆಗ್ಗೆ ಅವರಿಬ್ಬರೂ ಚಿಂತಾತುರರಾಗಿ ಅರಣ್ಯವನ್ನು ಸೇರಿದರು. ಹರಿಹರನು ಅತ್ಯಂತ ಚಿಂತೆಯಿಂದ ತಮ್ಮನಾದ ಬುಕ್ಕನ ತೊಡೆಯ ಮೇಲೆ ತನ್ನ ತಲೆಯನ್ನಿಟ್ಟುಕೊಂಡು ಮಲಗಿಕೊಂಡನು. ಆ ಸಮಯದಲ್ಲಿ ಶ್ರೀ .ರೇವಣಸಿದ್ಧಯೋಗಿಯು ಹರಿಹರನ ಸ್ವಪ್ನದಲ್ಲಿ ಬಂದು, " ಎಲೈ ಮಂಗಳಾಂಗನಾದ ರಾಜನೇ! ನಿನಗೆ ವಿದ್ಯಾರಣ್ಯರ ದಯೆಯಿಂದ ಸಕಲ ರಾಜ್ಯಸಂಪತ್ತು ಲಭಿಸುವುದು; ನೀನು ಅವರಲ್ಲಿರುವ ವಿಶ್ವೋತ್ತುಂಗವಾದ ಚಂದ್ರಮೌಳೀಶ್ವರ ಲಿಂಗವನ್ನು ಸಂದರ್ಶಿಸು; ಮುಂದೆ ನಿನ್ನ ರಾಜಸಿಂಹಾಸನವನ್ನು ನಿನ್ನ ವಂಶದವರು ಆರೋಹಣ ಮಾಡಿ ಚಿರಕಾಲ ಪರಿಪಾಲಿಸುವರು" ಎಂದು ಹೇಳಿ ಅಂತರ್ಧಾನನಾದನು. ಹರಿಹರನಿಗೆ ಎಚ್ಚರವಾಯಿತು ಅವನು ತನ್ನ ಶುಭಸ್ವಪ್ನವನ್ನು ತಮ್ಮನಿಗೆ ತಿಳಿಸಿದನು. ಅಣ್ಣತಮ್ಮಂದಿರಿಬ್ಬರೂ ಹರ್ಷಸಮುದ್ರದಲ್ಲಿ ತೇಲಾಡಿದರು. ಇಷ್ಟರಲ್ಲಿಯೇ ಭಂಗಹೊಂದಿ ಚದುರಿಹೋಗಿದ್ದ ಹರಿಹರನ ಸೈನ್ಯವೆಲ್ಲ ಒಂದುಗೂಡಿತು. ಸ್ವಪ್ನದಲ್ಲಾದ ಶ್ರೀ ರೇವಣಸಿದ್ಧಯೋಗಿಯ ಆದೇಶದಂತೆ ಶ್ರೀ ವಿದ್ಯಾರಣ್ಯ

ಪೂಜ್ಯಪಾದರನ್ನು ಸಂದರ್ಶಿಸಿದನು. ಅವರ ಚಂದ್ರಮೌಲೀಶ್ವರ ಪೂಜಾ ವಿಧಾನವನ್ನು ಅವಲೋಕಿಸಿ, ಆ ದೇವದೇವನನ್ನು ಸ್ತುತಿಸಿ ವಿದ್ಯಾರಣ್ಯ ಪೂಜ್ಯ ಪಾದರ ಆಶೀರ್ವಾದವನ್ನು ಪಡೆದನು. ಎಂಬುದಾಗಿ ಗುರುವಂಶದಲ್ಲಿ ಉಲ್ಲೇಖಿಸಲ್ಪಟ್ಟದೆಯಲ್ಲದೇ ಶ್ರೀ ಕೂಡಲಿ ಶೃಂಗೇರಿ ಮಠದಲ್ಲಿ ಶ್ರೀ ಎಮ್. ಎನ್. ಗೋವಿಂದಶರ್ಮ ಇವರು ತಮ್ಮ ಸಂಪಾದಕತ್ವದಲ್ಲಿ ಹೊರಡುವ "ಶಂಕರ ಭಾರತಿ" ಎಂಬ ಮಾಸಪತ್ರಿಕೆಯ ೭ನೆಯ ಸಂಚಿಕೆಯ (ತಾ-೧೬-೧೦-೧೯೫೮ ರ)ಲ್ಲಿಯೂ ಈ ವಿಷಯವನ್ನು ಉಲ್ಲೇಖಿಸಿದ್ದಾರೆ.

ಶಂಕರಭಾರತೀಯ ಹಾಗೂ ಶಿವತತ್ವರತ್ನಾಕರದ ಅಭಿಪ್ರಾಯದಂತೆ ಬಹು ಪ್ರಾಚೀನ ಕಾಲದಿಂದ ಆದಿಶಂಕರಾಚಾರ್ಯ ಮೊದಲುಗೊಂಡು ಶೃಂಗೇರಿ ಮಠದಲ್ಲಿ ಚಂದ್ರಮೌಲೀಶ್ವರ ಲಿಂಗವು ವಿರಾಜಮಾನವಾಗಿರುವದೆಂದು ಸ್ಪಟ ವಾಗಿ ತೋರುವುದು. ಹೀಗಿರುವಲ್ಲಿ ಶಾ-ಶ. ೧೫೫೪ (ಕ್ರಿ-ಶ- ೧೬೩೨)ರಲ್ಲಿ ಬಾಳೀಹೊನ್ನೂರು ಮಠದಿಂದ ಜಪ್ತ ಆದ ಚಂದ್ರಮೌಲೀಶ್ವರ ಲಿಂಗವು ಶೃಂಗೇರಿ ಪೀಠವನ್ನು ಸೇರಿತೆಂದು ಹೇಳುವ ಶ್ರೀಕಂಠಶಾಸ್ತ್ರಿಗಳ ವಾದವು ಕುಸಿದುಬೀಳುವದಲ್ಲದೇ ಅವರು ಹೇಳುವ ಶಾಸನವು ಕೂಡ ಕೃತ್ರಿಮವಾದು ದೆಂದು ಸಿದ್ಧವಾಗುವುದು. ಈ ಎಲ್ಲ ಪ್ರಬಲ ಪ್ರಮಾಣಗಳಿಂದ ಶ್ರೀ ರೇವಣ ಸಿದ್ಧರು, ಆದಿಶಂಕರರು ಸಮಕಾಲೀನರೆಂಬುದು ನಿರ್ವಿವಾದವಾದುದು.

ನಾವು ಈ ವರೆಗೂ ಪ್ರತಿಪಾದಿಸಿದ ವಿಷಯದಿಂದ ಶ್ರೀ ಜ| ರೇವಣ ಸಿದ್ಧಯೋಗೀಶ್ವರರು ಮೂರುಸಾವಿರ ವರುಷದ ಹಿಂದಿನವರೆಂದು ಸ್ಫುಟವಾಗಿ ತೋರುವುದು. ಇವರು ಶಿವನ ಪ್ರೇರಣೆಯಂತೆ ೧೪೦೦ ವರುಷ ಭೂಲೋಕದಲ್ಲಿ ಲೀಲಾಮಾತ್ರದಿಂದ ಸಂಚರಿಸಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಬೋಧಿಸಿ, ಲೋಕೋದ್ಧಾರ ಕಾರ್ಯವನ್ನು ಪೂರೈಸಿ, ತಮ್ಮ ತರುವಾಯ ಶ್ರೀ ಜ| ರುದ್ರ ಮುನಿ ಶಿವಾಚಾರ್ಯರನ್ನು ರಂಭಾಪುರಿಪೀಠಾಧಿಪತಿಗಳನ್ನಾಗಿರಿಸಿದ ವಿಷಯುವು ಸಮ್ಮತವಾಗಿರುವದು. ಅತ್ಯಂತ ಪುರಾತನವಾದ ಈ ಪೀಠಕ್ಕೆ ಪ್ರಾಚೀನ ಕಾಲದಿಂದಲೂ ಅಧಿಪತಿಗಳಾದ ಮಹಾಚಾರ್ಯರ ಸಂಖ್ಯೆಯು ಇಷ್ಟೇ ಎಂದು ನಿರ್ಣಯಿಸಲು ಅಸಾಧ್ಯವಾಗಿರುವುದು. ಆದರೂ ಶ್ರೀ ಮಠದಲ್ಲಿ ದೊರೆತ ಗ್ರಂಥಗಳ ಆಧಾರದಿಂದ ಇಲ್ಲಿಯ ವರೆಗೆ ಈ ಮಹಾಪೀಠಕ್ಕೆ ೧೧೯

ಜನ ಮಹಾಚಾರ್ಯರು ಆಗಿಹೋಗಿರುವರು. ಈ ಪರಂಪರೆಯಲ್ಲಿ ೧೧೭ನೆಯವರಾದ ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯರು ಪೀಠಕ್ಕೆ ಉತ್ತರಾಧಿಕಾರಿಗಳನ್ನು ನಿಯಮಿಸಿ ಶಿವೈಕ್ಯರಾದರು. ಆಗ ಸಮಾಜದಲ್ಲಿ ಗುರು—ವಿರಕ್ತರ ಕಲಹದಿಂದ ಉತ್ತರಾಧಿಕಾರಿಗಳಿಲ್ಲದೇ ಈ ಪೀಠವು ಕೆಲವು ಕಾಲ ಅನಾಯಕತ್ವದಲ್ಲಿ ಉಳಿದು ಬಹಳ ಜೀರ್ಣಾವಸ್ಥೆಯನ್ನು ಹೊಂದಿತು. ಶ್ರೀ ರೇಣುಕನ ಅನುಗ್ರಹದಿಂದ ಶ್ರೀ ಜ। ಅಭಿನವ ರೇಣುಕ ಶಿವಾನಂದ ರಾಜೇಂದ್ರ ಶಿವಾಚಾರ್ಯರು ಪೀಠಾಧಿಕಾರ ಹೊಂದಿದ ನಂತರ ಪುನಃ ಘನತೆಯನ್ನು ಹೊಂದಿತು. ಈ ಮಹಾನುಭಾವರು ಬಳ್ಳಾರಿ ಜಿಲ್ಲಾ ಹಿರೇಹಾಳು ಹಿರೇಮಠಾಧ್ಯಕ್ಷರಾದ ಸಿದ್ಧೇಶ್ವರ ಶಾಸ್ತ್ರಿಗಳ ಧರ್ಮಪತ್ನಿ ಸೌ॥ ಸಿದ್ಧವೀರಮ್ಮನವರ ಗರ್ಭದಲ್ಲಿ ಶಾ॥ ಶ॥ ೧೮೧೨ ವಿಕೃತನಾಮ ಸಂವತ್ಸರ ಶ್ರಾವಣ ಶುದ್ಧ ೨ ದಿವಸ ಜನ್ಮವೆತ್ತಿದರು. ಇವರಿಗೆ ಸದಾಶಿವಾಚಾರ್ಯ ಎಂಬ ಹೆಸರುಂಟು. ಬಾಲ್ಯದಲ್ಲಿ ಪ್ರಾಥಮಿಕ ಶಿಕ್ಷಣ ಹೊಂದಿ, ಇವರು ಅಬ್ಬೀಗೇರಿ ಹಾಗೂ ಸೊಲ್ಲಾಪುರ ಸಂಸ್ಕೃತ ಪಾಠಶಾಲೆಯಲ್ಲಿ ಅಧ್ಯಯನ ಮಾಡಿ ಮುಂದೆ ಉಚ್ಚ ಶಿಕ್ಷಣಕ್ಕಾಗಿ ಕಾಶಿಗೆ ತೆರಳಿದರು. ಅಲ್ಲಿ ಜಗದ್ಗುರುವಿಶ್ವಾರಾಧ್ಯ ಗುರುಕುಲ (ಜಂಗಮವಾಡಿ ಮಠ)ದಲ್ಲಿದ್ದು ವ್ಯಾಕರಣತೀರ್ಥ ಪದವೀಧರರಾದರು. ಇವರು ಸಂಗೀತದಲ್ಲಿಯೂ ನೈಪುಣ್ಯವನ್ನು ಹೊಂದಿದ್ದರು, ಹಾಗೂ ವ್ಯವಹಾರ ಕುಶಲರಾಗಿದ್ದರು. ಆಗ ಅನಾಯಕತ್ವದಲ್ಲಿ ಉಳಿದ ಶ್ರೀ ರಂಭಾಪುರಿ ಮಠಕ್ಕೆ ಈ ಸದಾಶಿವ ಶಾಸ್ತ್ರಿಗಳೇ ಅರ್ಹರೆಂದು ಸಮಾಜದ ಮುಖಂಡರು ಅಭಿಪ್ರಾಯವಿತ್ತುದನ್ನು ಪೀಠದ ದ್ರೋಹಿಗಳು ನಿಷೇಧಿಸಿ ವಿಘ್ನಕಾರಿಗಳಾದರು. ಆಗ ಮೈಸೂರು ಮಹಾರಾಜರಾದ ಕೃಷ್ಣರಾಜ ಒಡೆಯರಿಂದ ವಿರೋಧವು ಅನಾದರಿಸಲ್ಪಟ್ಟು ಇವರೇ ಯೋಗ್ಯರೆಂದು ತೀರ್ಮಾನಿಸಲ್ಪಟ್ಟು ಶ್ರೀ ಜಗದ್ಗುರು ಶೃಂಗೇರಿ ಪೀಠದ ಮಹಾಚಾರ್ಯರ ಸಹಾಯದಿಂದಲೂ, ಶ್ರೀ ಉಜ್ಜಯಿನಿ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರ ತಪೋಬಲದಿಂದಲೂ ಪಂ। ಶ್ರೀ। ಕಾಶೀನಾಥ ಶಾಸ್ತ್ರಿಗಳ ಬುದ್ಧಿಕೌಶಲ್ಯದಿಂದಲೂ ಪೀಠಾಭಿಮಾನಿಗಳ ಧನಸಹಾಯದಿಂದಲೂ ರಂಭಾಪುರಿ ಪೀಠಕ್ಕೆ ಆಗ ಒದಗಿದ ಕಂಟಕವು ದೂರಾಗಿ ಪೀಠವು ಅಭಿವೃದ್ಧಿಪಥದಲ್ಲಿ ಕಾಲಿಡಲು ಅನುವಾಯಿತು. ಉಜ್ಜಯಿನಿ ಜ। ಸಿದ್ಧಲಿಂಗ ಶಿವಾಚಾರ್ಯರು ಹಾಗೂ ಸ್ವಾಮಿಗಳವರ ಅಮೃತಹಸ್ತದಿಂದ ಶಾ॥ ಶ॥ ೧೮೪೬ ನೆಯ ಕ್ರೋಧ

ನಾಮ ಸಂವತ್ಸರ ಮಾರ್ಗಶೀರ ಶು|| ೭ (ತಾ|| ೨೨—೧೧—೧೯೨೫ ನೆಯ ಇಸ್ವಿ) ದಿವಸ ಪಂ| ಶ್ರೀ ಸದಾಶಿವ ಶಾಸ್ತ್ರಿಗಳು ಶ್ರೀ ರಂಭಾಪುರಿ ಪೀಠದ ಪಟ್ಟಾಧಿಕಾರವನ್ನು ಸಂಭ್ರಮದೊಡನೆ ಸ್ವೀಕರಿಸಿ ಜ| "ಅಭಿನವ ರೇಣುಕ ಶಿವಾನಂದ ರಾಜೇಂದ್ರ ಮಹಾಸ್ವಾಮಿಗಳೆಂ"ಬ ನೂತನಾಭಿಧಾನದಿಂದ ಸುಶೋಭಿತರಾದರು. ಇವರು ದೇಶದ ಎಲ್ಲ ಭಾಗದಲ್ಲಿಯೂ ಸಂಚರಿಸಿ ಧರ್ಮ ಪ್ರಚಾರ, ವಿದ್ಯಾಪ್ರಚಾರ, ಕಾರ್ಯ ಕೈಕೊಂಡು ಜನಜಾಗ್ರತೆ ಮಾಡಿದರು. ಮಠಕ್ಕೆ ಯಾಲಕ್ಕಿ. ಕಾಫಿ, ತೆಂಗು, ಅಡಿಕೆ ಇತ್ಯಾದಿ ಬೆಳೆ ಬರುವ ಲಕ್ಷಾಂತರ ರೂಪಾಯಿ ಬೆಲೆಯುಳ್ಳ ಭೂಮಿಯನ್ನು ಸಂಪಾದಿಸಿ ರಜತ, ಸುವರ್ಣ ರತ್ನಾ ಭರಣಾದಿ ಐಶ್ವರ್ಯವನ್ನು ಅಭಿವೃದ್ಧಿಗೊಳಿಸಿದರು. ಸಾಹಿತ್ಯ, ಸಂಗೀತ, ಕಲಾ ವಿದರಿಗೂ, ಪಂಡಿತರಿಗೂ, ಪಾಮರರಿಗೂ, ಇವರು ವಿಪುಲವಾಗಿ ಹಣವನ್ನು ದಾನಮಾಡಿ ತ್ಯಾಗಿಗಳೆಂದು ಹೆಸರಾದರು. ಅವರ ಪುಣ್ಯನಾಮವು ಪ್ರಾತಃಸ್ಮರ ಣೀಯವಾಗಿದೆ. ಈ ಗುರುಸಾರ್ವಭೌಮರು ೨೧ ವರುಷಗಳವರೆಗೂ ವೀರಶೈವ ಧರ್ಮೋದ್ಧಾರ ಕಾರ್ಯವನ್ನು ಅಖಂಡವಾಗಿ ನೆರವೇರಿಸಿ ಸರ್ವಜಿತು ನಾಮ ಸಂವತ್ಸರ ಶ್ರಾವಣ ಶು|| ೪ (ತಾ. ೧-೮-೧೯೪೭) ದಿವಸ ಕೈಲಾಸವಾಸಿ ಗಳಾದರು.

ತರುವಾಯ ಹುಬ್ಬಳ್ಳಿ ತಾಲೂಕ ಪಾಲೀಕೊಪ್ಪ ಗ್ರಾಮದ ಹಿರೇಮಠದ ಪಟ್ಟಾಧಿಕಾರಿಗಳಾದ ಗಂಗಾಧರ ಶಿವಾಚಾರ್ಯರು ಘನ ವಿದ್ವಾಂಸರೂ, ಭೀಷ್ಮ ಬ್ರಹ್ಮಚಾರಿಗಳೂ, ವೀರ ತಪಸ್ವಿಗಳೂ, ಸರಸ ಕವಿಗಳೂ ಆಗಿರುವರು. ಇವರು ೧೯೪೩ ನೆಯ ಇಸ್ವಿಯಲ್ಲಿ ಲಕ್ಷ್ಮೇಶ್ವರದ ಸನಿಹದಲ್ಲಿ "ಮುಕ್ತಿಮಂದಿರವೆಂಬ" ಪುಣ್ಯಾಶ್ರಮವನ್ನು ಸ್ಥಾಪಿಸಿ, ಅಲ್ಲಿ ಲೋಕಕಲ್ಯಾಣಕ್ಕಾಗಿ ತಪೋನುಷ್ಠಾನ ವನ್ನು ಆಚರಿಸುತ್ತ ಪ್ರಖ್ಯಾತಿಯನ್ನು ಪಡೆದಿದ್ದರು. ಇವರು ಶ್ರೀ ಜ. ಶಿವಾನಂದ ರಾಜೇಂದ್ರ ಮಹಾಸ್ವಾಮಿಗಳ ಉಯಿಲ್‌ಪ್ರಕಾರ ಉಜ್ಜಯಿನಿ ಜ. ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ ಹಾಗೂ ಶ್ರೀ ಶೈಲಪೀಠದ ಜ. ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ರಂಭಾ ಪುರಿ ಕ್ಷೇತ್ರದಲ್ಲಿ ಶಾ. ಶ. ೧೮೬೯ ನೆಯ ಸರ್ವಧಾರಿ ನಾಮ ಸಂವತ್ಸರ ವೈಶಾಖ ಶು|| ೧೨ (ತಾ. ೨-೫-೧೯೪೭ ನೆಯ ಇಸ್ವಿ) ದಿವಸ ರಂಭಾಪುರಿ ಪೀಠಾಧಿಕಾರ ವನ್ನು ಸ್ವೀಕರಿಸಿ ಜಗದ್ಗುರು ಪ್ರಸನ್ನ ರೇಣುಕವೀರಗಂಗಾಧರ ಶಿವಾಚಾರ್ಯ

ಮಹಾಸ್ವಾಮಿಗಳೆಂಬ ಅಭಿಧಾನದಿಂದ ಭೂಷಿತರಾದರು (ಸದ್ಯಃ ಇವರೇ ಈ ಪೀಠಾಧಿ ಪತ್ಯವನ್ನು ವಹಿಸಿದವರಾಗಿರುವರು.) "ಯದ್ಯತ್ ಕರ್ಮಕರೋಮಿ ತದಖಿಲಂ" ಎಂಬ ಶ್ರೀ ಶಂಕರ ಭಗವತ್ಪಾದರ ವಾಕ್ಯದಂತೆ ಈ ಪೂಜ್ಯ ಸ್ವಾಮಿಗಳು ಮಾನವ ಧರ್ಮದ ಕಲ್ಯಾಣಕ್ಕಾಗಿ ಇಡೀ ದಿನವನ್ನು ತಪೋನುಷ್ಠಾನದಲ್ಲಿ ಕಳೆಯುತ್ತಿರುವರು. ಕಠಿಣವಾದ ಕಬ್ಬಿಣವು, ಪರಷಮಣಿಯ ಸಂಪರ್ಕದಿಂದ ಸುವರ್ಣವಾಗುವಂತೆ ನಾಸ್ತಿಕನು ಈ ಪೂಜ್ಯಪಾದರ ಸಂದರ್ಶನದಿಂದ ದೇವಭಕ್ತನಾಗಬಲ್ಲನು. ಈ ಗುರುಪುಂಗವರ ೧ ಶ್ರಾವಣೀ ಪೂಜಾ, ೨ ವಿಜಯಾ ದಶಮೀ ಪೂಜಾ, ೩ ಧನುರ್ಮಾಸ ೪ ಮಹಾಶಿವರಾತ್ರಿ ಪೂಜಾ ೫ ಸಹಸ್ರ ಕುಂಭಾಭಿಷೇಕ, ೬ ಲಕ್ಷಬಿಲ್ವಾರ್ಚನೆ, ೭ ಸಹಸ್ರ ದೀಪೋತ್ಸವ, ೮ ಲಕ್ಷ ದೀಪೋತ್ಸವ ಎಂಬೀ ಅಷ್ಟೈಶ್ವರ್ಯಯುಕ್ತ ಶಿವಪೂಜಾ ವಿಭೇದಗಳು ಇಂದ್ರನ ಅಷ್ಟೈಶ್ವರ್ಯವನ್ನು ಅಣುಕಿಸುವಂತಿವೆ. ಇವುಗಳಲ್ಲಿ ಸಹಸ್ರ ಕುಂಭಾಭಿಷೇಕವು ದರ್ಶನೀಯವಾಗಿದೆ. ಮಹಾ ಸ್ವಾಮಿಗಳವರು ಶಿವ ಪೂಜೆಗಾಗಿ ಕೂಡ್ರುವ ಸಿಂಹಾಸನವು ಸುವರ್ಣ, ರಜತಮಿಶ್ರಣದಿಂದ ನಿರ್ಮಿಸಲ್ಪಟ್ಟಿದೆ. ಅದರಲ್ಲಿ ಅನೇಕ ಸುಂದರ ಚಿತ್ರಗಳನ್ನು ಕೆತ್ತಿದ ಶಿಲ್ಪಿಯು ತನ್ನ ಬುದ್ಧಿ ಕೌಶಲ್ಯವನ್ನು ಪ್ರದರ್ಶಿಸಿರುವನು. ಆ ಸಿಂಹಾಸನದಲ್ಲಿ ಅಲ್ಲಲ್ಲಿ ಮನೋಹರವಾದ, ಅಮೂಲ್ಯವಾದ ವಿವಿಧ ಬಣ್ಣದ ನಿರ್ಮಲ ಮಣಿರತ್ನಗಳು ಸುಸಂಬದ್ಧವಾಗಿ ಉಟ್ಟಂಕಿಸಲ್ಪಟ್ಟಿವೆ. ಅವುಗಳು ವೈಭವ ಪೂರ್ಣ ಮಹಾ ಪೂಜಾದರ್ಶನದ ಹರ್ಷದಿಂದ ನಸುನಗುತ್ತಿರುವಂತೆ ವಿದ್ಯುದ್ದೀಪಗಳಲ್ಲಿ ಹೊಳೆಯುತ್ತಿರುವವು. ಈ ಸಿಂಹಾಸನದಲ್ಲಿ ಮಹಾಸ್ವಾಮಿಗಳು ಸುವರ್ಣ ಕಿರೀಟಧಾರಿಗಳಾಗಿ ಅಲಂಕೃತರಾಗಿ ಕುಳಿತಿರುವರು ಎಡಬಲದಲ್ಲಿ ವೇದ ಘೋಷಮಾಡುತ್ತಿರುವ ಉಪಾಚಾರ್ಯರು ಪ್ರಮಥರಂತೆ ಭಕ್ತಿಯುಕ್ತರಾಗಿ ಕುಳಿತಿರುವರು. ಸಹಸ್ರಾರು ಜನರು ಮಹಾಸ್ವಾಮಿಗಳ ಸಮ್ಮುಖದಲ್ಲಿ ಭಿತ್ತಿ ಚಿತ್ರದಂತೆ ನಿಶ್ಚಲರಾಗಿ ಎವೆಇಕ್ಕದೆ ನೋಡುತ್ತ ಕುಳಿತಿರುವರು. ಮಹಾಸ್ವಾಮಿಗಳು ತಮ್ಮೆದುರು ಇರುವ ರಮಣೀಯವಾದ ರಜತ ಪೀಠದಲ್ಲಿ ಸೂತ್ರ ಸಂಬಂಧವನ್ನಿಟ್ಟು, ಆ ಪೀಠದಲ್ಲಿ ಸುವರ್ಣ ಕಮಲವನ್ನಿಟ್ಟು, ಅದರಲ್ಲಿ ಇಷ್ಟಲಿಂಗವನ್ನಿರಿಸಿ, ಅರ್ಘ್ಯಪಾದ್ಯಾದಿಗಳಿಂದ ವಿಧ್ಯುಕ್ತವಾಗಿ ಆ ಇಷ್ಟಲಿಂಗವನ್ನು ಅರ್ಚಿಸುವರು. ಈ ಶಿವಯೋಗಸಿದ್ಧರು ಕಲಿಪುರುಷನನ್ನು ಗರ್ಜಿಸುವಂತೆಯೂ ಪಾಪಿಗಳನ್ನು ತರ್ಜಿಸುವಂತೆಯೂ ವೇದ ಮಂತ್ರ

ಗಳನ್ನು ಉದ್ಘೋಷಿಸುತ್ತ ತದೇಕ ಚಿತ್ತದಿಂದ ಶಿವನನ್ನು ಆಹ್ವಾನಿಸಿ ಆರಾಧಿಸುತ್ತಿರುವುದನ್ನು ನೋಡಿದರೆ ಎಂಥ ನಾಸ್ತಿಕನಾದರೂ ಶಿವನಾಮೋಚ್ಚಾರ ಮಾಡದಿರಲಾರನು. ಮಹಾಸ್ವಾಮಿಗಳು ಸಿದ್ಧಾಸನ ಬದ್ಧರಾಗಿ, ಹನ್ನೆರಡು ತಾಸುಗಳವರೆಗೆ ಕರ್ಮೇಂದ್ರಿಯ ಕ್ರಿಯೆಗಳನ್ನು ನಿಲ್ಲಿಸಿ ಚಂಚಲವಾದ ಮನವನ್ನು ಬಂಧಿಸಿ, ಭಕ್ತರ ಭವಣೆಯ ನಿವಾರಣೆಗಾಗಿ ಭಗವಾನ್ ಭವಾನೀ ಪತಿಯನ್ನು ಭಕ್ತಿತತ್ಪರರಾಗಿ ಭಜಿಸುತ್ತಿರುವುದನ್ನು ನೋಡಿದ ಭಕ್ತನೇ ಧನ್ಯಧನ್ಯ.

ಈ ಕುಂಭಾಭಿಷೇಕದಲ್ಲಿ ಉಪಯೋಗಿಸುತ್ತಿರುವ ಸಾಮಗ್ರಿ ಸಲಕರಣಿಗಳು ಸುಮಾರು ೨ ಟ್ರಕ್ಕಿನಷ್ಟಿವೆ. ಸುಮಾರು ೫ ಸಾವಿರ ಜನರು ಕೂಡ್ರುವ ಭವ್ಯವಾದ ಪೂಜಾ ಮಂಟಪವಿರುವುದು. ಆ ಮಂಟಪದ ಉಪಾಂತ್ಯಭಾಗದಲ್ಲಿ ಅಲ್ಲಲ್ಲಿ ಒಂದೂವರಿ ಪುರುಷಪ್ರಮಾಣ ಎತ್ತರವಿರುವ ೩ ಫೂಟು ಅಗಲವಿರುವ ಹಿತ್ತಾಳೆಯ ಸಮೆ, ಇವುಗಳು ಅಲ್ಲಲ್ಲಿ ಜಾಜ್ವಲ್ಯಮಾನವಾಗಿ ಹನ್ನೆರಡು ತಾಸುಗಳವರೆಗೂ ಅಖಂಡವಾಗಿ ಬೆಳಗುತ್ತಿರುವವು. ಈ ಎಲ್ಲ ಸಮೆಗಳಿಗೂ ಬತ್ತಿಗಾಗಿ ಉಪಯೋಗಿಸುತ್ತಿರುವ ಅರಳೆಯು ೩ ಕಿಲೋದಷ್ಟು ಬೇಕಾಗುವುದು. ಒಂದೊಂದು ಸಮೆಗೆ ಒಂದು ಸಾರೆಗೆ ೩ ಕಿಲೋ ಕುಸಿಬೆ ಎಣ್ಣೆಯನ್ನು ತುಂಬುವುದುಂಟು. ಎಲ್ಲ ಸಮೆಗಳಿಗೆ ಒಂದುಸಾರೆ ೩೦–೪೦ ಕಿಲೋ ಎಣ್ಣೆ ಬೇಕಾಗುವುದು. ಈ ಪ್ರಕಾರವಾಗಿ ಹನ್ನೆರಡು ತಾಸುಗಳಲ್ಲಿ ಒಟ್ಟಾರೆ ೧೫–೨೦ ಡಬ್ಬಿ ಎಣ್ಣೆ ಬೇಕಾಗುವುದು. ಇಂಥ ವೈಭವಪೂರ್ಣ ಶಿವಪೂಜಾ ಪದ್ಧತಿಯು, ಶ್ರೀ ಜ. ವೀರಗಂಗಾಧರ ಶಿವಾಚಾರ್ಯರ ಮಹಾಸನ್ನಿಧಿಯಲ್ಲಿ ಮಾತ್ರ ಜರಗುವುದಲ್ಲದೇ ಭಾರತದ ಬೇರಾವಸ್ಥಾನದಲ್ಲಿಯೂ ಮಾನವನು ಕಾಣಲಾರನೆಂದು ಕೈಎತ್ತಿ ಹೇಳಬಹುದು. ಇಂಥ ಸಹಸ್ರ ಕುಂಭಾಭಿಷೇಕ ಪೂಜೆಯು ಒಂದಲ್ಲ ಎರಡಲ್ಲ ಅಸಂಖ್ಯಪೂಜೆಗಳು ಜರಗಿಹೋಗಿವೆ. ಇದೆಲ್ಲವೂ ಜ. ರೇವಣಸಿದ್ಧ ಮಹಾಯೋಗೀಶ್ವರರ ಲೀಲಾಜಾಲವಲ್ಲದೇ ಬೇರೆಯಲ್ಲ. ಆ ಮಹಾಯೋಗಿಯು ಅಂದಿನಿಂದ ಇಂದಿನವರೆಗೆ ಅಖಂಡನಾಗಿ ಜ್ಞಾನಿಗಳ ಹೃತ್ಪದ್ಮಚಾರಿಯಾಗಿರುವನು. ಅಂಥ ಜ. ರೇವಣಸಿದ್ಧ ಮಹಾಯೋಗೀಶ್ವರ ಜಯಂತ್ಯುತ್ಸವವನ್ನು ಫಾಲ್ಗುಣಶುದ್ಧ ೧೩ರಲ್ಲಿ ಸರ್ವರೂ ಆಚರಿಸಿ ಆನಂದಪಡೆಯಬೇಕು.

## ಅನಂಗ

ಮನ್ಮಥನು ಬ್ರಹ್ಮದೇವನ ಮಗನಾಗಿರುವನು. ಅವನು ರೂಪ ಲಾವಣ್ಯಾದಿಗಳಲ್ಲಿ ಮೂಲೋಕಗಳನ್ನು ಮೀರಿದವನಾಗಿದ್ದನು. ಆದುದದರಿಂದ ಬ್ರಹ್ಮನು ಅವನಿಗೆ ಹುಟ್ಟುತ್ತಲೇ "ಸಕಲ ಜೀವಿಗಳ ಹೃದಯವು ನಿನ್ನ ವಶವಾಗಿರಲಿ" ಎಂಬವರವನ್ನು ಅವನಿಗೆ ಅನುಗ್ರಹಿಸಿದನು. ಕಾಮನು ಇಂಥ ವರವನ್ನು ಪಡೆದವನಾಗಿ ಮೊಟ್ಟಮೊದಲು ಬ್ರಹ್ಮನ ಮೇಲೆ ಪುಷ್ಪಬಾಣವನ್ನು ಪ್ರಯೋಗಿಸಿ ಸಫಲತೆಯನ್ನು ಪಡೆದನು. ಅನಂತರ ಸಕಲ ಸುರಾಸುರರ ಮೇಲೆ ದಾಳಿಯನ್ನು ಮಾಡಿ ಜಯಶೀಲನಾದನು. ಹೀಗಿರುತ್ತಿರಲು ಕಾಮದೇವನು ಒಂದು ದಿನ ಸಮಾಧಿಸ್ಥನಾದ ಭಗವಾನ್ ಶಿವನ ಮೇಲೆಯೂ ಕುಸುಮಶರವನ್ನು ಬಿಟ್ಟನು. ಅದರಿಂದ ಸಿಟ್ಟಿಗೆದ್ದ ಶಂಕರನು ತನ್ನ ಹಣೆಗಣ್ಣಿನಿಂದ ಕಾಮನನ್ನು ಸುಟ್ಟು ಭಸ್ಮಮಾಡಿದನು.

ರತಿದೇವಿಯು ಕಾಮದೇವನ ಸತಿಯಾಗಿರುವಳು. ಪತಿಯ ದುರ್ದಶೆಯನ್ನು ಕಣ್ಣಾರೆ ಕಂಡು ಸಂತಾಪಗೊಂಡು ಶಿವನಲ್ಲಿಗೆ ಬಂದು— 'ದೇವ! ನನ್ನ ಪತಿಗೆ ಪ್ರಾಣದಾನಮಾಡಬೇಕೆಂ'ದು ಕೈಜೋಡಿಸಿಕೊಂಡು ಪರಿಪರಿಯಾಗಿ ಪ್ರಾರ್ಥಿಸಿದಳು.

ದಯಾನಿಧಿಯಾದ ಮಹಾದೇವನು, ದುಃಖಿಯಾದ ರತಿದೇವಿಯನ್ನು ಸಂತೈಸಿ ನುಡಿದುದೇನಂದರೆ— "ನಿನ್ನ ಪತಿಯು ಶ್ರೀಕೃಷ್ಣನ ಸತಿಯಾದ ರುಕ್ಮಿಣಿಯ ಗರ್ಭದಿಂದ 'ಪ್ರದ್ಯುಮ್ನನೆಂಬ' ಹೆಸರಿನಿಂದ ಪುನರ್ಜನ್ಮ ಹೊಂದುವನು. ನೀನು 'ಮಾಯಾವತಿಯೆಂ'ಬ ಹೆಸರಿನಿಂದ ಶಂಬರಾಸುರನಿಗೆ ಮಗಳಾಗಿ ಜನಿಸಿ ಪ್ರದ್ಯುಮ್ನನೊಡನೆ ವಿವಾಹಿತಳಾಗುವಿ" ಎಂದು ನುಡಿದು ಅದೃಶ್ಯನಾದನು.

ಶಿವನ ಸಂಕೇತದಂತೆ ಕಾಮದೇವನು ರುಕ್ಮಿಣೀದೇವಿಗೆ ಮಗನಾಗಿ ಜನಿಸಿದನು. ಆರನೆಯದಿವಸ ಶಂಬರನೆಂಬ ಅಸುರನು ಆ ಎಳೆಯಮಗುವನ್ನು ಎತ್ತಿಕೊಂಡು ಹೋಗಿ ಸಮುದ್ರದಲ್ಲಿ ಎಸೆದನು. ಒಂದು ದೊಡ್ಡ ಮೀನವು ಆ ಕೂಸನ್ನು ನುಂಗಿತು. ಜಾಲಗಾರರು ಮೀನವನ್ನು ಹಿಡಿದುತಂದು

ಶಂಬರಾಸುರನಿಗೆ ಕೊಟ್ಟರು. ಶಂಬರನು, ಮೀನದ ಹೊಟ್ಟೆ ಹರಿದು ನೋಡುವಷ್ಟರಲ್ಲಿ ಕೂಸುಲಭಿಸಿತು. ಅವನು ಆಶ್ಚರ್ಯಭರಿತನಾದ ಆದರೆ ಅಂದು ತಾನು ಎಸೆದ ಕೂಸೆಂಬುದನ್ನು ಲಕ್ಷಿಸಲಿಲ್ಲ. ಆದುದರಿಂದ ತನ್ನ ಕನ್ಯೆಯಾದ ಮಾಯಾವತಿಯ ಕೈಯಲ್ಲಿ ಆ ಮಗುವನ್ನು ಕೊಟ್ಟನು.

ಮಾಯಾವತಿಯಾದರೋ ಖುದ್ದ ರತಿದೇವಿಯಾದುದದರಿಂದ ಪತಿಯ ಪ್ರತೀಕ್ಷೆಯಲ್ಲಿಯೇ ಇದ್ದಳು. ಅವಳು ಸುಕುಮಾರದೇಹಿಯಾದ ಕೂಸಿನ ರೂಪಲಾವಣ್ಯಾದಿಗಳನ್ನು ನೋಡಿ, ಕಾಮದೇವನೆಂದು ದೃಢವಾಗಿ ನಂಬಿದಳಲ್ಲದೆ ಚೆನ್ನಾಗಿ ಲಾಲನ ಪಾಲನೆ ಮಾಡಹತ್ತಿದಳು.

ಪ್ರದ್ಯುಮ್ನ ಬೆಳೆದು ದೊಡ್ಡವನಾದನಂತರ ಮಾಯಾವತಿಯು ಗತಜನ್ಮದಲ್ಲಿ ತನಗೆ ಭಗವಾನ್ ಶಂಕರನು ಹೇಳಿದ ಯಾವತ್ತೂ ವೃತ್ತಾಂತವನ್ನು ಅವನಿಗೆ ಅರುಹಿದಳು. ಹಾಗೂ ತನ್ನ ತಂದೆಯು ಸಮುದ್ರದಲ್ಲಿ ಎಸೆದುದನ್ನು ವಿಶದಪಡಿಸಿದಳು. ಅವನು ಕ್ರೂರನಾದ ಶಂಬರಾಸುರನನ್ನು ಸಂಹರಿಸಿ ಮಾಯಾವತಿಯೊಡನೆ ವಿವಾಹಿತನಾದನು.

ಪ್ರದ್ಯುಮ್ನನು ಮೀನದ ಹೊಟ್ಟೆಯೊಳಗಿಂದ ಉದಯಿಸಿ ಬಂದುದರಿಂದ ಅವನ ಧ್ವಜದಲ್ಲಿ ಮೀನದ ಚಿನ್ಹವಿದೆ. ಆದರಿಂದ ಮೀನಕೇತನ ಎಂತಲೂ ಅನ್ನುವದುಂಟು. ಕಾಮದೇವನು ಗಿಳಿವಾಹನವುಳ್ಳವನಾಗಿಯೂ, ಪುಷ್ಪ ಬಾಣವುಳ್ಳವನಾಗಿಯೂ ಇರುವನು.

## ಕಾಮದಹನ–ಹೋಳೀಹುಣ್ಣಿವೆ

### ಫಾಲ್ಗುಣ ಶುದ್ಧ ೧೫

ಫಾಲ್ಗುಣ ಶುದ್ಧ ಪೌರ್ಣಿಮಿಯಲ್ಲಿ ಹುಬ್ಬಾನಕ್ಷತ್ರವಿರುವಾಗ ಕಾಮದಹನವನ್ನು ಮಾಡುವುದುಂಟು. ಈ ಹಬ್ಬವು ಭಾರತದ ಮೂಲೆ ಮೂಲೆಯಲ್ಲಿ ಆಚರಿಸಲ್ಪಡುತ್ತದೆ. ಕಾಮದಹನ ಮತ್ತು ಹೋಲಿಕಾದಹನ ಇವುಗಳಲ್ಲಿ ಭೇದವಿರುತ್ತದೆ. ತಾರಕಾಸುರನ ವಧೆಯ ಪೂರ್ವದಲ್ಲಿ ಭಗವಾನ ಶಂಕರನಿಂದ ಕಾಮದಹನವು ಸಂಭವಿಸಿದುದಾಗಿದೆ. ಹೋಲಿಕಾದಹನದ ಬಗ್ಗೆ ಒಂದು ಕಥೆಯು ವಸಿಷ್ಠ ಋಷಿಯ ಕಾಲದಲ್ಲಿ, ಮತ್ತೊಂದು ಕಥೆಯು

ಪ್ರಲ್ಹಾದನ ಕಾಲದಲ್ಲಿ ಹುಟ್ಟಿರುವುದಾಗಿ ತಿಳಿದುಬರುತ್ತದೆ. ಇವುಗಳ ವಿವರಣೆಯನ್ನು ಈ ಮುಂದೆ ಉಲ್ಲೇಖಿಸಿದ್ದೇವೆ.



ಒಂದಾನೊಂದು ಕಾಲದಲ್ಲಿ ತಾರಕಾಸುರನೆಂಬ ಬಲಾಢ್ಯನಾದ ರಾಕ್ಷಸನು ದೇವತೆಗಳ ಮೇಲೆ ದಂಡೆತ್ತಿಹೋದನು. ಅವನ ಪರಾಕ್ರಮಕ್ಕೆ ಎಲ್ಲ ದೇವತೆಗಳು ಪರಾಜಯುವನ್ನು ಹೊಂದಿ ಬ್ರಹ್ಮದೇವನಿಗೆ ಶರಣುಹೋಗಿ ನಾನಾಪ್ರಕಾರವಾಗಿ ಸ್ತೋತ್ರ ಮಾಡತೊಡಗಿದರು. ಬ್ರಹ್ಮನು ಶೋಕಸಂತ ಪ್ತರಾದ ದೇವತೆಗಳನ್ನು ಕುರಿತು—"ಈ ಹೊತ್ತು ನಿಮ್ಮ ಮುಖವು ಮಲಿನ ವಾಗಿರಲು ಕಾರಣವೇನೆಂ"ದು ಕೇಳಿದನು. ಇಂದ್ರಾದಿ ದೇವತೆಗಳು ಮದೋನ್ಮತ್ತನಾದ ತಾರಕಾಸುರನ ಯಾವತ್ತೂ ವೃತ್ತಾಂತವನ್ನು ಆಮೂಲಾ ಗ್ರವಾಗಿ ಅರಿಕೆ ಮಾಡಿಕೊಂಡರು. ಆ ಮಾತನ್ನು ಕೇಳಿ ಬ್ರಹ್ಮನು ಆಲೋಚಿಸಿ ಎಲೈ ದೇವತೆಗಳೇ "ಈಗ ತಾರಕಾಸುರನನ್ನು ಸೋಲಿಸತಕ್ಕವರು ಜಗತ್ತಿನಲ್ಲಿ ಯಾರೂ ಇಲ್ಲ. ಅಂಥವರನ್ನು ಆತನು ನನ್ನಿಂದಲೇ ಪಡೆದಿದ್ದಾನೆ. ಅವನ ನಾಶವಾಗಬೇಕಾದರೆ ನಿಮಗೊಂದು ಹಂಚಿಕೆಯನ್ನು ಹೇಳುವೆನು-"ಜಗದಾತ್ಮಾ ಸ್ವರೂಪನಾದ ಶಂಕರನು ಈಗ ಹಿಮಾಲಯ ಪರ್ವತದಲ್ಲಿ ಸಮಾಧಿಮಗ್ನ ನಾಗಿ ತಪಸ್ಸನ್ನಾಚರಿಸುತ್ತಲಿದ್ದಾನೆ. ಪೂರ್ವಜನ್ಮದಲ್ಲಿ ಆತನಿಗೆ ಪತ್ನಿಯಾದ ಸತಿದೇವಿಯು, ಹಿಮವಂತರಾಜನ ಮಗಳಾಗಿ ಜನಿಸಿ ಪಾರ್ವತಿಯೆಂಬ ಹೆಸರಿನಿಂದ ಪರಮಾತ್ಮನ ಸೇವೆಯಲ್ಲಿ ತತ್ಪರಳಾಗಿದ್ದಾಳೆ. ಈ ಸಮಯದಲ್ಲಿ

ಅಲ್ಲಿಗೆ ಕಾಮನನ್ನು ಪ್ರೇರಿಸಿರಿ. ಅವನಿಂದ ಶಿವನ ಸಮಾಧಿ ಭಂಗವಾಗಲು ಪಾರ್ವತಿಯೊಡನೆ ವಿವಾಹವು ಜರುಗುವದು. ಆಮೇಲೆ ಶಂಕರನಿಂದ ಜನಿಸಿದ ಕುಮಾರನಿಂದಲೇ ತಾರಕಾಸುರನ ವಧೆಯಾಗುವದು. ಹೀಗೆ ಮಾಡಿದ್ದಾದರೆ ನೀವು ಸುಖಿಗಳಾಗುವಿರಿ ಎಂದು ಬ್ರಹ್ಮನು ಹೇಳಿ ಅಂತರ್ಧಾನನಾದನು. ಆಮೇಲೆ ಎಲ್ಲ ದೇವತೆಗಳ ಆಜ್ಞೆಯಂತೆ ಕಾಮನು ಅನೇಕ ವಸ್ತ್ರಾಲಂಕಾರ ಗಳಿಂದ ಭೂಷಿತನಾಗಿ ಕೈಯಲ್ಲಿ ಪುಷ್ಪಧನುಸ್ಸನ್ನು ತೆಗೆದುಕೊಂಡನು. ಆಗ ಆತನು ತನ್ನ ಸುಂದರವಾದ ಅವಯುವಗಳನ್ನು, ಅರವಿಂದ ಮೊದಲಾದ ಪಂಚ ಬಾಣಗಳನ್ನು ನೋಡಿ ಮನದಲ್ಲಿ ಹಿರಿಹಿರಿ ಹಿಗ್ಗಿದನು. ಹರಿ – ಬ್ರಹ್ಮ ಮೊದಲಾದ ದೇವತೆಗಳನ್ನು, ಅನೇಕ ದಾನವ ವೀರರನ್ನೂ ಮನುಮುನಿ ಗಳನ್ನೂ ಈ ಪಂಚಬಾಣಗಳಿಂದ ವಶಪಡಿಸಿಕೊಂಡು ಅದ್ವಿತೀಯ ವೀರನಾಗಿರುವೆನು.

ಚರಾಚರ ವಸ್ತುಗಳಿಗನ ಅಧಿದೇವತೆಯಾದ ಶಂಕರನನ್ನು ಈ ಹೊತ್ತು ನಾನು ವಶಪಡಿಸಿಕೊಂಡದ್ದಾದರೆ, ನನ್ನ ಪ್ರತಾಪಾಗ್ನಿಯು ಇದಕ್ಕಿಂತಲೂ ಹೆಚ್ಚಾಗಿ ಮೂರು ಲೋಕಗಳನ್ನೇ ಬೆಳಗುವದು ಎಂಬುದಾಗಿ ಹಲವು ಬಗೆ ಯಿಂದ ಮನದಲ್ಲಿ ಯೋಚಿಸುತ್ತಿರುವ ಕಾಮನು ರತಿಸಮೇತನಾಗಿ ಭಗವಾನ್ ಶಂಕರನ ಆಶ್ರಮವನ್ನು ಪ್ರವೇಶ ಮಾಡಿದನು. ಈ ಮೊದಲು ಕಾಮನ ಮಿತ್ರ ನಾದ ವಸಂತನ ಪ್ರಭಾವದಿಂದ ಸರ್ವ ಗಿಡಬಳ್ಳಿಗಳೂ ಚಿಗಿತಿದ್ದವು, ತರತರದ ಕುಸುಮಗಳು ತಮ್ಮ ಸುಗಂಧದಿಂದ ಆಶ್ರಮ ವಾಸಿಗಳ ಮನಸ್ಸನ್ನು ಆಕರ್ಷಿಸುತ್ತಿದ್ದವು, ಒಂದುಕಡೆ ಕೋಗಿಲೆಗಳು ಇಂಪಾಗಿ ಧ್ವನಿ ಮಾಡುತ್ತಲಿ ದ್ದವು. ಮತ್ತೊಂದುಕಡೆಗೆ ಭ್ರಮರಗಳು ಝೇಂಕರಿಸುತ್ತಲಿದ್ದವು. ಬೇರೊಂದು ಕಡೆಗೆ ನವಿಲುಗಳು ತಮ್ಮ ಗರಿಗಳನ್ನು ಮೇಲಕ್ಕೇರಿಸಿ ಕೇಕಿ ಧ್ವನಿಯಿಂದ ನರ್ತನ ಮಾಡುತ್ತಲಿದ್ದವು. ಈ ಪ್ರಕಾರವಾದ ಅಕಾಲಿಕ (ಕಾಲವಿಲ್ಲದೆ ಉದ್ಭವಿಸಿದ) ವನಶೃಂಗಾರವನ್ನು ನೋಡಿ ಅನೇಕ ಋಷಿಗಳ ಮನಸ್ಸು ಕರಗಿ ಕಾಮಾಧೀನವಾಯಿತು. ಆಗ ಮನ್ಮಥನು ಪುಷ್ಪಧನುರ್ಧಾರಿಯಾಗಿ ಸಮಾಧಿ ಮಗ್ನನಾದ ಶಿವನ ಮುಂದೆ ನಿಂತು ಪುಷ್ಪಬಾಣಗಳನ್ನು ಪ್ರಯೋ ಗಿಸಿದನು. ತತ್‍ಕ್ಷಣದಲ್ಲಿಯೇ ಸಮಾಧಿ ಭಂಗವಾಗಲು ಕ್ರುದ್ಧನಾದ ಶಿವನು ಅಗ್ನಿ ನೇತ್ರವನ್ನು ತೆಗೆದು ನೋಡಲು ಕಾಮನು ಸುಟ್ಟುಭಸ್ಮೀಭೂತನಾದನು.

ಆ ಕಾಲದಲ್ಲಿ ಫಾಲ್ಗುಣ ಶುದ್ಧ ಪೌರ್ಣಿಮೆಯಾಗಿತ್ತು. ಹುಬ್ಬಾ ನಕ್ಷತ್ರವು ಇತ್ತು. ಆದ್ದರಿಂದ ಪೂರ್ವಕಾಲದಿಂದ ಇಲ್ಲಿಯವರೆವಿಗೂ ಆ ಜಗದೀಶನ ಅಗಾಧವಾದ ಮಹಿಮೆಯನ್ನು ವ್ಯಕ್ತಪಡಿಸುವದಕ್ಕಾಗಿ ಹುಬ್ಬಾ ನಕ್ಷತ್ರದಲ್ಲಿ ಕಾಮದಹನ ಮಾಡುವುದುಂಟು.

ಮತ್ತು ಬಳಿಯಲ್ಲಿದ್ದ ರತಿದೇವಿಯು ತನ್ನ ಪತಿಯಾದ ಕಾಮನ ಇಂಥ ದುರವಸ್ಥೆಯನ್ನು ನೋಡಿ ತತ್‌ಕ್ಷಣದಲ್ಲಿ ಮೂರ್ಛಿತಳಾಗಿ ಪುನಃ ಎಚ್ಚತ್ತು ತನ್ನ ಪತಿಯ ದೇಹದ ಭಸ್ಮವನ್ನು ಕೈಯಲ್ಲಿ ತೆಗೆದುಕೊಂಡು ಪರಿಪರಿಯಾಗಿ ವಿಲಾಪಿಸತೊಡಗಿದಳು. ಆಗ ಭಗವಾನ್ ಶಂಕರನು ರತಿದೇವಿಯನ್ನು ಕುರಿತು ನೀನೂ ಸಹ ಭೂಲೋಕದಲ್ಲಿ ಚಾಂಡಾಲ ಸ್ತ್ರೀಯಳಾಗಿ ಜನಿಸೆಂದು ಶಾಪವಿತ್ತನು. ಈ ಪ್ರಕಾರವಾಗಿ ರತಿ ಕಾಮರೀರ್ವರು ನಾಶ ಹೊಂದಿದಮೇಲೆ ಎಲ್ಲ ದೇವತೆಗಳು ಭಗವಾನ್ ಶಂಕರನಲ್ಲಿಗೆ ಬಂದು ನಮಸ್ಕರಿಸಿ ಕೈಜೋಡಿಸಿ ಕೊಂಡು ದೇವಾ ಜಗತ್ತಿನ ಉತ್ಪತ್ತಿನ ಮೂಲ ಕಾರಣರಾದ ರತಿ ಕಾಮರೀರ್ವರನ್ನು ನಾಶಗೊಳಿಸಿದಿ. ದೇವಾಧಿದೇವಾ ಶಂಕರಾ ನೀನು ಈ ಪ್ರಕಾರವಾಗಿ ಪ್ರಲಯಾಗ್ನಿಯಂತೆ ಉಗ್ರ ರೂಪಧಾರಿಯಾದರೆ ನಮ್ಮ ಪಾಡೇನು. ಕರುಣಾಸಿಧಿಯೇ ಇವರೀರ್ವರನ್ನು ಉದ್ಧರಿಸಿ ನಮ್ಮನ್ನು ರಕ್ಷಿಸು ಎಂದು ಸ್ತೋತ್ರಮಾಡತೊಡಗಿದರು. ಆಗ ಶಿವನು ದೇವತೆಗಳ ಸ್ತೋತ್ರದಿಂದ ಸಂತುಷ್ಟನಾಗಿ ಎಲೈ ದೇವತೆಗಳೇ ! ಅವಂತಿ ಎಂಬ ಪಟ್ಟಣದಲ್ಲಿ ಮಾದಿಗ ಕುಲೋತ್ಪನ್ನನಾದ ಚಂದನೆಂಬುವನಿದ್ದಾನೆ. ಈ ರತಿದೇವಿಯು ಹೋಳಿ ಎಂಬ ಹೆಸರಿನಿಂದ ಆತನಿಗೆ ಮಗಳಾಗಿ ಜನಿಸುತ್ತಾಳೆ. ಮತ್ತು ಅದೇ ಪಟ್ಟಣದಲ್ಲಿ ವಿಷ್ಣುಯೆಂಬ ಗ್ರಹಸ್ಥನಿದ್ದಾನೆ. ಮನ್ಮಥನು ಕಾಮನೆಂಬ ಹೆಸರಿ ನಿಂದ ಆತನಿಗೆ ಮಗನಾಗಿ ಜನಿಸುತ್ತಾನೆ. ಹೋಳಿಗೂ ಕಾಮನಿಗೂ ಮುಂದೆ ಪರಸ್ಪರ ಪ್ರೇಮವು ಕೂಡಿ ಒಂದು ಗಂಡು ಕೂಸು ಜನಿಸುತ್ತದೆ. ಇವರೆಲ್ಲರಿಗೂ ಒಂದೇ ದಿವಸ ಅಗ್ನಿ ಸಂಸ್ಕಾರವಾಗಲು ಹೋಳಿಯಾದ ರತಿಯು ತನ್ನ ಪೂರ್ವಸ್ವರೂಪವನ್ನು ಹೊಂದುವಳು. ಆಗ ಕಾಮನು ಅನಂಗ (ಶರೀರವಿಲ್ಲದವ) ನಾಗಿ ಮನಸಿಜನಾಗುವನು ಎಂದು ಹೇಳಿ ಭಗವಾನ್ ಶಂಕರನು ಅದೃಶ್ಯನಾದನು........

ಅವಂತೀಪಟ್ಟಣದಲ್ಲಿ ವಿಷ್ಣು ಎಂಬ ಓರ್ವ ಧನಾಢ್ಯ ಗೃಹಸ್ಥನಿದ್ದನು ಮನ್ಮಥನು ಕಾಮನೆಂಬ ಹೆಸರಿನಿಂದ ಆತನಿಗೆ ಮಗನಾಗಿ ಜನಿಸಿದನು– ಕಾಮನಿಗೆ ಶೈಶವಾವಸ್ಥೆ ಬಾಲ್ಯಾವಸ್ಥೆಗಳು ಕ್ರಮವಾಗಿ ಕಳೆದವು. ಮುಂದೆ ಅವನು ಯೌವನಾವಸ್ಥೆಗೆ ಬಂದಾಗ್ಗೆ ಕಾರ್ಯಾಂತರದಿಂದ ಆ ಪಟ್ಟಣದಲ್ಲಿ ತಿರಗುತ್ತಿರುವಾಗ ಓರ್ವ ತರುಣಿಯು ಆತನ ಕಣ್ಣಿಗೆ ಬಿದ್ದಳು. ಕನ್ನಡಿಯಂತೆ ಹೊಳೆಯುವ ಗಲ್ಲಗಳಿಂದಲೂ, ಉಂಗುರಗೂದಲ ಗಳಿಂದಲೂ, ವಿಶಾಲವಾದ ಕಂಣುಗಳಿಂದಲೂ ತೊಂಡೆ ಹಂಣಿನಂತಿರುವ ತುಟಿಗಳಿಂದಲೂ ಶೋಭಿಸುವ ಅವಳ ಮುಖವು ಕಾಮನ ಮನಸ್ಸನ್ನಾಕರ್ಷಿಸಿತು. ಆಗ ಅವನು ಮನದಲ್ಲಿ ಪರಿಪರಿಯಾಗಿ ಆಲೋಚಿ ಸುತ್ತ ಮನೆಗೆ ಬಂದನು. ಎಲ್ಲಿ ಕೂತರೂ ಸಮಾಧಾನವಿಲ್ಲ ಎತ್ತ ನೋಡಿ ದರೂ ಅವನಿಗೆ ಅದೇ ರೂಪವು ಕಂಡುಬರುತ್ತಿತ್ತು. ಆ ಸ್ತ್ರೀಯಳು ಯಾರಿರ ಬಹುದೆಂದು ಅವನು ಶೋಧಿಸಹತ್ತಿದನು. ಕೆಲವು ದಿವ್ಸಗಳ ಮೇಲೆ ಪುನಃ ಆ ಸುಂದರಿಯು ಅವನ ಕಣ್ಣಿಗೆ ಬಿದ್ದಳು. ಆಗ ಕಾಮನು ಅವಳನ್ನು ಕುರಿತು ಎಲೋ ತರುಣಿಯೇ! ನೀನು ಯಾರು ನಿನ್ನ ಹೆಸರೇನು. ಮೊದಲಾದ ವೃತ್ತಾಂತವನ್ನು ನನಗೆ ತಿಳಿಸಬೇಕೆಂದು ಕೇಳಿದನು. ಆಗ ಅವಳು ತನ್ನ ಕುಲ—ಚಲ—ಮೊದಲಾದ ಯಾವತ್ತೂ ಸಂಗತಿಯನ್ನು ಅವನಿಗೆ ತಿಳಿಸಿದಳು. ಅವಳೇ ಮಾದರಚಂದನ ಮಗಳಾದ ಹೋಳಿಯು. ಇವಳಾದರೂ ಕಾಮನ ರೂಪ ಲಾವಣ್ಯಾದಿಗಳಿಗೆ ಮೋಹಿತಳಾದಳು. ಕೆಲವು ದಿವಸಗಳ ಮೇಲೆ ಉಭಯತರಲ್ಲಿ ಪ್ರೇಮವು ಬೆಳೆಯಿತು. ಕಾಮನು ತನ್ನ ತಂದೆಗೆ ತಿಳಿಯದಂತೆ ಮನೆಯಲ್ಲಿದ್ದ ಧನವನ್ನು ದುಂದುಗಾರಿಕೆಗೆ ಹಾಳು ಮಾಡ ತೊಡಗಿದನು. ಸ್ವಲ್ಪ ದಿನಗಳ ಮೇಲೆ ವಿಷ್ಣುವಿಗೂ ಇನ್ನೂ ಅವನ ಬಾಂಧವರಿಗೂ ಕಾಮನ ದುರಾಚಾರವು ಗೊತ್ತಾಯಿತು. ತಂದೆ ತಾಯಿಗಳ– ಬುದ್ಧಿವಾದವು ಕಾಮನಿಗೆ ಸರಿದೋರಲಿಲ್ಲ. ಆಗ ಆತನ ತಂದೆತಾಯಿಗಳೂ ಮತ್ತುಳಿದ ಬಂಧುಬಳಗದವರೂ ಕಾಮನನ್ನು ಮನೆಯಿಂದ ಹಾಗೂ ಸ್ವಕುಲ ದಿಂದ ಹೊರಗೆ ದಬ್ಬಿದರು.

ಆಗ ಆತನು ಬೇರೆ ಗತಿಗಾಣದೇ ಹೋಳಿಯ ಮನೆಯಲ್ಲಿ ಇರಹತ್ತಿ ದನು. ಕೆಲವು ಕಾಲಗಳು ಗತಿಸಿದ ಮೇಲೆ ಕಾಮನಿಗೆ ಕುಷ್ಟರೋಗ ಹತ್ತಿತು.

ಕೈಕಾಲುಗಳ ಬೆರಳು ಉದರಿದವು. ದೇಹದಿಂದ ದುರ್ಗಂಧವು ಹೊರಟಿತು. ಮನೆಯಲ್ಲಿ ಎಲ್ಲರಿಗೂ ಬೇಸರವಾದನು. ಆಗ ಹೋಳಿಯ ತಂದೆಯಾದ ಚಂದನೂ ಸಹ ಬೇಸರಗೊಂಡು ಇವನನ್ನು ಮನೆಯಿಂದ ಹೊರಗೆ ನೂಕಿದನು. ಆ ಸಮಯದಲ್ಲಿ ಹೋಳಿಯು ಪೂರ್ಣ ಗರ್ಭವತಿಯಾಗಿದ್ದಳು. ಕಾಮನನ್ನು ಯಾರೂ ಸೇರುತ್ತಿರಲಿಲ್ಲ. ಕೈಯಲ್ಲಿ ತಿರಿದುಂಡು ಮರದ ನೆರಳಿಗೆ ಮಲಗ ಹತ್ತಿದನು. ಕಡಿಗೆ ಗೋಡೆಯ ನೆರಳಿಗೆ ಮಲಗಿದ್ದಾಗ ಪ್ರಾಣಬಿಟ್ಟನು. ಈ ಸುದ್ದಿಯನ್ನು ಕೆಲವರು ಅವನ ತಂದೆ ವಿಷ್ಣುವಿಗೂ, ಉಳಿದ ಬಂಧುಗಳಿಗೂ ತಿಳಿಸಿದರು. ಅವರು "ಮೊದಲೇ ನಾವು ಅವನನ್ನು ಹೊರಗೆದಬ್ಬಿ ಆತನ ಶ್ರಾದ್ಧಕರ್ಮವನ್ನು ಮಾಡಿದ್ದೇವೆ; ಆದ್ದರಿಂದ ಅವನು ನಮ್ಮವನಲ್ಲವೆಂ"ದು ಹೇಳಿದರು. ಚಂದನಾದರೂ "ಆ ಪ್ರಾಣಿ ನಮಗೆ ಯಾತಕ್ಕೂ ಸಂಬಂಧವಿಲ್ಲ ವೆಂ"ದು ಹೇಳಹೋದವರನ್ನು ಬೆದರಿಸಿದನು. ಹೀಗೆ ಎರಡು ದಿವಸಗಳು ಕಳೆದರೂ ಕಾಮನ ಉತ್ತರ ಕ್ರಿಯೆಗಳನ್ನು ಮಾಡುವವರು ಯಾರೂ ಇಲ್ಲದಾಯಿತು. ಈ ಮೊದಲು ಅನೇಕ ಜನರು ಕಾಮನಿಂದ ನಾನಾ ರೀತಿಯಾಗಿ ಸಹಾಯ ಹೊಂದಿದವರಾಗಿದ್ದರು. ಅವನ ಉದಾರ ಗುಣವನ್ನು, ಮತ್ತು ಅವನಿಗೆ ಸದ್ಯ ಒದಗಿದ ಹೀನಾವಸ್ಥೆಯನ್ನು ನೋಡಿ ಕೃತಜ್ಞರಾದ ಆತನ ಕೆಲವು ಸ್ನೇಹಿತರು - "ನಾವೇ ಇವನ ದಹನ ಕ್ರಿಯೆಯನ್ನು ಮಾಡಬೇಕೆಂ"ದು ಯೋಚಿಸಿದರು. ಈ ಸಂಗತಿಯನ್ನು ಅವರು ಅನ್ಯರಿಗೆ ತಿಳಿಸದೆ ಗುಪ್ತವಾಗಿ ಮಾಡಬೇಕಾಯಿತು. ಯಾಕಂದರೆ ಅನ್ಯರು ಈ ಕೃತಿಯನ್ನು ನೋಡಿದರೆ ಕುಲದಿಂದ ಹೊರಗೆ ಹೋಗಬೇಕಾಗುವದೆಂಬ ಭೀತಿಯು ಅವರಿಗಿತ್ತು. ಆದ್ದರಿಂದ ರಾತ್ರಿ ಹನ್ನೆರಡು ಘಂಟೆಯ ಮೇಲೆ ಕಾಮನ ದಹನ ಕ್ರಿಯೆಯನ್ನು ಮಾಡಬೇಕೆಂಬುದಾಗಿ ನಿರ್ಧರಿಸಿದರು ಸಾಯಂಕಾಲವಾಯಿತು. ಯಾವತ್ತೂ ಜನರು ಭೋಜನಾದಿ ಕ್ರಿಯೆಗಳನ್ನು ತೀರಿಸಿಕೊಂಡು ತಮ್ಮ ತಮ್ಮ ಮನೆಗಳಲ್ಲಿ ಸ್ವಸ್ಥರಾಗಿ ಮಲಗಿದ್ದರು. ಆಗ ಕಾಮನ ಸ್ನೇಹಿತರು ಈ ಮೊದಲೇ ಆಲೋಚಿಸಿದಂತೆ ಕುಳ್ಳುಕಟ್ಟಿಗೆಗಳನ್ನು ಕಳವು ಮಾಡಿ ತಂದು ಶವವನ್ನು ಅಗ್ನಿಗೆ ಸಿದ್ಧಪಡಿಸಿದರು. ಅಷ್ಟರಲ್ಲಿ ಬೆಳಗಿನ ನಾಲ್ಕು ಘಂಟೆಯಾಯಿತು. ಅದು ಚಕಮಕಿಯ ಕಾಲವಾದುದರಿಂದ ಅವರಲ್ಲಿ ಬೆಂಕಿ ಇದ್ದಿಲ್ಲ. ಸಮಯವು ಗತಿಸಿದರೆ ನೂತದ್ದೆಲ್ಲ ಹಂಜಿಯಾಗುವುದೆಂದು ಎಲ್ಲರೂ ಚಿಂತೆಯೊಳಗಾದರು.

ಅಷ್ಟರಲ್ಲಿ ಅವರಲ್ಲಿ ಒಬ್ಬನು ಸ್ವಲ್ಪ ಯೋಚಿಸಿ– "ಓಹೋ! ಚಂದನ ಮಗಳಾದ ಹೋಳಿಯು ಹಡೆದು ಮೂರು ದಿವಸಗಳಾದವು. ಇದು ಬೆಳಗಿನ ಸಮಯವಾದುದರಿಂದ ಹೊರಗೆ ಅಗ್ಗಿಷ್ಟಿಗೆ (ಕುಪ್ಪಡಿಗೆ) ಯು ಉರಿಯುತ್ತಿರ ಬಹುದೆಂ"ದನು. ಆಗ ಎಲ್ಲರೂ ಹೋಳಿಯ ಮನೆಗೆ ಬಂದು ಹೊರಗೆ ಉರಿಯುತ್ತಿರುವ ಅಗ್ಗಿಷ್ಟಿಗೆಯನ್ನು ಮೆಲ್ಲನೇ ಎತ್ತಿಕೊಂಡು ಬಂದು ಅಗ್ನಿ ಕ್ರಿಯೆಯನ್ನು ನೆರವೇರಿಸಿದರು. ಮತ್ತು ಅವರೆಲ್ಲರೂ "ಈ ಹೋಳಿ ಯಿಂದಲೇ ನಮ್ಮ ಕಾಮನಿಗೆ ದುಸ್ಥಿತಿಯುಂಟಾಯಿತು. ಇವಳಿಂದ ಮುಂದೆ ಇನ್ನೂ ಯಾವ ಯಾವ ಅನರ್ಥಗಳು ಸಂಭವಿಸುವವೋ ತಿಳಿಯದು ಆದುದರಿಂದ ಇವಳನ್ನು ಸಹ ಇದೇ ಅಗ್ನಿಯಲ್ಲಿ ಸುಡುವದೊಳ್ಳೆಯ ದೆಂದು ಆಲೋಚಿಸಿದರು. ಆ ಪ್ರಕಾರವಾಗಿ ಕೆಲವರು ಮೆಲ್ಲನೇ ಚಂದನ ಮನೆಯಲ್ಲಿ ನುಗ್ಗಿ ಹೊರಸಿನ ಮೇಲೆ ನಿದ್ರಿಸುತ್ತಿದ್ದ ಹೋಳಿಯನ್ನೂ ಅವಳ ಕೂಸನ್ನೂ ಹೊರಸು ಸಮೇತವಾಗಿ ಮೆಲ್ಲನೇ ಹೊತ್ತುಕೊಂಡು ಉರಿಯುತ್ತಿದ್ದ ಅಗ್ನಿಯ ಸಮೀಪಕ್ಕೆ ಬಂದರು. ಆಗ ಹೋಳಿಯು ಎಚ್ಚತ್ತು ಚೀರಹತ್ತಿದಳು. ಸುತ್ತುಮುತ್ತಲಿನ ಮನೆಯವರು ಕೂಡುವಷ್ಟರಲ್ಲಿಯೇ ಹೋಳಿಯನ್ನು ಬೆಂಕಿ ಯಲ್ಲಿ ಹಾಕಿ ಅವರೆಲ್ಲರೂ ಸದ್ದು ಇಲ್ಲದೇ ತಮ್ಮ ತಮ್ಮ ಮನೆಗೆ ತೆರಳಿದರು. ಆಗ ಚಂದನೂ ಅವನ ಬಂಧುಗಳೂ ಒದರುತ್ತಾ ಚೀರುತ್ತಾ ಬೈಯುತ್ತ ಬಂದುನೋಡುವಷ್ಟರಲ್ಲಿ ಹೋಳಿ ಸುಟ್ಟು ಕರಕಾಗಿದ್ದಳು. ಅವಳು ಮಾದಿಗರ ಕುಲದಲ್ಲಿ ಉತ್ಪನ್ನಳಾದವಳಾಗಿ ವೇಶ್ಯಾವೃತ್ತಿಯಿಂದ ಜೀವಿಸುತ್ತಿದ್ದಳು. ಆದ್ದರಿಂದ ಅವಳ ಬಂಧುಬಳಗದವರು ತಮ್ಮ ಜಾತಿಗನುಗುಣವಾಗಿ ಅವಳ ಗುಣವರ್ಣನೆಯನ್ನು ಮಾಡುತ್ತ ಅಳಹತ್ತಿದರು. ಮತ್ತು ಅವಳ ನಾಶಪಡಿಸಿ ದವರನ್ನು ಅನೇಕ ಅವಾಚ್ಯ ಶಬ್ದಗಳಿಂದ ಬೈಯ್ಯಹತ್ತಿದರು. ಈ ಹೋಳೀ ಹಬ್ಬದಲ್ಲಿ ಅದೇ ಪದ್ಧತಿಯು ಪರಂಪರೆಯಿಂದ ಬಂದುದಾಗಿದೆ. ಕಾಮ ದಹನ ಕ್ಕಾಗಿ ಈಗಲಾದರೂ ಕೆಲವು ಕಡೆಯಲ್ಲಿ ಮಾದಿಗರ ಮನೆಯಿಂದ ಬೆಂಕಿಯನ್ನು ತರುವದು ಕಂಡುಬರುತ್ತದೆ. ಮತ್ತು ರಾತ್ರಿ ಕುಳ್ಳು ಕಟಿಗೆಗಳನ್ನು ಕದಿಯುವದು ಚೀರುವದೂ ಬೈಯ್ಯುವದೂ ಬೊಬ್ಬೆಹಾಕುವದೂ ಬಂಣ ಕುಂಕುಮಗಳನ್ನು ಸೂರೆಮಾಡುವದು ಕಂಡುಬರುತ್ತದೆ. ಈ ಹೋಳಿಯು ಹಬ್ಬದ ಉತ್ಪತ್ತಿಯ ಬಗ್ಗೆ ಭವಿಷ್ಯೋತ್ತರ ಪುರಾಣದಿಂದ ಮತ್ತೊಂದು ಕಥೆಯು ಕಂಡುಬರುತ್ತದೆ.

ಸತ್ಯಯುಗದಲ್ಲಿ ಪೃಥು ಎಂಬ ರಾಜನಿದ್ದನು ಅವನ ಪ್ರತಾಪವೂ ಕೀರ್ತಿಯೂ ದಿಗಂತವೆನ್ನೆಲ್ಲ ವ್ಯಾಪಿಸಿದ್ದವು. ಅವನು ಪ್ರಜೆಗಳನ್ನು ಮಕ್ಕಳಂತೆ ಕಾಪಾಡುತ್ತಿದ್ದನು. ಅವನು ಧರ್ಮಾತ್ಮನಾದುದರಿಂದ ರಾಷ್ಟ್ರದಲ್ಲಿ ದುರ್ಭಿಕ್ಷ ರೋಗ ಅಪಮೃತ್ಯು ಇವುಗಳ ಶಬ್ದವೇ ಇದ್ದಿಲ್ಲ. ಒಂದಾನೊಂದು ದಿವಸ ಯಾವತ್ತೂ ಪ್ರಜೆಗಳು ರಾಜನ ಮಹಾದ್ವಾರದಲ್ಲಿ ಬಂದು ದೇವ ನಮ್ಮನ್ನು ರಕ್ಷಿಸು, ರಕ್ಷಿಸು, ಎಂದು ಕೂಗಿಕೊಂಡರು. ಈ ಆರ್ತಸ್ವರವನ್ನು ಕೇಳಿದ ರಾಜನ ಹೃದಯವು ಕರಗಿತು. ಅವನು "ಇದೂವರೆವಿಗೂ ನನ್ನ ರಾಜ್ಯದಲ್ಲಿ ದುಃಖದ ಸುಳಿವೇ ಇಲ್ಲದಾಗಿತ್ತು ಈ ಹೊತ್ತು ನನ್ನ ಪ್ರಜೆಗಳಿಗೆ ಇಂಥ ವಿಪತ್ತು ಏನು ಸಂಬವಿಸಿರಬಹುದು" ಎಂದು ಚಿಂತಾಕ್ರಾಂತನಾಗಿ ಯಾವತ್ತೂ ಪ್ರಜೆಗಳನ್ನು ತನ್ನಲ್ಲಿಗೆ ಬರಮಾಡಿಕೊಂಡು ದುಃಖದ ಕಾರಣವನ್ನು ಕೇಳಿದನು. ಆಗ ಪುರಪ್ರಮುಖರು ಕೈಜೊಡಿಸಿಕೊಂಡು ದೇವಾ ನಮ್ಮ ರಾಷ್ಟ್ರದಲ್ಲಿ ಕೌಂತಾ ಎಂಬ ರಾಕ್ಷಸಿಯು ಪ್ರವೇಶವಾಗಿದೆ. ಅವಳು ಕೇವಲ ಬಾಲಕರ ಮೇಲೆ ಆಕ್ರಮಣ ಮಾಡುವಳು ಆದರಿಂದ ಬಾಲಕರು ರೋಗ ಗ್ರಸ್ತರಾಗಿ ಮರಣ ಹೊಂದುವರು ದೇವ ನಮಗೆ ಒದಗಿದ ಈ ಮಹಾ ದುಃಖವನ್ನು ದೂರಮಾಡು ಎಂದು ಬೇಡಿಕೊಂಡರು. ಈ ವಾರ್ತೆಯನ್ನು ಕೇಳಿದ ರಾಜನು ದುಃಖಾತುರನಾಗಿ ಪ್ರಜೆಗಳಿಗೆ ಅಭಯವನ್ನಿತ್ತನು. ಮತ್ತು ಆ ರಾಜನು ತನ್ನ ಪುರೋಹಿತನಾದ ವಸಿಷ್ಠ ಋಷಿಯಬಳಿಗೆ ಬಂದು ನಮಸ್ಕರಿಸಿ ತನ್ನ ರಾಷ್ಟ್ರದಲ್ಲಿ ನಡೆದ ರಾಕ್ಷಸಿಯ ಆಕ್ರಮಣವನ್ನು ತಿಳಿಸಿದನು. ಮತ್ತು ಅವಳು ಯಾರು ಈ ರೀತಿಯಾಗಿ ಕೇವಲ ಬಾಲಕರನ್ನು ಪೀಡಿಸಲು ಕಾರಣವೇನೆಂಬುದನ್ನು, ಅವಳ ವಧೆಯ ಉಪಾಯವನ್ನು ಕೇಳಿದನು ಆಗ ವಸಿಷ್ಠನು ಭೋರಾಜನ್ ಈಕೌಂತಾ ಎಂಬ ರಾಕ್ಷಸಿಯು ಮಾಲಿನ ಎಂಬ ರಾಕ್ಷಸನ ಮಗಳು ಇವಳು ಒಂದು ಸಮಯದಲ್ಲಿ ಭಗವಾನ್ ಶಂಕರನನ್ನು ಕುರಿತು ಉಗ್ರವಾದ ತಪಸ್ಸನ್ನಾಚರಿಸಿದಳು, ಆಗ ಶಂಕರನು 'ಇವಳ ತಪಸ್ಸಿಗೆ ಪ್ರಸನ್ನನಾಗಿ ರಾಕ್ಷಸಿಯನ್ನು ಕುರಿತು "ನಿನ್ನ ಉಗ್ರವಾದ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ನಿನಗೆ ಇಚ್ಛಿತವಾದವರನ್ನು ಕೇಳಿಕೋ"ಎಂದನು. ಆಗ ರಾಕ್ಷಸಿಯು ದೇವ ನಿನ್ನ ದಿವ್ಯ ಸ್ವರೂಪವನ್ನು ನೋಡಿ ನಾನು ಧನ್ಯಳಾದೆನು. ನನಗೆ ನೀನು ಪ್ರಸನ್ನನಾದುದಾದರೆ ಸುರಾಸುರರಿಂದಲೂ ನರರಿಂದಲೂ ಮರಣ

ವಾಗಬಾರದು ಅಂಥ ವರವನ್ನು ದಯಪಾಲಿಸೆಂದು" ಬೇಡಿಕೊಂಡಳು. ಆಗ ಶಂಕರನು 'ತಥಾಸ್ತು' ಎಂದು ಕಡೆಗೆ ಉನ್ಮತ್ತರಾದ ಬಾಲಕರಿಂದ ಮಾತ್ರ ನಿನಗೆ ಭಯವುಂಟೆಂದು ಹೇಳಿ ಅದೃಶ್ಯನಾದನು. ಆದ್ದರಿಂದ ರಾಕ್ಷಸಿಯು ಪರಮಾತ್ಮನ ವಾಕ್ಯವನ್ನು ಕೇಳಿ ಯಾವಾಗಲೂ ಬಾಲಕರನ್ನು ಪೀಡಿಸುತ್ತಿರುವಳು ಎಂದನು.

ಆ ಮೇಲೆ ಪುನಃ ವಸಿಷ್ಠ ಮಹರ್ಷಿಯು "ಎಲೋ ರಾಜನೇ ಇವಳ ನಿವಾರಣೆಯಾಗಬೇಕಾದರೆ ಫಾಲ್ಗುಣ ಶುದ್ಧ ಪೌರ್ಣಿಮೆಗೆ ದೊಡ್ಡ ಉತ್ಸವವನ್ನು ಹೊರಡಿಸು. ಸರ್ವರಿಗೂ ಅಭಯ ದಾನವನ್ನು ಕೊಟ್ಟು ತಮ್ಮ ತಮ್ಮ ಮನಸ್ಸಿನಲ್ಲಿ ಬಂದದ್ದನ್ನು ಮಾಡಬಹುದೆಂದು ಅಪ್ಪಣೆಯನ್ನು ಮಾಡು ಮತ್ತು ಎಲ್ಲ ಹುಡುಗರೂ ಪ್ರಸನ್ನ ಚಿತ್ತರಾಗಿ ಹಾಡುತ್ತಾ ಬಾರಿಸುತ್ತಾ ಮನಸ್ಸಿಗೆ ಬಂದಹಾಗೆ ಕೂಗತ್ತಾ ಕುಣಿಯುತ್ತ ವೀರರಂತೆ ಸಮರೋತ್ಸವದೊಡನೇ ಎಲ್ಲರೂ ಒಂದು ಸ್ಥಲದಲ್ಲಿ ಕೂಡಬೇಕು. ಮತ್ತು ಕುಳ್ಳು-ಕಟ್ಟಿಗೆಗಳನ್ನು ಸಂಗ್ರಹಿಸಿ ಅದಕ್ಕೆ ಬೆಂಕಿ ಹಚ್ಚಿ ಮೂರುಸಾರೆ ಪ್ರದಕ್ಷಣೆಯನ್ನು ಮಾಡಿ ಅಟ್ಟಹಾಸದೊಡನೆ ಎಲ್ಲರೂ ನರ್ತನ ಮಾಡಬೇಕು ಇವೆಲ್ಲ ಶಬ್ದಗಳನ್ನು ಕೇಳಿ ಭಯಗ್ರಸ್ತಳಾದ ಡೌಂಢಾ ರಾಕ್ಷಸಿಯು ನಿನ್ನ ರಾಜ್ಯದಿಂದ ಓಡಿ ಹೋಗುವಳು ಎಂದಿಗೂ ಸಮೀಪಕ್ಕೆ ಬರಲಾರಳು" ಎಂದನು. ಈ ಪ್ರಕಾರವಾದ ವಸಿಷ್ಠನ ಆಜ್ಞೆಯಂತೆ ರಾಜನು ಹಾಗೆ ಮಾಡಲು ಸರ್ವ ಪ್ರಜೆಗಳು ಢೌಂಢಾ ರಾಕ್ಷಸಿಯ ಉಪದ್ರವದಿಂದ ಮುಕ್ತರಾದರು. ಈ ಪ್ರಕಾರವಾಗಿ ಭವಿಷ್ಯೋತ್ತರ ಪುರಾಣದ ಉಕ್ತಿಯಂತೆ ಹೋಳೀಹುಣ್ಣಿವೆಯ ಉತ್ಸವವು ತ್ರೇತಾಯುಗದಿಂದ ಇಲ್ಲಿಯವರೆವಿಗೂ ನಡೆದು ಬಂದುದಾಗಿದೆ ಈ ತರಹದ ಹಬ್ಬಗಳು ನಮ್ಮ ಭರತಖಂಡದಲ್ಲಿ ಅಷ್ಟೇಅಲ್ಲ. ನಮ್ಮ ದೇಶದ ಹೋಳೀಹುಣ್ಣಿವೆಯನ್ನು ಹೋಲುವಂಥ ಹಬ್ಬಗಳು ಪರದೇಶಗಳಲ್ಲಿಯೂ ಆಗುತ್ತಿರುವುದಾಗಿ ಐತಿಹಾಸಿಕ ಗ್ರಂಥಗಳಿಂದ ತಿಳಿದುಬರುತ್ತಿದೆ. ಪ್ರಾಸಂಗಿಕವಾಗಿ ಒಂದೆರಡು ವಿಷಯುಗಳನ್ನು ಇಲ್ಲಿ ಉದಾಹರಿಸಿದ್ದೇವೆ. ಇಂಗ್ಲಂಡ, ಫ್ರಾನ್ಸ, ಜರ್ಮನ್ ಮತ್ತು ಬೆಲ್ಜಿಯಮ್ ದೇಶಗಳಲ್ಲಿ ಜನವರಿ ೬ ನೇ ತಾರೀಖಿಗೆ ಒಂದು ಹಬ್ಬವನ್ನು ಆಚರಿಸುತ್ತಿದ್ದರು. ಅದಕ್ಕೆ ಮೂರ್ಖರ ಹಬ್ಬವೆಂಬ ಸಂಜ್ಞೆ ಇತ್ತು. ಈ ಹಬ್ಬದಲ್ಲಿ ಗ್ರಾಮದ ಯಾವತ್ತೂ ಜನರು ಕೂಡಿ ತಮ್ಮೊಳಗೆ ಒಬ್ಬ ಪ್ರಮುಖನನ್ನು

ಆಚರಿಸುತ್ತಿದ್ದರು. ಮತ್ತು ಅವನಿಗೆ ಅವರೀಕಾಳಿನ "ರಾಜಾ" (King of-Beans) ಈ ರಾಜನು ತಾನೇ ಒಬ್ಬರಾಣಿಯನ್ನು ನೇಮಿಸಿಕೊಳ್ಳುತ್ತಿದ್ದನು. ಅವಳಿಗೆ ಅವರೀಕಾಳಿನ ರಾಣಿ (Queen of the Beans) ಎಂದು ಅನ್ನುತ್ತಿದ್ದರು. ಈ ರಾಜದಂಪತಿಗಳು ಸಿಂಹಾಸನವನ್ನೇರಿದಮೇಲೆ ಗ್ರಾಮದ ಯಾವತ್ತೂ ಜನರು ತಮ್ಮ ಕುಟುಂಬ ಸಮೇತರಾಗಿಬಂದು ರಾಜದಂಪತಿಗಳಿಂದ ಆಶೀರ್ವಾದ ಪಡೆಯುತ್ತಿದ್ದರು. ಆ ಮೇಲೆ ಎಲ್ಲರೂ ಆ ಸ್ಥಲದಲ್ಲಿ ಕುಳಿತು ಒಂದು ಘಂಟೆಯವರೆವಿಗೂ ಶರಾಬ ಕುಡಿಯುತ್ತಿದ್ದರು. ಯಾವ ಸಮಯದಲ್ಲಿ ರಾಜನು ಶರಾಬ ಕುಡಿಯಲಿಕ್ಕೆ ಆರಂಭಿಸುವನೋ ಆಗ ಎಲ್ಲರೂ ದೊಡ್ಡ ಧ್ವನಿಯಿಂದ "ಈಗ ರಾಜನು ಶರಾಬ ಕುಡಿಯುತ್ತಾನೆಂದು ಕೂಗುತ್ತಿದ್ದರು. ರಾಣಿಯು ಕುಡಿಯುವಾಗ "ಈಗ ರಾಣಿಯು ಕುಡಿಯುತ್ತಾಳೆ"ಂದು ಅದಕ್ಕಿಂತಲೂ ದೊಡ್ಡ ಧ್ವನಿಯಿಂದ ಕೂಗುತ್ತಿದ್ದರು. ಆ ಸಮಯದಲ್ಲಿ ಯಾವನು ಕೂಗುವದಿಲ್ಲವೋ ಅವನಿಗೆ ತಲೆಯಮೇಲೆ ಕೋಡುಗಳನ್ನು ಹಚ್ಚಿ ಗಾರ್ದಪ ಸ್ವರೂಪದಂತೆ ಮಾಡುತ್ತಿದ್ದರು. ಹಬ್ಬ ಮುಗಿಯುವವರೆವಿಗೂ ಅವನು ಇದೇ ಅವಸ್ಥೆಯಲ್ಲಿಯೇ ಇರಬೇಕಾಗುತ್ತಿತ್ತು. ಈ ಹಬ್ಬದ ಮೊದಲನೇ ದಿನ ಜನವರಿ ೬ನೇ ತಾರೀಖಿನ ದಿವಸ ಅನ್ನ ದಾನವನ್ನು ಮಾಡುತ್ತಿದ್ದರು. ಆ ಮೇಲೆ ಬಾಲಕ-ಬಾಲಿಕೆಯರು ಕೂಡಿ ಒಂದು ಸ್ಥಾನದಲ್ಲಿ ಕುಳ್ಳು-ಕಟ್ಟಿಗೆಗಳನ್ನು ಕೂಡಹಾಕಿ ಅದಕ್ಕೆ ಬೆಂಕಿ ಹಚ್ಚುತ್ತಿದ್ದರು. ಯಾವತ್ತೂ ಜನರು ಅಗ್ನಿಯ ನಾಲ್ಕೂಕಡಿಗೂ ತಿರುಗುತ್ತಾ ನರ್ತನ ಮಾಡುತ್ತಿದ್ದರು. ಈ ಅಗ್ನಿಯ ದಹನದಿಂದ ಹೊಲದೊಳಗಿನ ಎಲ್ಲ ಪೈರುಗಳೂ ಉತ್ತಮ ರೀತಿಯಿಂದ ಬರುವವೆಂದೂ ಇಂಗ್ಲಂಡ ದೇಶದ ಜನರ ಭಾವನೆಯು ಇತ್ತು.

ಡಿಶಂಬರ ತಿಂಗಳ ಅಂತ್ಯದಲ್ಲಿ ಅರ್ಥಾತ್ ಈ ಹಬ್ಬಕಿಂತಲೂ ಪೂರ್ವದಲ್ಲಿ ಇಂಗ್ಲಂಡ ಸ್ಕಾಟಲ್ಯಾಂಡ ಮೊದಲಾದ ದೇಶಗಳಲ್ಲಿ ಒಂದು ಹಬ್ಬವನ್ನು ಆಚರಿಸುತ್ತಿದ್ದರು. ಆ ಹಬ್ಬದಲ್ಲಿ ಎಲ್ಲರೂ ಒಟ್ಟಾಗಿ-ಕೂಡಿ ಒಬ್ಬ ರಾಜನನ್ನು ಆರಿಸಿಕೊಳ್ಳುತ್ತಿದ್ದರು. ಆ ರಾಜನಿಗೆ ಕುಶಾನರಾಜ King of mis Rule ಎಂದು ಅನ್ನುತ್ತಿದ್ದರು. ಹಾಗೂ ಇವನಿಗೆ ದುರ್ಬುದ್ಧಿಯಪಾದರಿ (Abbot of Unreason) ಎಂದೂ ಕರೆಯುತ್ತಿದ್ದರು. ಆ ಕಾಲದಲ್ಲಿ ಎಲ್ಲಿ ನೋಡಿದರೂ

ಆ ವ್ಯಕ್ತಿಯ ಹೆಸರೇ ಹೆಸರು. ಈ ಹಬ್ಬವು ಆ ದೇಶಗಳಲ್ಲಿ ಮೂರು ತಿಂಗಳ ವರೆವಿಗೂ ಎಡಬಿಡದೇ ಜರಗುತ್ತಿದ್ದಿತು. ಫ್ರಾನ್ಸ ದೇಶದಲ್ಲಿ F‌oid of mis Rule ಇವನಿಗೆ Festiual of foola ಎಂದು ಅನ್ನುತ್ತಿದ್ದರು ಈ ಹಬ್ಬವು ಡಿಶಂಬರ ೩೧ನೇ ತಾರೀಖಿಗೆ ಜರಗುತ್ತಿತ್ತು. ಕೆಲವು ಕಡೆಯಲ್ಲಿ ಜನವರಿ ೧ನೇ ತಾರೀಖಿಗೆ ಆಗುತ್ತಿತ್ತು. ಆ ಕಾಲದಲ್ಲಿ ಯಾವತ್ತೂ ಪಾದರಿ ಜನರು ಚರ್ಚ (ದೇವರ ಪ್ರಾರ್ಥನಾ ಮಾಡತಕ್ಕ ಸ್ಥಲ)ದಲ್ಲಿ ಕೂಡಿ ದೊಡ್ಡ ಧ್ವನಿಯಿಂದ ಕೂಗುತ್ತಿದ್ದರು. ಮತ್ತು ಸ್ತ್ರೀಯರು ಪುರುಷರ ವೇಷವನ್ನು ಪುರುಷರು ಸ್ತ್ರೀಯರ ವೇಷವನ್ನು ಹಾಕಿಕೊಂಡು ಒಬ್ಬರನ್ನೊಬ್ಬರು ಆಲಂಗಿಸುತ್ತಾ ಎಲ್ಲರೂ ಸಮ್ಮಿಲಿತರಾಗಿ ನರ್ತನ ಮಾಡುತ್ತಿದ್ದರು. ಮತ್ತು ಶರಾಬ ಕುಡಿಯುತ್ತಿದ್ದರು. ಆ ಸಮಯದಲ್ಲಿ ಚರ್ಚ (ದೇವರ ಪ್ರಾರ್ಥನಾ ಮಾಡುವ ಸ್ಥಲ)ದ ಸ್ವರೂಪವು ಕಳೆದುಹೋಗಿ ಶರಾಬ ಖಾನೆಯಾಗುತ್ತಿತ್ತು. ಸುಧಾರಿಸಿದ ಇಂಥ ಪಾದರಿ ಜನರು ಮನಸ್ಸಿಗೆ ಬಂದಂತೆ ಶರಾಬ ಕುಡಿದು ಕೆಟ್ಟ ಕೆಟ್ಟ ಬೈಗಳಿಂದ ಒಬ್ಬರನ್ನೊಬ್ಬರು ಬೈಯುತ್ತಲೂ ಅವಾಚ್ಯ ಶಬ್ದಗಳಿಂದ ಕೂಡಿದ ಪದಗಳನ್ನು ಹಾಡುತ್ತಿದ್ದರು. ಆ ಮೇಲೆ ಎಲ್ಲರೂ ಚರ್ಚಿನಿಂದ ಹೊರಬಿದ್ದು ಮನಬಂದಂತೆ ಕೂಗುತ್ತ ಅವಾಚ್ಯ ಶಬ್ದಗಳನ್ನು ನುಡಿಯುತ್ತ ಬಜಾರದಲ್ಲಿ ತಿರುಗುತ್ತಿದ್ದರು. ಈ ಹಬ್ಬಗಳು ಇಂಗ್ಲಂಡ ಮೊದಲಾದ ದೇಶಗಳಲ್ಲಿ ೧೮ ನೇ ಶತಮಾನದಲ್ಲಿ ಒಳ್ಳೇ ಭರದಿಂದ ಸಾಗುತ್ತಿದ್ದವು. ಮತ್ತು Salurnatia, furesealis-festum, Stultosum, Matrolania festa, fibesaha ಇತ್ಯಾದಿ ಹಬ್ಬಗಳು ಪಾಶ್ಚಿಮಾತ್ಯ ದೇಶಗಳಲ್ಲಿ ಆಗುತ್ತಿದ್ದವು ಇವುಗಳು ನಮ್ಮ ದೇಶದ ಹೋಳೀಹುಣ್ಣಿವೆ ಹಬ್ಬಕ್ಕಿಂತಲೂ ಅಶ್ಲೀಲತೆಯಲ್ಲಿ ಮುಂದು ವರಿದವುಗಳಾಗಿದ್ದವು. ಮತ್ತು ಮಿಶ್ರ ದೇಶದ ಇತಿಹಾಸವನ್ನು ನೋಡಿದ್ದಾದರೆ ಅಲ್ಲಿಯ ಜನರು ಹೋಳೀ ಹಬ್ಬದಲ್ಲಿ ಸಾವಿರಾರು ಜನರು ತಂಡು-ತಂಡಾಗಿ ಹರಗೋಲಿನಲ್ಲಿ ಕುಳಿತು ತೀರ್ಥಯಾತ್ರೆಗಳಿಗೆ ಹೋಗುತ್ತಿದ್ದರು. ಮಧ್ಯದಲ್ಲಿ ಯಾವಾದರೂ ಊರುಗಳು ಬಂದರೆ ಅಲ್ಲಿ ಇಳಿದು ಕೆಲವು ಸ್ತ್ರೀ-ಪುರುಷರು ಗಾನಮಾಡುತ್ತಿದ್ದರು ಕೆಲವು ಸ್ತ್ರೀಯರು ಅಲ್ಲಿಯ ಪುರುಷರನ್ನು ಅವಾಚ್ಯ ಶಬ್ದಯುಕ್ತವಾದ-ಪದಗಳನ್ನು ಹಾಡುತ್ತಾ ದಿಗಂಬರರಾಗಿ ನರ್ತನ ಮಾಡುತ್ತಿದ್ದರು.

ವಾಚಕ ಮಹಾಶಯರೇ ಯಾವದೇ ಒಂದು ಕಾರಣದಿಂದ ಪೂರ್ವದಲ್ಲಿ ಮಾಜಿ ಜನರಿಂದ ಬಂದಿದ್ದ ಈ ಅಸಭ್ಯ ವರ್ತನೆಯನ್ನು ಪರದೇಶಗಳಲ್ಲಿಯ ಜನರು ಬಹಳ ಮಟ್ಟಿಗೆ ಸುಧಾರಿಸಿಕೊಂಡಿದ್ದಾರೆ. ನಮ್ಮ ದೇಶದ ಹೋಳೀ ಹುಣ್ಣಿವೆಯಲ್ಲಿ ಕೆಲವು ಪತಿತ ಜನರು ತಮ್ಮ ಮನಾನಂದಕ್ಕಾಗಿ ಮಾಡಬಾರದ ಅನೇಕ ಕರ್ಮಗಳನ್ನು ಮಾಡುತ್ತಾರೆ. ಕೆಲವು ಸುಧಾರಕರಾದ ಈ ನವಯುಗದ ತರುಣರೂ ಶ್ರೀಮಂತರೂ ಅದಕ್ಕೆ ಅನುಕೂಲ ಗಾಮಿಗಳಾಗುತ್ತಾರೆ. ಇಂಥ ಅಸಭ್ಯವರ್ತನೆಯನ್ನು ನೋಡಿದರೆ ಸಜ್ಜನರ ಮನಸ್ಸಿಗೆ ವಿಷಾದವೆನಿಸುತ್ತದೆ. ಯಾವ ದೇಶದಲ್ಲಿ ಧಾರ್ಮಿಕ ನೈತಿಕ ಕರ್ಮಗಳಿಲ್ಲವೋ ಆ ದೇಶಕ್ಕೆ ಪಿಶಾಚಿಗಳು ವಾಸಮಾಡತಕ್ಕ ಸ್ಮಶಾನವೆಂದು ಹೇಳಬೇಕಾಗಿದೆ. ಈ ಸಂಸಾರದಲ್ಲಿ ಶ್ರೇಷ್ಠತರವಾದ ಮಾನವ ಜನ್ಮವನ್ನು ತಾಳಿದಮೇಲೆ ಸಾಧುಮಾರ್ಗದಿಂದಲೂ ಸದ್ಧರ್ಮದಿಂದಲೂ ನಡೆದು ತಾನಿದ್ದ ಸ್ಥಲದಲ್ಲಿ ಶುಚಿತ್ವವನ್ನು, ಸನಾತನ ಧರ್ಮವನ್ನೂ ಸ್ಥಿರ ಪಡಿಸುವದು ಒಳ್ಳೇದು .—

## ಯಮನೂರ ಜಾತ್ರೆ

### ಫಾಲ್ಗುಣ ಶು, ೧೫

ಯಮನೂರು, ನವಲಗುಂದದ ನೈರುತ್ಯಕ್ಕೆ ೩ ಮೈಲಿನಲ್ಲಿದೆ. ಇಲ್ಲಿ ಪ್ರತಿ ವರುಷ ಫಾಲ್ಗುಣ ಬಹುಳ ೧ರಿಂದ ೪ ದಿವಸಗಳ ವರೆಗೆ ಪೀರನ ದೊಡ್ಡ ಜಾತ್ರೆಯು (ಉರುಸು) ಆಗುತ್ತದೆ. ಈ ಪೀರನ ಜಾತ್ರೆಯ ಬಗ್ಗೆ ಒಂದು ಕಥೆಯುಂಟು. ಬಿಜಾಪುರದಲ್ಲಿ ಆದಿಲ್‌ಶಾಹಿಯು, ಹಾಳಾದ ಸಮಯಕ್ಕೆ (ಸುಮಾರು ಕ್ರಿ. ಶ. ೧೬೭೦) ರಲ್ಲಿ ಕಲಬುರ್ಗಿಯಲ್ಲಿ ಶಹಾಮಿರ ಝಾ ಅಬದುಲ್ ರಾಜಾಕಾದ್ರಿ ಎಂಬ ಪೀರನು, ಇರುತ್ತಿದ್ದನು. ಅವನು ಹಾವನ್ನು ಬಾರಕೋಲು ಮಾಡಿ, ಚೇಳಿನ ಲಗಾಮು ಹಾಕಿದ ಹುಲಿಯ ಮೇಲೆ ಕುಳಿತುಕೊಂಡು ದೇಶದೇಶದಲ್ಲಿ ಸಂಚರಿಸುತ್ತಿದ್ದನು. ಈ ಕಾರಣದಿಂದ ಜನರು ಅವನಿಗೆ 'ರಾಜಾಬಾಗ ಸವಾರನೆಂ,ದು ಕರೆಯುತ್ತಿದ್ದರು. ಆ ಪೀರನು ಒಂದಾನೊಂದು ದಿವಸ ತನ್ನ ಹುಲಿಯ ಮೇಲೆ ಕೂತುಕೊಂಡು ಬಿಜಾಪುರದ ಪೀರನ ಭೆಟ್ಟಿಗೆ ಹೊರಟನು. ಅವನು ಬಿಜಾಪುರದ ಸಮೀಪಕ್ಕೆ ಬರುತ್ತಿರುವಷ್ಟರಲ್ಲಿ ಅಲ್ಲಿರುವ ಖಾಜಾಬಂದ ನವಾಬನೆಂಬ ಪೀರನ ಮೊಮ್ಮಗನಾದ ಏಳು

ವರುಷದ ಹುಡುಗನು, ಕಾದ್ರಿಯು ಹುಲಿಯನ್ನೇರಿ ಕೂತುಕೊಂಡು ಬರುತ್ತಿರುವ ಸಮಾಚಾರವನ್ನರಿತು ತಾನು ಒಂದು ಗೋಡೆಯನ್ನೇರಿ ಕೂತುಕೊಂಡು ಅದನ್ನು ನಡೆಸುತ್ತ ಕಾದ್ರಿಯ ಎದುರಿಗೆ ಹೋದನು. ಕಾದ್ರಿಯು, ಗೋಡೆಯನ್ನು ನಡೆಸುತ್ತ ಬರುವ ಹುಡುಗನನ್ನು ಕಂಡು ನಾಚಿಕೆಯುಳ್ಳವನಾಗಿ ಮುಂದಕ್ಕೆ ಹೋಗದೇ ಕಲಬುರ್ಗಿಗೆ ಹಿಂತಿರುಗಿ ಹೋಗಿ, ಹೊಟ್ಟೆಬೇನೆ ಹಚ್ಚಿಕೊಂಡು ಮರಣಹೊಂದಿದನು. ಈ ವೃತ್ತಾಂತವನ್ನರಿತ ಖಾಜಾನವಾಝನು ಅಂದರೆ ಬಿಜಾಪುರದ ಪೀರನು ತನ್ನ ಮೊಮ್ಮಗನ ಉದ್ಧಟತನವನ್ನರಿತು ಶಾಪ ಕೊಟ್ಟು ಆ ಹುಡುಗನನ್ನು ಸುಟ್ಟುಹಾಕಿದನು. ಕಲಬುರ್ಗಿಯ 'ರಾಜಾಬಾಗ ಸವಾರನು, ಸತ್ತನಂತರ ಜನರು ಅವನ ದರಗೆಗಳನ್ನು ಅನೇಕ ಕಡೆಯಲ್ಲಿ ಕಟ್ಟಿಸಿ ಶ್ರದ್ಧೆಯಿಂದ ನಡಕೊಳ್ಳಹತ್ತಿದರು. ಅದೇ ಸಮಕ್ಕೆ ಸಾತಾರಾ ಜಿಲ್ಲೆಗೆ ಸೇರಿದ ಕೋರೇಗಾವ ಎಂಬ ಊರಿನ ಪಾಟೀಲನಾದ ಚಿತ್ರೋಜಿಯು, ರಾಜಾಬಾಗ ಸವಾರನಿಗೆ ನಡಕೊಳ್ಳಹತ್ತಿದನು. ಒಂದಾನೊಂದು ದಿವಸ ಆ ಪೀರನು ಚಿತ್ರೋಜಿಗೆ ಸ್ವಪ್ನದಲ್ಲಿ ಪ್ರತ್ಯಕ್ಷವಾಗಿ, ನಿನಗೆ ಏನು ಬೇಕೆಂದು ಪ್ರಶ್ನೆ ಮಾಡಲು, ಚಿತ್ರೋಜಿಯು ನೀನು " ಸದಾ ನನ್ನ ಬಳಯಲ್ಲಿಯೇ ಇರು " ಎಂದು ಬೇಡಿಕೊಂಡನು. ಆಗ ಪೀರನು " ನಿನ್ನ ತಲೆಗಿಂಬಿನ ಹತ್ತಿರ ನನ್ನ ಕೈಯಂತೆ ಇರುವ ಪಂಜಾ ಇರುವದು; ಅದನ್ನು ತಕ್ಕೊಂಡು ನೀನು ಯಮನೂರಿಗೆ ಹೋಗಿ ಅಲ್ಲಿ ಅದರ ಪೂಜೆ ಮಾಡುತ್ತ ಇರುವವನಾಗು " ಎಂದು ಹೇಳಿದನು. ಚಿತ್ರೋಜಯು ನಿದ್ರೆಯಿಂದ ಎಚ್ಚತ್ತು ತನ್ನ ತಲೆಗಿಂಬಿನ ಬಳಿಯಲ್ಲಿ ಎರಡು ಬೆತ್ತ ಸಹಿತ ಬೆಳ್ಳಿಯ ಹುಲಿಯನ್ನೇರಿದಂಥ ಒಂದು ಪಂಜಾವನ್ನು ನೋಡಿದನು. ಪೀರನ ಹೇಳಿಕೆಯಂತೆ ಚಿತ್ರೋಜಿಯು ಅವುಗಳನ್ನು ತಕ್ಕೊಂಡು ಯಮನೂರಿಗೆ ಬಂದು ಪೂಜೆ ಮಾಡಹತ್ತಿದನು. ಮುಂದೆ ಕೆಲವು ದಿವಸಗಳ ಮೇಲೆ ಚಿತ್ರೋಜಿಯ ವಂಶದವನೊಬ್ಬನು ಕ್ರಿ. ಶ. ೧೭೩೦ ರಲ್ಲಿ ಮಣ್ಣಿನ ಗೋಡೆಗಳಿರುವ ದರಗೆಯನ್ನು ಕಟ್ಟಿಸಿದನು. ಅಲ್ಲಿ ಹಿತ್ತಾಳೆಯ ಎರಡು ಕುದುರೆಗಳ ಮೇಲೆ ಕುಳಿತಂಥ ಎರಡು ಪಂಜಾಗಳನ್ನು ಪೂಜಿಸುತ್ತಿರುವರು. ಚಿತ್ರೋಜಿಯ ವಂಶವದರೇ ಈಗಲೂ ಪೂಜಾರಿಗಳಿದ್ದಾರೆ. 'ಬರ್ಗೆ, ಎಂದು ಆ ಮನೆತನಕ್ಕೆ ಅಡ್ಡ ಹೆಸರು ಅದೆ ಪೂಜಾರಿಗಳಿಗೆ ಪ್ರತಿ ವರುಷ ಜಾತ್ರೆಯಲ್ಲಿ ಭಕ್ತ ಜನರಿಂದ ೧೨೦೦ ರೂಪಾಯಿವರೆಗೆ

ಪ್ರಾಪ್ತಿಯಾಗುತ್ತಿತ್ತೆಂದು ಕ್ರಿ. ಶ. ೧೮೮೩ರ ಮುಂಬೈ ಇಲಾಖೆಯ ಗ್ಯಾಝೇಟೀಯರ್‌ದಿಂದ ತಿಳಿದು ಬರುತ್ತದೆ. ಆಗ ಜಾತ್ರೆಯಲ್ಲಿ ೨೦೦೦೦ ದಿಂದ ೧೦೦೦೦, ದ ವರೆಗೆ ಪರಸಿಯು ಕೂಡಿ ಸುಮಾರು ೩೫೦೦೦ ರೂಪಾಯಿಯ ತರತರದ ಸರಕುಗಳ ಮಾರಾಟವಾಗುತ್ತಿತ್ತೆಂ"ದು ಉಲ್ಲೇಖಿಸಲ್ಪಟ್ಟದೆ. ಇತ್ತಿತ್ತಲಾಗಿ ಜಾತ್ರೆಗೆ ಜನರು ವಿಶೇಷವಾಗಿ ಕೂಡಿ ಆದಾಯವೂ ಹೆಚ್ಚುತ್ತ ಸನ್ ೧೯೩೫ರ ವರೆಗೂ ಈ ಜಾತ್ರೆಯು ಒಳ್ಳೇ ವೈಭವದಿಂದ ನಡೆಯುತ್ತ ಬಂತು ಆ ವರುಷ ಜಾತ್ರೆಯಲ್ಲಿ ಕಾಲರಾ ರೋಗವು ಉದ್ಭವಿಸಿ ಅಸಂಖ್ಯ ಜನರು ಮರಣಕ್ಕೀಡಾದರು. ಜಾತ್ರೆಗಾಗಿ ಬಂದವರು ದಾರಿಯಲ್ಲಿಯೇ ಏಕಾಏಕ ಕಾಲರಾದಲ್ಲಿ ಮಡಿದರು. ದಾರಿಯುದ್ದಕ್ಕೂ ಬಿದ್ದ ಶವಗಳ ಸಂಸ್ಕಾರವನ್ನು ಸರಕಾರದವರೇ ನೆರವೇರಿಸಬೇಕಾಯಿತು. ಅಂದಿನಿಂದ ಯಮನೂರ ಜಾತ್ರೆಯ ವೈಭವವು ಬಹಳಮಟ್ಟಿಗೆ ಕಡಿಮೆಯಾಗುತ್ತ ಬಂತು ಈ ಜಾತ್ರೆಗೆ ರಾಯಚೂರು, ಬಳ್ಳಾರಿ, ಧಾರವಾಡ, ಬೆಳಗಾವ, ಕಾರವಾರ, ಬಿಜಾಪೂರ, ಮೊದಲಾದ ಭಾಗದಿಂದ ಜನರು ಬರುತ್ತಾರೆ. ಬಹುಜನರು ಬಂದ ದಿವಸವೇ ಮರಳಿ ತಮ್ಮ ತಮ್ಮ ಊರಿಗೆ ಈಗ ಪ್ರಯಾಣ ಮಾಡುವುದುಂಟು. ಹಣ್ಣು-ಕಿರಾಣಿ-ಮಿಠಾಯಿ, ಹಂಡೆ ಭಾಂಡೆ ಮೊದಲಾದ ಅಂಗಡಿಗಳನ್ನು ಜಾತ್ರೆಯಲ್ಲಿ ಸಾಲುಸಾಲಾಗಿ ಹಚ್ಚಿರುತ್ತಾರೆ. ಬೆತ್ತದ ಬುಟ್ಟಿಗಳು, ಕಟ್ಟಿಗೆಯ ಸಣ್ಣ ದೊಡ್ಡ ಸಂದುಕ, ಮಂಚ, ಬಾಗಿಲು, ಒಕ್ಕಲತನಕ್ಕೆ ಉಪಯೋಗ ಬೀಳುವ ಕಟ್ಟಿಗೆ, ಕಬ್ಬಿಣದ ತೊಟ್ಟಿಲ ಮೊದಲಾದವುಗಳು ಇಲ್ಲಿ ಮಾರಾಟದ ಸರಕುಗಳು. ಹುಣ್ಣು ಹಚ್ಚಿಕೊಂಡ ಗಂಡಸರೂ, ಅಂಥವರೇ ಹೆಂಗಸರೂ, ದೇವದಾಸಿಯರೂ, ಪಾತರದವರೂ ಈ ಜಾತ್ರೆಗೆ ಬಹು ಜನರು ಹೋಗುವರೆಂಬ ಪ್ರತೀತಿ ಇದೆ. ಹುಣ್ಣು ಹಚ್ಚಿಕೊಂಡ ಜನರು ಮುಖ್ಯವಾಗಿ ಯಮನೂರಿನ ಪೀರ ದೇವರಿಗೆ ಬೇಡಿಕೊಂಡು ಮುಡುಪು ಕಟ್ಟಿಡುವರು. ಅವರು ರೋಗಮುಕ್ತರಾದರೆಂದರೆ ಯಮನೂರಿನ ಜಾತ್ರೆಗೆ ಬಂದು ಕುರಿ, ಕೋಳಿಗಳನ್ನು ಕೊಟ್ಟು ಕಂದೂರಿ ಮಾಡಿಸುವರು ಸನ್ ೧೯೪೭ ರಿಂದ ಕಾಂಗ್ರೆಸ್ ಸರಕಾರದ ಆಳಿಕೆ ಬಂದುದರಿಂದ ಈ ಜಾತ್ರೆಯ ಬಣ್ಣ,. ಸ್ವಲ್ಪಮಟ್ಟಿಗೆ ಬದಲಾಗಿದೆ ಎನ್ನಬಹುದು. ಸರಕಾರವು ಪ್ರಾಣಿ ಹಿಂಸೆಗೆ ತಡೆಯಾಜ್ಞೆ ಹೇರಿದೆ. ನೂರಾರು ವರುಷಗಳಿಂದ ಕುರಿ, ಕೋಳಿ

ಗಳನ್ನು ತಿಂದು ಬೇಸತ್ತು ಪೀರನು ಬಹುಮಟ್ಟಿಗೆ ಈಗ ಹಣ್ಣು-ಸಕ್ಕರೆಯನ್ನು ಸ್ವೀಕರಿಸುವ ಮನಸ್ಸು ಮಾಡಿದ್ದಾನೆ. ಅಶ್ಲೀಲತೆಗೂ ಈಗ ಆಸ್ಪದವಿಲ್ಲ ಜಾತ್ರೆಯಲ್ಲಿ ಬಂದೋಬಸ್ತಿಗಾಗಿ ಸಬ್ ಇನ್‌ಸ್ಪೆಕ್ಟರರು, ತಹಸೀಲದಾರರು, ಹೆಲ್ಥ ಆಫೀಸರರು, ಜಾತ್ರೆ ಮುಗಿಯುವವರೆಗೆ ಅಲ್ಲಿ ಕ್ಯಾಂಪ ಮಾಡುವರು. ಈ ಜಾತ್ರೆಯ ಎಲ್ಲ ವ್ಯವಸ್ಥೆಯು ನವಲಗುಂದ ಮುನಸಿಪಾಲ್ಟಿಯ ಅಧಿಕಾರಕ್ಕೆ ಒಳಪಟ್ಟು ನಡೆಯುತ್ತದೆ ಫಾಲ್ಗುಣ ಶುದ್ಧ ಪೌರ್ಣಿಮೆ ಕಾಮದಹನದ ದಿವಸ ಮಧ್ಯ ರಾತ್ರಿಗೆ ಮುನಸಿಪಾಲ್ಟಿಯವರು ಯಮನೂರಲ್ಲಿ ಜಕಾತಿ ಕಟ್ಟೆಯನ್ನು ಕೂಡ್ರಿಸುವರು. ಅಷ್ಟರೊಳಗಾಗಿಯೇ ( ಜಕಾತಿಯ ಭಯದಿಂದ ) ಸುತ್ತು ಮುತ್ತಲಿನ ಗ್ರಾಮಗಳ ಅಂಗಡಿಕಾರರು ಹೇಗೋ ಹಾಗೆ ಯಮನೂರಿಗೆ ಸೇರಿ ತಮ್ಮ ತಮ್ಮ ಅಂಗಡಿಗಳನ್ನು ಸಿದ್ಧಪಡಿಸಿಕೊಳ್ಳುವರು. ಜಾತ್ರೆಗೆ ಹೋಗುವವರು ೨ ಆಣೆ ತಲೆಪಟ್ಟಿ ಕೊಟ್ಟು ಹೋಗಬೇಕಾಗುವದು. ಈ ನಿಯಮವು ೧೦ ದಿವಸ ಮಾತ್ರ ಇರುವದು.

---

## ಉಪಸಂಹಾರ

ಮಾನವನು ಕಲಿಯ ಆಳಿಕೆಯಲ್ಲಿ ನೀತಿಕ್ರಿಯಾಚಾರಗಳನ್ನಳಿದು ದೇವಭಕ್ತಿಶೂನ್ಯನಾಗಿ, ದಿನೇ ದಿನೇ ಹಲವಾರು ಯಾತನೆಗಳಿಗೆ ತುತ್ತಾಗುತ್ತ ಹೊರಟಿರುವನು. ಹಾಗಾಗಬಾರದೆಂದೇ ಹಿಂದಿನ ಹಿರಿಯರು ಶಾಸ್ತ್ರ-ಪುರಾಣ-ಇತಿಹಾಸಾದಿ ಸದ್‌ಗ್ರಂಥಗಳನ್ನು ಅಂಥವರ ಉದ್ಧಾರಕ್ಕಾಗಿ ರಚಿಸಿರುವರು. ಆ ಪ್ರಾಚೀನ ಪುಸ್ತಕಗಳ ಆಧಾರದಿಂದಲೇ ನಾವು ಹಿಂದು ಧರ್ಮದ ಹಬ್ಬ, ಹುಣ್ಣಿವೆ, ವ್ರತ, ನಿಯಮಗಳನ್ನು ಈ ವರೆಗೆ ಸಂಕ್ಷಿಪ್ತವಾಗಿ ವಿವರಿಸಿದ್ದೇವೆ.

ಆದರೆ "ಗ್ರಂಥಾಧಾರವು ಅತಿಶಯೋಕ್ತಿಯುಳ್ಳದ್ದಾಗಿದೆಯಾದ್ದರಿಂದ ಅದನ್ನು ನಂಬುವದು ಹಳೆಯ ಪದ್ಧತಿಯೆಂತಲೂ, ಹಾಗೆ ನಡೆಯುವವರು ಅಶಿಕ್ಷಿತರೆಂ"ತಲೂ ಈಗಿನ ಎಳೆಯ ತರುಣರು ಹೇಳುವುದುಂಟು. ಎಳೆಯರು

ಹಳೆಯ ದಾರಿಯನ್ನು ಹಿಡಿಯದಿದ್ದರೆ ಇಂದು ಹಿಂದುತ್ವಕ್ಕೆ ಶರಣು ಹೊಡೆಯ ಬೇಕಾಗುತ್ತದೆ. ಯಾಕಂದರೆ ವೇದ-ಶಾಸ್ತ್ರ-ಪುರಾಣಗಳಲ್ಲಿ ಆದರ ಬುದ್ಧಿಯನ್ನಿಡುವವನೇ "ಹಿಂದು"ವೆಂದು ಈ ಗ್ರಂಥದ ಮೊದಲ ಮಾತಿನಲ್ಲಿ ನಾವು ಸಪ್ರಮಾಣವಾಗಿ ಸಿದ್ಧಪಡಿಸಿರುವೆವು. ಒಂದು ವೇಳೆ ಗ್ರಂಥೋಕ್ತಿಯೆಲ್ಲ, ಅದ್ಭುತ ವರ್ಣನೆಯೆಂದು ಹಲವರು ತಿಳಿದಿದ್ದರೆ, ಅದು ಅವರ ತಪ್ಪುಕಲ್ಪನೆಯೆಂಬುದು ಕೆಳಗಿನ ವಿವರಣೆಯಿಂದ ಗೊತ್ತಾಗುತ್ತದೆ.

ದ್ವಾಪರ ಯುಗದಲ್ಲಿ ಪಾಂಡವರು ಗಜಗೌರೀ ವ್ರತವನ್ನಾಚರಿಸುವಾಗ್ಗೆ ಅರ್ಜುನನು ಸ್ವರ್ಗದ ವರೆಗೆ ಶರಸೋಪಾನವನ್ನೇರಿಸಿ, ತದ್ವಾರ ಇಂದ್ರ ಲೋಕವನ್ನು ಹೊಂದಿ ಅಲ್ಲಿಂದ ಐರಾವತವನ್ನು ತಂದನೆಂದು ಮಹಾಭಾರತ ಹೇಳುವದು.

ರಾಮಾಯಣದಲ್ಲಿ - ರಾಮನು ರಾವಣನ ವಧೆಗೈದು ಶೀತೆಯೊಡನೆ ಪುಷ್ಪಕ ವಿಮಾನದಲ್ಲಿ ಅಯೋಧ್ಯೆಗೆ ಬಂದನೆಂದು ಹೇಳಲ್ಪಟ್ಟಿದೆ. ಆಗಿನ ಕಾಲದ ಜನರು ಅಷ್ಟು ಶಕ್ತಿಸಂಪನ್ನರಾಗಿದ್ದರು. ಅದು ರಾಮಾಯಣದಲ್ಲಿ ಸ್ವಾಭಾವಿಕವಾಗಿ ವರ್ಣಿತವಾಗಿದೆಯಲ್ಲದೆ ಅದ್ಭುತೋಕ್ತಿಯಲ್ಲ.

ತಾ. ೩—೨—೧೯೬೬ ನೆಯ ರಾತ್ರಿ ರಶಿಯನ್ನರು "ಅಂತರಿಕ್ಷ ನೌಕೆ ಲುನಾ, ೯," ಇದನ್ನು ಚಂದ್ರನ ಮೇಲೆ ಇಳಿಸಿರುವರೆಂತಲೂ, ಅದು ತಾ. ೫—೨—೧೯೬೬ ರ ರಾತ್ರಿ ೯—೩೦ ಗಂಟೆಗೆ ತನ್ನ ಸಂಶೋಧನಾ ಕಾರ್ಯವನ್ನು ಪೂರ್ತಿಗೊಳಿಸಿತೆಂತಲೂ ರಶಿಯದ ವಾರ್ತಾಸಂಸ್ಥೆ ಈಗ ವರದಿ ಮಾಡಿದ್ದು ಜಗತ್ಪ್ರಸಿದ್ಧವಾಗಿದೆಯಷ್ಟೇ ! ಆದರೆ "ಕಾಲಾಯ ತಸ್ಮೈ ನಮಃ" ಎಂಬಂತೆ ಜಗತ್ತಿನ ಏರಿಳಿತವು ಕಾಲವನ್ನವಲಂಬಿಸಿದೆ. ಇಲ್ಲಿಂದ ಸಾವಿರಾರು ವರುಷ ಗತಿಸಿದ ಮೇಲೆ ಆಗ ಜಗತ್ತು ಅವನತಿಯಲ್ಲಿದ್ದರೆ, ಈಗ ಬರೆದು ಇಟ್ಟಂಥ ರಶಿಯನ್ನರ ಈ ವಿಷಯವನ್ನು ಸುಳ್ಳೆಂದು ಹೇಳಲಿಕ್ಕಾದೀತೇ !

"ಅತಿ ದೂರಾತ್ .... .... .... .... ....!
ಸೌಕ್ಷ್ಮ್ಯಾತ್ ವ್ಯವಧಾನಾದಭಿ ಭವಾತ್ಸಮಾನಾಭಿಹಾರಾಚ್ಚ"॥

ಎಂಬ ಸಾಂಖ್ಯಕಾರಿಕೆಯ ಅಭಿಪ್ರಾಯದಂತೆ ಮನುಷ್ಯನು ತನ್ನ ಬುದ್ಧಿಗೆ ಗೋಚರವಾಗದಿರುವ ವಿಷಯಕ್ಕೆ ಸುಳ್ಳೆಂದು ಭಾವಿಸುವುದು ಸಹಜವಿದೆ. ಆಪ್ತವಾಕ್ಯವು ಎಲ್ಲರಿಗೂ ಮಾನ್ಯವಾಗಿದೆ. ಅದನ್ನು ತಿರಸ್ಕರಿಸಿ ಮಾನವತ್ವವನ್ನು ಹಾಳುಮಾಡಿಕೊಂಡರೆ, ಪುನಃ ಮಾನುಷಜನ್ಮ ಸಿಗುವುದೆಂದು ಹೇಳುವುದೂ ಕಠಿಣ. ಆದುದರಿಂದ ದೇವರ ಸ್ಮಾರಕವಾಗಿರುವ ಪರಂಪರೆಯಿಂದ ಬಂದ ಹಬ್ಬ-ಹುಣ್ಣಿವೆ-ವ್ರತ-ನಿಯಮಾದಿಗಳ ವಿಷಯವು ಅತಿಶಯೋಕ್ತಿಯಾಗಿರದೆ ನೈಜವೆಂದು ನೆರೆನಂಬಿ ಜನ್ಮ ಸಾಫಲ್ಯಹೊಂದಬೇಕೆಂದು ಮನವಾರೆ ಕೋರುತ್ತೇವೆ. ಭದ್ರಂ ಭೂಯಾತ್.

— ಸಮಾಪ್ತಿ —





ಶ್ರೀ ಮುರಿಗೆಯ್ಯನವರು ಸಿದ್ಧಯ್ಯನವರು ಕೂಡ್ಲಮಠ, ಸಾ. ಶಿಗ್ಗಿ.



ಶ್ರೀ ರಾಚಪ್ಪ ಶಿವಪ್ಪ ಹಳ್ಳಿಕೇರಿ
ಸಾ. ಹಳೇ-ಹುಬ್ಬಳ್ಳಿ



ಶ್ರೀ ಪ್ರಭಣ್ಣ ಅಂದಾನಪ್ಪ ನಲೂಡಿ
ಸಾ. ಹಳೇ-ಹುಬ್ಬಳ್ಳಿ



ಶ್ರೀ ಲಿಂಗಪ್ಪ ಶಿವಬಸಪ್ಪ
ಅಮ್ಮಿನಭಾವಿ
ಸಾ. ಎರೆಬೂದಿಹಾಳ



ಶ್ರೀಮತಿ ವೀರಮ್ಮ ಕೋಂ ಬೂದಪ್ಪ
ಮಾಗಡಿ, ಸಾ. ಹಳೇ-ಹುಬ್ಬಳ್ಳಿ.

## "ಸಚಿತ್ರ ಹಿಂದು ಹಬ್ಬಗಳು"

### ಈ ಗ್ರಂಥಕ್ಕೆ ಉದಾರವಾಗಿ ಧನಸಹಾಯವನ್ನಿತ್ತ ಮಹಾಶಯರು

| | | ರೂ. |
|---|---|---|
| ಶ್ರೀಯುತ | ಮುರಿಗೆಯ್ಯನವರು ಸಿದ್ಧಯ್ಯನವರು ಕೂಡ್ಲಮಠ ಶಿಗ್ಗಿ .... | ೨೦೫ |
| ,, | ಗುರುಪಾದಯ್ಯನವರು ಮಲ್ಲಯ್ಯನವರು ಮುಳಗುಂದಮಠ ಆರೇಕುರಹಟ್ಟಿ .... .... | ೧೦೧ |
| ,, | ಶಂಕರಪ್ಪಗೌಡರು ಫಕೀರಪ್ಪಗೌಡರು ಸಿಕ್ಕಿದೇಸಾಯಿ ಅಣ್ಣಿಗೇರಿ | ೧೦೧ |
| ,, | ಕೃಷ್ಣಪ್ಪನವರು ಆನೇಗುಂದಿ ನವಲಗುಂದ .... | ೧೦೧ |
| ,, | ಲಿಂಗಪ್ಪ ಶಿವಬಸಪ್ಪ ಅಮೀನಭಾವಿ ಯರೆಬೂದಿಹಾಳ .... | ೧೦೧ |
| ,, | ರಾಚಪ್ಪ ಶಿವಪ್ಪ ಹಳ್ಳಿಕೇರಿ ಹಳೇಹುಬ್ಬಳ್ಳಿ .... | ೧೦೧ |
| ,, | ಪ್ರಭಣ್ಣ ಅಂದಾನಪ್ಪ ನಲೂಡಿ ಹಳೇಹುಬ್ಬಳ್ಳಿ .... | ೧೦೧ |
| ಶ್ರೀಮತಿ | ವೀರಮ್ಮ ಕೋಂ ಬೂದಪ್ಪ ಮಾಗಡಿ ಹಳೇಹುಬ್ಬಳ್ಳಿ .... | ೧೦೧ |
| ಶ್ರೀಯುತ | ವಿರಬಸಪ್ಪ ಪಂಚಾಕ್ಷರಪ್ಪ ಹಕ್ಕಾಪಕ್ಕಿ ಹೊಳೆಆಲೂರು .... | ೫೧ |
| ,, | ಕೊಟ್ರಪ್ಪ ಗುರುಶಾಂತಪ್ಪ ಮುದಗಲ್ಲ ಶಿಗ್ಗಿ .... | ೩೧ |
| ,, | ಡಾ. ಜಿ. ಎಸ್. ಭಟ್ಟ ನವಿಲುಗುಂದ .... .... | ೨೫ |
| ,, | ರುದ್ರಯ್ಯ ಗುರುಪಾದಯ್ಯ ಮುಳಗುಂದಮಠ ಸಾ. ಆರೇಕುರಹಟ್ಟಿ .... .... .... | ೨೫ |
| ,, | ಗುರುಸಿದ್ಧಯ್ಯ ಗುರುಪಾದಯ್ಯ ಮುಳುಗುಂದಮಠ ಸಾ. ಆರೇಕುರಹಟ್ಟಿ .... .... .... | ೨೫ |
| ,, | ಹನಮರಡ್ಡೆಪ್ಪ ಬಸವರಡ್ಡೆಪ್ಪ ರಾಯರಡ್ಡಿನವರು ಸಾ. ಆರೇಕುರಹಟ್ಟಿ .... .... .... | ೨೫ |
| ,, | ಆರ್. ಎಮ್. ಕೂಡ್ಲಮಠ ಶಿಗ್ಗಿ .... .... | ೨೫ |
| ,, | ಸಣ್ಣಗುರಪ್ಪ ಚನಬಸಪ್ಪ ಅಕ್ಕಿ ನವಲಗುಂದ .... | ೨೨ |
| ,, | ತುಳಸಪ್ಪ ಹನಮಪ್ಪ ಹದ್ಲಿ ಕೊಂಡಿಕೊಪ್ಪ .... | ೨೨ |
| ,, | ವಿರುಪಾಕ್ಷಪ್ಪ ಪ. ಸಾವಕ್ಕನವರ ಹಳೇಹುಬ್ಬಳ್ಳಿ .... | ೧೫ |
| ,, | ಮಹಾಲಿಂಗಪ್ಪ ಸಿದ್ದಪ್ಪ ಎಲಿಗಾರ ಸಾ. ಶಿಗ್ಗಿ .... | ೧೫ |
| ,, | ಫಕೀರಪ್ಪನವರು ಸೆಟ್ರ ಸಾ. ಶಿಗ್ಗಿ .... .... | ೧೫ |

| ಹೆಸರು. | ರೂ. |
|---|---|
| ಶ್ರೀಯುತ ನೀಲಪ್ಪ ಸಿದ್ದಪ್ಪ ಯಲಿಗಾರ ಸಾ. ಶಿಗ್ಲಿ .... | ೧೫ |
| ,, ವಸಂತರಾವ್ ಪಾಟೀಲ ಸಾ. ಶಿಗ್ಲಿ .... .... | ೧೫ |
| ,, ಪರಮೇಶ್ವರಪ್ಪ ಮಲ್ಲೇಶಪ್ಪ ಬಳಿಗಾರ ಸಾ. ಶಿಗ್ಲಿ .... | ೧೫ |
| ,, ಶಿವಯ್ಯ ವೀರಯ್ಯ ಯಮಣೂರು ನವಲಗುಂದ .... | ೧೧ |
| ,, ಫಕೀರಪ್ಪ ಬಸಪ್ಪ ಹೂಗಾರ ನವಲಗುಂದ .... | ೧೧ |
| ,, ಭರಮಾಜಪ್ಪ ಹುಸೇನಸಾಬ ಕಲಾಲ ನವಲಗುಂದ .... | ೧೧ |
| ,, ಜೀವಪ್ಪ ಖಾಜೇಸಾಬ ಕಲಾಲ ನವಲಗುಂದ .... | ೧೧ |
| ಶ್ರೀಮತಿ ಗಂಗಮ್ಮ ಕೋಂ. ಬಸಯ್ಯ ಗರಗ ನವಲಗುಂದ .... | ೧೧ |
| ಶ್ರೀಯುತ ಶಂಕರಪ್ಪ ಬಸೆಟ್ಟೆಪ್ಪ ಅಂಗಡಿ ಶಾನವಾಡ .... | ೧೧ |
| ,, ಗುರುಪಾದಯ್ಯನವರು ಹಿರೇಮಠ ಸಾ. ಯರೇಬೂದಿಹಾಳ | ೧೧ |
| ,, ಬಸವರಡ್ಡೆಪ್ಪ ಶಿವರಡ್ಡೆಪ್ಪ ಮದಗುಣಕಿ ಸಾ. ಯರೇಬೂದಿಹಾಳ | ೧೧ |
| ,, ಗೋವಿಂದಪ್ಪ ರಾಮಪ್ಪ ರಡ್ಡೇರ ಸಾ. ಯರೇಬೂದಿಹಾಳ | ೧೧ |
| ,, ಫಕೀರಪ್ಪ ಫಕೀರಪ್ಪ ಹುಂಬಿ ಸಾ. ಯರೇಬೂದಿಹಾಳ | ೧೧ |
| ,, ಚನಬಸಪ್ಪ ದೊಡ್ಡಬಸಪ್ಪ ಹುಂಬಿ ಸಾ. ಯರೇಬೂದಿಹಾಳ | ೧೧ |
| ,, ಸಿದ್ದಪ್ಪ ಬಸವಣ್ಣೆಪ್ಪ ಕೋಷ್ಠಿ ಸಾ. ಯರೇಬೂದಿಹಾಳ .... | ೧೧ |
| ,, ಶಿವಬಸಪ್ಪ ಕರಬಸಪ್ಪ ಕೋಷ್ಠಿ ಸಾ. ಯರೇಬೂದಿಹಾಳ | ೧೧ |
| ,, ದೇವೇಂದ್ರಪ್ಪ ಬಸಪ್ಪ ಅಳವುಂಡಿ ಸಾ. ಯರೇಬೂದಿಹಾಳ | ೧೧ |
| ,, ಶಂಕರರಾವ್ ಮಹಾದೇವರಾವ್ ಕುಲಕರ್ಣಿ ,, .... | ೧೧ |
| ,, ಚನಬಸಪ್ಪ ಗೂಳಪ್ಪ ಪೂಜಾರ ,, .... | ೧೧ |
| ,, ಹಸನಸಾಹೇಬ ಚಾಂದಸಾಹೇಬ ಹಣಗಿಕಟ್ಟಿ ಸಾ. ಯರೇಬೂದಿಹಾಳ .... .... | ೧೧ |
| ,, ರಾಮಪ್ಪ ಶರಪ್ಪ ಕಾರಡಗಿ ಸಾ. ಯರೇಬೂದಿಹಾಳ .... | ೧೧ |
| ,, ಚನ್ನಪ್ಪ ಮುದಕಪ್ಪ ಕಟ್ಟಿಮನಿ ಸಾ. ಯರೇಬೂದಿಹಾಳ.... | ೧೧ |
| ,, ರುದ್ರಗೌಡ ದಿನಮಣಿಗೌಡ ಪಾಟೀಲ ಸಾ. ಯರೇಬೂದಿಹಾಳ | ೧೧ |
| ,, ರಾಮಚಂದ್ರ ನರಸಿಂಹ ಇನಾಮತಿ ಸಾ॥ ಆರೇಕುರಹಟ್ಟಿ .... | ೧೧ |
| ,, ಶಿ. ಚ. ಮೆಣಸಿನಕಾಯಿ ಸಾ॥ ಕರ್ಲವಾಡ .... | ೧೧ |
| ,, ಬಸಪ್ಪ ಅಂದಾನೆಪ್ಪ ಹಂಜಿ ,, .... | ೧೧ |
| ,, ಭೀಮರಡ್ಡೆಪ್ಪ ವೆಂಕರಡ್ಡೆಪ್ಪ ಮೇಲಗಿರಿ ,, .... | ೧೧ |
| ,, ಕ್ರಿಷ್ಣರಡ್ಡೆಪ್ಪ ವೆಂಕರಡ್ಡೆಪ್ಪ ಮೇಲಗಿರಿ ,, .... | ೧೧ |

| ಹೆಸರು. | | | ರೂ. |
|---|---|---|---|
| ಶ್ರೀಯುತ ಹನಮಂತಗೌಡ ಕ್ರಿಷ್ಟಗೌಡ ಪಾಟೀಲ ಕರ್ಲವಾಡ | | .... | ೧೧ |
| ,, ವೆಂಕರಡ್ಡೆಪ್ಪ ಲಿಂಗರಡ್ಡೆಪ್ಪ ಚೌವಣ್ಣವರ | ,, | .... | ೧೧ |
| ,, ಅಂದಾನಪ್ಪ ಮಲ್ಲಪ್ಪ ತಿರ್ಲಾಪುರ | ,, | .... | ೧೧ |
| ,, ಕ್ರಿಷ್ಟರಡ್ಡೆಪ್ಪ ಭೀಮರಡ್ಡೆಪ್ಪ ಕುರ್ಲಗೇರಿ ಸಾ॥ ಕರ್ಲವಾಡ | | | ೧೧ |
| ಶ್ರೀಮತಿ ಗೌರಮ್ಮ ಕೋಂ. ಸಿದ್ದಯ್ಯ ಹಿರೇಮಠ | ,, | .... | ೧೧ |
| ಶ್ರೀಯುತ ಲೋಕಪ್ಪ ತಿಪ್ಪಣ್ಣ ಹಣಗಿ .... | ಸಾ॥ ಶಿಗ್ಲಿ | .... | ೧೧ |
| ,, ಚಂದ್ರಪ್ಪ ಕರಿಯಪ್ಪ ಜಾಲಿಹಾಳ .... | ,, | .... | ೧೦ |
| ,, ಸಂಗಯ್ಯನವರು ಫಕೀರಯ್ಯನವರು ಕೂಡ್ಲಮಠ | ,, | .... | ೧೦ |
| ,, ವೀರಪ್ಪ ಅಂದಾನಪ್ಪ ನವಲಗುಂದ | ,, | .... | ೧೦ |
| ,, ಬಾಬುರಾವ್ ಶ್ರೀನಿವಾಸರಾವ್ ವೈದ್ಯ ಧಾರವಾಡ | | .... | ೧೦ |
| ,, ಮಲ್ಲಪ್ಪ ನೀಲಪ್ಪ ಹತ್ತಿಕಾಳ ಸಾ॥ ಶಿಗ್ಲಿ | | .... | ೧೦ |
| ,, ವೀರಣ್ಣ ಜಂಗಣ್ಣನವರ .... | ,, | .... | ೧೦ |
| ,, ಫಕೀರಪ್ಪ ಹಂಜಿ .... | ,, | .... | ೧೦ |

ಈ ಮೇಲಿನ ಯಾವತ್ತೂ ವಿಶಾಲ ಹೃದಯದ ಮಹಾಶಯರಿಗೆ ಪರಮಾತ್ಮನು ಆಯುರಾರೋಗ್ಯ ಭಾಗ್ಯಾದಿಗಳನ್ನು ಕೊಟ್ಟು ಕಾಪಾಡಲೆಂದು ಹೃತ್ಪೂರ್ವಕ ಪ್ರಾರ್ಥಿಸುತ್ತೇವೆ.



ಗ್ರಂಥಕರ್ತರು.

